# ಹೆಣ್ಣುಮಕ್ಕಳ ಶಿಕ್ಷಣದ ಸಾಮಾಜಿಕ ನೆಲೆಗಳು

## (ಮುಸ್ಲಿಂ ಹೆಣ್ಣುಮಕ್ಕಳನ್ನು ಅನುಲಕ್ಷಿಸಿ)

ಸಮಾಜಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿರುವ ಸಂಶೋಧನಾ ಮಹಾಪ್ರಬಂಧ


ಸಂಶೋಧಕರು

**ಝಳಕಿ ದಾನಮ್ಮ ಚನಬಸಪ್ಪ**

ಮಾರ್ಗದರ್ಶಕರು

**ಡಾ.ಜನಾರ್ದನ**

ಸಹಾಯಕ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ

ಸಹ ಮಾರ್ಗದರ್ಶಕರು

**ಡಾ.ಕೆ.ಎಂ.ಮೇತ್ರಿ**

ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ








ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಹೆಣ್ಣುಮಕ್ಕಳ ಶಿಕ್ಷಣದ ಸಾಮಾಜಿಕ ನೆಲೆಗಳು
## (ಮುಸ್ಲಿಂ ಹೆಣ್ಣುಮಕ್ಕಳನ್ನು ಅನುಲಕ್ಷಿಸಿ)

ಸಮಾಜಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಸಂಶೋಧನಾ ಮಹಾಪ್ರಬಂಧ

ಸಂಶೋಧಕರು

**ಝಳಕಿ ದಾನಮ್ಮ ಚನಬಸಪ್ಪ**



ಮಾರ್ಗದರ್ಶಕರು

**ಡಾ.ಜನಾರ್ದನ**
ಸಹಾಯಕ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ

ಸಹ ಮಾರ್ಗದರ್ಶಕರು

**ಡಾ.ಕೆ.ಎಂ.ಮೇತ್ರಿ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ



**ಅಭಿವೃದ್ಧಿ ಅಧ್ಯಯನ ವಿಭಾಗ**
**ಸಮಾಜವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

**೨೦೧೬**

# ಮಾರ್ಗದರ್ಶಕರ ದೃಢೀಕರಣ ಪತ್ರ

**ಝಳಕಿ ದಾನಮ್ಮ ಚನಬಸಪ್ಪ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಹೆಣ್ಣುಮಕ್ಕಳ ಶಿಕ್ಷಣದ ಸಾಮಾಜಿಕ ನೆಲೆಗಳು(ಮುಸ್ಲಿಂ ಹೆಣ್ಣುಮಕ್ಕಳನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಸಹ ಮಾರ್ಗದರ್ಶಕರು

**ಡಾ.ಕೆ.ಎಂ.ಮೇತ್ರಿ**

ಮಾರ್ಗದರ್ಶಕರು

**ಡಾ.ಜನಾರ್ದನ**
ಸಹಾಯಕ ಪ್ರಾಧ್ಯಾಪಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 16.02.2017

## ಸಂಶೋಧಕರ ಘೋಷಣಾ ಪತ್ರ

**ಹೆಣ್ಣುಮಕ್ಕಳ ಶಿಕ್ಷಣದ ಸಾಮಾಜಿಕ ನೆಲೆಗಳು(ಮುಸ್ಲಿಂ ಹೆಣ್ಣುಮಕ್ಕಳನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಅಭಿವೃದ್ಧಿ ಅಧ್ಯಯನ ವಿಭಾಗದ, ಸಹಾಯಕ ಪ್ರಾಧ್ಯಾಪಕರಾದ **ಡಾ.ಜನಾರ್ದನ** ಹಾಗೂ ಬುಡಕಟ್ಟು ವಿಭಾಗದ ಪ್ರಾಧ್ಯಾಪಕರಾದ **ಡಾ.ಕೆ.ಎಂ.ಮೇತ್ರಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

[signature]

**ಝಳಕಿ ದಾನಮ್ಮ ಚನಬಸಪ್ಪ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ : ವಿದ್ಯಾರಣ್ಯ
ದಿನಾಂಕ : 16-2-17

# ಪರಿವಿಡಿ

**ಪ್ರಸ್ತಾವನೆ** 1–42

1. ಪ್ರಸ್ತಾವನೆ
2. ಸಾಹಿತ್ಯ ವಿಮರ್ಶೆ
3. ಅಧ್ಯಯನದ ಸಮಸ್ಯೀಕರಣ
4. ಸಂಶೋಧನಾ ಅಧ್ಯಯನದ ಉದ್ದೇಶಗಳು
5. ಅಧ್ಯಯನದ ವಿಧಾನ
6. ಅಧ್ಯಯನದ ಮಹತ್ವ
7. ಅಧ್ಯಯನದ ಮಿತಿ
8. ಅಧ್ಯಯನದ ವಿನ್ಯಾಸ

**ಅಧ್ಯಾಯ: ಒಂದು**

**ಅಭಿವೃದ್ಧಿ ಮತ್ತು ಮಹಿಳೆ** 43–81

1.1 ವರಮಾನ ವರ್ಧನೆ ಮತ್ತು ಮಾನವ ಅಭಿವೃದ್ಧಿ ವರ್ಧನೆ ಮುಖಾಮುಖಿ
1.2 ಲಿಂಗಸಂಬಂಧಿ ಮುಖ್ಯವಾಹಿನೀಕರಣ: ಒಂದು ಪರಿಕಲ್ಪನೆ
1.3 ಅಭಿವೃದ್ಧಿ: ಲಿಂಗಸ್ಪಂಧಿ ಆಯಾಮಗಳು
1.4 ಅಭಿವೃದ್ಧಿ ಮತ್ತು ಮಹಿಳೆ
1.5 ಮಹಿಳೆ ಮತ್ತು ಸಂಗೋಪನ ದುಡಿಮೆ
1.6 ಮಾನವ ಅಭಿವೃದ್ಧಿ ಲಿಂಗ ಸಂಬಂಧಿ ಆಯಾಮಗಳು
1.7 ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆ
1.8 ಮಹಿಳೆ ಮತ್ತು ಅಭಿವೃದ್ಧಿ
1.9 ಮಹಿಳೆಯರ ಅಭಿವೃದ್ಧಿ
1.10 ಶಿಕ್ಷಣ ಮತ್ತು ಸಬಲೀಕರಣ
1.11 ಭಾರತದ ಸಂವಿಧಾನ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯ ಅಶೋತ್ತರಗಳು
1.12 ಭಾರತದ ಸಂವಿಧಾನ: ಅಲ್ಪಸಂಖ್ಯಾತರ ಶಿಕ್ಷಣ ಮತ್ತು ಸಾಂಸ್ಕೃತಿಕ ರಕ್ಷಣೆ
1.13 ಭಾರತದಲ್ಲಿ ಶೈಕ್ಷಣಿಕ ಹಿಂದುಳಿಯುವಿಕೆ : ಸಾರ್ವತ್ರಿಕ ಚರ್ಚೆಗಳು
1.14 ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ : ಚಾರಿತ್ರಿಕ ಮತ್ತು ಧಾರ್ಮಿಕ ಚರ್ಚೆಗಳು
1.15 ಮುಸ್ಲಿಮರ ಕನಿಷ್ಟ ಶಿಕ್ಷಣ: ಸೈದ್ಧಾಂತಿಕ ಪರಿಕಲ್ಪನೆಗಳು

1.16 ಇಸ್ಲಾಂ ದೃಷ್ಟಿಕೋನ ಮತ್ತು ಮುಸ್ಲಿಂ ಮಹಿಳಾ ಶಿಕ್ಷಣ
1.17 ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು

**ಅಧ್ಯಾಯ: ಎರಡು**

**ಬೆಳಗಾವಿ ಜಿಲ್ಲೆ: ಬಹುಮುಖಿ ಆಯಾಮಗಳು** 82–125

2.2. ಭಾರತ ಮತ್ತು ಕರ್ನಾಟಕದಲ್ಲಿ ಮುಸ್ಲಿಮರು
2.3. ಮುಸ್ಲಿಮರ ಅನಭಿವೃದ್ಧಿ: ವಿವಿಧ ಚರ್ಚೆಗಳು
2.4. ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು
2.5. ಮುಸ್ಲಿಮರ ಆರ್ಥಿಕ ಸ್ಥಿತಿಗಳು
2.6. ಉದ್ಯೋಗ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ
2.7. ಕೈಗಾರಿಕ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ
2.8. ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ
2.9. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮುಸ್ಲಿಮರು
2.10. ಕರ್ನಾಟಕದ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು
2.11. ಕರ್ನಾಟಕದ ಮುಸ್ಲಿಮರ ಆರ್ಥಿಕ ಸ್ಥಿತಿಗಳು
2.12. ಕರ್ನಾಟಕ ಅಲ್ಪಸಂಖ್ಯಾತ ಆಯೋಗದ ವರದಿ 1994
2.13. ಕರ್ನಾಟಕದ ಮುಸ್ಲಿಮರ ಆರೋಗ್ಯದ ಸ್ಥಿತಿ
2.14. ಕರ್ನಾಟಕದ ಮುಸ್ಲಿಮರ ವಸತಿ ಮತ್ತು ಮೂಲಭೂತ ಸೌಕರ್ಯಗಳ ಸ್ಥಿತಿಗಳು
2.15. ಬೆಳಗಾವಿ ನಗರದ ಮುಸ್ಲಿಮರ ಸಮಾಜೋ-ಆರ್ಥಿಕ ಸ್ಥಿತಿಗಳು
2.16. ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ಕೊರತೆ

**ಅಧ್ಯಾಯ: ಮೂರು**

**ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರ** **126–175**

3.1. ಬೆಳಗಾವಿ ಜಿಲ್ಲೆಯಲ್ಲಿ ಮರಾಠಿ ಪ್ರಾಬಲ್ಯ
3.2. ಬೆಳಗಾವಿ ಪ್ರಾಂತದ ಕನ್ನಡ ಶಿಕ್ಷಣಕ್ಕೆ ವೀರಶೈವ ಮಠಗಳ ಕೂಡುಗೆ
3.3. ಬೆಳಗಾವಿ ಪ್ರಾಂತದ ಶಿಕ್ಷಣದಲ್ಲಿ ಬ್ರಿಟೀಶರ ಪ್ರವೇಶ
3.4. ಬೆಳಗಾವಿ ಪ್ರಾಂತದಲ್ಲಿ ಮರಾಠಿ ಶಾಲೆಗಳು ಮತ್ತು ಮರಾಠಿ ಭಾಷೆ
3.5. ಏಕೀಕರಣೋತ್ತರ ಬೆಳಗಾವಿಯಲ್ಲಿ ಕನ್ನಡದ ಸ್ಥಿತಿ
3.6. ಗಡಿನಾಡ ಕನ್ನಡಿಗರ ಶಿಕ್ಷಣ ಮತ್ತು ಭಾಷಾಭಿವೃದ್ಧಿಗೆ ಅಯೋಗ/ಸಮಿತಿಗಳ ಶಿಫಾರಸ್ಸುಗಳು
3.7. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸೂಚಿಗಳು
3.8. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಮುಸ್ಲಿಮರ ಶೈಕ್ಷಣಿಕ ಪರಿಸರ
3.9. ಬೆಳಗಾವಿ ಜಿಲ್ಲೆಯ ಉರ್ದು ಶಾಲೆಗಳು
3.10. ಮುಸ್ಲಿಂ ಮಹಿಳೆಯರ ಶಿಕ್ಷಣ ಮತ್ತು ತಪ್ಪು ಗ್ರಹಿಕೆಗಳು
3.11. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಆಯ್ಕೆ
3.12. ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ನಿಲುವುಗಳು
3.13. ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ನಿಲುವುಗಳು

3.14. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ನಿಲುವುಗಳು
3.15. ಮುಸ್ಲಿಂ ಪೋಷಕರ ಶೈಕ್ಷಣಿಕ ನೆಲೆಗಳು ಮತ್ತು
ಮಹಿಳೆಯರ ಶಿಕ್ಷಣದ ಬಗೆಗಿನ ನಿಲುವುಗಳು

**ಅಧ್ಯಾಯ: ನಾಲ್ಕು**

**ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ: ಪ್ರಭಾವ ಬೀರುವ ಅಂಶಗಳು** **176–212**

4.1. ಮಹಿಳಾ ಶಿಕ್ಷಣ ಮತ್ತು ಸಾಮರ್ಥ್ಯದ ವಿಸ್ತರಣೆ
4.2. ಭಾರತದ ಸಂವಿಧಾನ ಮತ್ತು ಮಹಿಳಾ ಶಿಕ್ಷಣ
4.3. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ : ಚಾರಿತ್ರಿಕ ಕಾರಣಗಳು
4.4. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ : ಧಾರ್ಮಿಕ, ಸಾಂಸ್ಕೃತಿಕ ಅಡ್ಡಿಗಳು
4.5. ಮುಸ್ಲಿಮರ ಕನಿಷ್ಠ ಶಿಕ್ಷಣ: ಸೈದ್ಧಾಂತಿಕ ಪರಿಕಲ್ಪನೆಗಳು
4.6. ಇಸ್ಲಾಂ ದೃಷ್ಟಿಕೋನ ಮತ್ತು ಮುಸ್ಲಿಂ ಮಹಿಳಾ ಶಿಕ್ಷಣ
4.7. ಮಹಿಳಾ ಶಿಕ್ಷಣಕ್ಕೆ ಇಸ್ಲಾಂ ಧರ್ಮದ ನಿರ್ಬಂಧ ಮತ್ತು ಪೋಷಕರ ಅರಿವು
4.8. ಶಿಕ್ಷಣದ ನೆಲೆಯಲ್ಲಿ ಇಸ್ಲಾಂ ಮತ್ತು ಶಿಕ್ಷಣದ ನಡುವಿನ
ಸಂಬಂಧದ ಬಗ್ಗೆ ಪೋಷಕರ ಅರಿವು
4.9. ಮುಸ್ಲಿಂ ಮಹಿಳೆಯರ ಶಿಕ್ಷಣದ ಮೇಲೆ ಕುಟುಂಬದ
ಮುಖ್ಯಸ್ಥನ ಶಿಕ್ಷಣದ ಪ್ರಭಾವ
4.10. ಮುಸ್ಲಿಂ ಬಾಲಕಿಯರ ಶಿಕ್ಷಣ ಮತ್ತು ಕುಟುಂಬದ ಮುಖ್ಯಸ್ಥನ ಸ್ಫೂರ್ತಿ
4.11. ಕುಟುಂಬದ ಮುಖ್ಯಸ್ಥನ ವೃತ್ತಿ ಮತ್ತು ಮುಸ್ಲಿಂ ಮಹಿಳೆಯರ ಶಿಕ್ಷಣ
4.12. ಮುಸ್ಲಿಂ ಮಹಿಳೆಯ ಶಿಕ್ಷಣ ಮತ್ತು ಪೋಷಕರ ಜೀವನ ಮಟ್ಟ
4.13. ಶಿಕ್ಷಣ ಮತ್ತು ಅಂತರಾಷ್ಟ್ರೀಯ ಸ್ಥಿತಿಗಳು
4.14. ಜಾಗತೀಕ ಸಂದರ್ಭದಲ್ಲಿ ಮಹಿಳಾ ಶಿಕ್ಷಣದ ಅಡ್ಡಿಗಳು
4.15. ಭಾರತೀಯ ಮತ್ತು ಕರ್ನಾಟಕದ ಸಂದರ್ಭದಲ್ಲಿ
ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿಗಳು
4.16. ಮುಸ್ಲಿಂ ಬಾಲಕಿಯರ ಶಿಕ್ಷಣಕ್ಕೆ ಪೋಷಕರ ಪ್ರೋತ್ಸಾಹ
4.17. ಬೆಳಗಾವಿ ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣದ ಅಡ್ಡಿಗಳು
4.18. ಬಡವರು ಮತ್ತು ಬಾಲಕಿಯರ ಉನ್ನತ ಶಿಕ್ಷಣ
4.19. ಮಧ್ಯಮ ವರ್ಗ ಮತ್ತು ಬಾಲಕಿಯರ ಉನ್ನತ ಶಿಕ್ಷಣ
4.20. ಶ್ರೀಮಂತರು ಮತ್ತು ಬಾಲಕಿಯರ ಉನ್ನತ ಶಿಕ್ಷಣ

**ಅಧ್ಯಾಯ: ಐದು**

**ಮುಸ್ಲಿಂ ಮಹಿಳೆಯ ಶಿಕ್ಷಣ: ಸರ್ಕಾರಗಳು ಮತ್ತು**
**ನಾಗರೀಕ ಸಮಾಜದ ಪಾತ್ರ** **213–263**

5.1. ಸರ್ಕಾರ ಮತ್ತು ಜನ ಕಲ್ಯಾಣದ ಜವಾಬ್ದಾರಿಗಳು
5.2. ಶಿಕ್ಷಣ ಮತ್ತು ಪರಿವರ್ತನೆ
5.3. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯ ಸಂವಿಧಾನಾತ್ಮಕ ರಕ್ಷಣೆ
5.4. ಮಹಿಳಾ ಅಭಿವೃದ್ಧಿಯ ಆಶೋತ್ತರಗಳ ಕಾರ್ಯಚರಣೆ

5.5. ನಾಗರೀಕ ಸಮಾಜ: ಒಂದು ಪರಿಕಲ್ಪನೆ.
5.6. ಭಾರತದಲ್ಲಿ ನಾಗರೀಕ ಸಮಾಜದ ಉದ್ಭವ ಮತ್ತು ಬೆಳವಣಿಗೆ
5.7. ಪ್ರಾಚೀನ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮಹಿಳಾ ಶಿಕ್ಷಣದ ಬೆಳವಣಿಗೆ ಮತ್ತು ಮಹತ್ವ
5.8. ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಆಯೋಗಗಳು ಮತ್ತು ಮಹಿಳಾ ಶಿಕ್ಷಣದ ಬೆಳವಣಿಗೆ
5.9. ಸಾರ್ವತ್ರಿಕ ಶಿಕ್ಷಣಕ್ಕಾಗಿ ಸರ್ಕಾರದ ಕ್ರಮಗಳು
5.10. ಸರ್ಕಾರದ ಶೈಕ್ಷಣಿಕ ಕಾರ್ಯಕ್ರಮಗಳು: ಗುಣಾತ್ಮಕ ಮತ್ತು ಪರಿಮಾಣಾತ್ಮಕ ಬದಲಾವಣೆಗಳು
5.11. ಮುಸ್ಲಿಮರ ಶೈಕ್ಷಣಿಕ ವರದಿಗಳು ಮತ್ತು ಸರ್ಕಾರದ ಯೋಜನಾವಾರು ಕ್ರಮಗಳು
5.12. ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರದ ಕ್ರಮಗಳು
5.13. ಮದರಸ ಶಿಕ್ಷಣದ ಅಭಿವೃದ್ಧಿ ಮತ್ತು ವಿವಾದಗಳು
5.14. ಬೆಳಗಾವಿ ನಗರದ ನಾಗರೀಕ ಸಮಾಜಗಳು ಮತ್ತು ಆಯ್ಕೆ
5.15. ನಾಗರೀಕ ಸಮಾಜಗಳು ಮತ್ತು ಶೈಕ್ಷಣಿಕ ಕಾರ್ಯಕ್ರಮಗಳ ಅರಿವಿನ ಮಟ್ಟ
5.16. ಜ್ಯಾತ್ಯಾತೀತ ನಾಗರೀಕ ಸಮಾಜದ ಅರಿವಿನ ಮಟ್ಟ.
5.17. ಧರ್ಮಾಧಾರಿತ ನಾಗರೀಕ ಸಮಾಜದ ಅರಿವಿನ ಮಟ್ಟ
5.18. ಮುಸ್ಲಿಮರ ಸಾಂಸ್ಕೃತಿಕ ಅನನ್ಯತೆ ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು
5.19. ಮುಸ್ಲಿಂ ಸಮುದಾಯದ ಸಮಾಜೋ–ಆರ್ಥಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು
5.20. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು
5.21. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಧರ್ಮಾಧಾರಿತ ನಾಗರೀಕ ಸಮಾಜದ ಗ್ರಹಿಕೆಗಳು
5.22. ಜಾತ್ಯಾತೀತ ನಾಗರೀಕ ಸಮಾಜ ಮತ್ತು ಪರಿಹಾರ ಮಾರ್ಗಗಳು
5.23. ಧರ್ಮಾಧಾರಿತ ನಾಗರೀಕ ಸಮಾಜ ಮತ್ತು ಪರಿಹಾರ ಮಾರ್ಗಗಳು

**ಅಧ್ಯಾಯ: ಆರು**
**ಅಧ್ಯಯನದ ಫಲಿತಗಳು ಮತ್ತು ಮುಸ್ಲಿಂ ಮಹಿಳೆಯರ ಶಿಕ್ಷಣದ ಸುಧಾರಣೆಗೆ ಶಿಫಾರಸ್ಸುಗಳು** 264–296

ಭಾಗ: ಒಂದು
6.1. ಬೆಳಗಾವಿ ನಗರದ ಮುಸ್ಲಿಮರ ಸಾಮಾಜಿಕ ಸ್ಥಿತಿ
6.2. ಬೆಳಗಾವಿ ನಗರದ ಮುಸ್ಲಿಮರ ಆರ್ಥಿಕ ಸ್ಥಿತಿ

6.3. ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ಕೊರತೆ
6.4. ಬೆಳಗಾವಿ ನಗರದ ಪರಿಸರ ಮತ್ತು ಶಿಕ್ಷಣ
6.5. ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಪರಿಸರ
6.6. ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸಂಪನ್ಮೂಲಗಳು
6.7. ಬೆಳಗಾವಿ ಜಿಲ್ಲೆ ಮತ್ತು ಮುಸ್ಲಿಮರ ವಸತಿ ನಿಲಯಗಳು
6.8. ಬೆಳಗಾವಿಯ ಮುಸ್ಲಿಮರು ಮತ್ತು ಶಿಕ್ಷಣ ಪರಿಸರ
6.9. ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ಸಕಾರಾತ್ಮಕ ನಿಲುವುಗಳು.
6.10. ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ಉದ್ಯೋಗದ ಬಗ್ಗೆ ಮುಸ್ಲಿಂ ಬಾಲಕಿಯರ ಬದಲಾಗುತ್ತಿರುವ ಮನೋಭಾವನೆಗಳು
6.11. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ನಿಲುವುಗಳು
6.12. ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಬೆಂಬಲ
6.13. ಬೆಳಗಾವಿ ನಗರದ ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ ಮತ್ತು ಇಸ್ಲಾಂ ಧರ್ಮ
6.14. ಬೆಳಗಾವಿ ಮುಸ್ಲಿಂ ಕುಟುಂಬದ ಮುಖ್ಯಸ್ಥನ ಶಿಕ್ಷಣ ಮಟ್ಟ ಮತ್ತು ಪ್ರಭಾವ
6.15. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಸ್ಪೂರ್ತಿಯ ನೆಲೆಗಳು
6.16. ಬೆಳಗಾವಿ ನಗರದ ಮುಸ್ಲಿಂ ಪೋಷಕರ ವೃತ್ತಿ ಮತ್ತು ಪ್ರಭಾವ
6.17. ಬೆಳಗಾವಿ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಮುಂದುವರಿಯುವಿಕೆ ಮತ್ತು ಕುಟುಂಬಗಳ ಪಾತ್ರ
6.18. ಬಡತನ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ
6.19. ಮಧ್ಯಮ ವರ್ಗದ ಜೀವನ ಮಟ್ಟ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ
6.20. ಉತ್ತಮ ಜೀವನ ಮಟ್ಟ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ
6.21. ಸರ್ಕಾರದ ವರದಿಗಳು ಮತ್ತು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿ
6.22. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ನಾಗರೀಕ ಸಮಾಜಗಳ ಅರಿವು
6.23. ಬೆಳಗಾವಿ ಮುಸ್ಲಿಮರ ಸಾಂಸ್ಕೃತಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು
6.24. ಬೆಳಗಾವಿ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು.
6.25. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜ ಗ್ರಹಿಕೆಗಳು
6.26. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಧರ್ಮಧಾರಿತ ನಾಗರೀಕ ಸಮಾಜ ಗ್ರಹಿಕೆಗಳು
6.27. ಬೆಳಗಾವಿ ನಗರದ ಜಾತ್ಯಾತೀತ ನಾಗರೀಕ ಸಮಾಜಗಳು ಮತ್ತು ಮುಸ್ಲಿಮರ ಸಮಸ್ಯೆ ನಿವಾರಣಾ ಮಾರ್ಗೋಪಾಯಗಳು

6.28. ಬೆಳಗಾವಿ ನಗರದ ಧರ್ಮಾಧಾರಿತ ನಾಗರೀಕ ಸಮಾಜಗಳು ಮತ್ತು ಮುಸ್ಲಿಮರ ಸಮಸ್ಯೆ ನಿವಾರಣಾ ಮಾರ್ಗೋಪಾಯಗಳು

ಭಾಗ: ಎರಡು

**ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗೆ ಅಧ್ಯಯನ ಆಧಾರಿತ ಶಿಫಾರಸ್ಸುಗಳು**

1. ಮುಸ್ಲಿಮರಿಗೆ ವಿಶೇಷ ಮೀಸಲಾತಿ ಕಲ್ಪಿಸುವುದು
2. ಮುಸ್ಲಿಂ ಸಮುದಾಯದ ಬಡತನವನ್ನು ನಿವಾರಿಸುವುದು.
3. ಶೈಕ್ಷಣಿಕ ಮಂಡಳಿ ಹಾಗೂ ಆಯೋಗಗಳಲ್ಲಿ ಮುಸ್ಲಿಮರ ಪಾತಿನಿಧ್ಯ
4. ಶಿಕ್ಷಣ ಮತ್ತು ಉದ್ಯೋಗದ ನಡುವೆ ಸಂಬಂಧ ಕಲ್ಪಿಸುವುದು.
5. ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರಿ ನಿಯಮಾಳಿಗಳನ್ನು ಸರಳೀಕರಿಸುವುದು
6. ಮುಸ್ಲಿಂ ಶಿಕ್ಷಣ ಸಂಸ್ಥೆಗಳ ಮೇಲ್ವಿಚಾರಣೆಗೆ ಅಧಿಕಾರಿಯನ್ನು ನೇಮಕ ಮಾಡುವುದು.
7. ಪರಿಶಿಷ್ಟರ ಯೋಜನೆಗಳನ್ನು ಅಲ್ಪಸಂಖ್ಯಾತರಿಗೆ ವಿಸ್ತರಿಸುವುದು
8. ಉತ್ತಮ ಗುಣಮಟ್ಟದ ಸರ್ಕಾರಿ ಶಾಲೆಗಳನ್ನು ಸ್ಥಾಪಿಸುವುದು.
9. ಸರ್ಕಾರದ ಶೈಕ್ಷಣಿಕ ಅಭಿವೃದ್ಧಿ ಯೋಜನೆಗಳು ಮತ್ತು ಕಾರ್ಯಕ್ರಮಗಳು ಒಳಗೊಳ್ಳುವಿಕೆ ಸ್ವರೂಪ ಪಡೆಯುವ ಅಗತ್ಯವಿದೆ.
10. ಕನಿಷ್ಟ ಮಟ್ಟದ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ತೆರೆಯುವುದು.
11. ಉರ್ದು ಭಾಷೆಯ ರಕ್ಷಣೆಗೆ ಕ್ರಮ ಕೈಗೊಳ್ಳುವುದು
12. ಉರ್ದು ಶಾಲೆಗಳ ಗುಣಮಟ್ಟವನ್ನು ಎತ್ತರಿಸುವುದು.
13. ಪಠ್ಯಪುಸ್ತಕಗಳ ಕೇಸರೀಕರಣ ತಡೆಯಬೇಕು
14. ಮದರಸಾಗಳು ಮತ್ತು ಸಮಾಜದ ನಡುವೆ ಸಾಮರಸ್ಯವನ್ನು ತರುವುದು
15. ಶೈಕ್ಷಣಿಕವಾಗಿ ಪ್ರಾದೇಶಿಕ ಅಸಮತೋಲನವನ್ನು ನಿವಾರಿಸುವುದು
16. ಸಮುದಾಯವಾರು ಶೈಕ್ಷಣಿಕ ಸಂಪನ್ಮೂಲಗಳ ಅಸಮಾನತೆಗಳನ್ನು ನಿವಾರಿಸುವುದು
17. ಕರ್ನಾಟಕ ಅಲ್ಪಸಂಖ್ಯಾತ ಸಮಿತಿಗಳ ಶಿಫಾರಸ್ಸುಗಳನ್ನು ಶೀಘ್ರ ಜಾರಿಗೆ ತರುವುದು
18. ಗಡಿನಾಡು ಸಮಿತಿಗಳ ಶಿಫಾರಸ್ಸುಗಳನ್ನು ಜಾರಿಗೊಳಿಸುವುದು.
19. ಮುಸ್ಲಿಮರ ಸ್ಥಿತಿಗಳನ್ನು ಅರಿಯಲು ಹೊಸ ಸಮಿತಿ ನೇಮಕದ ಅಗತ್ಯ
20. ಮುಸ್ಲಿಂ ಮಕ್ಕಳನ್ನು ಸಾರ್ವತ್ರಿಕ ಶಿಕ್ಷಣದ ಮುಖ್ಯವಾಹಿನಿಗೆ ತರುವುದು
21. ಮುಸ್ಲಿಂ ಮಹಿಳೆಯರಿಗೆ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಉದ್ಯೋಗದ ತರಬೇತಿ ನೀಡುವುದು.
22. ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಬದಲಾಗಬೇಕಾದ ಮುಸ್ಲಿಂ ಮನೋಭಾವನೆಗಳು
23. ಮುಸ್ಲಿಂ ಮಹಿಳಾ ಶಿಕ್ಷಣದ ಬಗ್ಗೆ ಬದಲಾಗಬೇಕಾದ ಪೋಷಕರ ಮನೋಭಾವನೆಗಳು

ಭಾಗ: ಮೂರು

**ಹೆಣ್ಣು ಮಕ್ಕಳ ಶಿಕ್ಷಣದ ಅಭಿವೃದ್ಧಿಗಾಗಿ ಮುಸ್ಲಿಂ ಸಮುದಾಯ ನಿರ್ವಹಿಸಬೇಕಾದ ಜವಾಬ್ದಾರಿಗಳು**

**ಸಮಾರೋಪ** **297–303**

ಅನುಬಂಧಗಳು **304–332**

1. ಪರಾಮರ್ಶನ ಗ್ರಂಥಗಳು
2. ಪ್ರಶ್ನಾವಳಿಗಳು

# ಕೋಷ್ಟಕಗಳ ಪಟ್ಟಿ

**ಅಧ್ಯಾಯ–2: ಬೆಳಗಾವಿ ಜಿಲ್ಲೆ: ಬಹುಮುಖ ಆಯಾಮಗಳು** **116–118**

1. ಕೋಷ್ಟಕ: ಮುಸ್ಲಿಮರ ಕುಟುಂಬಗಳ ಸ್ವರೂಪ,
2. ಕೋಷ್ಟಕ: ಮುಸ್ಲಿಂ ಕುಟುಂಬಗಳಲ್ಲಿ ಸಾಂದ್ರತೆ
3. ಕೋಷ್ಟಕ: ರಾಜ್ಯ, ಬೆಳಗಾವಿ ಜಿಲ್ಲೆ ಮತ್ತು ನಗರದ ಸಾಕ್ಷರತೆ ವಿವರ
4. ಕೋಷ್ಟಕ: ಬೆಳಗಾವಿ ನಗರದ ವಿವಿಧ ವೃತ್ತಿಯಲ್ಲಿ ತೊಡಗಿರುವಕುಟುಂಬಗಳ ವಿವರ
5. ಕೋಷ್ಟಕ: ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳ ದುಡಿಮೆಗಾರರ ವಿವರ
6. ಕೋಷ್ಟಕ: ಮುಸ್ಲಿಂ ಬಾಲಕಿಯರ ಪೋಷಕರ ಕುಟುಂಬಗಳ ಆದಾಯಗಳು
7. ಕೋಷ್ಟಕ: ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ವಿವರ

**ಅಧ್ಯಾಯ–3: ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರ** **157–171**

8. ಕೋಷ್ಟಕ: ಕರ್ನಾಟಕದ ನಗರ–ಗ್ರಾಮೀಣ ಭಾಗದ ಪುರುಷ ಮತ್ತು ಮಹಿಳೆಯರ ಸಾಕ್ಷರತೆ
9. ಕೋಷ್ಟಕ: ಬೆಳಗಾವಿ ಜಿಲ್ಲೆಯ ಸಾಕ್ಷರತೆ
10. ಕೋಷ್ಟಕ: 1991 ರಿಂದ 2011 ವರೆಗಿನ ವಲಯವಾರು ಸಾಕ್ಷರತೆಯ ಪ್ರಮಾಣ
11. ಕೋಷ್ಟಕ: ರಾಜ್ಯದಲ್ಲಿರುವ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ವಿವರ
12. ಕೋಷ್ಟಕ: ವ್ಯವಸ್ಥಾಪನವಾರು ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ಹಿರಿಯ ಪ್ರಾಥಮಿಕ ಶಾಲೆಗಳ ವಿವರ
13. ಕೋಷ್ಟಕ: ಮಾಧ್ಯಮವಾರು ಶಾಲೆಗಳ ಮಾಹಿತಿ
14. ಕೋಷ್ಟಕ: ಕರ್ನಾಟಕ ಬೆಳಗಾವಿ ಜಿಲ್ಲೆ ಮತ್ತು ಬೆಳಗಾವಿ ನಗರದ ದಾಖಲಾತಿ ವಿವರಗಳು
15. ಕೋಷ್ಟಕ: ಕರ್ನಾಟಕ ರಾಜ್ಯದ ಸಾಮಾಜಿಕ ವರ್ಗವಾರು ದಾಖಲಾತಿ ವಿವರ
16. ಕೋಷ್ಟಕ: ಸಾಮಾಜಿಕ ವರ್ಗವಾರು ವಿದ್ಯಾರ್ಥಿಗಳ ದಾಖಲಾತಿ ವಿವರ
17. ಕೋಷ್ಟಕ: ರಾಜ್ಯದಲ್ಲಿ 1ರಿಂದ 10 ನೇ ತರಗತಿಯ ವರೆಗೆ ಆಡಳಿತವಾರು ಮುಸ್ಲಿಂ ವರ್ಗದ ದಾಖಲಾತಿ ವಿವರ
18. ಕೋಷ್ಟಕ: ರಾಜ್ಯದಲ್ಲಿರುವ ವಿವಿಧ ಶಾಲೆಗಳಲ್ಲಿರುವ ಶಿಕ್ಷಕರ ಪ್ರಮಾಣ

19. ಕೋಷ್ಟಕ: ರಾಜ್ಯದಲ್ಲಿರುವ ಲಿಂಗಾಧಾರಿತ ಶಿಕ್ಷಕರ ಪ್ರಮಾಣ

20. ಕೋಷ್ಟಕ: ಜಿಲ್ಲೆಯ ವಲಯವಾರು ಶಿಕ್ಷಕರ ಮಾಹಿತಿ

21. ಕೋಷ್ಟಕ: ರಾಜ್ಯದ ಮತ್ತು ಬೆಳಗಾವಿ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಮೂಲಭೂತ ಸೌಕರ್ಯಗಳ ವಿವರ

22. ಕೋಷ್ಟಕ: ಕರ್ನಾಟಕ ರಾಜ್ಯದ ಅಲ್ಪಸಂಖ್ಯಾತರ ವಸತಿ ನಿಲಯಗಳ ವಿವರ

23. ಕೋಷ್ಟಕ: ಬೆಳಗಾವಿ ಜಿಲ್ಲೆಯ ಅಲ್ಪಸಂಖ್ಯಾತರ ವಿದ್ಯಾರ್ಥಿ ನಿಲಯಗಳು

24. ಕೋಷ್ಟಕ: 1ರಿಂದ 10ನೇ ತರತಗತಿಯ ವರೆಗೆ ರಾಜ್ಯದ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ದಾಖಲಾತಿ ವಿವರ

25. ಕೋಷ್ಟಕ: 1 ರಿಂದ 10ನೇ ತರತಗತಿಯ ವರೆಗೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ದಾಖಲಾತಿ ವಿವರ

26. ಕೋಷ್ಟಕ: ಕರ್ನಾಟಕ ರಾಜ್ಯದ ಉರ್ದು ಮಾಧ್ಯಮ ಶಾಲೆಗಳ ವಿದ್ಯಾರ್ಥಿಗಳ ದಾಖಲಾತಿ ವಿವರ

27. ಕೋಷ್ಟಕ: ಸರ್ಕಾರಿ ಉರ್ದು ಮಾದ್ಯಮ ಶಾಲೆಗಳಲ್ಲಿ ವರ್ಗವಾರು ದಾಖಾಲಾತಿ ವಿವರ

28. ಕೋಷ್ಟಕ: ಅನುದಾನಿತ ಉರ್ದು ಮಾದ್ಯಮ ಶಾಲೆಗಳಲ್ಲಿ ವರ್ಗವಾರು ದಾಖಾಲಾತಿ ವಿವರ

29. ಕೋಷ್ಟಕ: ಅನುದಾನ ರಹಿತ ಉರ್ದು ವಾದ್ಯಮು ಶಾಲೆಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ವಿವರ

30. ಕೊಷ್ಟಕ: ಮುಸ್ಲಿಂ ಬಾಲಕಿಯರ ಶಿಕ್ಷಣದ ಅಪೇಕ್ಷೆಯ ವಿವರ

31. ಕೋಷ್ಟಕ: ಮುಸ್ಲಿಂ ಬಾಲಕಿಯರ ಶಿಕ್ಷಣದ ಬಗ್ಗೆ ಅವರ ಪೋಷಕರ ನಿಲುವುಗಳ ವಿವರ

**ಅಧ್ಯಾಯ–4: ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ: ಪ್ರಭಾವ ಬೀರುವ ಅಂಶಗಳು 200–204**

32. ಕೋಷ್ಟಕ: ಇಸ್ಲಾಂ ಧರ್ಮ ಮಹಿಳೆಯರಿಗೆ ಶಿಕ್ಷಣವನ್ನು ನಿರ್ಭಂಧಿಸಿದೆ ಎನ್ನುವುದರ ಅರಿವು

33. ಕೋಷ್ಟಕ: ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಇಸ್ಲಾಂ ಮತ್ತು ಮಹಿಳಾ ಶಿಕ್ಷಣದ ನಡುವಿನ ಸಂಬಂಧಗಳ ಅರಿವು

34. ಕೋಷ್ಟಕ: ಬೆಳಗಾವಿ ನಗರದ ವಿವಿಧ ಮುಸ್ಲಿಂ ಕುಟುಂಬಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರ ವಿವರ

35. ಕೋಷ್ಟಕ: ಬಾಲಕಿಯರಿಗೆ ಉನ್ನತ ವ್ಯಾಸಾಂಗಕ್ಕೆ ಪ್ರೋತ್ಸಾಹ ನೀಡುತ್ತಿರುವವರು

36. ಕೋಷ್ಟಕ: ಬೆಳಗಾವಿ ನಗರದ ವಿವಿಧ ವೃತ್ತಿಯಲ್ಲಿ ತೂಡಗಿರುವ ಮುಸ್ಲಿಂ ಕುಟುಂಬಗಳು ಹಾಗೂ ವಿವಿಧ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಬಾಲಕಿಯರ ವಿವರ

37. ಕೋಷ್ಟಕ: ಲಿಂಗಸಂಬಂಧಿತ ಮತ್ತು ಸಾಮಾಜಿಕ ಅಂದಾಜು ಅಧ್ಯಯನಗಳ ಪ್ರಕಾರ ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿರುವ ಅಂಶಗಳು

38. ಕೋಷ್ಟಕ: ಭಾರತ ಮತ್ತು ಕರ್ನಾಟಕದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿಗಳು

39. ಕೋಷ್ಟಕ: ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಶಿಕ್ಷಣದ ಬಗ್ಗೆ ಪೋಷಕರ ಅಭಿಪ್ರಾಯಗಳ ವಿವರ

40. ಕೋಷ್ಟಕ: ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡಲು ಬಯಸದ ಬೆಳಗಾವಿ ನಗರದ ಒಟ್ಟು ಮುಸ್ಲಿಮರು

41. ಕೋಷ್ಟಕ: ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಿಲ್ಲ ಎನ್ನುವ ತಿರ್ಮಾನಕ್ಕೆ ಕಾರಣಗಳು

**ಅಧ್ಯಾಯ–5: ಮುಸ್ಲಿಂ ಮಹಿಳೆಯ ಶಿಕ್ಷಣ: ಸರ್ಕಾರಗಳು ಮತ್ತು ನಾಗರೀಕ ಸಮಾಜದ ಪಾತ್ರ 250–255**

42. ಕೋಷ್ಟಕ: ಮುಸ್ಲಿಂ ಸಮುದಾಯದ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ನಾಗರೀಕ ಸಮಾಜಗಳ ಅರಿವಿನ ಮಟ್ಟ

43. ಕೋಷ್ಟಕ:ಮುಸ್ಲಿಂ ಸಮುದಾಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

44. ಕೋಷ್ಟಕ: ಮುಸ್ಲಿಂ ಸಮುದಾಯದ ಸಮಾಜೋ– ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

45. ಕೋಷ್ಟಕ: ಜಾತ್ಯಾತೀತ ನಾಗರೀಕ ಸಮಾಜಗಳು ಗುರುತಿಸುವ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳು

46. ಕೋಷ್ಟಕ: ಧರ್ಮಾಧಾರಿತ ನಾಗರೀಕ ಸಮಾಜಗಳು ಗುರುತಿಸುವ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳು

47. ಕೋಷ್ಟಕ: ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಜಾತ್ಯಾತೀತ ನಾಗರೀಕ ಸಮಾಜಗಳು ಅನುಸರಿಸುವ ಮಾರ್ಗಗಳು

48. ಕೋಷ್ಟಕ: ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಧರ್ಮಾಧಾರಿತ ನಾಗರೀಕ ಸಮಾಜಗಳು ಅನುಸರಿಸುವ ಮಾರ್ಗಗಳು

# ಪ್ರಸ್ತಾವನೆ

ಮುಸ್ಲಿಂ ಹೆಣ್ಣುಮಕ್ಕಳು ಶಿಕ್ಷಣವನ್ನು ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆ ಮತ್ತು ಸವಾಲುಗಳನ್ನು ಅರ್ಥ ಮಾಡಿಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಶಿಕ್ಷಣವು ಸಾಮಾಜೀಕರಣ ಮತ್ತು ಮರು ಉತ್ಪಾದನೆಯ ಶಕ್ತಿಯುತ ಮಾಧ್ಯಮ. ಶಿಕ್ಷಣ ಕೇವಲ ಸಮಾಜ ಕಲ್ಯಾಣ ಕಾರ್ಯಕ್ರಮವಲ್ಲ, ಅದು ಮೂಲಭೂತ ಹಕ್ಕು ಮತ್ತು ಮಾನವಾಭಿವೃದ್ಧಿಯ ಮೂಲ ತಳಪಾಯ. ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಿದ ಪ್ರದೇಶಗಳಲ್ಲಿ ಸಮಾನತೆ ಮತ್ತು ಶೈಕ್ಷಣಿಕ ಅವಕಾಶಗಳಿಗೆ ಆತಂಕ ಉಂಟಾಗಿರುವ ಕಥನಗಳಿಲ್ಲ. ಶಿಕ್ಷಣ ಅಭಿವೃದ್ಧಿಯ ಅವಿಭಾಜ್ಯ ಅಂಗ ಎನ್ನುವುದು ಅಮರ್ತ್ಯಸೇನ್ ಅವರ ವಾದ. ಹೆಣ್ಣುಮಕ್ಕಳಿಗೆ ನೀಡುವ ಶಿಕ್ಷಣ ತಲೆಮಾರುಗಳಿಗೆ ವರ್ಗಾಯಿಸಲ್ಪಡುತ್ತದೆ ಎಂಬ ವಾದ ಇಂದಿಗೂ ಪ್ರಸ್ತುತವಾಗಿದೆ. ಶಿಕ್ಷಣ ಹೆಣ್ಣುಮಕ್ಕಳನ್ನು ಸಬಲೀಕರಿಸುತ್ತದೆ ಎಂಬುದನ್ನು ವಿವಿಧ ಅಧ್ಯಯನಗಳು ನಿರೂಪಿಸಿವೆ. ಅನಕ್ಷರಸ್ಥ ಮಹಿಳೆಯರು ಸಾಮಾಜಿಕ ಪರಿವರ್ತನೆ ತರಲು ಸಾಧ್ಯವಿಲ್ಲ, ಆದರೆ ಶಿಕ್ಷಿತ ಮಹಿಳೆಯರು ಅಮೂಲ್ಯವಾದ ಮಾನವ ಸಂಪನ್ಮೂಲವಾಗಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಕ್ರೀಯವಾಗಿ ಭಾಗವಹಿಸಿ ಪರಿವರ್ತನೆ ತರಲು ಶಕ್ತರಾಗುತ್ತಾರೆ. ಶಿಕ್ಷಣಕ್ಕಿರುವ ಮಹತ್ವದ ಹಿನ್ನೆಲೆಯಲ್ಲಿ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯಲ್ಲಿ ಶಿಕ್ಷಣದ ಹಕ್ಕನ್ನು ಪ್ರಸ್ತಾಪಿಸಲಾಗಿದೆ. ಶಿಕ್ಷಣವು ಮಹಿಳೆಯರ ವಿವಿಧ ಆಯಾಮಗಳ ಸಬಲೀಕರಣಕ್ಕೆ ಕಾರಣವಾಗುತ್ತದೆ. ಪೌಷ್ಠಿಕತೆ ಮತ್ತು ಆರೋಗ್ಯ, ರಾಜಕೀಯ ಮತ್ತು ಆರ್ಥಿಕ ಹಕ್ಕುಗಳ ಅರಿವು, ಸಂಪ್ರದಾಯಗಳ ವಿರುದ್ಧ ಹೋರಾಟದ ಮನೋಭಾವನೆ ಮುಂತಾದ ಸಂಗತಿಗಳಲ್ಲಿ ಬದಲಾವಣೆ ತರುವ ಮೂಲಕ ಮಹಿಳೆಯರ ಸಾಮಾಜಿಕ ಜೀವನವನ್ನು ವಿಶಾಲಗೊಳಿಸುತ್ತದೆ. ಆದರೆ ಇವೆಲ್ಲವೂ ಇಂದಿಗೂ ಚರ್ಚೆಗಳಾಗಿಯೇ ಮುಂದುವರೆದಿವೆ.

ಭಾರತ ಸ್ವಾತಂತ್ರ್ಯ ಪಡೆದು ಎಪ್ಪತ್ತು ದಶಕಗಳು ಕಳೆದಿದ್ದರೂ ಪುರುಷ ಮತ್ತು ಮಹಿಳೆಯರ ನಡುವೆ ಎಲ್ಲಾ ಕ್ಷೇತ್ರಗಳಲ್ಲೂ ಅಸಮಾನತೆಗಳು ಇಂದಿಗೂ ಜೀವಂತವಾಗಿವೆ. ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಪುರುಷರಿಗಿಂತ ಮಹಿಳೆಯರು ಅತ್ಯಂತ ಹಿಂದುಳಿದಿದ್ದಾರೆ. ಅಷ್ಟೇ ಅಲ್ಲ ಇಂದಿಗೂ ಸಬಲೀಕರಣದ ಮೂಲವೆಂದು ಭಾವಿಸುವ ಶಿಕ್ಷಣದಲ್ಲೂ ಮಹಿಳೆಯರು ಅತ್ಯಂತ ಹಿಂದುಳಿದಿದ್ದಾರೆ. ವರ್ಷದಿಂದ ವರ್ಷಕ್ಕೆ ಮಹಿಳಾ ಸಾಕ್ಷರತೆ ಪ್ರಮಾಣ ಹೆಚ್ಚಾದಂತೆ

ಕಂಡುಬಂದರೂ ಅದರ ವೇಗ ತೀವ್ರತೆಯನ್ನು ಪಡೆದುಕೊಳ್ಳಲು ಸಾಧ್ಯವಾದಂತೆ ಕಂಡು ಬರುತ್ತಿಲ್ಲ. ಭಾರತೀಯ ಸಮಾಜದ ಪಿತೃಪ್ರಧಾನ ವ್ಯವಸ್ಥೆ ಮಹಿಳೆಯರು ನಿರ್ವಹಿಸಬೇಕಾದ ಪಾತ್ರವನ್ನು ನಿರ್ಧರಿಸುತ್ತಲೇ ಬಂದಿದೆ. ಶ್ರೇಣೀಕೃತ ವ್ಯವಸ್ಥೆ ಮಹಿಳೆಯರಿಗೆ ನಿರ್ದಿಷ್ಟ ಸ್ಥಾನವನ್ನು ನಿಗದಿಪಡಿಸಿದ್ದು, ಈ ಸ್ಥಾನ ಮಹಿಳೆಯರಿಗೆ ತಮ್ಮ ದೇಹ, ಸಂಪನ್ಮೂಲಗಳು ಮತ್ತು ಅವಕಾಶಗಳನ್ನು ನಿರ್ಧರಿಸುವ ಅವಕಾಶವನ್ನು ನೀಡಿಲ್ಲ. ಜಗತ್ತಿನ ಬಹಳಷ್ಟು ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಗಟ್ಟಿಗೊಳ್ಳದಿರಲು ಲಿಂಗ ಅಸಮಾನತೆ ಪ್ರಮುಖ ಕಾರಣವೆಂದು ಗ್ರಹಿಸಲಾಗುತ್ತಿದೆ. ಹಿಂದೂ ಸಮುದಾಯದ ಮೇಲ್ಜಾತಿಗಳಲ್ಲಿ ಪುರುಷರಿಗಿಂತ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಹಿಂದುಳಿದ ವರ್ಗಗಳಲ್ಲೂ ಇದೇ ಪರಿಸ್ಥಿತಿ ಮುಂದುವರೆದಿದೆ. ಈ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯರ ಸ್ಥಿತಿ ಇನ್ನೂ ಚಿಂತಾಜನಕವಾಗಿದೆ. ಮುಸ್ಲಿಂ ಸಮುದಾಯದಲ್ಲಿರುವ ಶ್ರೇಣೀಕರಣ, ಪುರುಷ ಪ್ರಧಾನ ವ್ಯವಸ್ಥೆ, ಸಾಂಸ್ಕೃತಿಕ ಮತ್ತು ಧಾರ್ಮಿಕ ನೆಲೆಗಳು ಮುಸ್ಲಿಂ ಮಹಿಳೆಯರನ್ನು ಹೀನಾಯ ಸ್ಥಿತಿಯಲ್ಲಿರುವಂತೆ ರೂಪಿಸಿವೆ. ಮುಸ್ಲಿಮರ ಸಬಲೀಕರಣದಲ್ಲಿ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ ಎಂದು ಗ್ರಹಿಸಲಾಗಿದೆ. ಆದರೆ ಮುಸ್ಲಿಮರು ವಿಶೇಷವಾಗಿ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ಇತರೆ ಸಮುದಾಯಗಳ ಮಹಿಳೆಯರಿಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ನಿಕೃಷ್ಟವಾದ ಸ್ಥಿತಿಯಲ್ಲಿದ್ದಾರೆ. ಮುಸ್ಲಿಮರನ್ನು ಸಬಲೀಕರಣಗೊಳಿಸಲು ಆದ್ಯತೆ ನೀಡಬೇಕಾದ ಕ್ಷೇತ್ರವೆಂದರೆ ಶಿಕ್ಷಣ ಎನ್ನುವುದು ಸಾಚಾರ್ ವರದಿಯ ಸ್ಪಷ್ಟ ಅಭಿಪ್ರಾಯ. ಆದರೆ ಇಂದಿನ ಶಿಕ್ಷಣ ವ್ಯವಸ್ಥೆ ಮುಸ್ಲಿಮರ ಅನನ್ಯತೆಯನ್ನು ಸ್ಪಂದಿಸುವುದಿಲ್ಲ ಎನ್ನುವ ವಾದವಿದೆ. ಈ ಹಿನ್ನೆಲೆಯಲ್ಲಿ ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರ ಸಾಕ್ಷರತೆ ಕಡಿಮೆ ೨೦೦೧ ರ ಜನಗಣತಿಯ ಪ್ರಕಾರ ರಾಷ್ಟ್ರೀಯ ಸಾಕ್ಷರತೆ ಸರಾಸರಿ ಶೇ.೬೪.೮ ರಷ್ಟಿದ್ದರೆ, ಮುಸ್ಲಿಮರ ಸಾಕ್ಷರತೆ ಪ್ರಮಾಣ ಕೇವಲ ಶೇ.೫೯.೧೧ ರಷ್ಟು ದಾಖಲಾಗಿದೆ. ಅರ್ಧದಷ್ಟು ಗ್ರಾಮೀಣ ಮುಸ್ಲಿಂ ಮಕ್ಕಳು ಹಾಗೂ ಶೇ.೨೫ ರಷ್ಟು ನಗರ ಪ್ರದೇಶದ ಮಕ್ಕಳು ಇಂದಿಗೂ ಅನಕ್ಷರಸ್ಥರಾಗಿದ್ದಾರೆ. ೬ ರಿಂದ ೧೪ ವರ್ಷದ ಶೇ.೨೫ ರಷ್ಟು ಮಕ್ಕಳು ಶಾಲೆಯನ್ನೇ ಪ್ರವೇಶ ಮಾಡಿಲ್ಲ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಪ್ರಾಥಮಿಕ ಶಾಲೆಯನ್ನು ಪೂರೈಸಿದವರ ಸಂಖ್ಯೆ ಮುಸ್ಲಿಮರಲ್ಲಿ ಅತ್ಯಂತ ಕಡಿಮೆಯಾಗಿದೆ. ಮಾನವಾಭಿವೃದ್ಧಿ ಪರಿಕಲ್ಪನೆಯ ಪ್ರಕಾರ ಶಿಕ್ಷಣವೇ ಅಭಿವೃದ್ಧಿಯ ಮೂಲ. ಈ ಹಿನ್ನೆಲೆಯಲ್ಲಿ ಮುಸ್ಲಿಮರು ಎದುರಿಸುತ್ತಿರುವ ಶೈಕ್ಷಣಿಕ ದುಃಸ್ಥಿತಿ ಅತ್ಯಂತ ಗಂಭೀರವಾದ ಸಂಗತಿಯಾಗಿದೆ.

ಶಿಕ್ಷಣವು ವ್ಯಕ್ತಿಯನ್ನು ವಿಶೇಷವಾಗಿ ಮಹಿಳೆಯರು, ದಲಿತರು, ಅಭಿವೃದ್ಧಿ ವಂಚಿತರು ಮತ್ತು ಸಮಾಜದ ಅಂಚಿನ ಆಚೆ ತಳ್ಳಲ್ಪಟ್ಟ ಜನರನ್ನು ರಚನಾತ್ಮಕವಾಗಿ ಅಭಿವೃದ್ಧಿಪಡಿಸುತ್ತದೆ ಎಂಬುದು ಹಕ್ಕು ಆಧಾರಿತ ಅಭಿವೃದ್ಧಿ ಚಿಂತಕರ ವಾದ. ಇದರ ಮಹತ್ವವನ್ನು ಅರಿತಿದ್ದ

ಸಂವಿಧಾನ ರಚನಾಕಾರರು ಸಂವಿಧಾನದ ೪೫ ನೇ ಪರಿಚ್ಛೇದದಲ್ಲಿ ೬ ರಿಂದ ೧೪ ವರ್ಷದೊಳಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ಜವಾಬ್ದಾರಿಯನ್ನು ರಾಜ್ಯಕ್ಕೆ ನಿಗದಿಪಡಿಸಿದ್ದಾರೆ. ಆದರೂ ೭ ನೇ ತರಗತಿಯ ಹಂತದಲ್ಲಿ ಶಾಲೆ ಬಿಡುವವರಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದಾರೆ. ದಿ ಆನ್ಯುವಲ್ ಸ್ಟೇಟಸ್ ಆಫ್ ಎಜುಕೇಷನ್ ರಿಪೋರ್ಟ್(ಎಎಸ್ಇಆರ್) ವರದಿಯ ಪ್ರಕಾರ ೨೦೧೫ ರಲ್ಲಿ ೬ ರಿಂದ ೧೪ ನೇ ವಯಸ್ಸಿನ ಮಕ್ಕಳಲ್ಲಿ ಶೇ.೩.೯ ರಷ್ಟು ಮಕ್ಕಳು ಮಧ್ಯದಲ್ಲೇ ಶಾಲೆಯನ್ನು ಬಿಡುತ್ತಾರೆ. ಅದರಲ್ಲಿ ಶೇ.೨೨ ರಷ್ಟು ಬಾಲಕರು ಮತ್ತು ಶೇ.೨೪ ರಷ್ಟು ಬಾಲಕಿಯರು ಒಂದನೇ ತರಗತಿ ಪೂರೈಸುವ ಮೊದಲೇ ಶಾಲೆಯನ್ನು ತೊರೆಯುತ್ತಾರೆ. ಆದರೆ ೧೧ರಿಂದ ೧೪ ನೇ ವಯಸ್ಸಿನ ಮಧ್ಯದಲ್ಲಿ ಶಾಲೆಬಿಡುವ ಬಾಲಕರು ಮತ್ತು ಬಾಲಕಿಯರ ನಡುವಿನ ಕಾರಣಗಳು ಭಿನ್ನವಾಗಿರುತ್ತವೆ. ಈ ವಯೋಮಾನದ ಬಹುತೇಕ ಬಾಲಕಿಯರು ಮನೆಗೆಲಸ ಮತ್ತು ವಿವಾಹದ ಕಾರಣಕ್ಕಾಗಿ ಶಾಲೆಯನ್ನು ತೊರೆಯುತ್ತಾರೆ. ಈ ಕಾರಣಗಳಿಗಾಗಿ ಶಾಲೆ ತೊರೆಯುವ ಶೇ.೭೫ ರಷ್ಟು ಬಾಲಕಿಯರು ತಳ ಸಮುದಾಯ, ಪರಿಶಿಷ್ಟ ಪಂಗಡ ಮತ್ತು ಮುಸ್ಲಿಂ ಸಮುದಾಯಗಳಿಗೆ ಸೇರಿದ್ದಾರೆ.[೧] ದೇಶದಲ್ಲಿ ಶೇ.೭೨ ರಷ್ಟು ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಶಾಲೆಗೆ ದಾಖಲಾಗಿದ್ದರೆ, ಮುಸ್ಲಿಮರಲ್ಲಿ ಶೇ.೬೮ ರಷ್ಟು ಬಾಲಕಿಯರು ಮಾತ್ರ ಶಾಲೆಗೆ ದಾಖಲಾಗಿದ್ದಾರೆ ಎಂಬುದನ್ನು ಸಾಚಾರ್ ವರದಿ ಬಹಿರಂಗ ಪಡಿಸಿದೆ. ಅಂದರೆ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಪರಿಶಿಷ್ಟ ಜಾತಿಯ ಮಹಿಳೆಯರಿಗಿಂತಲೂ ಹಿಂದುಳಿದಿರುವುದು ಗಂಭೀರವಾಗಿ ಪರಿಗಣಿಸಬೇಕಾದ ವಿಚಾರವಾಗಿದೆ. ಹಿಂದೂ, ಕ್ರಿಶ್ಚಿಯನ್, ಪಾರ್ಸಿ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರು ಸುಮಾರು ೭೦–೮೦ ವರ್ಷಗಳಷ್ಟು ತಡವಾಗಿ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದರು. ಈ ಹಿನ್ನೆಲೆಯಲ್ಲಿ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಬೇಕಾಯಿತು. ಒಟ್ಟಾರೆ ಮುಸ್ಲಿಂ ಮಹಿಳೆಯರ ಸಾಕ್ಷರತೆ ಪ್ರಮಾಣ ಅತ್ಯಂತ ಕನಿಷ್ಠವಾಯಿತು. ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಪುರುಷ ಮತ್ತು ಮಹಿಳೆಯರಿಗೆ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ. ಶಿಕ್ಷಣ ಪಡೆಯುವುದು ಉತ್ತಮ ಕಾರ್ಯಗಳಲ್ಲೊಂದು ಎನ್ನುವುದು ಇಸ್ಲಾಂ ಧರ್ಮದ ದೃಷ್ಟಿಕೋನ. ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಅವರ ಧರ್ಮ ಮತ್ತು ಸಂಸ್ಕೃತಿಗಳೇ ಅಡ್ಡಿ ಎನ್ನುವುದು ಒಂದು ವಾದವಾದರೆ, ಮತ್ತೊಂದೆಡೆ ಅವರ ಸಮಾಜೋ–ಆರ್ಥಿಕ ಸ್ಥಿತಿಗಳೇ ಕಾರಣ ಎನ್ನುವುದು ಇನ್ನೊಂದು ವಾದ. ಈ ಹಿನ್ನಲೆಯಲ್ಲಿ ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಅಧ್ಯಯನದ ಅಗತ್ಯವಾಗಿದೆ. ಧಾರ್ಮಿಕ ಮತ್ತು ಭಾಷಿಕ ಅಲ್ಪಸಂಖ್ಯಾತರು ಎಂದರೆ ಯಾರು ಎನ್ನುವುದು ಇಂದಿಗೂ ಚರ್ಚಾಸ್ಪದ ವಿಷಯವಾಗಿದೆ.

ಸಂವಿಧಾನದ ವಿಧಿಗಳಾದ ೨೯ ಮತ್ತು ೩೦ ಹಾಗೂ ೩೫೦(ಎ) ರಿಂದ ೩೫೦(ಬಿ) ಗಳಲ್ಲಿ ಅಲ್ಪಸಂಖ್ಯಾತರು ಎಂಬ ಶಬ್ದವನ್ನು ಪ್ರಸ್ತಾಪಿಸಲಾಗಿದೆ. ಆದರೆ ಅಲ್ಪಸಂಖ್ಯಾತರು ಎಂಬ ಶಬ್ದಕ್ಕೆ ಯಾವುದೇ ನಿರ್ದಿಷ್ಟ ವ್ಯಾಖ್ಯಾನವನ್ನು ನೀಡಿಲ್ಲ. ಸಂವಿಧಾನದ ೨೯ ನೇ ವಿಧಿ ವಿಶಿಷ್ಟ ಭಾಷೆ, ಲಿಪಿ ಮತ್ತು ಸಂಸ್ಕೃತಿಯನ್ನು ಹೊಂದಿರುವ ನಾಗರೀಕ ಸಮುದಾಯಗಳ ಬಗ್ಗೆ ಪ್ರಸ್ತಾಪಿಸುತ್ತದೆ. ೩೦ ನೇ ವಿಧಿಯು ಧಾರ್ಮಿಕ ಮತ್ತು ಭಾಷಿಕ ಎಂಬ ಎರಡು ಅಲ್ಪಸಂಖ್ಯಾತ ಸಮುದಾಯಗಳ ಬಗ್ಗೆ ಪ್ರಸ್ತಾಪಿಸುತ್ತದೆ. ೩೫೦(ಎ) ಮತ್ತು ೩೫೦(ಬಿ) ವಿಧಿಗಳು ಕೇವಲ ಭಾಷಾ ಅಲ್ಪಸಂಖ್ಯಾತರ ಬಗ್ಗೆ ಪ್ರಸ್ತಾಪಿಸುತ್ತವೆ. ವಿಶ್ವಸಂಸ್ಥೆಯ ಅಲ್ಪಸಂಖ್ಯಾತ ವಿಶೇಷ ಹಕ್ಕುಗಳ ಸಮಿತಿಯ ವ್ಯಾಖ್ಯಾನದ ಪ್ರಕಾರ ಅಲ್ಪಸಂಖ್ಯಾತರು ಒಟ್ಟಾರೆ ಜನಸಂಖ್ಯೆಯಲ್ಲಿ ಪ್ರಭಲವಲ್ಲದ ಗುಂಪಾಗಿದ್ದು, ಪ್ರತ್ಯೇಕವಾದ ಧರ್ಮ, ಭಾಷೆ, ಸಂಪ್ರದಾಯಗಳು ಮತ್ತು ಪ್ರತ್ಯೇಕವಾದ ಲಕ್ಷಣಗಳನ್ನು ಹೊಂದಿರುತ್ತದೆ.[೨] ಉರ್ದು ಭಾಷೆಯು ಬಹುತೇಕ ಮುಸ್ಲಿಮರ ಮಾತೃ ಭಾಷೆಯಾಗಿರುವುದರಿಂದ ಉರ್ದು ಮಾತನಾಡುವ ವ್ಯಕ್ತಿ ಭಾಷಾ ಅಲ್ಪಸಂಖ್ಯಾತನಾಗುತ್ತಾನೆ.[೩] ಈ ವಾದಗಳ ಹಿನ್ನಲೆಯಲ್ಲಿ ಇಸ್ಲಾಂ ಧರ್ಮವನ್ನು ಅನುಸರಿಸುವ ಮತ್ತು ಉರ್ದು ಭಾಷೆಯನ್ನು ಮಾತನಾಡುವವರನ್ನು ಮುಸ್ಲಿಮರೆಂದು ಅಧ್ಯಯನದಲ್ಲಿ ಪರಿಗಣಿಸಲಾಗಿದೆ. ಸಮಾಜಗಳು ಪುರುಷ ಮತ್ತು ಮಹಿಳೆಯರಿಂದ ನಿರೀಕ್ಷಿಸುವ ಅರ್ಹತೆಗಳು, ವರ್ತನೆಗಳನ್ನು ಆಧರಿಸಿ ನಿರ್ದಿಷ್ಟ ಲಿಂಗ ಎಂದು ಪರಿಭಾವಿಸಲಾಗುತ್ತದೆ. ಭಾರತೀಯ ಸಮಾಜ ಪಿತೃ ಪ್ರಧಾನ ವ್ಯವಸ್ಥೆಯಾದ್ದರಿಂದ ಅದರ ಸಾಮಾಜಿಕ ಪ್ರಕ್ರಿಯೆ ಮಹಿಳೆಯರು ನಿರ್ವಹಿಸಬೇಕಾದ ಪಾತ್ರವನ್ನು ನಿರ್ಧರಿಸಿದೆ. ಇದು ಲಿಂಗಸಂಬಂಧಿ ಅಸಮಾನತೆಗೆ ಕಾರಣವಾಗಿದ್ದು ವ್ಯವಸ್ಥೆಯನ್ನು ಪುನರ್ ರೂಪಿಸುವ ಮೂಲಕ ಇಂತಹ ಅಸಮಾನತೆಯನ್ನು ತೊಲಗಿಸಬೇಕೆನ್ನುವ ವಾದಗಳು ಇಂದು ಹೆಚ್ಚು ಚರ್ಚೆಯಲ್ಲಿವೆ.[೪] ಜೈವಿಕ ಆಧಾರದ ಮೇಲೆ ಮಾನವನನ್ನು ಸ್ತ್ರೀಯರು ಮತ್ತು ಪುರುಷರು ಎಂದು ವರ್ಗೀಕರಿಸುವ ಸಾಂಪ್ರದಾಯಿಕ ಕ್ರಮ ಜಾರಿಯಲ್ಲಿದೆ. ಇದರ ಜೊತೆಗೆ ಸಾಮಾಜೀಕರಣದ ಪ್ರಕ್ರಿಯೆಗಳು ಅವರಿಬ್ಬರ ನಡುವೆ ಹಲವಾರು ವ್ಯತ್ಯಾಸಗಳನ್ನು ಮತ್ತು ಅಸಮಾನತೆಗಳನ್ನು ಸೃಷ್ಟಿಸಿದೆ. ಇಂದಿನ ಪುರುಷ ಪ್ರಧಾನ ವ್ಯವಸ್ಥೆಯ ಫಲವಾಗಿ ಲಿಂಗತ್ವವು ಸಂಪೂರ್ಣವಾಗಿ ಜೈವಿಕ ಅಂಶವೆಂದು ಪರಿಗಣಿಸಲಾಗುತ್ತದೆ. ಆದರೆ ಮಹಿಳೆಯನ್ನು ಅಭಿವೃದ್ಧಿ ನೆಲೆಯಲ್ಲಿ ಸಾಮಾಜಿಕ ಘಟಕವನ್ನಾಗಿ ಪ್ರಜ್ಞಾಪೂರಕವಾಗಿ ಗುರುತಿಸುವುದಿಲ್ಲ. ಅಭಿವೃದ್ಧಿಯು ಇಂದು ಲಿಂಗಸ್ಪಂದಿ ವಿಚಾರವಾಗಿದೆ. ಆದರೆ ಅಭಿವೃದ್ಧಿಯು ತನ್ನಷ್ಟಕ್ಕೆ ತಾನೆ ಮಹಿಳೆಯರನ್ನು ಒಳಗೊಳ್ಳುತ್ತದೆ ಎಂದು ಭಾವಿಸುವುದು ಕಷ್ಟ. ಸಾಮಾಜಿಕವಾಗಿ ಹೊರಗಣದಲ್ಲಿರುವ ಸಮುದಾಯಗಳಿಗೆ ಇತರರಿಗೆ ಲಭ್ಯವಾಗುವ ಆದಾಯ ಮತ್ತು ಸಂಪತ್ತು ಲಭ್ಯವಾಗುವುದಿಲ್ಲ. ಹಾಗಾಗಿ ದೇಶದ ಸಂಪತ್ತು ಹೆಚ್ಚಾದಾಗಲೂ ಈ ಸಮುದಾಯಗಳು ಬಡತನದಲ್ಲಿಯೇ

ಮುಂದುವರೆಯುತ್ತವೆ.[೩] ಇಂತಹ ಸಮಸ್ಯೆಗಳನ್ನು ಮುಸ್ಲಿಂ ಸಮುದಾಯ ಎದುರಿಸುತ್ತಿದೆ. ಅಲ್ಪಸಂಖ್ಯಾತರು ಎನ್ನುವ ಸಂಗತಿಯೇ ರಾಜಕೀಕರಣಗೊಂಡು ಮುಸ್ಲಿಂ ಸಮುದಾಯದ ಅಭಿವೃದ್ಧಿಗಾಗಿ ರೂಪಿಸುವ ಯೋಜನೆಗಳು ಮತ್ತು ಕಾರ್ಯಕ್ರಮಗಳು ತುಷ್ಟೀಕರಣದ ಆರೋಪ ಪಡೆದುಕೊಳ್ಳುತ್ತಿವೆ. ಈ ಪ್ರಕ್ರಿಯೆಗಳು ಮುಸ್ಲಿಂ ಸಮುದಾಯವನ್ನು ವಿಶೇಷವಾಗಿ ಮುಸ್ಲಿಂ ಮಹಿಳೆಯರ ಸ್ಥಿತಿಯನ್ನು ದಯನೀಯಗೊಳಿಸಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಮುಸ್ಲಿಂ ಹೆಣ್ಣುಮಕ್ಕಳನ್ನುಜೈವಿಕ ನೆಲೆಗಟ್ಟಿನ ಜೊತೆಗೆ ಸಾಮಾಜಿಕ ಹಾಗೂ ಅಭಿವೃದ್ಧಿ ಘಟಕಗಳನ್ನಾಗಿ ಪರಿಭಾವಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳನ್ನು ಅವಲಂಬಿಸಿದೆ. ಬೆಳಗಾವಿ ನಗರದ ಮುಸ್ಲಿಂ ಹೆಣ್ಣುಮಕ್ಕಳು ಉರ್ದು, ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮ ಶಾಲೆಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ವಿವಿಧ ಮಾಧ್ಯಮಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಹೆಣ್ಣುಮಕ್ಕಳು ಸರ್ಕಾರಿ, ಅನುದಾನಿತ ಹಾಗೂ ಅನುದಾನರಹಿತ ಶಾಲೆಗಳಿಗೆ ಸೇರಿದವರಾಗಿದ್ದಾರೆ. ಸರಳ ಯದೃಚ್ಚಿಕ ವಿಧಾನವನ್ನು ಆಧರಿಸಿ ಸಂದರ್ಶನದ ಮೂಲಕ ಮುಸ್ಲಿಂ ಹೆಣ್ಣುಮಕ್ಕಳು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳಲಾಗಿದೆ. ಸರ್ಕಾರದ ವರದಿಗಳು, ಜನಗಣತಿ ವರದಿಗಳು, ರಾಜ್ಯ ಮತ್ತು ಜಿಲ್ಲೆಗಳ ಶೈಕ್ಷಣಿಕ ವರದಿಗಳು, ಸಂಶೋಧನಾತ್ಮಕ ಜರ್ನಲ್‌ಗಳು ಮತ್ತು ನಿಯತಕಾಲಿಕೆಗಳ ಮೂಲಕ ಅನುಷಂಗಿಕ ಮಾಹಿತಿಯನ್ನು ಪಡೆಯಲಾಗಿದೆ. ಮುಸ್ಲಿಂ ಮಹಿಳೆಯರು ಶಿಕ್ಷಣವನ್ನು ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳು ಸರ್ವವ್ಯಾಪಕವಾಗಿವೆ. ಮುಸ್ಲಿಮರ ಶೈಕ್ಷಣಿಕ ಸಮಸ್ಯೆಗಳನ್ನು ಕುರಿತು ಅಂತರಾಷ್ಟ್ರೀಯ, ರಾಷ್ಟ್ರೀಯ ಮತ್ತು ಭಾರತದ ವಿವಿಧ ರಾಜ್ಯಗಳಲ್ಲಿ ಅಧ್ಯಯನಗಳನ್ನು ಕೈಗೊಳ್ಳಲಾಗಿದೆ. ಭಾರತದಲ್ಲಿ ಅತೀ ಹೆಚ್ಚು ಮುಸ್ಲಿಮರು ವಾಸಿಸುವ ಜಮ್ಮು-ಕಾಶ್ಮೀರ, ದೆಹಲಿಯ ಕೊಳಚೆ ಪ್ರದೇಶಗಳು, ಉತ್ತರ ಪ್ರದೇಶದ ರಾಂಪುರ, ಉತ್ತರ ಪ್ರದೇಶದ ಗ್ರಾಮೀಣ ಪ್ರದೇಶಗಳು, ಒರಿಸ್ಸಾ, ಪಶ್ಚಿಮ ಬಂಗಾಳ ಹಾಗೂ ಮಹಾರಾಷ್ಟ್ರದ ಪೂನಾ ನಗರದ ಮುಸ್ಲಿಮರ ಅಧ್ಯಯನಗಳು ಕಂಡುಬರುತ್ತವೆ.

ದಕ್ಷಿಣ ಭಾರತದಲ್ಲಿ ಕೇರಳ, ಆಂಧ್ರ ಪ್ರದೇಶಗಳಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದರ ಜೊತೆಗೆ ಪಶ್ಚಿಮ ರಾಜ್ಯವಾದ ಮಣಿಪುರದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳನ್ನು ಗುರುತಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶ ಹಾಗೂ ರಾಜ್ಯದ ವಿವಿಧ ಜಿಲ್ಲೆಗಳ ಉರ್ದು ಶಾಲೆಗಳು ಮತ್ತು ಮುಸ್ಲಿಂ ಹೆಣ್ಣು ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಂದು ಅಭಿವೃದ್ಧಿ ಲಿಂಗಸ್ಪಂದಿ ವಿಚಾರವಾಗಿದೆ. ಆದರೆ ಇದನ್ನು ಪ್ರಜ್ಞಾಪೂರಕವಾಗಿ ಕಡೆಗಣಿಸಲಾಗಿದೆ. ಹಿಂದೆ ಚರ್ಚಿಸಲಾಗುತ್ತಿದ್ದ ಅಭಿವೃದ್ಧಿ ಪರಿಕಲ್ಪನೆ ಸಂಪೂರ್ಣವಾಗಿ ಸಾಮಾಜಿಕ ನೆಲೆಗಳನ್ನು

ನಿರ್ಲಕ್ಷಿಸಿತ್ತು. ಆದರೆ ಇಂದಿನ ಅಭಿವೃದ್ಧಿ ವಾದಗಳ ಪ್ರಕಾರ ಸಾಮಾಜಿಕ ಅಭಿವೃದ್ಧಿಯ ಹೊರತಾಗಿ ಸಮಗ್ರ ಅಭಿವೃದ್ಧಿ ಸಾಧ್ಯವಿಲ್ಲ. ಹಾಗಾಗಿ ಅಭಿವೃದ್ಧಿಯ ವರಮಾನದ ಸಂಗತಿಗಳು ಮತ್ತು ಅಭಿವೃದ್ಧಿಯ ಸಾಮಾಜಿಕ ಸಂಗತಿಗಳು ಒಂದಕ್ಕೊಂದು ಪೂರಕವಾಗಿದ್ದು, ಇವುಗಳ ಸಮಪ್ರಮಾಣದ ಸೇರ್ಪಡೆಗಳು ಅಭಿವೃದ್ಧಿಗೆ ಕಾರಣವಾಗುತ್ತವೆ. ಪ್ರಜಾಪ್ರಭುತ್ವವು ಅಭಿವೃದ್ಧಿಗೆ ಪೂರಕವೆಂದು ಭಾವಿಸಲಾಗುತ್ತದೆ. ಆದರೆ ಅಭಿವೃದ್ಧಿ ತನ್ನಷ್ಟಕ್ಕೆ ತಾನೆ ಹಿಂದುಳಿದವರು, ಮುಖ್ಯವಾಗಿ ಮಹಿಳೆಯರನ್ನು ಒಳಗೊಳ್ಳುವುದಿಲ್ಲ. ಹಾಗಾಗಿ ಮಹಿಳಾ ಅಭಿವೃದ್ಧಿಗೆ ವಿಶೇಷವಾದ ಮತ್ತು ಪ್ರಜ್ಞಾಪೂರಕವಾದ ಪ್ರಯತ್ನಗಳನ್ನು ಕೈಗೊಳ್ಳುವುದು ಇಂದಿನ ಅಗತ್ಯವಾಗಿದೆ.

ಶಿಕ್ಷಣವು ಮಹಿಳೆಯರಿಗೆ ಚಾರಿತ್ರಿಕ, ಸಮಾಜೋ-ಆರ್ಥಿಕ ಮತ್ತು ರಾಜಕೀಯ ಪ್ರಶ್ನೆಗಳಿಗೆ ಉತ್ತರ ನೀಡುವ ಸಾಮರ್ಥ್ಯವನ್ನು ನೀಡುತ್ತದೆ. ಮಹಿಳೆಯರ ಆರೋಗ್ಯ, ನಿರ್ಣಯ ಸಾಮರ್ಥ್ಯ, ಚಲನಾ ಸ್ವಾತಂತ್ರ್ಯ ಹಾಗೂ ಸ್ವಾಯತ್ತತೆಯ ಅಧಿಕಾರವನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಭಾರತದ ಸಂವಿಧಾನದ ೩೯ನೇ ವಿಧಿ ಪುರುಷರು ಮತ್ತು ಮಹಿಳೆಯರಿಗೆ ಜೀವನಾವಶ್ಯಕ ಅಗತ್ಯಗಳನ್ನು ರಾಜ್ಯ ಪೂರೈಸುವಂತೆ ಸ್ಪಷ್ಟಪಡಿಸಿದೆ. ಸಮಾನ ಕೆಲಸಕ್ಕೆ ಸಮಾನ ವೇತನ, ಕೆಲಸಕ್ಕೆ ಬೇಕಾಗುವ ಮಾನವೀಯ ಅಗತ್ಯಗಳು, ಹೆರಿಗೆ ಸೌಲಭ್ಯ, ಪೌಷ್ಟಿಕ ಆಹಾರ ಮುಂತಾದವುಗಳನ್ನು ಮಹಿಳೆಯರಿಗೆ ಒದಗಿಸಿಕೊಡಬೇಕೆಂದು ಸಂವಿಧಾನದಲ್ಲಿ ಸ್ಪಷ್ಟಪಡಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಈ ಅಂಶಗಳನ್ನು ಮುಂದಿನ ಭಾಗದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನವು ಮುಸ್ಲಿಂ ಹೆಣ್ಣುಮಕ್ಕಳು ಶೈಕ್ಷಣಿಕವಾಗಿ ಹಿಂದುಳಿಯಲು ಪಾತ್ರವಹಿಸಿರುವ ಕಾರಣಗಳನ್ನು ಹುಡುಕುವುದು ಪ್ರಮುಖ ಅದ್ಯತೆಯನ್ನಾಗಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಪೂರಕವಾದ ಮುಸ್ಲಿಂ ಹೆಣ್ಣುಮಕ್ಕಳು ಶೈಕ್ಷಣಿಕವಾಗಿ ಹಿಂದುಳಿಯಲು ಇರುವ ಕಾರಣಗಳ ಮೇಲೆ ಬೆಳಕು ಚೆಲ್ಲುವ ಪೂರಕ ಅಧ್ಯಯನಗಳನ್ನು ವಿಮರ್ಶೆಗೆ ಒಳಪಡಿಸಲಾಗಿದೆ.

### ೧. ಸಾಹಿತ್ಯ ವಿಮರ್ಶೆ

ಭಾರತದ ಸಂವಿಧಾನದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಧಾರ್ಮಿಕ ಅಲ್ಪಸಂಖ್ಯಾತರಿಗೆ ಹಕ್ಕುಗಳನ್ನು ನೀಡಲಾಗಿದೆ. ಆದರೆ ಮುಸ್ಲಿಮರ ನೈಜ ಸ್ಥಿತಿ-ಗತಿಗಳ ಬಗ್ಗೆ ಯಾವುದೇ ಅಧಿಕೃತ ಅಂಕಿ ಅಂಶಗಳು ಲಭ್ಯವಿರಲಿಲ್ಲ. ಅದರೆ ಸಾಚಾರ್ ವರದಿಯ ನಂತರ ಈ ಕೊರತೆ ಸ್ವಲ್ಪಮಟ್ಟಿಗೆ ನೀಗಿದೆ. ಮುಸ್ಲಿಮರಲ್ಲಿ ಸಮುದಾಯದ ವಿರೋಧದಿಂದಾಗಿ ಹೆಣ್ಣು ಮಕ್ಕಳ ಸಾಕ್ಷರತೆಯ ಪ್ರಮಾಣ ಕಡಿಮೆಯಾಗಿದೆ. ಜೊತೆಗೆ ಮುಸ್ಲಿಂ ಪುರುಷರ ಉನ್ನತ ಶಿಕ್ಷಣದ ಕೊರತೆಯೂ ಕಂಡು ಬರುತ್ತದೆ. ಮದರಸಗಳು ಆಧುನಿಕ ಶಿಕ್ಷಣವನ್ನು ಅಳವಡಿಸಿಕೊಳ್ಳದೆ ಕೇವಲ ಧಾರ್ಮಿಕ ಶಿಕ್ಷಣಕ್ಕೆ ಒತ್ತು ನೀಡುತ್ತಿರುವುದು ಮುಸ್ಲಿಂ ಸಮುದಾಯದ ಒಟ್ಟಾರೆ ಶೈಕ್ಷಣಿಕ ಹಿಂದುಳಿಯುವಿಕೆಗೆ

ಕಾರಣವಾಗಿದೆ. ಈ ಹಿನ್ನಲೆಯಲ್ಲಿ ಮುಸ್ಲಿಂ ಸಮುದಾಯದ ಶಿಕ್ಷಣಕ್ಕಾಗಿ ವಕ್ಫ್ ಬೋರ್ಡಿನ ಹಣ ಸಂಪೂರ್ಣವಾಗಿ ವಿನಿಯೋಗವಾಗಬೇಕೆಂದು ವಾದಿಸಲಾಗುತ್ತಿದೆ.[೬] ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಸಂಬಂಧಿಸಿದಂತೆ ವಿವಿಧ ಅಧ್ಯಯನಗಳು ಬೆಳಕು ಚೆಲ್ಲುತ್ತವೆ.

ಫಯಾಜ್ ಅಹ್ಮದ್ ಭಟ್, ಫೌಜೀಯಾ ಖುರ್ಷೀದ್ ಮತ್ತು ನಜ್‌ಮುಲ್ ಹುಸೇನ್[೭]ಮತ್ತು ಮೋಮಿನ್ ಜಾನ್[೮]ಅವರ ಜಮ್ಮು-ಕಾಶ್ಮೀರದ ಶೈಕ್ಷಣಿಕ ಅವಲೋಕನದ ಅಂತಿಮ ತಥ್ಯಗಳ ಪ್ರಕಾರ ಜಮ್ಮು-ಕಾಶ್ಮೀರದಲ್ಲಿ ೨೦೦೧ ರ ಜನಗಣತಿಯ ಪ್ರಕಾರ ಹಿಂದೂ ಸಮುದಾಯಗಳು ಶೇ.೭೧.೩ರಷ್ಟು ಸಾಕ್ಷರತೆಯನ್ನು ಪಡೆದಿದ್ದರೆ, ಮುಸ್ಲಿಂ ಸಮುದಾಯ ಶೇ.೪೭.೩% ರಷ್ಟು ಸಾಕ್ಷರತೆಯನ್ನು ಪಡೆದುಕೊಂಡಿದೆ. ಪುರುಷರ ಸಾಕ್ಷರತೆ ೫೮.೭% ರಷ್ಟು ಇದ್ದರೆ ಮಹಿಳೆಯರ ಸಾಕ್ಷರತೆ ಕೇವಲ ೩೪.೯% ರಷ್ಟು ಹೊಂದಿದೆ. ಅಂದರೆ ಬಹುಸಂಖ್ಯಾತ ಮುಸ್ಲಿಮರನ್ನು ಹೊಂದಿರುವ ಜಮ್ಮು-ಕಾಶ್ಮೀರ ರಾಜ್ಯದಲ್ಲಿಯೂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಚಿಂತಾಜನಕವಾಗಿದೆ. ಮೋಮಿನ್ ಜಾನ್‌ರ ಕಾಶ್ಮೀರದ ಅಧ್ಯಯನ ಮಹಿಳೆಯರ ಶೈಕ್ಷಣಿಕ ಸ್ಥಾನಮಾನ ಮತ್ತು ಸಾಮಾಜಿಕ ರಚನೆಯ ನಡುವಿನ ಸಂಬಂಧಗಳ ಉದ್ದೇಶಗಳನ್ನು ಕಂಡುಕೊಳ್ಳುವುದಾಗಿತ್ತು, ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಬಹುತೇಕ ಪೋಷಕರು ತಮ್ಮ ಹೆಣ್ಣು ಮಕ್ಕಳನ್ನು ಮನೆಯ ಉತ್ತಮ ಕಾರ್ಯನಿರ್ವಾಹಕಿ ಯನ್ನಾಗಿ ರೂಪಿಸುವ ಪಠ್ಯಕ್ರಮಗಳು ಬೇಕೆಂದು ಬಯಸುತ್ತಾರೆ. ಅದರೆ ಬಹುಸಂಖ್ಯಾತ ಪೋಷಕರು ಮಹಿಳೆಯರಿಗೆ ಉನ್ನತ ಶಿಕ್ಷಣ ನಿಷ್ಪ್ರಯೋಜಕ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಜಮ್ಮು ಕಾಶ್ಮೀರದಲ್ಲಿ ಮುಸ್ಲಿಮರು ಬಹುಸಂಖ್ಯಾತರಾಗಿರುವುದು ನಿಜ. ಅದರೆ ಶಾಂತಿ ಮತ್ತು ಸುವ್ಯವಸ್ಥೆಯ ದೃಷ್ಟಿಯಿಂದ ಈ ರಾಜ್ಯವು ಸಾಮಾನ್ಯ ಸ್ಥಿತಿಯಲಿಲ್ಲ. ಶಾಂತಿ ಮತ್ತು ಸುವ್ಯವಸ್ಥೆಗಳು ಒಂದು ಸಮಾಜದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಈ ರಾಜ್ಯದ ಅಧ್ಯಯನಗಳು ಈ ಅಂಶವನ್ನು ಪರಿಗಣಿಸಿಲ್ಲ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಹಾಗೂ ಶಿಕ್ಷಣಕ್ಕೆ ಸಂಬಂದಿಸಿದ ಅಧ್ಯಯನಗಳನ್ನು ದೆಹಲಿ ಪ್ರದೇಶದಲ್ಲಿ ಕೈಗೊಳ್ಳಲಾಗಿದೆ. ನರ್ಸೀನ್ ಪರ್ವೀನ್[೯]ರವರ ದೆಹಲಿಯ ಅಧ್ಯಯನವನ್ನು ೩೦ ಪ್ರೌಢಶಾಲೆಗಳ ವಿದ್ಯಾರ್ಥಿನಿಯರು ಮತ್ತು ಪೋಷಕರ ಸಂದರ್ಶನದ ಮೂಲಕ ಕೈಗೊಳ್ಳಲಾಗಿದೆ. ಈ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಶೇ.೮೬ ರಷ್ಟು ವಿದ್ಯಾರ್ಥಿನಿಯರು ಉನ್ನತ ಶಿಕ್ಷಣ ಪಡೆಯುವ ಬಗ್ಗೆ ಒಲವು ವ್ಯಕ್ತಪಡಿಸುತ್ತಾರೆ. ಆದರೆ ಶೇ.೭ ರಷ್ಟು ಪೋಷಕರು ಉನ್ನತ ಶಿಕ್ಷಣ ಮಹಿಳೆಯರ ಜೀವನವನ್ನು ಹಾಳು ಮಾಡುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರೆ, ಶೇ.೧೭ರಷ್ಟು ಪೋಷಕರು ಮಹಿಳೆಯರು ಪಡೆಯುವ ಉನ್ನತ ಶಿಕ್ಷಣವು ವಿವಾಹ ವಿಚ್ಛೇದನಕ್ಕೆ ಕಾರಣವಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಉನ್ನತ ಶಿಕ್ಷಣ ಪಡೆದ ಮಹಿಳೆಯರ ಜೀವನದ ಮೇಲಾಗುವ ದುಷ್ಪರಿಣಾಮ ಮತ್ತು ಉನ್ನತ

ಶಿಕ್ಷಣವು ಮಹಿಳೆಯರ ವಿಚ್ಛೇದನಕ್ಕೆ ಯಾವ ಕಾರಣಗಳನ್ನು ಪೋಷಕರು ಗುರುತಿಸುತ್ತಾರೆ ಎಂಬುದರ ಬಗ್ಗೆ ಅಧ್ಯಯನದಲ್ಲಿ ಯಾವುದೇ ಮಾಹಿತಿಗಳು ಲಭ್ಯವಾಗುವುದಿಲ್ಲ.

ಸುನೀತಾ ಚೂಗಾ[೧೦] ಅಧ್ಯಯನವನ್ನು ದೆಹಲಿಯ ಓಕ್‌ಲಾ ಕೊಳಚೆ ಪ್ರದೇಶದಲ್ಲಿ ೬ ರಿಂದ ೧೩ನೇ ವಯಸ್ಸಿನ ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದಕ್ಕಾಗಿ ೪೦೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನಗಳ ಫಲಿತಗಳು ಹೇಳುವ ಪ್ರಕಾರ ಕೊಳಚೆ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ಸರ್ಕಾರಿ ಶಾಲೆ ಇಲ್ಲದಿರುವುದು, ಅಸುರಕ್ಷತೆ, ಪೋಷಕರ ಕುಡಿತ, ಹೊಂದಿಕೆಯಾಗದ ಪಠ್ಯಕ್ರಮ ಮುಂತಾದ ಕಾರಣಗಳು ಶೈಕ್ಷಣಿಕ ನಿರಾಸಕ್ತಿಗೆ ಕಾರಣಗಳಾಗಿ ಕಂಡು ಬರುತ್ತವೆ. ಅಧ್ಯಯನ ಕಂಡುಕೊಂಡಿರುವ ಪ್ರಕಾರ ಹಿರಿಯ ಪ್ರಾಥಮಿಕ ಶಾಲೆಗೆ ಮಕ್ಕಳನ್ನು ಕಳುಹಿಸಲು ಇರುವ ಅಡ್ಡಿಗಳೆಂದರೆ ದುಬಾರಿ ಪುಸ್ತಕ, ಸಮವಸ್ತ್ರ, ಶಾಲೆಗಳು ಕೊಳಚೆ ಪ್ರದೇಶದಿಂದ ಅತೀ ಹೆಚ್ಚು ದೂರದಲ್ಲಿರುವುದು ಪ್ರಮುಖ ಕಾರಣಗಳಾಗಿವೆ. ದೆಹಲಿಯ ಮತ್ತೊಂದು ಅಧ್ಯಯನ ಹೆಚ್.ಇ.ಎಂ. ಬೋರ್‌ಕರ್[೧೧] ಅವರದ್ದು. ಮುಸ್ಲಿಂ ಸಮುದಾಯದ ಪಾಲಕರು ತಮ್ಮ ಮಕ್ಕಳಿಗೆ ಯಾವ ರೀತಿಯ ಶಿಕ್ಷಣವನ್ನು ನೀಡುತ್ತಿದ್ದಾರೆ ಹಾಗೂ ಅವರ ಶಿಕ್ಷಣದ ಮೇಲಾಗುವ ಪ್ರಭಾವದ ವ್ಯತಿರಿಕ್ತತೆ ಮತ್ತು ಕುಗ್ಗುವಿಕೆಯನ್ನು ಅರಿಯಲು ದೆಹಲಿ ನಗರವನ್ನು ಸಂಶೋಧನೆಗೆ ಒಳಪಡಿಸಿದ್ದಾರೆ. ಅಧ್ಯಯನ ಹೇಳುವ ಪ್ರಕಾರ ದೆಹಲಿಯಲ್ಲಿ ಮುಸ್ಲಿಮರ ಜನಸಂಖ್ಯೆಯು ಶೇ.೧೧.೭ರಷ್ಟಿದೆ. ಈ ಪ್ರದೇಶದಲ್ಲಿರುವ ಶಾಲೆಯಿಂದ ಹೊರಗುಳಿದ ಶೇ.೧೩.೦೩ರಷ್ಟು ಮುಸ್ಲಿಂ ಮಕ್ಕಳನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಾಲೆಗಳಿಲ್ಲದಿರುವುದೇ ಪ್ರಮುಖ ಸಮಸ್ಯೆಯಾಗಿದೆ. ಶಿಕ್ಷಣವನ್ನು ಸಾಮಾಜೀಕರಣಗೊಳಿಸು ವಲ್ಲಿ ಪೋಷಕರಷ್ಟೇ ಪಾತ್ರವನ್ನು ನಾಗರೀಕ ಸಮುದಾಯಗಳು ವಹಿಸುತ್ತವೆ ಎಂಬುದನ್ನು ಅಧ್ಯಯನವು ತನ್ನ ಭಾಗವನ್ನಾಗಿಸಿಕೊಂಡಿಲ್ಲ. ಇಂತಹ ಅಧ್ಯಯನಗಳನ್ನು ಉತ್ತರ ಪ್ರದೇಶದಲ್ಲೂ ಕೈಗೂಳ್ಳಲಾಗಿದೆ. ಮಧುಸೂದನ್ ಜೆ.ವಿ. ಜಿತೇಂದ್ರ ಕುಮಾರ್ ಸಿಂಗ್ ಮತ್ತು ಜಿತೇಂದ್ರ ಯಾದವ್[೧೨] ಅಧ್ಯಯನವು ಹಿಂದೂ ಸಮುದಾಯ ದೊಂದಿಗೆ ಹೋಲಿಸಿ ಮುಸ್ಲಿಮರ ಪ್ರಾಥಮಿಕ ಶಿಕ್ಷಣ ಸೇರ್ಪಡೆ, ಜೀವನಮಟ್ಟದೊಂದಿಗೆ ಪ್ರಾಥಮಿಕ ಶಿಕ್ಷಣವನ್ನು ಹೋಲಿಸುವುದು ಮತ್ತು ಪ್ರಾಥಮಿಕ ಶಿಕ್ಷಣವನ್ನು ಸೇರಲು ನಿರ್ಧರಿಸುವ ಕಾರಣಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶ ಹೊಂದಿತ್ತು. ಈ ಅಧ್ಯಯನವು ಜೀವನಮಟ್ಟ, ಶಾಲೆಯ ಅಂತರ ಹಾಗೂ ನಿರಾಸಕ್ತಿಯಂಥ ಸೂಚಿಗಳನ್ನು ಬಳಸಿ ಶಾಲೆಗೆ ಸೇರದವರು, ಶಾಲೆಗೆ ಹಾಜರಾದವರು, ಶಾಲೆಯನ್ನು ಅರ್ಧಕ್ಕೆ ಬಿಟ್ಟವರು ಮತ್ತು ದಾಖಲಾಗಿರುವವರ ಸಂದರ್ಶನವನ್ನು ಆಧರಿಸಿ ಅಧ್ಯಯನ ಕೈಗೊಂಡಿದೆ. ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಬಿಹಾರ, ಉತ್ತರ ಪ್ರದೇಶ, ರಾಜಸ್ಥಾನ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಹಿಂದೂಗಳಿಗಿಂತ ಮುಸ್ಲಿಮರಲ್ಲಿ ಅರ್ಧಕ್ಕೆ ಶಾಲೆ ಬಿಡುವವರ ಸಂಖ್ಯೆ ಹೆಚ್ಚಾಗಿದೆ ಹಾಗೂ ಅವರ

ದಾಖಲಾತಿ ಪ್ರಮಾಣವು ಕಡಿಮೆಯಾಗಿದೆ. ಅಧ್ಯಯನ ಕಂಡು ಕೊಂಡಿರುವ ಪ್ರಕಾರ ಇದಕ್ಕೆ ಪ್ರಮುಖ ಕಾರಣಗಳೆಂದರೆ ಶಾಲೆಗಳು ಅತೀ ಅಂತರದಲ್ಲಿರುವುದು, ವಿದ್ಯಾರ್ಥಿಗಳಿಗೆ ಉತ್ತಮ ಮನೆಯಿಲ್ಲದಿರುವುದು ಹಾಗೂ ಮನೆಯಲ್ಲಿ ವಿದ್ಯುತ್ ಇಲ್ಲದಿರುವುದು ಕಾರಣಗಳಾಗಿವೆ. ಅಧ್ಯಯನದ ಫಲಿತಗಳ ಪ್ರಕಾರ ಬಿಹಾರ ಮತ್ತು ಉತ್ತರ ಪ್ರದೇಶದಲ್ಲಿ ಸಹಶಿಕ್ಷಣದ ಶಾಲೆಗಿಂತ ಕೇವಲ ಹೆಣ್ಣು ಮಕ್ಕಳ ಶಾಲೆಗಳಿಗೆ ಬೇಡಿಕೆ ಇದೆ.

ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿ ಮತ್ತು ಮಹಿಳಾ ಸಾಕ್ಷರತೆಯ ಬಗ್ಗೆ ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲಿ ಹಲವಾರು ಸಮ್ಮೇಳನಗಳ ಮೂಲಕ ಸರ್ಕಾರಗಳ ಗಮನವನ್ನು ಸೆಳೆಯಲಾಗಿದೆ.

೧೯೨೮ ರಲ್ಲಿ ಅಜ್‌ಮೀರ್‌ನಲ್ಲಿ ಮುಸ್ಲಿಂ ಶೈಕ್ಷಣಿಕ ಸಮಾವೇಷವನ್ನು ಆಯೋಜಿಸಲಾಗಿತ್ತು. ಮುಸ್ಲಿಮರಲ್ಲಿ ಐರೋಪ್ಯ ವಿಜ್ಞಾನಗಳನ್ನು ಮತ್ತು ಸಾಹಿತ್ಯವನ್ನು ಪ್ರಸಾರ ಮಾಡುವುದು ಹಾಗೂ ಮುಸ್ಲಿಂ ಶಾಲೆಗಳಲ್ಲಿ ಇಂಗ್ಲೀಷ್ ಭೋಧನೆಯನ್ನು ಪರೀಕ್ಷಿಸುವುದು ಸಮ್ಮೇಳನದ ಉದ್ದೇಶವಾಗಿತ್ತು. ಈ ಸಮ್ಮೇಳನದಲ್ಲಿ ಮುಸ್ಲಿಂ ಜನಸಂಖ್ಯೆಗೆ ಅನುಗುಣವಾಗಿ ಶಿಕ್ಷಣಕ್ಕೆ ಅನುದಾನವನ್ನು ಬಿಡುಗಡೆ ಮಾಡುವಂತೆ ಹಾಗೂ ರಾಜ್ಯದಲ್ಲಿ ಇಸ್ಲಾಮಿಕ್ ಗ್ರಂಥಾಲಯ ಮತ್ತು ಸಂಸ್ಕೃತಿ ಇಲಾಖೆಯನ್ನು ತೆರೆಯುವಂತೆ ಒತ್ತಾಯಿಸಲು ನಿರ್ಣಯಗಳನ್ನು ಕೈಗೊಳ್ಳಲಾಯಿತು. ಗುಲ್‌ಷನ್ ಜುಬೇರ್[೧೩] ಇಸ್ತಿಯಾಕ್ ಡ್ಯಾನಿಷ್[೧೪] ರವರ ಉತ್ತರ ಪ್ರದೇಶದ ಸಿದ್ದಾರ್ಥನಗರ, ಬರಬಂಕಿ ಮತ್ತು ಮೊರಬಾದ್ ಜಿಲ್ಲೆಗಳಲ್ಲಿ ೪೮ ಮದರಸಗಳು, ೬ ಸರ್ಕಾರಿ ಶಾಲೆಗಳು, ೨೧೬ ಮದರಸ ಶಿಕ್ಷಕರು, ೧೫ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಸಂದರ್ಶನವನ್ನು ಆಧರಿಸಿದ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಉತ್ತರ ಪ್ರದೇಶದ ಅಗತ್ಯ ಸ್ಥಳಗಳಲ್ಲಿ ಮದರಸಗಳ ಸಂಖ್ಯೆ ಕಡಿಮೆ ಇರುವುದರಿಂದ ಶಾಲೆ ಬಿಡುವವರ ಸಂಖ್ಯೆ ಹೆಚ್ಚಾಗಿದೆ. ಆದ್ದರಿಂದ ಮದರಸಗಳ ಹೆಚ್ಚಳ, ಬಿಸಿಊಟ ನೀಡುವುದು, ಶಿಷ್ಯವೇತನ ಮತ್ತು ಸಮವಸ್ತ್ರ ಹಾಗು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ನಿರ್ಮಿಸಲು ಕ್ರಮಕೈಗೊಳ್ಳಬೇಕೆಂದು ಶಿಫಾರಸ್ಸು ಮಾಡಿದೆ.

ಇಮಾಮ್ ಪರ್ವೀನ್[೧೫] ರವರ ಅಧ್ಯಯನವು ಉತ್ತರ ಪ್ರದೇಶದ ರಾಂಪುರದ ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಅಡ್ಡಿಯಾಗಿರುವ ಅಂಶಗಳನ್ನು ಕಂಡುಕೊಳ್ಳುವ ಉದ್ದೇಶದಿಂದ ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಶಿಕ್ಷಕರು, ವಿದ್ಯಾರ್ಥಿಗಳು, ಮತ್ತು ಸರ್ಕಾರೇತರ ಸಂಸ್ಥೆಗಳ ಸಂದರ್ಶನವನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನಗಳ ಫಲಿತಗಳು ಹೇಳುವ ಪ್ರಕಾರ ಶಾಲೆ ದೂರದಲ್ಲಿರುವುದು, ಹೆಣ್ಣುಮಕ್ಕಳು ದಾರಿ ತಪ್ಪುವ ಭಯ, ತಂದೆ-ತಾಯಿಗಳಲ್ಲಿರುವ ಸಾಂಪ್ರದಾಯಿಕ ಮನೋಭಾವ, ಮನೆಗೆಲಸ, ಬಾಲ್ಯವಿವಾಹ ಹಾಗು ವಿದ್ಯಾವಂತ ಹುಡುಗಿಗೆ ಗಂಡು ಸಿಗದಿರುವ ಭಯ ಮುಂತಾದ ಕಾರಣಗಳೇ ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿವೆ ಎಂದು ಗುರುತಿಸಿದೆ.

ಹೆಚ್.ವೈ ಸಿದ್ದೀಕಿ[೧೬] ಯವರು ದೆಹಲಿ ಮತ್ತು ಉತ್ತರ ಪ್ರದೇಶದ ಗ್ರಾಮೀಣ ಪ್ರದೇಶದಲ್ಲಿರುವ ಮುಸ್ಲಿಂ ಮಹಿಳೆಯರ ಶಿಕ್ಷಣ, ಉದ್ಯೋಗ, ಸಹಭಾಗಿತ್ವ, ಸಾಮಾಜಿಕ ಮತ್ತು ರಾಜಕೀಯ ಜೀವನದ ಸ್ಥಾನಮಾನವನ್ನು ಕಂಡುಕೊಳ್ಳುವ ಉದ್ದೇಶದಿಂದ ಅಧ್ಯಯನ ಕೈಗೊಂಡಿದ್ದಾರೆ. ಅಧ್ಯಯನ ಕಂಡುಕೊಂಡಿರುವ ಪ್ರಕಾರ ನಗರ ಪ್ರದೇಶದಲ್ಲಿ ಶೇ.೨೫ ರಷ್ಟು ಮುಸ್ಲಿಂ ಮಹಿಳೆಯರು ಉದ್ಯೋಗ ದಲ್ಲಿದ್ದು, ಉಳಿದ ಬಹುಸಂಖ್ಯಾತರು ಅರೆ ಉದ್ಯೋಗಸ್ಥರಾಗಿದ್ದಾರೆ. ಆದರೆ ಗ್ರಾಮೀಣ ಭಾಗದಲ್ಲಿ ಬಹುಸಂಖ್ಯಾತ ಮುಸ್ಲಿಂ ಮಹಿಳೆಯರು ಅರೆ ಉದ್ಯೋಗದಲ್ಲಿ ನಿರತರಾಗಿದ್ದಾರೆ. ನಗರ ಪ್ರದೇಶಗಳಿಗೆ ಹೋಲಿಸಿದರೆ ಗ್ರಾಮೀಣ ಭಾಗದಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆಯಾಗಿದೆ. ಅಧ್ಯಯನ ಕಂಡುಕೊಂಡಿರುವ ಪ್ರಕಾರ ಮುಸ್ಲಿಂ ಮಹಿಳೆಯರು ಶಿಕ್ಷಿತರಾದರೆ ಲಾಭಕ್ಕಿಂತ ಹಾನಿಯೇ ಹೆಚ್ಚು ಎಂಬ ಮನೋಭಾವನೆ ಪೋಷಕರಲ್ಲಿದೆ. ಕನಿಷ್ಠ ತಿಳುವಳಿಕೆ, ಸಂಪ್ರದಾಯಗಳು ಮತ್ತು ಮೂಢನಂಬಿಕೆಗಳು ಮಹಿಳಾ ಶಿಕ್ಷಣಕ್ಕೆ ಪ್ರಮುಖ ಅಡ್ಡಿಯಾಗಿವೆ ಎಂದು ತೀರ್ಮಾನಿಸುತ್ತಾರೆ.

ಅಜೀಮ್ ಖಾನ್[೧೭] ಅವರು ಉತ್ತರ ಪ್ರದೇಶದಲ್ಲಿ ಸರ್ಕಾರೇತರ ಸಂಸ್ಥೆಗಳು ಮುಸ್ಲಿಮರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಬಲೀಕರಣಕ್ಕಾಗಿ ಯಾವ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ ಮತ್ತು ಅವುಗಳು ನಿಗದಿತ ಉದ್ದೇಶ ಸಾಧನೆಯಲ್ಲಿ ಎಷ್ಟರ ಮಟ್ಟಿಗೆ ಸಫಲವಾಗಿವೆ ಎನ್ನುವ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಉತ್ತರ ಪ್ರದೇಶದ ಅಲಿಘಡ, ಬುಲಂದ್‌ಷಹರ್, ಮೀರತ್ ಮತ್ತು ಮೊರಾದಬಾದ್ ಜಿಲ್ಲೆಗಳಲ್ಲಿ ೫೦೦ ಮುಸ್ಲಿಮರನ್ನು ಮತ್ತು ೧೦೦ ಮುಸ್ಲಿಮೇತರರನ್ನು ಸಂದರ್ಶನಕ್ಕೆ ಒಳಪಡಿಸಿದ್ದರು. ಅಧ್ಯಯನದ ಫಲಿತಾಂಶಗಳು ಹೇಳುವ ಪ್ರಕಾರ ಗ್ರಾಮೀಣ ಭಾಗದಲ್ಲಿ ಮುಸ್ಲಿಮರ ಸಾಕ್ಷರತೆ ಕೇವಲ ಶೇ.೩೬ ರಷ್ಟಿದ್ದು, ನಗರ ಪ್ರದೇಶದಲ್ಲಿ ಶೇ.೪೯ ರಷ್ಟು ಸಾಕ್ಷರತೆ ಇದೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಗ್ರಾಮೀಣ ಮತ್ತು ನಗರ ಪ್ರದೇಶದ ಮುಸ್ಲಿಮರ ಸಾಕ್ಷರತೆ ಅತ್ಯಂತ ಕಡಿಮೆ ಇದೆ. ಶಾಲೆ ಬಿಟ್ಟ ಒಟ್ಟು ಮಕ್ಕಳ ಸಂಖ್ಯೆಗಳಲ್ಲಿ ಮುಸ್ಲಿಮರೇ ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಮುಸ್ಲಿಂ ಮಕ್ಕಳು ಅತೀ ಹೆಚ್ಚಾಗಿ ಸರ್ಕಾರಿ ಶಾಲೆಗಳಲ್ಲಿ ಓದುತ್ತಿದ್ದು, ನಗರ ಪ್ರದೇಶದಲ್ಲಿ ಶೇ.೭.೬ ರಷ್ಟು ಮತ್ತು ಗ್ರಾಮೀಣ ಭಾಗಗಳಲ್ಲಿ ಶೇ.೨ ರಷ್ಟು ಮುಸ್ಲಿಂ ವಿದ್ಯಾರ್ಥಿಗಳು ಅಧಿಕ ಖರ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಅಧ್ಯಯನದ ಪ್ರಕಾರ ನಗರ ಪ್ರದೇಶದಲ್ಲಿ ಶೇ.೯ ರಷ್ಟು ಮತ್ತು ಗ್ರಾಮೀಣ ಪ್ರದೇಶದಲ್ಲಿ ಶೇ.೨೪.೧ ರಷ್ಟು ಮಕ್ಕಳು ಮಾತ್ರ ಮದರಸಗಳಲ್ಲಿ ಅಧ್ಯಯನ ಮಾಡುತ್ತಿದ್ದಾರೆ.

ಮೃದುಲಾ ಗೋಯಲ್[೧೮]ರವರು ಹೆಣ್ಣು ಮಕ್ಕಳ ಶಿಕ್ಷಣದಿಂದ ಜನನ ಮತ್ತು ಮರಣ ಪ್ರಮಾಣದ ಮೇಲಾಗುವ ಪ್ರಭಾವ, ಪರಿಸರದ ಪರಿಣಾಮದಿಂದ ಹೆಣ್ಣು ಮಕ್ಕಳ ದಾಖಲಾತಿ

ಹೆಚ್ಚಳದ ಮೇಲಾಗುವ ಪ್ರಭಾವ ಹಾಗೂ ಹೆಣ್ಣು ಮಕ್ಕಳ ಶಿಕ್ಷಣದಿಂದ ಆದಾಯ ಮತ್ತು ಆರೋಗ್ಯದ ಮೇಲಾಗುವ ಪರಿಣಾಮಗಳನ್ನು ಅರಿಯುವ ಉದ್ದೇಶದಿಂದ ಅಧ್ಯಯನವನ್ನು ಉತ್ತರ ಪ್ರದೇಶದ ಗ್ರಾಮದಲ್ಲಿ ಕೈಗೊಂಡಿದ್ದಾರೆ. ಅಧ್ಯಯನ ಕಂಡುಕೊಂಡಿರುವ ಪ್ರಕಾರ ಶೇ.೪೦ರಷ್ಟು ಮುಸ್ಲಿಂ ಕುಟುಂಬಗಳು ಮತ್ತು ಬಹುಸಂಖ್ಯಾತ ದಲಿತ ಕುಟುಂಬಗಳು ಗ್ರಾಮಗಳಲ್ಲಿ ವಾಸವಾಗಿದ್ದಾರೆ. ಬಹುಸಂಖ್ಯಾತ ದಲಿತರು ಬಹಿಷ್ಕಾರ ಹಾಕುತ್ತಾರೆ ಎಂಬ ಭಯದಿಂದ ಶಾಲೆಯನ್ನು ತೊರೆದಿದ್ದಾರೆ. ಬಹುಸಂಖ್ಯಾತ ಮುಸ್ಲಿಂ ಮಕ್ಕಳು ಮದರಸಗಳಿಲ್ಲ ಎನ್ನುವ ಕಾರಣಕ್ಕೆ ಶಾಲೆಗೆ ಹೋಗುತ್ತಿಲ್ಲ ಎಂಬುದು ಆತಂಕಕಾರಿ ಸನ್ನಿವೇಶವಾಗಿದೆ. ಉತ್ತರ ಪ್ರದೇಶಕ್ಕೆ ಸಂಬಂಧಿಸಿದ ಬಹುತೇಕ ಅಧ್ಯಯನಗಳು ಬಡತನ, ಶಾಲೆಯ ಅಂತರ, ಶಾಲೆಗಳ ಅಲಭ್ಯತೆ ಹಾಗೂ ಮೂಲಭೂತ ಸೌಕರ್ಯಗಳ ಕೊರತೆಯಿಂದಾಗಿ ಮುಸ್ಲಿಂ ಮಹಿಳೆಯರಲ್ಲಿ ಅನಕ್ಷರತೆ ಹೆಚ್ಚಾಗಿದೆ ಎಂಬ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಸಂಬಂಧಿಸಿದ ಅಧ್ಯಯನಗಳು ಬಿಹಾರ ರಾಜ್ಯದಲ್ಲೂ ಕೈಗೊಳ್ಳಲಾಗಿದೆ. ಸಬೀಹಾ ಹುಸೇನ್[೧೯]ರವರ ಉತ್ತರ ಬಿಹಾರದ ದರ್ಬಾಂಗ್ ಪಟ್ಟಣದ ಅಧ್ಯಯನ ಹೇಳುವಂತೆ ಹಳೆಯ ಸಂಪ್ರದಾಯಗಳ ಆಚರಣೆಯು ಮುಸ್ಲಿಂ ಮಹಿಳೆಯರ ಶಿಕ್ಷಣದ ಹಿಂದುಳಿಯುವಿಕೆಗೆ ಕಾರಣವಾಗಿದೆ. ಬಡತನ, ಪ್ರತ್ಯೇಕ ಶಾಲೆಗಳು ಇಲ್ಲದಿರುವುದು, ಬಾಲ್ಯವಿವಾಹ ಮತ್ತು ಸಮುದಾಯದ ಅಸಹಕಾರಗಳೇ ಪ್ರೌಢಶಾಲೆಗಳಲ್ಲಿ ಮಧ್ಯದಲ್ಲಿ ಶಾಲೆ ಬಿಡುವವರ ಸಂಖ್ಯೆ ಹೆಚ್ಚಾಗುತ್ತಿದೆ. ಉತ್ತಮ ಸ್ಥಿತಿಯಲ್ಲಿರುವ ಕುಟುಂಬಗಳು ಮಹಿಳೆಯರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿರುವುದು ಆಶಾದಾಯಕವೆಂದು ಅಧ್ಯಯನ ಹೇಳಿದೆ. ಜಾಗತಿಕ ಆರ್ಥಿಕತೆಯು ಜ್ಞಾನಕೇಂದ್ರಿತ ಆಯಾಮದಿಂದ ಉತ್ಪಾದನ ಕೇಂದ್ರಿತವಾಗಿ ಪರಿವರ್ತನೆಗೊಂಡಿದೆ ಎಂಬ ವಾದಗಳು ಹೆಚ್ಚು ಜನಪ್ರಿಯಗೊಳ್ಳುತ್ತಿವೆ. ಈ ವಾದವನ್ನು ಕೇಂದ್ರೀಕರಿಸಿಕೊಂಡು ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳಿಗೆ ಸಂಬಂದಿಸಿದ ಅಧ್ಯಯನಗಳು ಓರಿಸ್ಸಾ ರಾಜ್ಯದಲ್ಲೂ ಕಂಡು ಬರುತ್ತವೆ.

ಮೊನಾಲಿಸ ಬಲ್[೨೦]ರವರು ತಮ್ಮ ಅಧ್ಯಯನವನ್ನು ಓರಿಸ್ಸಾ ರಾಜ್ಯದಲ್ಲಿ ಕೈಗೊಂಡಿದ್ದಾರೆ. ಈ ಅಧ್ಯಯನವು ವಿವಿಧ ಸಮುದಾಯಗಳಿಗೆ ಸಮಾನ ಶೈಕ್ಷಣಿಕ ಅವಕಾಶಗಳು ಸಿಗುತ್ತವೆಯೇ ಮತ್ತು ಸರ್ಕಾರಿ ಹಾಗೂ ಖಾಸಗೀ ಸಂಸ್ಥೆಗಳಲ್ಲಿ ಲಭ್ಯವಿರುವ ಅವಕಾಶಗಳು ಹೇಗಿವೆ ಎಂಬುದನ್ನು ಅಂದಾಜಿಸುವುದಾಗಿತ್ತು, ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ರಾಷ್ಟ್ರೀಯ ಸರಾಸರಿಗೆ ವಿರುದ್ಧವಾಗಿ ಕೇವಲ ಶೇ.೪.೪ ಮುಸ್ಲಿಮರು ಮಾತ್ರ ಶಾಲಾ ದಾಖಲಾತಿಯನ್ನು ಪಡೆದಿದ್ದಾರೆ. ಅಧ್ಯಯನದ ಅಂತಿಮ ಫಲಿತ ಹೇಳುವ ಪ್ರಕಾರ ಭಾರತದಲ್ಲಿ ಉನ್ನತ ಶಿಕ್ಷಣವನ್ನು ಉತ್ತಮಗೊಳಿಸ ಬೇಕಾದರೆ ಮೊದಲು ಶಾಲಾ ಶಿಕ್ಷಣವನ್ನು ಉತ್ತಮಪಡಿಸುವ ಅಗತ್ಯವಿದೆ. ಅದೇ ಪ್ರಕಾರ ಭಾರತದ ಶೈಕ್ಷಣಿಕ ಹಿಂದುಳಿದಿರುವಿಕೆಗೆ ಸಂಬಂಧಿಸಿದಂತೆ ಒಂದು ಪ್ರಮುಖ ವಾದವೆಂದರೆ, ಭಾರತದಲ್ಲಿ

ಶೈಕ್ಷಣಿಕ ಹಿಂದುಳಿಯುವಿಕೆಗೆ ಶಿಕ್ಷಣ ವ್ಯವಸ್ಥೆಯ ಸ್ವರೂಪ ಮತ್ತು ನಗರ ಮತ್ತು ಗ್ರಾಮೀಣ ಭಾಗದಲ್ಲಿ ಶಿಕ್ಷಣವು ಅಸಮಾನವಾಗಿ ಹಂಚಿಕೆಯಾಗಿದೆ. ಈ ವಾದದ ಹಿನ್ನಲೆಯಲ್ಲಿ ಜಾಗೃತಿ ರೇ[೨೧] ರವರು ಓರಿಸ್ಸಾದ ಡೆಂಕನಾಲ್ ಜಿಲ್ಲೆಯಲ್ಲಿನ ಎಲ್ಲಾ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢ ಶಾಲೆಗಳನ್ನು ಸಮೀಕ್ಷೆಗೆ ಒಳಪಡಿಸಿ ಮಹಿಳಾ ಸಬಲೀಕರಣಕ್ಕೆ ಇರುವ ಬಿಕ್ಕಟ್ಟುಗಳನ್ನು ಕಂಡುಕೊಂಡಿದ್ದಾರೆ. ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ನಗರದ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳು ಶಿಕ್ಷಣಕ್ಕೆ ಸಂಬಂಧಿಸಿದ ಬಿಕ್ಕಟ್ಟುಗಳನ್ನು ಎದುರಿಸುತ್ತಿದ್ದಾರೆ. ಆದರೆ ಗ್ರಾಮೀಣ ಭಾಗಕ್ಕೆ ಹೋಲಿಸಿದರೆ ನಗರ ಭಾಗದಲ್ಲೇ ಶಾಲೆಯಿಂದ ಹೊರಗುಳಿಯುವ ಮಕ್ಕಳ ಸಂಖ್ಯೆ ಅಧಿಕವಾಗಿದೆ ಅಂದರೆ ಶೇ.೧೪ ರಷ್ಟು ಮಕ್ಕಳು ಗ್ರಾಮಿಣ ಪ್ರದೇಶದಲ್ಲಿ ಮತ್ತು ಶೇ.೧೬.೨ರಷ್ಟು ಮಕ್ಕಳು ನಗರ ಪ್ರದೇಶದಲ್ಲಿ ಶಾಲೆಯಿಂದ ಹೊರಗುಳಿದಿದ್ದಾರೆ. ಈ ಪರಿಸ್ಥಿತಿಗೆ ಕುಟುಂಬದ ಪ್ರೋತ್ಸಾಹದ ಕೊರತೆ, ಶಾಲಾ ಪರಿಸರ, ಮುಂತಾದವುಗಳನ್ನು ಪಟ್ಟಿ ಮಾಡಲಾಗಿದೆ. ಭಾರತದಲ್ಲಿ ಅತಿ ಹೆಚ್ಚು ಮುಸ್ಲಿಂ ಜನಸಂಖ್ಯೆ ವಾಸಿಸುತ್ತಿರುವ ಕೆಲವೇ ರಾಜ್ಯಗಳಲ್ಲಿ ಒಂದಾದ ಪಶ್ಚಿಮ ಬಂಗಾಳದಲ್ಲೂ ಇಂತಹ ಅಧ್ಯಯನಗಳು ಕಂಡುಬರುತ್ತವೆ.

ರೋಖಿಯಾ ಬೇಗಂ ಅವರ[೨೨] ಪಶ್ಚಿಮ ಬಂಗಾಳದ ಅಧ್ಯಯನ ಹೇಳುವಂತೆ ಈ ರಾಜ್ಯದಲ್ಲಿ ಶೇ.೨೦ ರಷ್ಟು ಮುಸ್ಲಿಮರಿದ್ದಾರೆ. ಅವರಲ್ಲಿ ಶೇ.೨೫.೯ ರಷ್ಟು ಮುಸ್ಲಿಮರು ಅನಕ್ಷರಸ್ಥರಾಗಿದ್ದಾರೆ. ಈ ಅನಕ್ಷರತೆಗೆ ಬಡತನ ಮತ್ತು ನಿರಾಸಕ್ತಿ ಕಾರಣವೆಂದು ಅಧ್ಯಯನ ಕಂಡುಕೊಂಡಿದ್ದು, ಮಹಿಳೆಯರಿಗೆ ಪ್ರತ್ಯೇಕ ಶಾಲೆ ಮತ್ತು ಸೂಕ್ತ ಸೌಲಭ್ಯ ನೀಡಿದಲ್ಲಿ ಮಹಿಳೆಯರ ಸಾಕ್ಷರತೆ ಸುಧಾರಣೆಯಾಗುತ್ತದೆ. ಆದರೆ ಶೇ.೬೦ ಕುಟುಂಬಗಳು ಧಾರ್ಮಿಕ ಶಿಕ್ಷಣವನ್ನು ಮಾತ್ರ ಬಯಸುವುದು ನಿರಾಸಕ್ತಿಕರವಾದ ಸಂಗತಿಯಾಗಿದೆ. ಪಶ್ಚಿಮ ಬಂಗಾಳದ ಷೇಕ್‌ರಹೀಂ ಮಂಡಲ್[೨೩] ಮತ್ತು ಮಹಮದ್ ಸಂಜೀರ್ ಆಲಂ ಹಾಗೂ ಸರಸ್ವತಿ ರಾಜು[೨೪] ಅವರ ಅಧ್ಯಯನ ಹೇಳುವಂತೆ ಇಡೀ ಅಲ್ಪಸಂಖ್ಯಾತ ಸಮುದಾಯಗಳಲ್ಲೇ ಮುಸ್ಲಿಮರು ಕಟ್ಟಾ ಸಂಪ್ರದಾಯವಾದಿಗಳಾಗಿದ್ದಾರೆ. ಈ ಅಧ್ಯಯನವು ಮುಸ್ಲಿಮರ ಶೈಕ್ಷಣಿಕ ವಿಷಯದ ಮೇಲೆ ಯಾವ ಯಾವ ಸಂಗತಿಗಳು ಪ್ರಭಾವ ಬೀರುತ್ತವೆ ಎಂಬುದನ್ನು ವಿಮರ್ಶೆಗೆ ಒಳಪಡಿಸುವುದಾಗಿತ್ತು. ಪಶ್ಚಿಮ ಬಂಗಾಳದ ೬ ಜಿಲ್ಲೆಗಳ ೬ ವಿಶಿಷ್ಟ ಗ್ರಾಮಗಳನ್ನು ಆಧರಿಸಿದ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಆರ್ಥಿಕ ಸಮಸ್ಯೆ, ಶಿಕ್ಷಣದ ತಿಳುವಳಿಕೆ ಇಲ್ಲದಿರುವುದು, ಗೃಹ ಮತ್ತು ವ್ಯವಸಾಯಕ್ಕಾಗಿ ಹೆಣ್ಣು ಮಕ್ಕಳ ಬಳಕೆ, ಪ್ರೇರಣೆಯ ಕೊರತೆ, ಶಿಕ್ಷಕರ ಮೇಲೆ ನಿಯಂತ್ರಣವಿಲ್ಲದಿರುವುದು, ಶಾಲಾ ಕಟ್ಟಡಗಳ ಕೊರತೆ ಮತ್ತು ಅನಾನುಕೂಲಕರವಾದ ಶೈಕ್ಷಣಿಕ ಪರಿಸರ ಮುಂತಾದ ಕಾರಣಗಳಿಂದಾಗಿ ಪಶ್ಚಿಮ ಬಂಗಾಳದ ಮುಸ್ಲಿಂ ಮಹಿಳಾ ಸಾಕ್ಷರತೆ ಅತ್ಯಂತ ಹಿಂದುಳಿದಿದೆ. ಮುಸ್ಲಿಮರು ಶಿಕ್ಷಣ

ಪಡೆಯುವಲ್ಲಿ ಧಾರ್ಮಿಕ ಕಾರಣಗಳಿಗಿಂತ ಅವರ ಸಮಾಜೋ–ಆರ್ಥಿಕ ಸಂಗತಿಗಳ ಪ್ರಮುಖ ಅಡ್ಡಿಯಾಗಿವೆ.ಈ ವಾದದ ಹಿನ್ನಲೆಯಲ್ಲಿ ಪಶ್ಚಿಮ ಬಂಗಾಳದಲ್ಲಿ ಕೈಗೊಂಡ ಹಲವಾರು ಅಧ್ಯಯನಗಳು ಕಂಡುಬರುತ್ತವೆ.

ಕೆ.ಎನ್.ಜಹಾಂಗೀರ್[೨೫] ರವರ ಪಶ್ಚಿಮ ಬಂಗಾಳದ ಮತ್ತೊಂದು ಅಧ್ಯಯನ ಮುಸ್ಲಿಂ ಮಹಿಳೆಯರ ಸಮಾಜೋ–ಅರ್ಥಿಕ ಮತ್ತು ರಾಜಕೀಯ ಸ್ಥಿತಿಗಳನ್ನು ಅರ್ಥಮಾಡಿಕೊಳ್ಳುವುದಾಗಿತ್ತು. ಒಟ್ಟು ೨೯೯ ಮಹಿಳೆಯರ ನಮೂನೆಯನ್ನು ಆಧರಿಸಿದ ಅಧ್ಯಯನದ ಫಲಿತಗಳು ಹೇಳುವಂತೆ ಕುಟುಂಬದ ಆರ್ಥಿಕ ಸ್ಥಿತಿ ಮತ್ತು ಶಿಕ್ಷಣದ ನಡುವೆ ನಿಕಟವಾದ ಸಂಬಂಧವಿದೆ. ಕನಿಷ್ಠ ಆರ್ಥಿಕ ಸ್ಥಿತಿ ಹೊಂದಿರುವ ಕುಟುಂಬಗಳಲ್ಲಿ ಬಾಲ್ಯವಿವಾಹ, ಉನ್ನತ ಶಿಕ್ಷಣಕ್ಕಾಗಿ ಹೆಣ್ಣು ಮಕ್ಕಳನ್ನು ಕಳುಹಿಸದಿರುವುದು, ಪರದಾ ಪದ್ಧತಿ ಕಂಡು ಬರುತ್ತವೆ. ಪ್ರಾಥಮಿಕ ಶಾಲೆಯ ನಂತರ ಅತೀ ಹೆಚ್ಚು ಹೆಣ್ಣು ಮಕ್ಕಳು ಶಾಲೆಯಿಂದ ಹೊರಗುಳಿಯಲು ಕಾರಣವೇನೆಂದರೆ ಧರ್ಮಗುರುಗಳ ಪ್ರೇರೇಪಣೆಯಿಂದ ಧಾರ್ಮಿಕ ಶಿಕ್ಷಣಕ್ಕೆ ಅತಿಯಾಗಿ ಅಂಟಿಕೊಳ್ಳುತ್ತಾರೆ. ಬಾಲ್ಯವಿವಾಹವೂ ಇದರ ಮತ್ತೊಂದು ಕಾರಣವಾಗಿದೆ. ಅಧ್ಯಯನ ತೀರ್ಮಾನಿಸುವಂತೆ ಕುಟುಂಬದ ಆರ್ಥಿಕ ಸ್ಥಿತಿ–ಗತಿ ಹಾಗೂ ಶಿಕ್ಷಣಕ್ಕೂ ಪರಸ್ಪರ ನೇರವಾದ ಸಂಬಂಧವಿದೆ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಮತ್ತು ಶೈಕ್ಷಣಿಕ ಸ್ಥಿತಿಗಳ ಬಗ್ಗೆ ಪಂಜಾಬ್ ಮತ್ತು ಹರಿಯಾಣಗಳಲ್ಲಿ ನೆಡೆದಿರುವ ಅಧ್ಯಯನಗಳು ಕಂಡುಬರುತ್ತವೆ. ಕಾಶಿಲಾಲ್ ವಾಸಿ[೨೬] ರವರು ಹಥೋಟಿಯದ ೪ ಜಿಲ್ಲೆಗಳಾದ ಕೋಟಾಬುಂದಿ, ಜಾಲಾವಾಡ, ಮತ್ತು ಬರನಾ ಜಿಲ್ಲೆಗಳಲ್ಲಿ ಹೆಣ್ಣು ಮಕ್ಕಳ ಕಲಿಯುವಿಕೆಗೆ ಪ್ರಭಾವ ಬೀರುವ ಅಂಶಗಳನ್ನು ಉದ್ದೇಶವಾಗಿಟ್ಟುಕೊಂಡು ಅಧ್ಯಯನ ಕೈಗೊಂಡಿದ್ದಾರೆ. ಅಧ್ಯಯನಕ್ಕೆ ೧೬ ಪ್ರಾಥಮಿಕ ಶಾಲೆಗಳನ್ನು, ನಗರ ಗ್ರಾಮೀಣ ಪ್ರದೇಶದಿಂದ ಒಟ್ಟು ೪೦೦ ಹೆಣ್ಣು ಮಕ್ಕಳನ್ನು ಮತ್ತು ೩೨ ಶಿಕ್ಷಕರನ್ನು ಹಾಗೂ ೧೨೮ ಪೋಷಕರನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಶೇ.೮೪ ರಷ್ಟು ಗ್ರಾಮೀಣ ಪೋಷಕರು ಒಪ್ಪಿಕೊಳ್ಳುವ ಪ್ರಕಾರ ಹಿರಿಯ ಹೆಣ್ಣು ಮಕ್ಕಳೇ ಮನೆಯ ಜವಾಬ್ದಾರಿಯನ್ನು ವಹಿಸುತ್ತಾರೆ. ಶೇ.೧೦೦ ರಷ್ಟು ವಿದ್ಯಾರ್ಥಿನಿಯರು ಉಚಿತ ಪಠ್ಯಪುಸ್ತಕ ಮತ್ತು ಊಟವನ್ನು ಅಪೇಕ್ಷಿಸುತ್ತಾರೆ. ೪ ಜಿಲ್ಲೆಗಳ ಹೆಣ್ಣು ಮಕ್ಕಳು ಅಭಿಪ್ರಾಯ ಪಡುವ ಪ್ರಕಾರ ಮನೆಯ ಕೆಲಸದ ಜವಾಬ್ದಾರಿಯು ತಮ್ಮ ಮೇಲೆಯೆ ಬೀಳುತ್ತದೆ, ಇದಕ್ಕೆ ಅಣ್ಣ ತಮ್ಮಂದಿರು ಸಹಕರಿಸುವುದಿಲ್ಲ. ಮೇಲಾಗಿ ಪೋಷಕರು ಮಹಿಳೆಯರ ಶಿಕ್ಷಣಕ್ಕಿಂತ ವಿವಾಹದ ಬಗ್ಗೆ ಹೆಚ್ಚು ಚಿಂತಾಕ್ರಾಂತರಾಗಿರುತ್ತಾರೆ. ನಗರ ಪ್ರದೇಶಗಳಿಗೆ ಹೋಲಿಸಿದರೆ ಗ್ರಾಮಿಣ ಭಾಗದಲ್ಲಿ ವೈದ್ಯಕೀಯ ಸೌಲಭ್ಯ ಮತ್ತು ಶಿಕ್ಷಕರ ಕೊರತೆ ಇದೆ, ಹಾಗೂ ಮಹಿಳಾ ಶಿಕ್ಷಕಿಯರಿಗಿಂತ ಪುರುಷ ಶಿಕ್ಷಕರೇ ಹೆಚ್ಚಾಗಿರುತ್ತಾರೆ. ಆದ್ದರಿಂದ ಬಹುಸಂಖ್ಯಾತ ಮುಸ್ಲಿಂ

ಹೆಣ್ಣು ಮಕ್ಕಳು ಮಹಿಳಾ ಶಿಕ್ಷಕಿಯರನ್ನು ಬಯಸುತ್ತಾರೆ. ಅಲಿಶ್ ಗಾರವರ್[೨೭] ಪಂಜಾಬ್ ಅಧ್ಯಯನ ಕೂಡ ಮಹಿಳಾ ಸಾಕ್ಷರತೆಗೆ ಇರುವ ಅನಾನುಕೂಲಗಳನ್ನು ಪಟ್ಟಿ ಮಾಡಿದೆ. ಅಧ್ಯಯನ ಹೇಳುವ ಪ್ರಕಾರ ಸುಗ್ಗಿಯ ಕಾಲದಲ್ಲಿ ಚಿಕ್ಕ ಮಕ್ಕಳ ಆರೈಕೆಗಾಗಿ ಹಿರಿಯ ಹೆಣ್ಣು ಮಕ್ಕಳ ಬಳಕೆ, ಸಾರಿಗೆ ಸೌಲಭ್ಯದ ಕೊರತೆ, ಬಾಲ್ಯವಿವಾಹ, ಆರ್ಥಿಕ ವೆಚ್ಚ, ಕೌಟುಂಬಿಕ ಕಲಹಗಳು ಮುಂತಾದ ಸಂಗತಿಗಳು ಮಹಿಳಾ ಸಾಕ್ಷರತೆಗೆ ಅಡ್ಡಿಯಾಗಿವೆ. ಮುಸ್ಲಿಂ ಮಹಿಳಾ ಸಾಕ್ಷರತೆಗೆ ಸಂಬಂದಿಸಿದಂತೆ ಪಶ್ಚಿಮ ರಾಜ್ಯಗಳಲ್ಲಿ ಒಂದಾದ ಮಣಿಪುರ ಅಧ್ಯಯನಕ್ಕೆ ಒಳಪಟ್ಟಿದೆ.

ಸೆಹರತುನ್ನಿಸಾ[೨೮] ರವರ ಮಣಿಪುರ ಅಧ್ಯಯನ ಹೇಳುವಂತೆ ಈ ರಾಜ್ಯದಲ್ಲಿ ಮುಸ್ಲಿಂ ಮಹಿಳೆಯರ ಸಾಕ್ಷೆರತೆಯ ಪ್ರಮಾಣವು ರಾಷ್ಟ್ರೀಯ ಸರಾಸರಿಗಿಂತ ಅಧಿಕವಾಗಿದ್ದರೂ, ಇತರೆ ಸಮುದಾಯಗಳಿಗೆ ಹೋಲಿಸಿದರೆ ಸಾಕ್ಷರತೆ ಪ್ರಮಾಣ ಕಡಿಮೆಯಾಗಿದೆ. ಪುರುಷ ಮತ್ತು ಮಹಿಳೆಯರು ಸೇರಿ ಶೇ.೬೦ ರಷ್ಟು ಮಕ್ಕಳು ಮಧ್ಯದಲ್ಲಿ ಶಾಲೆ ಬಿಡುವುದು ಕಂಡುಬರುತ್ತದೆ. ಜೊತೆಗೆ ಶೇ.೪೭ ರಷ್ಟು ಮುಸ್ಲಿಂ ಮಕ್ಕಳು ಶಾಲೆಗಳಿಗೆ ದಾಖಲಾಗದಿರುವುದು ಕಂಡುಬರುತ್ತದೆ. ಈ ಅಧ್ಯಯನ ಗುರುತಿಸುವಂತೆ ಈ ಪರಿಸ್ಥಿತಿಗೆ ಕಾರಣಗಳೇನೆಂದರೆ ಬಡತನ, ಶಾಲೆಗಳು ಮನೆಯಿಂದ ಅತೀ ದೂರದಲ್ಲಿರುವುದು ಮತ್ತು ಶಿಕ್ಷಣಕ್ಕೆ ಪೋಷಕರ ಪ್ರೋತ್ಸಾಹ ಇಲ್ಲದಿರುವುದಾಗಿದೆ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಮತ್ತು ಶೈಕ್ಷಣಿಕ ಸ್ಥಿತಿಗಳ ಬಗ್ಗೆ ದಕ್ಷಿಣ ಭಾರತದಲ್ಲೂ ಅಧ್ಯಯನಗಳು ಬೆಳಕು ಚೆಲ್ಲುತ್ತವೆ. ಇಂತಹ ಅಧ್ಯಯನಗಳು ಮಹಾರಾಷ್ಟ್ರ ರಾಜ್ಯದಲ್ಲಿ ಕಂಡುಬರುತ್ತವೆ. ಮಹಿಳಾ ಶಿಕ್ಷಣಕ್ಕಾಗಿ ವೆಚ್ಚ ಮಾಡುವುದು ಬಡತನವನ್ನು ಕಡಿತಗೊಳಿಸುವ ಪ್ರಮುಖ ಸಾಧನವಾಗಿದೆ.[೨೯] ಶಿಕ್ಷಣವು ಮಹಿಳೆಯರ ಸ್ಥಾನವನ್ನು ಉತ್ತಮಗೊಳಿಸಿ, ಪುರುಷ ಮತ್ತು ಮಹಿಳೆಯರ ನಡುವಿನ ಅಸಮಾನತೆಯನ್ನು ನಿವಾರಣೆ ಮಾಡುವುದರ ಜೊತೆಗೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಕ್ರೀಯವಾಗಿ ಭಾಗವಹಿಸುವುದನ್ನು ಖಾತ್ರಿ ಪಡಿಸುತ್ತದೆ.[೩೦]

ಈ ವಾದಗಳ ಹಿನ್ನಲೆಯಲ್ಲಿ ಡಾ॥ ಶಕೀಲ್ ಅಹ್ಮದ್[೩೧]ರವರು ಪೂನಾ ನಗರದಲ್ಲಿ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣ, ಉದ್ಯೋಗ ಮತ್ತು ಕುಟುಂಬದ ಬಗ್ಗೆ ಬದಲಾಗುತ್ತಿರುವ ಮನೋಭಾವನೆ, ಶಿಕ್ಷಣ ಮತ್ತು ಉದ್ಯೋಗದಿಂದ ಸಬಲೀಕರಣ ಸಾಧ್ಯವೆಂದು ಮಹಿಳೆ ಭಾವಿಸುತ್ತಾಳೆಯೇ, ಮದುವೆ, ಶಿಕ್ಷಣ ಮತ್ತು ಶಿಕ್ಷಣದ ವಿಷಯದಲ್ಲಿ ಮಹಿಳೆ ಸಬಲೀಕರಣ ಹೊಂದಿದ್ದಾಳೆಯೇ ಹಾಗೂ ಪರದಾ ಪದ್ಧತಿಯು, ಮಹಿಳಾ ಶಿಕ್ಷಣ, ಉದ್ಯೋಗ ಮತ್ತು ವ್ಯಕ್ತಿ ವಿಕಸನದಲ್ಲಿ ಅಡ್ಡಿಯಾಗಿದೆಯೇ ಎಂಬುದನ್ನು ಅರಿಯಲು ಶ್ರೀಮಂತ ಬಡಾವಣೆಯಲ್ಲಿ ಎರಡು ನೂರು ಕುಟುಂಬಗಳ ನಮೂನೆಯನ್ನು ಆಧರಿಸಿ ಅಧ್ಯಯನ ಕೈಗೊಂಡಿದ್ದಾರೆ. ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಶೇ.೬೪ ರಷ್ಟು ಶಿಕ್ಷಣ ಪಡೆದ ಪೋಷಕರು ಮಗಳ ಉನ್ನತ ಶಿಕ್ಷಣಕ್ಕೆ ಬೆಂಬಲ ನೀಡುತ್ತಾರೆ.

ಶೇ.೮ ರಷ್ಟು ಪೋಷಕರು ತಮ್ಮ ಮಗಳಿಗೆ ಉತ್ತಮ ಗಂಡನನ್ನು ಪಡೆದುಕೊಳ್ಳುವ ಕಾರಣಕ್ಕಾಗಿ ಬೆಂಬಲಿಸುತ್ತಾರೆ. ಶೇ.೬೮ ರಷ್ಟು ಪೋಷಕರು ಮಗಳ ಶಿಕ್ಷಣದ ಸ್ವಾತಂತ್ರ್ಯಕ್ಕೆ ಬೆಂಬಲ ನೀಡುತ್ತಾರೆ. ಶೇ.೭೫ ರಷ್ಟು ಪೋಷಕರು ಸಹ ಉನ್ನತ ಶಿಕ್ಷಣಕ್ಕೆ ಬೆಂಬಲ ನೀಡುತ್ತಾರೆ. ಅಧ್ಯಯನ ಹೇಳುವ ಪ್ರಕಾರ ಶಿಕ್ಷಣದಿಂದ ಮುಸ್ಲಿಂ ಮಹಿಳೆಯರ ಮನೋಭಾವನೆಯಲ್ಲಿ ಬದಲಾವಣೆ ಕಂಡು ಬರುತ್ತಿದೆ. ದುರಂತವೆಂದರೆ ಕೇವಲ ಶೇ.೩೯ರಷ್ಟು ಮಹಿಳೆಯರಿಗೆ ಮಾತ್ರ ಇಸ್ಲಾಂ ಧರ್ಮ ಶಿಕ್ಷಣವನ್ನು ನಿಷೇಧಿಸಿಲ್ಲ ಎಂದು ಗೊತ್ತಿದೆ. ಸಮಾಧಾನಕರ ಅಂಶವೆಂದರೆ ಶೇ.೯೦ ರಷ್ಟು ಮಹಿಳೆಯರು ವೈವಾಹಿಕ ಸ್ವಾತಂತ್ರ್ಯವನ್ನು ಬಯಸುತ್ತಾರೆ. ಅಧ್ಯಯನ ಗುರುತಿಸಿರುವ ಪ್ರಕಾರ ಶಿಕ್ಷಣದಿಂದಾಗಿ ಮುಸ್ಲಿಂ ಮಹಿಳೆಯರ ಮನೋಭಾವನೆಗಳಲ್ಲಿ ಬದಲಾವಣೆ ಕಂಡು ಬರುತ್ತಿದೆ. ಅವರಿಗೆ ಶಿಕ್ಷಣದ ಅರಿವಾಗುತ್ತಿದೆ. ವೈಯಕ್ತಿಕ ಜೀವನದಲ್ಲಿ ಸ್ವಾತಂತ್ರ್ಯ ಬಯಸುತ್ತಾಳೆ ಮತ್ತು ಪರದಾ ಪದ್ಧತಿ ಯಾವುದಕ್ಕೂ ಅಡ್ಡಿಯಲ್ಲ ಎಂದು ನಂಬಿದ್ದಾರೆ. ಆದರೆ ಮಹಿಳೆಯರಲ್ಲಿನ ಈ ಭಾವನೆಗಳ ವೇಗ ನಿಧಾನಗತಿಯಲ್ಲಿದೆ. ಆದ್ದರಿಂದ ಸರ್ಕಾರ, ಮಹಿಳಾ ಆಯೋಗಗಳು, ಸರ್ಕಾರೇತರ ಸಂಸ್ಥೆಗಳು ಸಕ್ರೀಯವಾಗಿ ಭಾಗವಹಿಸಿ ಅನಕ್ಷರತೆಯನ್ನು ತೊಡೆದು ಹಾಕಬೇಕು, ಧಾರ್ಮಿಕ ನಾಯಕರು ಸರಿಯಾದ ಮಾರ್ಗದರ್ಶನ ನೀಡಬೇಕು, ಸಾಚಾರ್ ವರದಿಯನ್ನು ಶೀಘ್ರ ಮತ್ತು ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕೆಂದು ಒತ್ತಾಯಿಸುತ್ತದೆ.

ಪಿ.ಎಂ.ಕುಲಕರ್ಣಿ[೩೨] ಯವರ ಮಹಾರಾಷ್ಟ್ರದ ಅಧ್ಯಯನವನ್ನು ೧೦೧ ಕುಟುಂಬಗಳನ್ನು ಆಧರಿಸಿ ಕೈಗೊಳ್ಳಲಾಗಿದೆ. ಮುಸ್ಲಿಮರ ಸಾಕ್ಷರತೆ, ಮಾಧ್ಯಮಿಕ ಶಾಲೆಯನ್ನು ಬಿಟ್ಟವರು, ಪ್ರೌಢಶಾಲೆ ಬಿಟ್ಟವರು ಹಾಗು ಪ್ರಸ್ತುತ ದಾಖಲಾತಿ ಹೊಂದಿರುವವರನ್ನು ಪರಿಶೀಲಿಸಿವುದು ಅಧ್ಯಯನದ ಉದ್ದೇಶವಾಗಿತ್ತು. ಅಧ್ಯಯನದ ಫಲಿತಗಳು ಹೇಳುವಂತೆ ಮುಸ್ಲಿಂ ಮಹಿಳೆಯರ ಸಾಕ್ಷರತೆ ಪುರುಷರ ಸಾಕ್ಷರತೆಗಿಂತ ಕಡಿಮೆಯಿದ್ದು, ಮುಸ್ಲಿಂ ಮಹಿಳೆಯರ ಸಾಕ್ಷರತೆ ಹಿಂದೂ ಓಬಿಸಿ ಮಹಿಳೆಯರಗಿಂತ ಕಡಿಮೆ ಆಗಿದೆ. ಅಧ್ಯಯನ ಗುರುತಿಸಿರುವಂತೆ ಬಡತನ, ಧಾರ್ಮಿಕ ಕಟ್ಟು ಪಾಡುಗಳು ಅನಕ್ಷರತೆಗೆ ಪ್ರಮುಖ ಕಾರಣಗಳಾಗಿವೆ. ಮಂಗಳ ಡಿ. ಪಾಟೀಲ್[೩೩] ಅವರ ಅಧ್ಯಯನವನ್ನು ಮಹಾರಾಷ್ಟ್ರದ ಕೊಲ್ಲಾಪುರ ನಗರದ ಕೊಳಚೆ ಪ್ರದೇಶದಲ್ಲಿ ಕೈಗೊಳ್ಳಲಾಗಿದೆ. ಮಕ್ಕಳಲ್ಲಿ ಶಿಕ್ಷಣ ವಂಚಿತತೆ, ಪ್ರೇರೇಪಣೆಯ ಕೊರತೆ ಮತ್ತು ಶೈಕ್ಷಣಿಕ ಸೌಲಭ್ಯಗಳ ಕೊರತೆಗಳನ್ನು ಕಂಡುಕೊಳ್ಳಲು ೨೦೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿತ್ತು. ಕೊಳಚೆ ಪ್ರದೇಶದಲ್ಲಿ ಮುಸ್ಲಿಮರ ಸಾಕ್ಷರತೆಗೆ ಬಡತನ, ನಿರಾಸಕ್ತಿ, ಪೋಷಕರ ದುಶ್ಚಟಗಳು ಮತ್ತು ಬಾಲ ಕಾರ್ಮಿಕತೆ ಪ್ರಮುಖ ಅಡ್ಡಿಗಳಾಗಿವೆ ಮತ್ತು ಇದರ ಜೊತೆಗೆ ಶೈಕ್ಷಣಿಕವಾಗಿ ಶಾಲೆಯ ಗುಣಮಟ್ಟ, ಕಲಿಕೆ ಉಪಕರಣಗಳ ಅಭಾವ, ಮೂಲಭೂತ ಸೌಕರ್ಯಗಳ ಕೊರತೆ ಇವುಗಳು ಸಾಕ್ಷರತೆಯ ಮೇಲೆ ದುಷ್ಪರಿಣಾಮ

ಬೀರುತ್ತಿವೆ ಎಂದು ಅಧ್ಯಯನ ಪ್ರತಿಪಾದಿಸಿದೆ. ಆದರೆ ಭಾರತಕ್ಕೆ ಸ್ವಾತಂತ್ರ್ಯ ದೊರೆತು ಏಳು ದಶಕಗಳು ಕಳೆದುಹೋಗಿವೆ. ದೇಶ ಮತ್ತು ರಾಜ್ಯಗಳಲ್ಲಿ ವಿವಿಧ ಸರ್ಕಾರಗಳು ಅಸ್ತಿತ್ವಕ್ಕೆ ಬಂದು ಶೈಕ್ಷಣಿಕ ಅಭಿವೃದ್ಧಿಗಾಗಿ ವಿವಿಧ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಜಾರಿಗೊಳಿಸಿವೆ. ಈ ಯೋಜನೆಗಳು ನಿರ್ಲಕ್ಷಿತ ಸಮುದಾಯಗಳಲ್ಲಿ ಶೈಕ್ಷಣಿಕ ಬದಲಾವಣೆ ತರುವಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾಗಿವೆ ಎಂದು ನಂಬಲಾಗಿದೆ. ಆದರೆ ಅಧ್ಯಯನಗಳು ಶಿಕ್ಷಣದ ಮೇಲೆ ಸರ್ಕಾರದ ಯೋಜನೆಗಳ ಪ್ರಭಾವವನ್ನು ಅಧ್ಯಯನಕ್ಕೆ ಒಳಪಡಿಸಿಲ್ಲ. ಸಾಕ್ಷರತೆ, ಶಿಕ್ಷಣ ಮತ್ತು ಲಿಂಗ ಸಂಬಂಧಿ ಅನುಪಾತಗಳಲ್ಲಿ ಕೇರಳ ರಾಜ್ಯ ದೇಶದಲ್ಲಿ ಮೊದಲ ಸ್ಥಾನದಲ್ಲಿದೆ. ಆದರೆ ಈ ರಾಜ್ಯದಲ್ಲೂ ಮುಸ್ಲಿಮರ ಸ್ಥಿತಿಗಳಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ. ಹಲವಾರು ಅಧ್ಯಯನಗಳು ಈ ಕುರಿತು ಬೆಳಕು ಚೆಲ್ಲಿವೆ.

ಎಂ.ಇಂದೂಕುಮಾರಿ[೩೪]ಯವರು ಮುಸ್ಲಿಂ ಹೆಣ್ಣು ಮಕ್ಕಳ ಸ್ಥಾನವನ್ನು ಎತ್ತರಿಸುವಲ್ಲಿ ಶಿಕ್ಷಣದ ಪಾತ್ರವೇನು? ಎಂಬ ಉದ್ದೇಶವನ್ನು ಇಟ್ಟುಕೊಂಡು ಕೇರಳದ ಮಲ್ಲಾಪುರಂ, ಕ್ಯಾಲಿಕಟ್, ಪಾಲ್‌ಘಾಟ್ ಮತ್ತು ಕ್ಯಾನೋರ್ ಜಿಲ್ಲೆಗಳಲ್ಲಿ ಒಟ್ಟು ೪೫೦ ಮುಸ್ಲಿಂ ಹೆಣ್ಣು ಮಕ್ಕಳನ್ನು ಸಂಶೋಧನೆಗೆ ಒಳಪಡಿಸಿದ್ದಾರೆ. ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಹೆಣ್ಣು ಮಕ್ಕಳು ಋತುಮತಿಯಾದ ನಂತರ ಪುರುಷರ ರಕ್ಷಣೆಯಲ್ಲೇ ಓಡಾಡಬೇಕಿರುವುದರಿಂದ ಹೆಣ್ಣು ಮಕ್ಕಳು ಶಾಲೆ ಬಿಡುವುದು ಹೆಚ್ಚಾಗುತ್ತದೆ. ಜೊತೆಗೆ ಮುಸ್ಲಿಂ ಪೋಷಕರ ನಂಬಿಕೆಯ ಪ್ರಕಾರ ಹೆಣ್ಣು ಮಕ್ಕಳು ಕಡ್ಡಾಯವಾಗಿ ೩ ರಿಂದ ೫ ವರ್ಷಗಳವರೆಗೆ ಧಾರ್ಮಿಕ ಶಿಕ್ಷಣ ಪಡೆಯುವುದರಿಂದ ತಡವಾಗಿ ಶಾಲೆಗೆ ಸೇರಿ ಕೆಲವೇ ವರ್ಷಗಳಲ್ಲಿ ಶಾಲೆಯಿಂದ ಹೊರಗುಳಿಯುತ್ತಾರೆ. ಹಾಗಾಗಿ ಮುಸ್ಲಿಂ ಮಹಿಳಾ ಶಿಕ್ಷಣ ಕುಂಠಿತಗೊಂಡಿದೆ. ಉತ್ತರ ಭಾರತದ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳಿಗೂ, ದಕ್ಷಿಣ ಭಾರತದ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳಿಗೂ, ಹೆಚ್ಚು ಅಂತರಗಳು ಕಂಡುಬರುವುದಿಲ್ಲ. ಹಲವಾರು ಅಧ್ಯಯನಗಳು ಈ ವಾದವನ್ನು ನಿರೂಪಿಸುತ್ತವೆ. ಇಂತಹ ಅಧ್ಯಯನಗಳು ಆಂಧ್ರ ಪ್ರದೇಶದಲ್ಲಿ ಕಂಡುಬರುತ್ತವೆ. ಸೈಯದ್ ಮೆಹದಿ ಹಸನ್[೩೫] ರವರು ಹೈದರಾಬಾದಿನ ನಾಲ್ಕು ಕಾಲೇಜುಗಳಲ್ಲಿನ ನೂರು ವಿದ್ಯಾರ್ಥಿಗಳ ಬಗ್ಗೆ ಕೈಗೊಂಡ ಅಧ್ಯಯನ ಹೇಳುವಂತೆ ನವ ಯುವತಿಯರು ಮತ್ತು ಉತ್ತಮ ಕುಟುಂಬದವರು ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವ ಬಗ್ಗೆ ಉತ್ಸುಕರಾಗಿದ್ದಾರೆ. ಹಾಗೆಯೇ ಬಹುತೇಕ ಯುವತಿಯರು ಹೊರಗಡೆ ಕೆಲಸಮಾಡುವುದನ್ನು ಇಷ್ಟಪಡುತ್ತಾರೆ. ಹಾಗಾಗಿ ಅಧ್ಯಯನವು ಮುಸ್ಲಿಮರಿಗಾಗಿ ಹೆಚ್ಚು ಶಾಲೆಗಳನ್ನು ತೆರೆಯುವ ಬಗ್ಗೆ ಶಿಫಾರಸ್ಸು ಮಾಡಿವೆ. ಕೆ.ಪದ್ಮಾವತಿ[೩೬] ಯವರ ಆಂಧ್ರಪ್ರದೇಶದ ಮೂರು ಜಿಲ್ಲೆಗಳ ಮೂರು ಗ್ರಾಮಗಳಿಂದ ಒಟ್ಟು ೪೫೦ ಜನರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನ ಗುರುತಿಸಿರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ, ಒಬಿಸಿ ಮತ್ತು ಮುಸ್ಲಿಂ ಸಮುದಾಯಗಳಲ್ಲಿ ಇಂದಿಗೂ ಮಹಿಳೆಯರೇ ಸಾಮಾಜಿಕವಾಗಿ

ಹಿಂದುಳಿದಿದ್ದಾರೆ. ಗ್ರಾಮಗಳಲ್ಲಿ ಇಂದಿಗೂ ಒಂದೇ ಕೊಠಡಿ ಹಾಗೂ ಒಬ್ಬನೇ ಶಿಕ್ಷಕನಿರುವುದು ಕಂಡು ಬರುತ್ತದೆ.

ಇಂದಿನ ಪಠ್ಯವೂ ಅಗತ್ಯಕ್ಕೆ ಅನುಗುಣವಾಗಿ ಇಲ್ಲದಿರುವುದು ಮಹಿಳಾ ಸಾಕ್ಷರತೆಗೆ ವ್ಯತಿರಿಕ್ತ ಪರಿಣಾಮ ಬೀರಿದೆ. ಮನೆಯ ಯಜಮಾನನು ಶಿಕ್ಷಿತನಾದರೆ ಅದು ಮಕ್ಕಳಿಗೆ ಸ್ಫೂರ್ತಿನೀಡುತ್ತದೆ ಅಂದರೆ ಪೋಷಕರ ಶಿಕ್ಷಣ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರಭಾವ ಬೀರುತ್ತದೆ.[೩೭] ಈ ವಾದದ ಹಿನ್ನೆಲೆಯಲ್ಲಿ ಕೆ.ಕೃಷ್ಣಮ್ಮ[೩೮] ರವರು ರಾಯಲಸೀಮಾ ಪ್ರದೇಶದ ಅನಂತಪುರ, ಚಿತ್ತೂರು, ಕಡಪ ಮತ್ತು ಕರ್ನೂಲುಗಳಲ್ಲಿ ಅಧ್ಯಯನವನ್ನು ಕೈಗೊಂಡಿದ್ದಾರೆ. ಒಟ್ಟು ೩೬ ಗ್ರಾಮಗಳಲ್ಲಿ ಸಮೀಕ್ಷೆಯನ್ನು ಕೈಗೊಳ್ಳಲಾಗಿದ್ದು, ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಮುಸ್ಲಿಮರು ಮಹಿಳೆಯರ ಶಿಕ್ಷಣಕ್ಕೆ ಕಡಿಮೆ ಮಹತ್ವ ನೀಡುತ್ತಾರೆ. ಅನಕ್ಷರಸ್ಥ ಮುಸ್ಲಿಂ ಕುಟುಂಬಗಳಲ್ಲಿ ಕೇವಲ ಶೇ.೧೫.೬೪ ರಷ್ಟು ಮಾತ್ರ ಶಾಲೆಗೆ ಹೋಗುತ್ತಿದ್ದು, ಪ್ರಾಥಮಿಕ ಶಿಕ್ಷಣ ಪೂರೈಸಿದ ಕುಟುಂಬದಲ್ಲಿ ಶೇ.೨೮.೮೧ ರಷ್ಟು ಮಕ್ಕಳು ಮತ್ತು ೧೦ನೇ ತರಗತಿವರೆಗೆ ಓದಿದ ಪೋಷಕರ ಕುಟುಂಬಗಳಲ್ಲಿ ಶೇ.೩೪.೭೧ ರಷ್ಟು ಹೆಣ್ಣು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಅಧ್ಯಯನವು ಗುರುತಿಸಿರುವಂತೆ ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಹೆಣ್ಣು ಮಕ್ಕಳ ಶಾಲಾ ಪಾಲ್ಗೊಳ್ಳುವಿಕೆ ಅಧಿಕವಾಗುತ್ತಿದೆ. ಜೆಹರಾ ಜಬೀನ್[೩೯] ರವರು ಹೈದ್ರಾಬಾದ್ ನಗರದಲ್ಲಿ ೨೫೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿ ಮುಸ್ಲಿಂ ಮಹಿಳೆಯರ ಶಿಕ್ಷಣದಿಂದಾಗುವ ಸ್ಥಾನಮಾನದ ಬದಲಾವಣೆ, ಸಾಮಾಜಿಕ ಸಂಬಂಧ ಮತ್ತು ಸಂಸ್ಥೆಗಳಲ್ಲಿ ಆಗುವ ಬದಲಾವಣೆ ಹಾಗೂ ಕೌಟುಂಬಿಕ ನಿರ್ಣಯಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಬಗ್ಗೆ ಆಗುವ ಬದಲಾವಣೆಯನ್ನು ಅರಿಯುವ ಉದ್ದೇಶದಿಂದ ಅಧ್ಯಯನ ಕೈಗೊಂಡಿದ್ದಾರೆ. ಇಸ್ಲಾಮಿಕ್ ಪೂರ್ವ ಸಮಾಜದಲ್ಲಿ ಹೆಣ್ಣು ಹುಟ್ಟುವುದೇ ಪಾಪವೆಂದು ಭಾವಿಸಲಾಗಿತ್ತು. ಆರ್ಥಿಕ ಹೊರೆ ಮತ್ತು ಪಂಗಡಗಳಿಂದ ಹೊರ ಹಾಕುವ ಮುಜುಗರಗಳೇ ಇದಕ್ಕೆ ಕಾರಣವಾಗಿತ್ತು. ಒಂದು ವೇಳೆ ಮಗು ಬದುಕಿದರೆ ೭ ರಿಂದ ೮ನೇ ವಯಸ್ಸಿನ ಒಳಗೆ ವಿವಾಹಕ್ಕಾಗಿ ಬಲವಂತ ಮಾಡಲಾಗುತ್ತಿತ್ತು. ಹೆಣ್ಣು ಮಕ್ಕಳಿಗೆ ಋತುಮತಿಯಾಗುವ ಪೂರ್ವದಲ್ಲೇ ವಿವಾಹವಾಗುವುದು ಕಡ್ಡಾಯವಾಗಿತ್ತು. ಇಸ್ಲಾಮಿಕ್ ಸಮಾಜದಲ್ಲಿ ಮಹಮ್ಮದ್ ಪೈಗಂಬರರು ತಾಯಿಯ ಪಾದದಲ್ಲಿ ಸ್ವರ್ಗವಿದೆ ಎಂದು ಹೇಳುವ ಮೂಲಕ ಸ್ತ್ರೀಯರ ಸ್ಥಾನಮಾನವನ್ನು ಹೆಚ್ಚಿಸಿದ್ದರು. ಮಹಿಳೆಗೆ ತಲಾಕ್ ಕೊಡುವ ಅಧಿಕಾರ, ಆಸ್ತಿಯಲ್ಲಿ ಮಹಿಳೆಯರಿಗೂ ಸಮಪಾಲು ನೀಡುವ ಮೂಲಕ ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ನೀಡಿ, ಹೆಣ್ಣು ಶಿಶು ಹತ್ಯೆಯನ್ನು ನಿಷೇಧಿಸಲಾಯಿತು. ಕುರಾನ್‌ನ ೧೬:೫೭–೫೯ ಮತ್ತು ೧೯೩೬:೫೦–೯೧ ರ ಅಧ್ಯಾಯಗಳ ಪ್ರಕಾರ ಹೆಣ್ಣು ಮಗು ಜನಿಸಿದರೆ ಶಿಕ್ಷಣ ಮತ್ತು ತರಬೇತಿ ನೀಡಿ ಉತ್ತಮ ಜೀವನ ನಡೆಸಲು ಅನುವು ಮಾಡಿಕೊಡಬೇಕೆಂದು ವಿವರಿಸಲಾಗಿದೆ. ಈ ಧಾರ್ಮಿಕ ಉಪದೇಶಗಳ

ಹಿನ್ನಲೆಯಲ್ಲಿ ಕೈಗೊಂಡ ಅಧ್ಯಯನದ ಫಲಿತಗಳು ಹೇಳುವಂತೆ ಹೆಣ್ಣು ಮಕ್ಕಳು ಧಾರ್ಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಪಡೆಯುತ್ತಿರುವುದರಿಂದ ತಡವಾಗಿ ಶಾಲೆಗೆ ಸೇರುತ್ತಾರೆ ಹಾಗೂ ಬಡತನ ಮತ್ತು ಕೌಟುಂಬಿಕ ಕಾರಣಕ್ಕಾಗಿ ಶಾಲೆಯನ್ನು ಮಧ್ಯದಲ್ಲೇ ಬಿಡುತ್ತಾರೆ. ಶಿಕ್ಷಿತ ಮತ್ತು ಉದ್ಯೋಗಸ್ಥ ಮಹಿಳೆಯರು ಸಾಮಾಜಿಕ ಸ್ಥಾನಮಾನಗಳಲ್ಲಿ ಬದಲಾವಣೆ ಕಂಡಿರುವುದು ರುಜುವಾತುಪಟ್ಟಿದೆ. ಹೆಚ್ಚಿನ ವಿದ್ಯಾಭ್ಯಾಸ ಮಾಡಿದ ಮಹಿಳೆಯರು ಕುಟುಂಬದ ಉಳಿತಾಯ ಮತ್ತು ಆಡಳಿತದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿರುವುದು ಸಂಶೋಧನೆಯಿಂದ ದೃಢಪಟ್ಟಿದೆ. ಬಡತನ ಮತ್ತು ಕನಿಷ್ಠ ಶೈಕ್ಷಣಿಕ ಮಟ್ಟದ ನಡುವಿನ ಸಂಬಂಧಗಳು ಇಂದು ಹೆಚ್ಚು ಚರ್ಚೆಯಾಗುತ್ತಿವೆ. ಕೆಲವು ವಾದಗಳ ಪ್ರಕಾರ ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಅವರ ನಿರಾಸಕ್ತಿಯಾಗಲಿ ಅಥವಾ ಶೈಕ್ಷಣಿಕ ವ್ಯವಸ್ಥೆಯ ತಾರತಮ್ಯವಾಗಲಿ ಕಾರಣವಲ್ಲ ಬದಲಾಗಿ ಅವರ ಸಮಾಜೋ-ಆರ್ಥಿಕ ಸ್ಥಿತಿಗಳೇ ಕಾರಣಗಳಾಗಿವೆ.[೪೦] ಈ ವಾದದ ಹಿನ್ನಲೆಯಲ್ಲಿ ಆರೀಫ್ ಕುಲ್‌ಸುಮ್ ಜಾವಿದ್[೪೧] ಅವರು ಹೈದ್ರಾಬಾದ್ ಅಧ್ಯಯನದ ಆಧಾರದ ಮೇಲೆ ಹೇಳುವಂತೆ ಬಹುತೇಕ ಬಡ ಮುಸ್ಲಿಮರು ತಮ್ಮ ಬಡತನ ಕಾರಣಕ್ಕಾಗಿ ಗಲ್ಫ್ ದೇಶದ ವೃದ್ಧರಿಗೆ ಮದುವೆ ಮಾಡಿಕೊಡುತ್ತಿರುವುದರಿಂದ ಮುಸ್ಲಿಂ ಮಹಿಳೆಯರು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಬಹುತೇಕ ಅಧ್ಯಯನಗಳು ಗುರುತಿಸುವಂತೆ, ಮುಸ್ಲಿಂ ಸಮುದಾಯದಲ್ಲಿ ಹೆಣ್ಣುಮಕ್ಕಳು ಕನಿಷ್ಟ ಜೀವನ ಮಟ್ಟ ಮತ್ತು ಬಡತನದಿಂದಾಗಿ ಶಿಕ್ಷಣದಿಂದ ವಂಚಿತರಾಗುತ್ತಿರುವುದು ಕಂಡುಬರುತ್ತದೆ.

ಉತ್ತರ ಪ್ರದೇಶದ ರಾಜ್ಯಗಳಿಗೆ ಹೋಲಿಸಿದರೆ ದಕ್ಷಿಣದ ರಾಜ್ಯಗಳಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಸ್ವಲ್ಪಮಟ್ಟಿಗೆ ಉತ್ತಮವಾಗಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಅದರೆ ಈ ಅಧ್ಯಯನಗಳು ಕೊಡ ಉತ್ತರ-ದಕ್ಷಿಣ ರಾಜ್ಯಗಳ ತೌಲನಿಕ ವ್ಯತ್ಯಾಸಗಳಿಗೆ ಸರ್ಕಾರ ಹಾಗೂ ನಾಗರೀಕ ಸಮಾಜಗಳು ಕೊಡುಗೆ ಎನು ಎಂಬುದರ ಬಗ್ಗೆ ಮಾತನಾಡುವುದಿಲ್ಲ. ಇಡೀ ದೇಶದ ಮುಸ್ಲಿಮರಿಗೆ ಹೋಲಿಸಿದರೆ ಕರ್ನಾಟಕದ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು ಮುಖ್ಯವಾಗಿ ಮುಸ್ಲಿಂ ಮಹಿಳೆಯರಿಗೆ ಸಂಬಂಧಿಸಿದ ಶೈಕ್ಷಣಿಕ ಸ್ಥಿತಿಗತಿಗಳು ದಯನೀಯವಾಗಿವೆ.[೪೨] ಮುಸ್ಲಿಂ ಮಹಿಳೆಯರು ಎದುರಿಸುತ್ತಿರುವ ಶೈಕ್ಷಣಿಕ ಕ್ಲಿಷ್ಟತೆಗಳ ಬಗ್ಗೆ ಕರ್ನಾಟಕದಲ್ಲಿ ಅಧ್ಯಯನಗಳು ಕಂಡು ಬರುತ್ತವೆ. ಎನ್.ಅಮಾನುಲ್ಲಾ[೪೩]ರವರ ಹಾಸನದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಮುಸ್ಲಿಂ ವಿದ್ಯಾರ್ಥಿನಿಯರ ಅಧ್ಯಯನ ಹಲವಾರು ವಾಸ್ತವಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಅಧ್ಯಯನ ಹೇಳುವಂತೆ ಶೇ.೭೫ ರಷ್ಟು ವಿದ್ಯಾರ್ಥಿನಿಯರು ಕಾಲೇಜಿಗೆ ಸೇರಲು ಪೋಷಕರಿಂದಲೇ ಪ್ರೇರಣೆ ಪಡೆದಿದ್ದಾರೆ. ಬಹುಸಂಖ್ಯಾತ ವಿದ್ಯಾರ್ಥಿನಿಯರು ಅಭಿಪ್ರಾಯಪಡುವ ಪ್ರಕಾರ ಪರದಾ ಪದ್ಧತಿ ತಮ್ಮ ಓದಿಗೆ ಯಾವುದೇ ಅಡ್ಡಿಯಾಗಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಹೆಣ್ಣು ಮಕ್ಕಳ

ಶಿಕ್ಷಣ ಮತ್ತು ಅವರ ಸ್ಥಾನಮಾನ ಸಮಾಜದ ಪ್ರಗತಿಯನ್ನು ಸೂಚಿಸುತ್ತದೆ. ಪ್ರತಿ ಮುಸ್ಲಿಂ ಪುರುಷ ಮತ್ತು ಮಹಿಳೆ ಜ್ಞಾನವನ್ನು ಗಳಿಸಬೇಕೆಂದು ಪ್ರವಾದಿ ಮಹಮ್ಮದ್ ಹೇಳಿದ್ದಾರೆ[೪೪] ಒಂದು ನಿರ್ದಿಷ್ಟ ಧರ್ಮವು ತನ್ನ ಅನುಯಾಯಿಗಳ ಶೈಕ್ಷಣಿಕ ವಿಷಯದಲ್ಲಿ ಮಹತ್ವದ ಪ್ರಭಾವ ಬೀರುತ್ತದೆ. ಅವರ ಶಿಕ್ಷಣ, ಜೀವನ ವಿಧಾನ ಮತ್ತು ಜೀವನ ರೀತಿಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.[೪೫] ಈ ವಾದದ ಹಿನ್ನಲೆಯಲ್ಲಿ ಮಹಮ್ಮದ್ ಪೀರ್[೪೬] ಅವರು ಇಸ್ಲಾಂ ಧರ್ಮ ಮತ್ತು ಶಿಕ್ಷಣದ ಸಂಬಂಧ, ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು, ಧರ್ಮ, ಭಾಷೆ ಮತ್ತು ಶಿಕ್ಷಣಗಳ ನಡುವಿನ ಸಂಬಂಧಗಳನ್ನು ಅರಿಯುವ ಉದ್ದೇಶದಿಂದ ಬೆಂಗಳೂರು ನಗರದ ೪೦೦ ಪೋಷಕರನ್ನು ಮತ್ತು ೫೦ ಶಿಕ್ಷಕರನ್ನು ಹಾಗೂ ೧೫ ಶಾಲೆಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅಧ್ಯಯನ ಗುರುತಿಸಿರುವಂತೆ ಶಿಕ್ಷಣದ ನಿರಾಸಕ್ತಿ, ಬಡತನ, ಅನಾಕರ್ಷಿತ ಶಾಲಾ ವಾತಾವರಣ ಮುಂತಾದವುಗಳು ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿವೆ. ಶೇ.೭೫ ರಷ್ಟು ಪೋಷಕರು ಹೆಣ್ಣು ಮಕ್ಕಳಿಗೆ ಉತ್ತಮ ತಾಯಿ ಆಗುವ ಶಿಕ್ಷಣ ನೀಡಬೇಕೆಂದು, ಹೆಣ್ಣು ಮಕ್ಕಳಿಗೆ ಸಹ ಶಿಕ್ಷಣ ಸರಿಯಲ್ಲವೆಂದು ಮತ್ತು ಪ್ರತ್ಯೇಕ ಮಹಿಳಾ ಕಾಲೇಜುಗಳು ಬೇಕೆಂದು ಹಾಗೂ ಹೆಣ್ಣು ಮಕ್ಕಳ ಶಾಲೆಯಲ್ಲಿ ಮಹಿಳಾ ಶಿಕ್ಷಕಿಯರು ಇರಬೇಕೆಂದು ಪ್ರತಿಪಾದಿಸುತ್ತಾರೆ.

ಇತ್ತೀಚಿನ ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರಕಟಿಸಿದ ೨೦೧೦–೧೧ನೇ ವಿಶ್ಲೇಷಣಾ ವರದಿ[೪೭] ಪ್ರಕಾರ ರಾಯಚೂರು, ಬೆಂಗಳೂರು ನಗರ, ಯಾದಗಿರಿ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಶೇ.೫೦ ರಷ್ಟು ಶಾಲೆಗಳು ಸ್ವಂತ ಕಟ್ಟಡವನ್ನು ಹೊಂದಿಲ್ಲವೆಂದು, ಅಭಿಪ್ರಾಯಪಟ್ಟಿದೆ. ಜೊತೆಗೆ ಉಳಿದಿರುವ ಶಾಲೆಯಲ್ಲಿ ಮೂಲಭೂತ ಸೌಕರ್ಯದ ಕೊರತೆ ಇದೆ. ೨೦೧೦–೧೧ ನೇ ಡಿ.ಎಸ್.ಇ.ಆರ್.ಟಿ. ಮಾಹಿತಿಯ ಪ್ರಕಾರ ಶೇ.೨೫.೭೪ ರಷ್ಟು ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಶೌಚಾಲಯಗಳಿಲ್ಲ, ಶೇ.೬.೪೧ ರಷ್ಟು ಶಾಲೆಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇರುವುದಿಲ್ಲ. ಶಿಕ್ಷಣದ ಹಕ್ಕು ಜಾರಿಗೊಂಡು ೨೦೧೬ಕ್ಕೆ ಆರು ವರ್ಷಗಳಾಗುತ್ತಿರುವ ಸಂಧರ್ಭದಲ್ಲೂ ಕಾಯ್ದೆಯು ಪರಿಣಾಮಕಾರಿಯಾಗಿ ಜಾರಿಗೊಂಡಂತೆ ಕಂಡುಬರುತ್ತಿಲ್ಲ.[೪೮]ಈ ಹಿನ್ನೆಲೆಯಲ್ಲಿ ಡಾ॥ ಉಮಾ ದೀಕ್ಷಿತ್[೪೯] ಅವರು ಹುಬ್ಬಳ್ಳಿಯ ಕಿಮ್ಸ್ ಪರಿಸರದ ಕೊಳಚೆ ಪ್ರದೇಶದಲ್ಲಿ ೨೦೦ ವಿದ್ಯಾರ್ಥಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ರಾಜ್ಯ ನಿರ್ದೇಶಕರ ತತ್ವಗಳ ೪೫ನೇ ವಿಧಿಯನ್ವಯ ಸಾರ್ವತ್ರಿಕ ಮತ್ತು ಉಚಿತ ಶಿಕ್ಷಣ ನೀಡುವುದು ಕಡ್ಡಾಯವಾಗಿದ್ದರೂ ಇಂದಿಗೂ ಮಕ್ಕಳು ಶಾಲೆಯಿಂದ ಹೊರಗುಳಿಯುತ್ತಿದ್ದಾರೆ. ಈ ಹಿನ್ನಲೆಯಲ್ಲಿ ಅದರ ಕಾರಣಗಳೇನು ಮತ್ತು ಸಾಮಾಜೀಕರಣದ ಪ್ರಕ್ರಿಯೆ ವಿದ್ಯಾರ್ಥಿಗಳ ಮೇಲೆ ಹೇಗೆ ಪ್ರಭಾವ ಬೀರಿದೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದಾಗಿತ್ತು. ಅಧ್ಯಯನ ಹೇಳುವಂತೆ ಶೇ.೮೫ ರಷ್ಟು ವಿದ್ಯಾರ್ಥಿಗಳು

ಬಡತನದಿಂದಾಗಿ ಶಾಲೆಯನ್ನು ತೊರೆದವರಾಗಿದ್ದಾರೆ. ಇವರಿಗೆ ಅಗತ್ಯವಾದ ಸೌಲಭ್ಯ ಲಭ್ಯವಾದಲ್ಲಿ ಶಾಲೆಗೆ ಹೋಗುವ ಹಂಬಲ ವ್ಯಕ್ತಪಡಿಸುತ್ತಾರೆ. ಅಧ್ಯಯನದ ಪ್ರಕಾರ ಶೇ.೨೬.೫ ರಷ್ಟು ವಿದ್ಯಾರ್ಥಿಗಳು ಅನೀಮಿಯಾದಿಂದ ಬಳಲುತ್ತಿದ್ದು, ಶೇ.೭೩ ರಷ್ಟು ವಿದ್ಯಾರ್ಥಿಗಳು ಅನಾರೋಗ್ಯಕರವಾದ ವಾತಾವರಣದಲ್ಲಿ ಜೀವಿಸುತ್ತಿದ್ದಾರೆ ಹಾಗಾಗಿ ಇವರಿಗೆ ಶಾಲೆಯಲ್ಲಿ ಓದುವ ಯಾವುದೇ ಕುತೂಹಲ ಉಳಿದುಕೊಂಡಿಲ್ಲ.

ಟಿ.ಎ.ಪ್ರಶಾಂತ್ ಬಾಬು[೫೦] ರವರ ವರದಿಯು ೮ ರಿಂದ ೧೪ ವಯಸ್ಸಿನ ಮುಸ್ಲಿಂ ಮಕ್ಕಳು ಶಾಲೆ ಪೂರೈಸುತ್ತಿದ್ದಾರೆಯೆ? ಅವರ ಶಿಕ್ಷಣದ ಗುಣಮಟ್ಟವೇನು? ಸವಾಲುಗಳೇನು? ಮತ್ತು ಶೈಕ್ಷಣಿಕ ಹಕ್ಕಿನ ಪ್ರತಿಪಾದನೆಯ ಸ್ಥಿತಿಯೇನು? ಎನ್ನುವುದರ ಬಗ್ಗೆ ಮಳವಳ್ಳಿ ತಾಲೂಕು ಉರ್ದು ಶಾಲೆಗಳ ಸ್ಥಿತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಅಧ್ಯಯನದ ಫಲಿತಗಳು ಗುರುತಿಸುವ ಪ್ರಕಾರ ಶೇ.೪೩ ರಷ್ಟು ಮುಸ್ಲಿಂ ಮಕ್ಕಳು ಶಾಲೆಯಿಂದ ಹೊರಗೆ ಉಳಿದಿದ್ದಾರೆ ಇದಕ್ಕೆ ಬಡತನ, ಮಾಧ್ಯಮದ ಸಮಸ್ಯೆ, ಶಾಲೆಗಳ ಭೌತಿಕ ಸ್ಥಿತಿ, ಮುಸ್ಲಿಮರು ಅಧಿಕವಿರುವ ಗ್ರಾಮಗಳಲ್ಲಿ ಸರ್ಕಾರಿ ಉರ್ದು ಶಾಲೆಯನ್ನು ಸ್ಥಾಪಿಸದೇ ಇಲ್ಲದಿರುವುದು, ೭ನೇ ತರಗತಿಯ ನಂತರ ಉರ್ದು ಮಾಧ್ಯಮ ಇಲ್ಲದಿರುವುದರಿಂದ ೮ ಅಥವಾ ೯ನೇ ತರಗತಿಗೆ ಶಾಲೆ ಬಿಡುವುದು ಅನಿವಾರ್ಯವಾಗುತ್ತಿದೆ. ಪಠ್ಯ ಮತ್ತು ಬೋಧನಾ ವಿಧಾನಗಳು ಸಂಪೂರ್ಣವಾಗಿ ಭಿನ್ನವಾಗಿದ್ದು, ಉರ್ದು ಶಿಕ್ಷಕರಿಗೆ ಕನ್ನಡ ಕೈಪಿಡಿಗಳನ್ನು ಒದಗಿಸುತ್ತಿರುವುದು ಉರ್ದು ಶಾಲಾ ಗುಣಮಟ್ಟ ಕಡಿಮೆಯಾಗಲು ಕಾರಣವಾಗಿದೆ. ಕೆ.ವೈಜಯಂತಿ[೫೧] ಯವರು ಬೆಂಗಳೂರು ನಗರದ ಉರ್ದು ಶಾಲೆಗಳ ಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲು ಅಧ್ಯಯನವನ್ನು ಕೈಗೊಂಡಿದ್ದು, ೧೭ ಉರ್ದು ಶಾಲೆಗಳು, ೨೫ ಮುಖ್ಯೋಪಾಧ್ಯಾಯರು ಮತ್ತು ೩೫ ಶಿಕ್ಷಕರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ೩೫೦(ಎ) ಸಂವಿಧಾನ ವಿಧಿಯ ಪ್ರಕಾರ ಸರ್ಕಾರಗಳು ಕಡ್ಡಾಯವಾಗಿ ಮಾತೃ ಭಾಷೆಯಲ್ಲಿ ಶಿಕ್ಷಣವನ್ನು ನೀಡತಕ್ಕದ್ದು. ಉರ್ದು ಭಾಷೆಯು ಬಹುತೇಕ ಮುಸ್ಲಿಮರ ಮಾತೃ ಭಾಷೆಯಾಗಿರುವುದರಿಂದ ಉರ್ದು ಮಾತನಾಡುವ ಮಗು ಭಾಷಾ ಅಲ್ಪಸಂಖ್ಯಾತ ಮತ್ತು ಧಾರ್ಮಿಕ ಅಲ್ಪಸಂಖ್ಯಾತ ಗುಂಪಿಗೆ ಸೇರುತ್ತದೆ.[೫೨] ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ೫ ರಿಂದ ೧೪ನೇ ವಯೋಮಾನದ ಮಕ್ಕಳಲ್ಲಿ ಕೇವಲ ಶೇ.೧೭ ರಷ್ಟು ಮಕ್ಕಳು ಮಾತ್ರ ಶಾಲೆಗೆ ಹೋಗುತ್ತಾರೆ. ಇದಕ್ಕೆ ಭೋದನಾ ಭಾಷೆಯ ತೊಂದರೆ ಹಾಗೂ ಉತ್ತಮ ಸೌಕರ್ಯಗಳ ಕೊರತೆ ಕಾರಣವಾಗಿದೆ. ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಅವಕಾಶಗಳಿಂದ ವಂಚಿತವಾಗಿರುವುದು ನಂಜುಂಡಪ್ಪ ವರದಿಯಿಂದ ಬಹಿರಂಗಗೂಂಡಿದೆ.

ಈ ಪ್ರದೇಶದಲ್ಲಿ ಶಿಕ್ಷಣವು ದಯನೀಯ ಸ್ಥಿತಿಯಲ್ಲಿರುವುದನ್ನು ಹಲವಾರು ಅಧ್ಯಯನಗಳು ಬಹಿರಂಗಗೂಳಿಸಿವೆ. ಶ್ರೀಧರ ಬೊರಣ್ಣ[೫೩] ರವರ ಅಧ್ಯಯನವು ಹೈದ್ರಾಬಾದ್ ಕರ್ನಾಟಕ ಪ್ರದೇಶದ

ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಅಧ್ಯಯನವನ್ನು ಕೈಗೊಂಡಿದೆ. ಈ ಅಧ್ಯಯನವು ಹೈದ್ರಾಬಾದ್ ಕರ್ನಾಟಕದ ವಿವಿಧ ಹಂತಗಳ ಶೈಕ್ಷಣಿಕ ಅಭಿವೃದ್ಧಿ ಅಂದಾಜು ಮಾಡುವುದು, ಶೈಕ್ಷಣಿಕ ಸೌಲಭ್ಯಗಳ ಗುಣಮಟ್ಟವನ್ನು ಮಾಪನ ಮಾಡುವುದು, ಹೈದ್ರಾಬಾದ್ ಕರ್ನಾಟಕದ ಶೈಕ್ಷಣಿಕ ಅಭಿವೃದ್ಧಿಗೆ ಇರುವ ಅಡೆ-ತಡೆಗಳನ್ನು ಅಂದಾಜು ಮಾಡುವುದು, ರಾಜ್ಯದ ನಡುವೆ ಇರುವ ಶೈಕ್ಷಣಿಕ ಅಸಮಾನತೆಯನ್ನು ತಿಳಿಯುವುದು ಮತ್ತು ಹೈದ್ರಾಬಾದ್ ಕರ್ನಾಟಕ ಪ್ರದೇಶದ ಶಿಕ್ಷಣದ ಪರಿಮಾಣಾತ್ಮಕ ಮತ್ತು ಗುಣಾತ್ಮಕ ಮೌಲ್ಯಗಳನ್ನು ನಿರ್ಧರಿಸುವುದು ಅಧ್ಯಯನದ ಉದ್ದೇಶವಾಗಿತ್ತು. ಅಧ್ಯಯನಗಳ ಫಲಿತಗಳು ಹೇಳುವ ಪ್ರಕಾರ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಪ್ರಾಥಮಿಕ ಶಿಕ್ಷಣದ ಬೆಳವಣಿಗೆ ಎಲ್ಲಾ ಜಿಲ್ಲೆಗಳಲ್ಲಿ ಸಮಾನವಾಗಿಲ್ಲ ಮತ್ತು ಸಮತೋಲನವಾಗಿಲ್ಲ, ಗ್ರಾಮೀಣ ಭಾಗದಲ್ಲಿ ಮಹಿಳೆಯರಿಗೆ ಪೂರಕ ಶೈಕ್ಷಣಿಕ ವಾತಾವರಣವಿಲ್ಲ, ಈ ಭಾಗದಲ್ಲಿ ತರಬೇತಿ ಹೊಂದಿದ ಶಿಕ್ಷಕರ ಮತ್ತು ಮೂಲ ಸೌಲಭ್ಯಗಳ ಕೊರತೆ ಇದೆ. ಒಟ್ಟಾರೆ ಹೈದ್ರಾಬಾದ್ ಕರ್ನಾಟಕದ ಪ್ರದೇಶದಲ್ಲಿ ಬಡತನ, ನಿರಾಸಕ್ತಿ, ಶಿಕ್ಷಕರ ಭಯದಿಂದ ಮಧ್ಯದಲ್ಲೇ ಶಾಲೆ ಬಿಡುವವರ ಸಂಖ್ಯೆ ಅಧಿಕವಾಗಿದೆ. ಹೈದ್ರಾಬಾದ್ ಕರ್ನಾಟಕದ ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಮಲ್ಲಿಕಾರ್ಜುನಾ ನಾಗಶೆಟ್ಟಿ[೫೪] ಯವರ ಮತ್ತೊಂದು ಅಧ್ಯಯನವನ್ನು ಗುರುತಿಸಬಹುದು, ಹೈದ್ರಾಬಾದ್ ಕರ್ನಾಟಕ ಪ್ರದೇಶದ ಉನ್ನತ ಶಿಕ್ಷಣದಲ್ಲಿ ಲಿಂಗಾನುಪಾತ, ವೃತ್ತಿ ಶಿಕ್ಷಣದಲ್ಲಿ ಲಿಂಗಾನುಪಾತ, ಲಿಂಗ ಅಸಮಾನತೆಗೆ ಸಮಾಜೋ-ಅರ್ಥಿಕ ಕಾರಣಗಳನ್ನು ಕಂಡು ಹಿಡಿಯುವ ಉದ್ದೇಶ ಹೊಂದಿತ್ತು. ಈ ಭಾಗದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಲಿಂಗ ಅಸಮಾನತೆ ಎದ್ದು ಕಂಡು ಬರುತ್ತದೆ. ಆದ್ದರಿಂದ ಮಹಿಳೆಯರಿಗೆ ವೃತ್ತಿ ಶಿಕ್ಷಣದಲ್ಲಿ ಮೀಸಲಾತಿ ನೀಡಬೇಕು, ಗ್ರಾಮೀಣ ಭಾಗದಲ್ಲಿ ಮಹಿಳೆಯರಿಗೆ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಅವಕಾಶವನ್ನು ಗಟ್ಟಿಗೊಳಿಸಬೇಕೆಂದು ಸಲಹೆ ನೀಡಿದೆ. ಮಲ್ಲಿಕಾರ್ಜುನ ಜಯಪ್ರಕಾಶ[೫೫] ಅಧ್ಯಯನ ಕೂಡ ಹೈದ್ರಾಬಾದ್ ಕರ್ನಾಟಕ ಭಾಗದ ಶಿಕ್ಷಣಕ್ಕೆ ಸಂಬಂಧಿಸಿದ್ದಾಗಿದೆ. ಈ ಅಧ್ಯಯನವು ಭಾರತದಲ್ಲಿ ಮಹಿಳೆಯರ ಚಾರಿತ್ರಿಕ ಆಯಾಮ, ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಹಿಳೆಯರ ಸ್ಥಿತಿ, ಮಹಿಳಾ ಅಭಿವೃದ್ಧಿಗೆ ಅಡ್ಡಿಯಾಗಿರುವ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಗುರುತಿಸುವುದು ಹಾಗೂ ರಾಜಕೀಯೇತರ ಸಂಘಟನೆಗಳಲ್ಲಿ ಮಹಿಳೆಯರ ಪಾತ್ರವನ್ನು ಅಂದಾಜಿಸುವ ಉದ್ದೇಶ ಹೊಂದಿತ್ತು. ಅಧ್ಯಯನದ ತೀರ್ಮಾನಗಳೇನೆಂದರೆ ಬಡತನ, ಅಸಮಾನತೆ ಮತ್ತು ಅನ್ಯಾಯಗಳನ್ನು ಹೋಗಲಾಡಿಸದಿದ್ದರೆ ಮಹಿಳಾ ಅಭಿವೃದ್ಧಿ ಸಾಧ್ಯವಾಗುವುದಿಲ್ಲ. ಇಂದಿಗೂ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರ ಸಹಭಾಗಿತ್ವ ಮತ್ತು ಕೊಡುಗೆಯನ್ನು ಮಾನ್ಯಮಾಡಲಾಗಿಲ್ಲ. ಹಾಗಾಗಿ ಮಹಿಳೆಯರು ಸಂವಿಧಾನದತ್ತವಾದ ಅಧಿಕಾರಗಳನ್ನು ಅನುಭವಿಸುತ್ತಿಲ್ಲ.

ಇಂತಹ ಅಧ್ಯಯನಗಳು ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದಂತೆ ಅತ್ಯಂತ ವಿರಳವಾಗಿ ಕಂಡು ಬರುತ್ತವೆ. ಅಂತಹವುಗಳಲ್ಲಿ ಪ್ರಿಯದರ್ಶಿನಿ ಚಿಗರಿ, ಮುಬಾಷಿರ್ ಅಂಗೋಲ್‌ಕರ್, ಮೃಣಾಲ್ ಶರ್ಮ, ವೈತಫ್ಲೇತ್ ಮತ್ತು ಬಿ.ಆರ್.ಅಶೋಕ್ ಕುಮಾರ್[೫೯] ರವರ ಅಧ್ಯಯನ ಒಂದಾಗಿದೆ. ಮಧ್ಯದಲ್ಲಿ ಶಾಲೆ ಬಿಡುವ ಮಕ್ಕಳ ಸಮಸ್ಯೆಯು ಜಾಗತಿಕವಾಗಿದ್ದು, ಅದರ ಕಾರಣಗಳು ಕ್ಲಿಷ್ಟವಾಗಿವೆ. ಈ ಅಧ್ಯಯನವು ೬ ರಿಂದ ೧೪ನೇ ವಯೋಮಾನದ ಮಕ್ಕಳು ಮಧ್ಯದಲ್ಲಿ ಶಾಲೆಯನ್ನು ಏಕೆ ಬಿಡುತ್ತಾರೆ ಎಂಬುದನ್ನು ತಿಳಿಯುವುದಾಗಿತ್ತು. ಇದಕ್ಕಾಗಿ ಬೆಳಗಾವಿ ನಗರದ ಸರ್ಕಾರಿ ಶಾಲೆಗಳಿಂದ ೨೦೦ ವಿದ್ಯಾರ್ಥಿಗಳನ್ನು ಆಯ್ದುಕೊಂಡು ಪ್ರಶ್ನಾವಳಿ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಅಧ್ಯಯನ ಫಲಿತಗಳು ಹೇಳುವ ಪ್ರಕಾರ ಒಟ್ಟು ವಿದ್ಯಾರ್ಥಿಗಳಲ್ಲಿ ೧೩ನೇ ವಯಸ್ಸಿಗೆ ಶಾಲೆ ಬಿಟ್ಟವರ ಸಂಖ್ಯೆ ಶೇ.೨೨.೫ ರಷ್ಟು ಅವರಲ್ಲಿ ಶೇ.೪೮ ರಷ್ಟು ವಿದ್ಯಾರ್ಥಿಗಳು ಕನಿಷ್ಠ ಸಾಮಾಜಿಕ, ಆರ್ಥಿಕ ವರ್ಗಗಳಿಗೆ ಸೇರಿದವರಾಗಿದ್ದಾರೆ. ಶೇ.೩೧ ರಷ್ಟು ಬಡತನಕ್ಕಾಗಿ, ಶೇ.೧೫.೫ ರಷ್ಟು ಪೋಷಕರ ನಿರ್ಲಕ್ಷ್ಯದಿಂದಾಗಿ, ಶೇ.೮.೫ ರಷ್ಟು ಧೀರ್ಘಾವಧಿ ಖಾಯಿಲೆಯಿಂದಾಗಿ ಮತ್ತು ಶೇ.೧೨.೫ರಷ್ಟು ನಿರಾಸಕ್ತಿಯಿಂದಾಗಿ ಶಾಲೆಯನ್ನು ಬಿಟ್ಟಿರುವುದು ಕಂಡು ಬಂದಿದೆ. ಅಧ್ಯಯನ ತೀರ್ಮಾನಿಸುವ ಪ್ರಕಾರ ೧೩ ನೇ ವಯಸ್ಸಿನಲ್ಲಿ ಅತಿ ಹೆಚ್ಚಾಗಿ ಶಾಲೆ ಬಿಡಲು ಇವುಗಳೇ ಮುಖ್ಯ ಕಾರಣಗಳಾಗಿವೆ. ಆದ್ದರಿಂದ ಅಧ್ಯಯನ ಶಿಫಾರಸ್ಸು ಮಾಡುವ ಪ್ರಕಾರ ಶಾಲೆ ಬಿಡುವುದು ಒಂದು ಸಂಕೀರ್ಣ ಸಾಮಾಜಿಕ ಸಮಸ್ಯೆಯಾಗಿದೆ. ಇದು ಸಮುದಾಯ ಮತ್ತು ವ್ಯಕ್ತಿಗಳನ್ನು ಅನುಪಯುಕ್ತಗೊಳಿಸುತ್ತದೆ. ಪೋಷಕರನ್ನು ಶಾಲಾ ಚಟುವಟಿಕೆಗಳಲ್ಲಿ ಸಕ್ರಿಯಾವಾಗಿ ಪಾಲ್ಗೊಳ್ಳುವಂತೆ ಮಾಡುವುದು ಮತ್ತು ಅವರೊಂದಿಗೆ ಸೂಕ್ತ ಆಪ್ತಸಮಾಲೋಚನೆ ಮಾಡುವುದರಿಂದ ಈ ಸಮಸ್ಯೆಯನ್ನು ಸ್ವಲ್ಪ ಮಟ್ಟಿಗೆ ನಿಯಂತ್ರಿಸಬಹುದಾಗಿದೆ. ಒಟ್ಟಾರೆ ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ವಿವಿಧ ಸಮಸ್ಯೆಗಳು ಮತ್ತು ಕಾರಣಗಳನ್ನು ಕಂಡುಕೊಂಡಿವೆ.

## ೨. ಅಧ್ಯಯನದ ಸಮಸ್ಯೀಕರಣ

ಸಾಕ್ಷರತೆ ಸಾಮಾಜಿಕ ಅಭಿವೃದ್ಧಿಯ ಸೂಚಿಯಾಗಿದೆ. ಇದನ್ನು ಸಮಾಜದ ಚೌಕಟ್ಟಿನಿಂದ ಪ್ರತ್ಯೇಕ ಮಾಡಿ ನೋಡುವುದು ಸಾಧ್ಯವಾಗುವುದಿಲ್ಲ. ಸಾಕ್ಷರತೆ ಮತ್ತು ಶಿಕ್ಷಣ ಮೌಲ್ಯ ನಿರಪೇಕ್ಷವಾದವುಗಳಲ್ಲ. ಸಾಕ್ಷರತೆ ಯಾರಿಗೆ, ಯಾರಿಗೆ ಅಲ್ಲ ಮತ್ತು ಯಾರಿಗೆ ಎಷ್ಟು ಸಿಗಬೇಕು ಎಂಬ ಸಂಗತಿಗಳು ಸಾಮಾಜಿಕ ವ್ಯವಸ್ಥೆ ನಿರ್ಧರಿಸುತ್ತದೆ ಎಂಬ ವಾದಗಳು ಅಭಿವೃದ್ಧಿ ಸಂಬಂಧಿತ ಚರ್ಚೆಗಳಲ್ಲಿ ಗಟ್ಟಿಯಾಗಿ ಕೇಳಿಬರುತ್ತಿವೆ. ಭಾರತೀಯ ಸಮಾಜದಲ್ಲಿ ಸಾಕ್ಷರತೆಯು ಜಾತಿ, ವರ್ಗ, ಲಿಂಗಬೇಧಗಳನ್ನು ಅಧರಿಸಿ ನಿರ್ಧಾರವಾಗುತ್ತದೆ. ಪುರುಷರಿಗಿಂತ ಮಹಿಳಾ ಸಾಕ್ಷರತೆ

ಕಡಿಮೆ ಎನ್ನುವುದು ಕೇವಲ ಜೈವಿಕ ಫಲವಲ್ಲ. ಅದು ಸಾಮಾಜಿಕ ಸ್ವರೂಪವೂ ಆಗಿದೆ. ಸಾಕ್ಷರತೆಯ ಸಾಧನೆ ಮತ್ತು ವೈಫಲ್ಯಗಳು ವ್ಯಕ್ತಿಗತ ಅಥವಾ ಜೈವಿಕ–ನೈಸರ್ಗಿಕ–ಪ್ರಾಕೃತಿಕ ನೆಲೆಗಳಲ್ಲಿ ಪರಿಭಾವಿಸುವುದು ಕಷ್ಟ. ಇದು ಸಾಮಾಜಿಕ ವ್ಯವಸ್ಥೆಯಿಂದ ರೂಪಿಸಲ್ಪಟ್ಟ ಸಂಗತಿಯಾಗಿದೆ. ಅಭಿವೃದ್ಧಿಯು ಇಂದು ಲಿಂಗಸ್ವಂಧಿ ವಿಚಾರವಾಗಿದೆ. ಆದರೆ ಈ ವಿಚಾರವನ್ನು ಹಿಂದಿನಿಂದಲೂ ನಿರ್ಲಕ್ಷಿಸಿಕೊಂಡು ಬರಲಾಗಿದೆ. ಅಭಿವೃದ್ಧಿ ಎನ್ನುವುದು ಕೇವಲ ವರಮಾನದ ಸಂಗತಿಯಲ್ಲ. ಅಭಿವೃದ್ಧಿಯು ಇಂದು ಸಾಮಾಜಿಕ ಸಂಗತಿಯನ್ನು ಒಳಗೊಂಡಿದೆ. ಅದ್ದರಿಂದ ಅಭಿವೃದ್ಧಿಯು ವರಮಾನ ಮತ್ತು ಸಾಮಾಜಿಕ ಸಂಗತಿಗಳನ್ನು ಒಳಗೊಳ್ಳುವ ಅಗತ್ಯವಿದೆ. ಆದರೆ ಅಭಿವೃದ್ಧಿಯು ತನ್ನಷ್ಟಕ್ಕೆ ತಾನೇ ಸಮಾಜದಲ್ಲಿರುವ ಬಡವರು, ಪರಿಶಿಷ್ಟರು, ಅಲ್ಪಸಂಖ್ಯಾತರು ಮುಖ್ಯವಾಗಿ ಮಹಿಳೆಯರನ್ನು ಒಳಗೊಳ್ಳುವುದಿಲ್ಲ. ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಒಂದಕ್ಕೊಂದು ಪೂರಕವಾದ ಸಂಗತಿಗಳು ಸರಿ. ಆದರೆ ಪ್ರಜಾಪ್ರಭುತ್ವವು ತನ್ನಷ್ಟಕ್ಕೆ ತಾನೇ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುತ್ತದೆ ಎಂಬ ವಾದವೂ ಸರಿಯಲ್ಲ. ಏಕೆಂದರೆ ಇಂದಿಗೂ ಎಲ್ಲಾ ರಂಗಗಳಲ್ಲಿ ಅಸಮಾನತೆ ತೀವ್ರಗೊಳ್ಳುತ್ತಿದೆ. ಅಲ್ಪಸಂಖ್ಯಾತರು ಮುಖ್ಯವಾಗಿ ಮುಸ್ಲಿಮರು ಇಂದಿಗೂ ವಿವಿಧ ರಂಗಗಳಲ್ಲಿ ಅಸಮಾನತೆಯನ್ನು ಎದುರಿಸುತ್ತಿದ್ದಾರೆ. ಅಲ್ಪಸಂಖ್ಯಾತರು ಎನ್ನುವ ಸಂಗತಿ ರಾಜಕೀಕರಣಗೊಂಡಿದೆ. ಈ ಹಿನ್ನೆಲೆಯಲ್ಲಿ ಸರ್ಕಾರ ಕೈಗೊಳ್ಳುವ ಅಲ್ಪಸಂಖ್ಯಾತರ ಅಭಿವೃದ್ಧಿ ಕಾರ್ಯಕ್ರಮಗಳು ತುಷ್ಟೀಕರಣದ ಅರೋಪ ಪಡೆದುಕೊಳ್ಳುತ್ತಿವೆ. ಶಿಕ್ಷಣವು ಬಡವರು ಮತ್ತು ಹೆಣ್ಣು ಮಕ್ಕಳಿಗೆ ಸಾಮಾಜೋ–ಆರ್ಥಿಕ ಮತ್ತು ರಾಜಕೀಯ ಅಂಶಗಳಿಗೆ ಉತ್ತರ ನೀಡುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಮಹಿಳೆಯರ ಆರೋಗ್ಯ, ಚಲನಾ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ಇದರ ಜೊತೆಗೆ ಶಿಕ್ಷಣವು ಮಹಿಳೆಯರಲ್ಲಿನ ಲಿಂಗ ಸಂಬಂಧಿ ಗೊಂದಲಗಳನ್ನು ದೂರ ಮಾಡುತ್ತದೆ ಎಂದು ನಂಬಲಾಗಿದೆ. ಈ ವಾದಗಳ ಹಿನ್ನೆಲೆಯಲ್ಲಿ ಮುಸ್ಲಿಂ ಮಹಿಳೆಯರು ಅಧಿಕಾರದಿಂದ ವಂಚಿತರಾಗಲು ಅವರ ಕನಿಷ್ಟ ಶಿಕ್ಷಣ ಮಟ್ಟವೆಂದು ನಂಬಲಾಗಿದೆ. ಮುಸ್ಲಿಮರ ಕನಿಷ್ಟ ಶಿಕ್ಷಣದ ಹಿಂದೆ ವಿವಿಧ ವಾದಗಳು ಜಾರಿಯಲ್ಲಿವೆ. ಮುಸ್ಲಿಮರಿಗೆ ಇಸ್ಲಾಂ ಧರ್ಮ, ಸಂಪ್ರದಾಯಗಳು, ಸಂಸ್ಕೃತಿ ಮತ್ತು ಧಾರ್ಮಿಕ ಆಚರಣೆಗಳೇ ಪ್ರಮುಖ ಅಡ್ಡಿಗಳಾಗಿವೆ ಎಂಬುದು ಒಂದು ಪ್ರಮುಖ ವಾದ. ಈ ವಾದ ಸಾರ್ವತ್ರಿಕವಾಗಿ ಟೀಕೆಗೆ ಒಳಗಾಗಿವೆ.

ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಧರ್ಮ ಎಲ್ಲರಿಗೂ ಸಮಾನ ಮತ್ತು ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ. ಇಸ್ಲಾಂ ದೃಷ್ಟಿಯಲ್ಲಿ ಶಿಕ್ಷಣ ಪಡೆಯುವುದು ಉತ್ತಮ ಕಾರ್ಯಗಳಲ್ಲಿ ಒಂದಾಗಿದೆ. ಇಸ್ಲಾಂ ಮಹಿಳಾ ಶಿಕ್ಷಣ ವಿರೋಧಿ ಎನ್ನುವುದು ತಪ್ಪು ಗ್ರಹಿಕೆಯಾಗಿದೆ. ಆದರೂ ಇಂದಿಗೂ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಉತ್ತಮಗೊಂಡಿಲ್ಲ. ಸಾಚಾರ್ ವರದಿ ಹೇಳುವಂತೆ

ಪರಿಶಿಷ್ಟ ಜಾತಿಯ ಬಾಲಕಿಯರಿಗಿಂತ ಮುಸ್ಲಿಂ ಬಾಲಕಿಯರು ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಶಾಲೆಗೆ ದಾಖಲಾಗಿದ್ದಾರೆ. ಇದರ ಜೊತೆಗೆ ದೇಶದ ವಿವಿಧ ಭಾಗಗಳಲ್ಲಿ ಕೈಗೊಂಡಿರುವ ಅಧ್ಯಯನಗಳು ನಿರೂಪಿಸಿರುವಂತೆ ಮುಸ್ಲಿಂ ಸಮುದಾಯದಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಅತ್ಯಂತ ಕಡಿಮೆ ಇದೆ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಲು ಪೋಷಕರು ಹಿಂದೆ ಬಿದ್ದಿಲ್ಲ. ಆದರೆ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಲು ಪೋಷಕರ ಜೀವನ ಮಟ್ಟ ಪ್ರೋತ್ಸಾಹದಾಯಕವಾಗಿಲ್ಲ. ಸಾಚಾರ್ ವರದಿ ಬಹಿರಂಗಪಡಿಸಿರುವ ಪ್ರಕಾರ ಮುಸ್ಲಿಂ ಸಮುದಾಯದ ಆರ್ಥಿಕ ಸ್ಥಿತಿ ಉತ್ತಮಗೊಂಡಾಗ ಮಾತ್ರ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸ್ಥಿತಿ ಉತ್ತಮಗೊಳ್ಳಲು ಸಾಧ್ಯ. ಇದುವರೆಗೂ ನಡೆದಿರುವ ಅಧ್ಯಯನಗಳು ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಸ್ಥೂಲವಾಗಿ ಗುರುತಿಸಿವೆ. ಇಸ್ಲಾಂ ಧರ್ಮವು ಮುಸ್ಲಿಂ ಮಹಿಳೆಯರಿಗೆ ಶಿಕ್ಷಣವನ್ನು ನಿರ್ಬಂಧಿಸಿಲ್ಲ. ಈ ಹಿನ್ನಲೆಯಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಹಿಂದುಳಿಯುವಿಕೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಡ್ಡಿಗಳ ಪ್ರಮಾಣವೆಷ್ಟು ಮತ್ತು ಸಮಾಜೋ-ಆರ್ಥಿಕ ಅಡ್ಡಿಗಳ ತೀವ್ರತೆ ಎಷ್ಟು ಎಂಬುದನ್ನು ಪ್ರತ್ಯೇಕವಾಗಿ ಮತ್ತು ಆಳವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿಲ್ಲ. ಒಂದು ಸಮುದಾಯಕ್ಕೆ ವಾಸವಿರುವ ಪ್ರದೇಶದ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳು ಪ್ರಭಾವಿಸುತ್ತವೆ ಎನ್ನುವ ವಾದವಿದೆ. ಆದರೇ ಬಹುತೇಕ ಅಧ್ಯಯನಗಳು ಮುಸ್ಲಿಂ ಸಮುದಾಯ ಬದುಕುವ ಪ್ರದೇಶದ ಪರಿಸರದ ಪ್ರಭಾವವನ್ನು ಗುರುತಿಸುವಲ್ಲಿ ವಿಫಲವಾಗಿವೆ. ಸ್ವಾತಂತ್ರ್ಯ ನಂತರ ಅಸ್ತಿತ್ವಕ್ಕೆ ಬಂದ ಸರ್ಕಾರಗಳು ಜಾರಿಗೊಳಿಸಿದ ಯೋಜನೆಗಳು ಮತ್ತು ಕಾರ್ಯಕ್ರಮಗಳು ಸಾಕ್ಷರತೆ ಮತ್ತು ಶೈಕ್ಷಣಿಕ ಸ್ಥಿತಿಗಳ ಮೇಲೆ ಉಂಟುಮಾಡಿದ ಪ್ರಭಾವಗಳನ್ನು ಬಹುತೇಕ ಅಧ್ಯಯನಗಳು ಗುರುತಿಸಿಲ್ಲ. ಈ ಹಿನ್ನೆಲೆಯಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಧ್ಯಯನ ಮುಖ್ಯವಾಗುತ್ತದೆ. ಶಿಕ್ಷಣವನ್ನು ಸಾಮಾಜೀಕರಣಗೊಳಿಸುವಲ್ಲಿ ಪೋಷಕರಷ್ಟೇ ಪಾತ್ರವನ್ನು ನಾಗರೀಕ ಸಮುದಾಯಗಳು ವಹಿಸುತ್ತವೆ ಎಂಬುದನ್ನು ಬಹುತೇಕ ಅಧ್ಯಯನಗಳು ಗಮನಿಸಿಲ್ಲ.

ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ಸಂಕೀರ್ಣ ಮತ್ತು ವೈವಿಧ್ಯಮಯವಾದ ಕಾರಣಗಳನ್ನು ಗುರುತಿಸಲಾಗುತ್ತಿದೆ. ಇಲ್ಲಿಯವರೆಗೆ ನಡೆದ ಅಧ್ಯಯನಗಳು ಮುಸ್ಲಿಂರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣಗಳನ್ನು ಸ್ಥೂಲವಾಗಿ ಗುರುತಿಸುತ್ತವೆ. ವಿಶಿಷ್ಟ ಅನನ್ಯತೆಯನ್ನು ಹೊಂದಿರುವ ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಧಾರ್ಮಿಕ, ಸಾಮಾಜೋ-ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಭಾವಗಳನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿದೆ.

### ೩. ಸಂಶೋಧನಾ ಅಧ್ಯಯನದ ಉದ್ದೇಶಗಳು

೧. ಅಭಿವೃದ್ಧಿ ಮತ್ತು ಮಹಿಳೆಯರ ಕುರಿತಾದ ಚರ್ಚೆಗಳನ್ನು ವಿಮರ್ಶಿಸುವುದು.

೨. ಬೆಳಗಾವಿ ನಗರದ ಮುಸ್ಲಿಂ ಹೆಣ್ಣು ಮಕ್ಕಳ ಸಾಮಾನ್ಯ ಪರಿಸರವನ್ನು ಅಭ್ಯಾಸಿಸುವುದು.

೩. ಬೆಳಗಾವಿ ನಗರದ ಮುಸ್ಲಿಂ ಹೆಣ್ಣುಮಕ್ಕಳ ಶೈಕ್ಷಣಿಕ ಪರಿಸರವನ್ನು ಅರ್ಥಮಾಡಿಕೊಳ್ಳುವುದು.

೪. ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣದ ಮೇಲೆ ಪ್ರಭಾವ ಬೀರುವ ಅಂಶಗಳನ್ನು ಮೌಲ್ಯಮಾಪನ ಮಾಡುವುದು.

೫. ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣವನ್ನು ಉತ್ತಮಪಡಿಸಲು ಸರ್ಕಾರಗಳು ಮತ್ತು ನಾಗರೀಕ ಸಮಾಜ ಕೈಗೊಂಡ ಕ್ರಮಗಳನ್ನು ವಿಮರ್ಶಿಸುವದು

೬. ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣದ ಸುಧಾರಣೆಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳುವುದು.

### ೪. ಅಧ್ಯಯನದ ವಿಧಾನ

ಅಧ್ಯಯನಕ್ಕೆ ಸಮಸ್ಯೀಕರಣವನ್ನು ಆಧರಿಸಿ ಅಧ್ಯಯನದ ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಈ ಸಂಶೋಧನಾ ಪ್ರಬಂಧವು ಎಂಫಿರಿಕಲ್ ವಿಧಾನವನ್ನು ಆಧರಿಸಿದೆ. ವಿಷಯದ ಅಗತ್ಯವನ್ನು ಆಧರಿಸಿ ತಾತ್ವಿಕ ಸಂಗತಿಗಳನ್ನು ಚರ್ಚಿಸಲಾಗಿದೆ. ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಗಳನ್ನು ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳಿಂದ ಪಡೆಯಲಾಗಿದೆ. ಅಧ್ಯಯನವು ಪ್ರಧಾನವಾಗಿ ಕ್ಷೇತ್ರ ಕಾರ್ಯವನ್ನು ಆಧರಿಸಿದ ಅಧ್ಯಯನವಾಗಿದೆ. ಅಗತ್ಯವಾದಲ್ಲಿ ಸೈದ್ಧಾಂತಿಕ ಚರ್ಚೆಗಳನ್ನು ಬೆಂಬಲವಾಗಿ ಪಡೆಯಲಾಗಿದೆ. ಅಧ್ಯಯನದ ಮೊದಲನೆಯ ಉದ್ದೇಶ ಅಭಿವೃದ್ಧಿ ಮತ್ತು ಮಹಿಳೆಯರಿಗೆ ಸಂಬಂಧಿಸಿದ ಚರ್ಚೆಗಳನ್ನು ವಿಮರ್ಶಿಸುವುದು. ಇದಕ್ಕೆ ಸಂಬಂಧಿಸಿದಂತೆ ವರಮಾನ ವರ್ಧನೆಯ ಅಭಿವೃದ್ಧಿ, ಮಾನವ ಅಭಿವೃದ್ಧಿ, ಲಿಂಗ ಸಂಬಂಧಿ ಮುಖ್ಯವಾಹಿನೀಕರಣದ ಚರ್ಚೆಗಳು, ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮ, ಅಭಿವೃದ್ಧಿ ಮತ್ತು ಮಹಿಳೆ, ಮಹಿಳೆಯರ ಸಂಗೋಪನಾ ದುಡಿಮೆ, ಮಾನವಾಭಿವೃದ್ಧಿಯಲ್ಲಿ ಲಿಂಗಸಂಬಂಧಿ ಆಯಾಮಗಳು, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆ, ಶಿಕ್ಷಣ ಮತ್ತು ಸಬಲೀಕರಣ, ಸಂವಿಧಾನ ಮತ್ತು ಮಹಿಳೆ, ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಯ ಕಾರಣಗಳು, ಮುಸ್ಲಿಂ ಮಹಿಳೆಯರ ಶಿಕ್ಷಣ ಮತ್ತು ಇಸ್ಲಾಂ ದೃಷ್ಟಿಕೋನ ಮತ್ತು ಆಧುನಿಕ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳನ್ನು ಚರ್ಚಿಸಲಾಗಿದೆ. ಈ ಸೈದ್ಧಾಂತಿಕ ಚರ್ಚೆಗಳನ್ನು ಅನುಷಂಗಿಕ ಮೂಲಗಳಿಂದ ಪಡೆಯಲಾಗಿದೆ, ಭಾರತ ಮತ್ತು ಕರ್ನಾಟಕದ

ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳ ಮಾಹಿತಿಗಳನ್ನು ಸಾಚಾರ್ ವರದಿ ಮತ್ತು ೧೯೯೫ ರ ರೆಹಮಾನ್‌ಖಾನ್ ವರದಿಗಳಿಂದ ಪಡೆಯಲಾಗಿದೆ.

ಎರಡನೆಯ ಉದ್ದೇಶ ಬೆಳಗಾವಿ ನಗರದ ಸಾಮಾನ್ಯ ಮತ್ತು ಶೈಕ್ಷಣಿಕ ಪರಿಸರವನ್ನು ಅಭ್ಯಾಸಿಸುವುದು. ಈ ಉದ್ದೇಶಕ್ಕೆ ಸಂಬಂಧಪಟ್ಟಂತೆ ಬೆಳಗಾವಿ ನಗರದ ಚಾರಿತ್ರಿಕ, ಭೌಗೋಳಿಕ, ಸಂಪನ್ಮೂಲಗಳು, ಆರ್ಥಿಕ ಸ್ಥಿತಿಗಳು ಮತ್ತು ಆಡಳಿತಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪, ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ, ಬೆಳಗಾವಿ ಜಿಲ್ಲೆಯ ಜನಗಣತಿ, ಪುಸ್ತಕಗಳಿಂದ ಮಾಹಿತಿ ಪಡೆಯಲಾಗಿದೆ. ಭಾರತ ಮತ್ತು ಕರ್ನಾಟಕದ ಮುಸ್ಲಿಮರ ಜಾತಿವ್ಯವಸ್ಥೆ, ಅನಭಿವೃದ್ಧಿಯ ಕಾರಣಗಳು, ಶೈಕ್ಷಣಿಕ ಸ್ಥಿತಿ, ಆರ್ಥಿಕ ಸ್ಥಿತಿ, ಉದ್ಯೋಗದ ಪ್ರಾತಿನಿಧ್ಯ, ಕೈಗಾರಿಕಾ ಪ್ರಾತಿನಿಧ್ಯ, ಆರೋಗ್ಯದ ಸ್ಥಿತಿಗಳು, ವಸತಿ ಮತ್ತು ಮೂಲಭೂತ ಸೌಕರ್ಯಗಳ ಸ್ಥಿತಿಗಳನ್ನು ಚರ್ಚಿಸಲು ಸಾಚಾರ್ ವರದಿ, ರೆಹಮಾನ್‌ಖಾನ್ ವರದಿ ಮತ್ತು ಇತರೆ ಅನುಷಂಗಿಕ ಮೂಲಗಳಿಂದ ಮಾಹಿತಿಯನ್ನು ಪಡೆಯಲಾಗಿದೆ. ಅಧ್ಯಯನವನ್ನು ಬೆಳಗಾವಿ ನಗರದಲ್ಲಿ ಕೈಗೊಳ್ಳಲಾಗಿದೆ. ಬೆಳಗಾವಿ ನಗರದ ಪ್ರಾಥಮಿಕ ಶಾಲೆಗಳನ್ನು ಒಳ್ಳೆಯ ಮತ್ತು ಪರಿಣಾಮಕಾರಿ ಆಡಳಿತ ನಿರ್ವಹಣೆಗಾಗಿ ೧೪ ಕ್ಲಸ್ಟರ್‌ಗಳನ್ನಾಗಿ ವಿಗಂಡಿಸಿಕೊಳ್ಳಲಾಗಿದೆ. ಪ್ರತಿ ಕ್ಲಸ್ಟರ್‌ನಲ್ಲಿ ನಿಗದಿತ ಸಂಖ್ಯೆಯ ಶಾಲೆಗಳಿವೆ. ಶಾಲೆಗಳ ಸಂಖ್ಯೆಗಳು ಪ್ರತಿಯೊಂದು ಕ್ಲಸ್ಟರ್‌ನಲ್ಲಿ ಸಮಾನವಾಗಿಲ್ಲ. ಮುಸ್ಲಿಂ ಬಾಲಕಿಯರು ಹೆಚ್ಚಾಗಿ ವ್ಯಾಸಾಂಗ ಮಾಡುತ್ತಿರುವ ಶಾಲೆಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ವಿಭಿನ್ನ ಫಲಿತಗಳನ್ನು ಕಂಡುಕೊಳ್ಳುವ ಉದ್ದೇಶದಿಂದ ಸರಳ ಯಾದೃಚ್ಚಿಕ ವಿಧಾನದ ಮೂಲಕ ಮೂಲಭೂತ ಸೌಕರ್ಯಗಳನ್ನು ಆಧರಿಸಿ, ಉತ್ತಮ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳು, ಮಧ್ಯಮ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳು ಮತ್ತು ಕನಿಷ್ಠ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳನ್ನು ಒಳಗೊಂಡಂತೆ ಬೆಳಗಾವಿ ನಗರದ ಒಟ್ಟು ೧೪ ಕ್ಲಸ್ಟರ್‌ಗಳಿಂದ ೩ ಕ್ಲಸ್ಟರ್‌ಗಳನ್ನು ಆಯ್ದುಕೊಳ್ಳಲಾಗಿದೆ. ಅವುಗಳಲ್ಲಿ ಕ್ಯಾಂಪ್ ಕ್ಲಸ್ಟರನ್ನು ಉತ್ತಮ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳೆಂದು, ವಡಾಗಾಂವ್ ಕ್ಲಸ್ಟರನ್ನು ಮಧ್ಯಮ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳೆಂದು ಮತ್ತು ಗಾಂಧಿನಗರ ಕ್ಲಸ್ಟರನ ಕನಿಷ್ಠ ಮಟ್ಟದ ಪ್ರದೇಶದಲ್ಲಿರುವ ಶಾಲೆಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಉತ್ತಮ ಮಟ್ಟದ ಕ್ಯಾಂಪ್ ಕ್ಲಸ್ಟರ್‌ನಿಂದ ಸೇಂಟ್ ಜೋಸೆಫ್ ಇಂಗ್ಲೀಷ್ ಮಾಧ್ಯಮ ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆಯನ್ನು ಆಯ್ದುಕೊಳ್ಳಲಾಗಿದೆ. ಈ ಶಾಲೆಯಲ್ಲಿ ಒಟ್ಟು ೨೦೧ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದಾರೆ. ಸರಳ ಯಾದೃಚ್ಚಿಕ ವಿಧಾನದ ಮೂಲಕ ಸೇಂಟ್ ಜೋಸೆಫ್ ಶಾಲೆಯ ೨೦ ಬಾಲಕಿಯರನ್ನು ಮತ್ತು ಅದೇ ಕ್ಲಸ್ಟರ್‌ನ ಇಸ್ಲಾಮಿಯ ಉರ್ದು ಹಿರಿಯ ಪ್ರಾಥಮಿಕ ಶಾಲೆಯ

ಒಟ್ಟು ೧೪೬ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದು, ಅದರಲ್ಲಿ ೧೫ ಬಾಲಕಿಯರನ್ನು, ಆಯ್ದುಕೊಳ್ಳಲಾಗಿದೆ.

ಅದೇ ಪ್ರಕಾರ ಮಧ್ಯಮ ಮಟ್ಟದ ವಡಾಗಾಂವ್ ಕ್ಲಸ್ಟರ್‌ನಿಂದ ಗೊಮ್ಮಟೇಶ್ವರ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ಕೇವಲ ೧೭ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದು, ಅವರಲ್ಲಿ ಒಟ್ಟು ೧೭ ಬಾಲಕಿಯರನ್ನು ಮತ್ತು ಅದೇ ಕ್ಲಸ್ಟರ್‌ನ ಕರ್ನಾಟಕ ಲಾ ಸೊಸೈಟಿಯ ಶಾಲೆಯಲ್ಲಿ ಒಟ್ಟು ಕೇವಲ ೧೦ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದು ಅವರಲ್ಲಿ ಒಟ್ಟು ೧೦ ಬಾಲಕಿಯರನ್ನು ಆಯ್ದುಕೊಳ್ಳಲಾಗಿದೆ. ಕನಿಷ್ಠ ಮಟ್ಟದ ಗಾಂಧಿನಗರ ಕ್ಲಸ್ಟರ್‌ನಿಂದ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ೯೬ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದು ಅವರಲ್ಲಿ ೧೦ ಬಾಲಕಿಯರನ್ನು ಮತ್ತು ಅದೇ ಕ್ಲಸ್ಟರ್‌ನ ಉರ್ದು ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ೪೫೩ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದು ಅವರಲ್ಲಿ ೪೫ ಬಾಲಕಿಯರನ್ನು ಆಯ್ದುಕೊಳ್ಳಲಾಗಿದೆ. ಈ ಆರು ಶಾಲೆಗಳಲ್ಲಿ ಕನ್ನಡ ಮಾಧ್ಯಮ, ಇಂಗ್ಲೀಷ್ ಮಾಧ್ಯಮ ಮತ್ತು ಉರ್ದು ಮಾಧ್ಯಮ ಶಾಲೆಗಳು ಹಾಗೂ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಶಾಲೆಗಳು ಒಳಗೊಳ್ಳುವಂತೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕ್ಷೇತ್ರ ಅಧ್ಯಯನಕ್ಕೆ ಆಯ್ದುಕೊಂಡ ಒಟ್ಟು ೬ ಶಾಲೆಗಳಲ್ಲಿ ಒಟ್ಟು ೯೨೩ ಮುಸ್ಲಿಂ ಬಾಲಕಿಯರು ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಪ್ರತಿಯೊಂದು ಶಾಲೆಗಳಿಂದ ಒಟ್ಟು ಸಂಖ್ಯೆಯಲ್ಲಿ ಶೇಕಡಾ ೧೦ ರಂತೆ ೧೧೭ ಮುಸ್ಲಿಂ ಬಾಲಕಿಯರನ್ನು ಗುರುತಿಸಿ, ಆ ಬಾಲಕಿಯರ ೧೧೭ ಪೋಷಕರನ್ನು  ಅಧ್ಯಯನದ ನಮೂನೆಯಾಗಿ ಪರಿಗಣಿಸಿ ಸಂದರ್ಶಿಸಲಾಗಿದೆ. ಆದರೆ ಈ ನಿಯಮವನ್ನು ಮಧ್ಯಮ ಮಟ್ಟದ ವಡಾಗಾಂವ್ ಶಾಲೆಗಳಿಗೆ ಅನ್ವಯಿಸಿಲ್ಲ. ಸಮೀಕ್ಷೆಗೆ ಒಳಪಡಿಸಲಾದ ಕೆಲವು ಶಾಲೆಗಳಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ದಾಖಲಾತಿಯು ಅತೀ ಕಡಿಮೆ ಇದ್ದುದರಿಂದ ಶೇ ೧೦ ರ ನಿಯಮವನ್ನು ಅನ್ವಯಿಸಿಕೊಳ್ಳದೇ ಎಲ್ಲ ಬಾಲಕಿಯರ ಪೋಷಕರನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ.. ಗೊಮ್ಮಟೇಶ್ವರ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ೧೭ ಮುಸ್ಲಿಂ ಬಾಲಕಿಯರು ಮತ್ತು ಕರ್ನಾಟಕ ಲಾ ಸೊಸೈಟಿಯ ಶಾಲೆಯಲ್ಲಿ ೧೦ ಮುಸ್ಲಿಂ ಬಾಲಕಿಯರು ವ್ಯಾಸಂಗ ಮಾಡುತ್ತಿರುವುದರಿಂದ ಎಲ್ಲಾ ಬಾಲಕಿಯರ ಪೋಷಕರನ್ನು ಸಂದರ್ಶನಕ್ಕೆ ಆಯ್ದುಕೊಳ್ಳಲಾಗಿದೆ. ಹೀಗೆ ಒಟ್ಟು ೧೧೭ ಮುಸ್ಲಿಂ ಬಾಲಕಿಯರ ಪೋಷಕರನ್ನು ಪೂರ್ವರಚಿತ ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಮುಸ್ಲಿಂ ಬಾಲಕಿಯರ  ಶಿಕ್ಷಣಕ್ಕಿರುವ  ಅಡ್ಡಿ ಆತಂಕಗಳ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಪೂರ್ವರಚಿತ ಪ್ರಶ್ನಾವಳಿಯ ಮೂಲಕ ಕುಟುಂಬಗಳನ್ನು ಸಂದರ್ಶಿಸಿ ಕುಟುಂಬದ ಸ್ವರೂಪ, ಸಾಕ್ಷರತೆ, ಸಾಕ್ಷರತೆಯಲ್ಲಿ ಪುರುಷ–ಮಹಿಳೆ ಅಸಮಾನತೆ,

ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳ ವಲಯವಾರು ಉದ್ಯೋಗ, ದುಡಿಮೆಗಾರರು ಮತ್ತು ನಿರುದ್ಯೋಗಿಗಳು, ಕುಟುಂಬದ ಒಟ್ಟು ಆದಾಯ, ಮುಂತಾದ ಸಂಗತಿಗಳಿಗೆ ಕ್ಷೇತ್ರ ಕಾರ್ಯದಲ್ಲಿ ಕುಟುಂಬಗಳಿಂದ ಮಾಹಿತಿ ಪಡೆಯಲಾಗಿದೆ. ಇದರ ಜೊತೆಗೆ ಒಟ್ಟು ಬೆಳಗಾವಿ ನಗರ ಎದುರಿಸುತ್ತಿರುವ ಮೂಲಭೂತ ಸೌಕರ್ಯಗಳ ಕೊರತೆಯನ್ನು ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ-೨೦೧೪ ರಿಂದ ಮಾಹಿತಿ ಪಡೆಯಲಾಗಿದೆ. ಪ್ರಶ್ನಾವಳಿಯನ್ನು ಆಧರಿಸಿ, ಸಂದರ್ಶನದ ಮೂಲಕ ಬೆಳಗಾವಿ ನಗರದ ಮುಸ್ಲಿಮರು ಎದುರಿಸುತ್ತಿರುವ ಮೂಲಭೂತ ಸೌಕರ್ಯಗಳ ಕೊರತೆಯನ್ನು ಗುರುತಿಸಲಾಗಿದೆ.

ಮೂರನೆಯ ಉದ್ದೇಶ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥಮಾಡಿಕೊಳ್ಳುವುದಾಗಿದೆ. ಈ ಉದ್ದೇಶಕ್ಕೆ ಸಂಬಂಧಪಟ್ಟಂತೆ ಬೆಳಗಾವಿಯಲ್ಲಿ ಮರಾಠಿ ಭಾಷೆಯ ಪ್ರಾಬಲ್ಯ, ಕನ್ನಡದ ಸ್ಥಿತಿ, ಗಡಿನಾಡು ಕನ್ನಡಿಗರ ಶಿಕ್ಷಣ ಉತ್ತಮಪಡಿಸಲು ವಿವಿಧ ಆಯೋಗಗಳ ಶಿಫಾರಸ್ಸುಗಳನ್ನು ಪರಿಶೀಲಿಸಲು ವಿವಿಧ ಆಕಾರ ಗ್ರಂಥಗಳಿಂದ ಮಾಹಿತಿ ಪಡೆಯಲಾಗಿದೆ. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆ, ಬೆಳಗಾವಿ ನಗರದ ಸಾಕ್ಷರತೆ, ಶಾಲೆಗಳ ಪ್ರಮಾಣ, ಮಾಧ್ಯಮವಾರು ಶಾಲೆಗಳು, ಸಮುದಾಯವಾರು ದಾಖಲಾತಿ, ಶಿಕ್ಷಕರ ಅನುಪಾತ ಮತ್ತು ಶಾಲೆಗಳ ಮೂಲಭೂತ ಸೌಕರ್ಯಗಳ ವಿವರ ಮತ್ತು ಅಲ್ಪಸಂಖ್ಯಾತರು, ವಿಶೇಷವಾಗಿ ಉರ್ದು ಶಾಲೆಗಳು, ವಸತಿ ನಿಲಯಗಳು ಮತ್ತು ದಾಖಲಾತಿ ಪ್ರಮಾಣದ ಮಾಹಿತಿಗಳನ್ನು ಕರ್ನಾಟಕ ಸರ್ವಶಿಕ್ಷಣ ಅಭಿಯಾನ ವರದಿ-೨೦೧೪-೧೫, ಡಿಐಎಸ್ಇ ವರದಿ-೨೦೦೯-೧೦, ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ವಿಶ್ಲೇಷಣಾ ವರದಿಗಳಿಂದ ಪಡೆಯಲಾಗಿದೆ. ಇಸ್ಲಾಂ ಧರ್ಮ ಮಹಿಳಾ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ತಪ್ಪು ಗ್ರಹಿಕೆ ಇದೆ. ಇದರ ಬಗ್ಗೆ ಮುಸ್ಲಿಂ ಬಾಲಕಿಯರ ನಿಲುವುಗಳನ್ನು ಕಂಡುಕೊಳ್ಳಲಾಗಿದೆ. ಒಟ್ಟು ೧೧೭ ಕುಟುಂಬಗಳ ನಮೂನೆಯಲ್ಲಿ ಪ್ರಾಥಮಿಕ ಶಾಲೆಯನ್ನು ಪೂರೈಸಿ ನಂತರದ ವಿವಿಧ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ೬೮ ಬಾಲಕಿಯರು ಕಂಡುಬರುತ್ತಾರೆ. ಪೂರ್ವರಚಿತ ಪ್ರಶ್ನಾವಳಿಯ ಮೂಲಕ ೬೮ ಬಾಲಕಿಯರನ್ನು ಸಂದರ್ಶಿಸಿ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಅವರ ನಿಲುವುಗಳನ್ನು ಕಂಡುಕೊಳ್ಳಲಾಗಿದೆ. ೧೧೭ ಕುಟುಂಬಗಳನ್ನು ಸಂದರ್ಶಿಸಿ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಅವರ ನಿಲುವುಗಳು ಮತ್ತು ಶೈಕ್ಷಣಿಕ ನೆಲೆಯಲ್ಲಿ ಪೋಷಕರ ನಿಲುವುಗಳನ್ನು ಸಂಗ್ರಹಿಸಲಾಗಿದೆ.

ನಾಲ್ಕನೆಯ ಉದ್ದೇಶ ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಪ್ರಭಾವಿಸುವ ಅಂಶಗಳನ್ನು ಮೌಲ್ಯಮಾಪನ ಮಾಡುವುದು.ಈ ಉದ್ದೇಶಕ್ಕೆ ಸಂಬಂಧಪಟ್ಟಂತೆ ಶಿಕ್ಷಣದ ಮಹತ್ವ, ಸಂವಿಧಾನದಲ್ಲಿ ಶಿಕ್ಷಣದ ಪ್ರಸ್ತಾವನೆ, ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಸಂಬಂಧಿಸಿದ ಚರ್ಚೆಗಳು, ಇಸ್ಲಾಂ ಮತ್ತು ಮಹಿಳಾ ಶಿಕ್ಷಣದ ನಡುವಿನ ಸಂಬಂಧಗಳ ಚರ್ಚೆಗಳನ್ನು ವಿವಿಧ ಅನುಷಂಗಿಕ

ಮೂಲಗಳಿಂದ ಪಡೆದುಕೊಳ್ಳಲಾಗಿದೆ. ಇಸ್ಲಾಂ ಧರ್ಮ ಮತ್ತು ಮಹಿಳಾ ಶಿಕ್ಷಣದ ನಡುವಿನ ಸಂಬಂಧಗಳ ಅರಿವನ್ನು ಒಟ್ಟು ನಮೂನೆಯ ೧೧೭ ಪೋಷಕರನ್ನು ಪೂರ್ವರಚಿತ ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಕಂಡುಕೊಳ್ಳಲಾಗಿದೆ ಇದರ ಜೊತೆಗೆ ಶೈಕ್ಷಣಿಕ ನೆಲೆಯಲ್ಲಿ ಪೋಷಕರ ಅರಿವನ್ನು ಕಂಡುಕೊಳ್ಳಲಾಗಿದೆ. ಒಟ್ಟು ಪೋಷಕರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ ವಿವಿಧ ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ೬೮ ಬಾಲಕಿಯರನ್ನು ಪೂರ್ವರಚಿತ ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಮುಸ್ಲಿಂ ಬಾಲಕಿಯರ ಶಿಕ್ಷಣದ ಮೇಲೆ ಕುಟುಂಬದ ಮುಖ್ಯಸ್ಥನ ಶಿಕ್ಷಣದ ಪ್ರಭಾವ, ವೃತ್ತಿಯ ಪ್ರಭಾವ ಮತ್ತು ಜೀವನ ಮಟ್ಟದ ಪ್ರಭಾವವನ್ನು ಕಂಡುಕೊಳ್ಳಲಾಗಿದೆ. ಇದರ ಜೊತೆಗೆ ಮುಸ್ಲಿಂ ಬಾಲಕಿಯರ ಶಿಕ್ಷಣದ ಸ್ಫೂರ್ತಿಯ ನೆಲೆಗಳನ್ನು ಸಂದರ್ಶನದ ಮೂಲಕ ಕಂಡುಕೊಳ್ಳಲಾಗಿದೆ.

ಅಧ್ಯಯನದ ಐದನೆಯ ಉದ್ದೇಶ ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಉತ್ತಮಪಡಿಸುವಲ್ಲಿ ಸರ್ಕಾರಗಳು ಮತ್ತು ನಾಗರೀಕ ಸಮಾಜಗಳ ಪಾತ್ರವನ್ನು ವಿಮರ್ಶಿಸುವದು. ಈ ಅಧ್ಯಾಯಕ್ಕೆ ಸಂಬಂಧಪಟ್ಟಂತೆ ನಾಗರೀಕ ಸಮಾಜಗಳ ಪರಿಕಲ್ಪನೆ, ಭಾರತದಲ್ಲಿ ನಾಗರೀಕ ಸಮಾಜದ ಹುಟ್ಟು ಮತ್ತು ಬೆಳವಣಿಗೆಯನ್ನು ವಿವಿಧ ವ್ಯಾಖ್ಯಾನಗಳು ಮತ್ತು ಚರ್ಚೆಗಳ ಮೂಲಕ ಪರಿಭಾವಿಸಿಕೊಳ್ಳಲಾಗಿದೆ. ಅನುಷಂಗಿಕ ಮಾಹಿತಿಯ ಮೂಲಕ ಸರ್ಕಾರಗಳು ಜಾರಿಗೊಳಿಸಿರುವ ಕಾರ್ಯಕ್ರಮಗಳನ್ನು ಮತ್ತು ಕಾರ್ಯಕ್ರಮಗಳ ಶಿಕ್ಷಣದಲ್ಲಾದ ಗುಣಾತ್ಮಕ ಮತ್ತು ಪರಿಮಾಣಾತ್ಮಕ ಬದಲಾವಣೆಗಳನ್ನು ಗುರುತಿಸಲಾಗಿದೆ. ಮುಸ್ಲಿಮರ ಶೈಕ್ಷಣಿಕ ಬೆಳವಣಿಗೆಗೆ ಸರ್ಕಾರಗಳು ಕೈಗೊಂಡಿರುವ ಶೈಕ್ಷಣಿಕ ಕಾರ್ಯಕ್ರಮಗಳನ್ನು ಸಾಚಾರ್ ವರದಿ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು, ಕರ್ನಾಟಕ ಸರ್ಕಾರ ಪ್ರಕಟಿಸಿರುವ ಕ್ರಿಯಾ ಯೋಜನೆಯಿಂದ ಮಾಹಿತಿಯನ್ನು ಪಡೆಯಲಾಗಿದೆ.ಬೆಳಗಾವಿ ನಗರದಲ್ಲಿ ೧೧ ನಾಗರೀಕ ಸಂಘಟನೆಗಳು ಕ್ರಿಯಾಶಿಲವಾಗಿವೆ. ೧೦ ವಿದ್ಯಾರ್ಥಿ ಸಂಘಟನೆಗಳು, ೨೫೦ ಶಾಲಾನಿರ್ವಹಣ ಸಮಿತಿಗಳಿವೆ ಇವುಗಳಲ್ಲಿ ವಿವಿಧ ಸಮುದಾಯದ ನಾಗರೀಕರು ಸದಸ್ಯರಾಗಿದ್ದಾರೆ. ಈ ಸಂಘಟನೆಗಳನ್ನು ಜಾತ್ಯಾತೀತ ನಾಗರೀಕ ಸಮಾಜಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಬೆಳಗಾವಿ ನಗರದಲ್ಲಿ ೯ ಮುಸ್ಲಿಂ ನಾಗರೀಕ ಸಂಘಟನೆಗಳು, ೭ ಮುಸ್ಲಿಂ ಧಾರ್ಮಿಕ ಸಂಘಟನೆಗಳು ಮತ್ತು ೭೮ ಮಸೀದಿ ನಿರ್ವಹಣಾ ಸಮಿತಿಗಳಿವೆ. ಇವುಗಳಲ್ಲಿ ಕೇವಲ ಮುಸ್ಲಿಮರು ಮಾತ್ರ ಸದಸ್ಯರಾಗಿದ್ದಾರೆ. ಅದ್ದರಿಂದ ಇವುಗಳನ್ನು ಧರ್ಮಾಧಾರಿತ ನಾಗರೀಕ ಸಮಾಜಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಬೆಳಗಾವಿ ನಗರದಲ್ಲಿ ಕ್ರಿಯಾಶೀಲವಾಗಿರುವ ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಂಘಟನೆಗಳು ಸಂಖ್ಯೆಯಲ್ಲಿ ಸಮಾನವಾಗಿಲ್ಲ. ಕೆಲವು ನಾಗರೀಕ ಸಮಾಜಗಳು ಸಂಖ್ಯೆಯಲ್ಲಿ ಹೆಚ್ಚಾಗಿದ್ದರೆ ಇನ್ನೂ ಕೆಲವು ನಾಗರೀಕ ಸಮಾಜಗಳು ಸಂಖ್ಯೆಯಲ್ಲಿ ಕಡಿಮೆ ಇವೆ. ಅದ್ದರಿಂದ

ಲಭ್ಯವಿರುವ ನಾಗರೀಕ ಸಮಾಜಗಳ ಪಟ್ಟಿಯನ್ನು ತಯಾರಿಸಿ ಸರಳ ಯಾದೃಚ್ಛಿಕ ವಿಧಾನದ ಮೂಲಕ ಎಲ್ಲಾ ನಾಗರೀಕ ಸಮಾಜಗಳಿಂದ ಸಮಾನವಾಗಿ ತಲಾ ಮೂರು ನಾಗರೀಕ ಸಮಾಜಗಳನ್ನು ಆಯ್ದುಕೊಳ್ಳಲಾಗಿದೆ. ಇದರ ಪ್ರಕಾರ ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಮೂರು ನಾಗರೀಕ ಸಂಘಟನೆಗಳು, ಮೂರು ವಿದ್ಯಾರ್ಥಿ ಸಂಘಟನೆಗಳು ಮತ್ತು ಮೂರು ಶಾಲಾ ನಿರ್ವಹಣಾ ಸಮಿತಿಗಳನ್ನು ಆಯ್ದುಕೊಳ್ಳಲಾಗಿದೆ. ಅದೇ ಪ್ರಕಾರ ಧರ್ಮಾಧಾರಿತ ನಾಗರೀಕ ಸಮಾಜಗಳಿಂದ ಮೂರು ಮುಸ್ಲಿಂ ನಾಗರೀಕ ಸಂಘಟನೆಗಳು, ಮೂರು ಮುಸ್ಲಿಂ ಧಾರ್ಮಿಕ ಸಂಘಟನೆಗಳು ಮತ್ತು ಮೂರು ಮಸೀದಿ ನಿರ್ವಹಣಾ ಸಮಿತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗಾಗಿ ನಾಗರೀಕ ಸಮಾಜಗಳ ಆಯ್ಕೆಯಲ್ಲಿ ಶೇ.೧೦ ರಷ್ಟು ನಮೂನೆ ಆಯ್ಕೆಯ ವಿಧಾನವನ್ನು ಅನುಸರಿಸಿಲ್ಲ. ನಾಗರೀಕ ಸಮಾಜಗಳ ಸಂಖ್ಯೆಗಳಂತೆಯೇ ನಾಗರೀಕ ಸಮಾಜದಲ್ಲಿರುವ ಪದಾಧಿಕಾರಿಗಳು ಮತ್ತು ಸದಸ್ಯರ ಸಂಖ್ಯೆ ಸಮಾನವಾಗಿಲ್ಲ ಅದ್ದರಿಂದ ಪ್ರತಿಯೊಂದು ನಾಗರೀಕ ಸಮಾಜದಿಂದ ಸಮಾನವಾಗಿ ೧೫ ಪದಾಧಿಕಾರಿಗಳಂತೆ ಆಯ್ಕೆ ಮಾಡಿಕೊಂಡು ಒಟ್ಟು ೬ ನಾಗರೀಕ ಸಮಾಜಗಳ ಒಟ್ಟು ೯೦ ಪದಾಧಿಕಾರಿಗಳನ್ನು ಪೂರ್ವರಚಿತ ಪ್ರಶ್ನಾವಳಿಯ ಮೂಲಕ ವಿವಿಧ ಸರ್ಕಾರಗಳು ಅಲ್ಪಸಂಖ್ಯಾತರು, ವಿಶೇಷವಾಗಿ ಮುಸ್ಲಿಮರ ಶಿಕ್ಷಣಕ್ಕಾಗಿ ಜಾರಿಗೊಳಿಸಿರುವ ಕಾರ್ಯಕ್ರಮಗಳ ಅರಿವಿನ ಮಟ್ಟವನ್ನು ಪರೀಕ್ಷಿಸಲಾಗಿದೆ ಜಾತ್ಯಾತೀತ ನಾಗರೀಕ ಸಮಾಜಗಳು ಮುಸ್ಲಿಮರ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳನ್ನು ಹಾಗೂ ಸಮಾಜೋ–ಆರ್ಥಿಕ ಅನನ್ಯತೆಗಳನ್ನು ಜಾತ್ಯಾತೀತ ಮತ್ತು ಧರ್ಮಧಾರಿತ ನಾಗರೀಕ ಸಮಾಜಗಳು ಹೇಗೆ ಗ್ರಹಿಸುತ್ತಾರೆ ಎಂಬುದನ್ನು ಮತ್ತು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳನ್ನು ಹೇಗೆ ಗುರುತಿಸುತ್ತಾರೆ ಮತ್ತು ಸಮಸ್ಯೆಗಳ ಪರಿಹಾರವನ್ನು ಯಾವ ವಿಧಾನಗಳ ಮೂಲಕ ಕಂಡುಕೊಳ್ಳುತ್ತಾರೆ ಎಂಬುದನ್ನು ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ.

ಆರನೆಯ ಅಧ್ಯಾಯದಲ್ಲಿ ಒಟ್ಟಾರೆ ಅಧ್ಯಯನ ಕಂಡುಕೊಂಡಿರುವ ಫಲಿತಗಳನ್ನು ಚರ್ಚಿಸಿ ಮುಸ್ಲಿಂ ಮಹಿಳೆಯರ ಶಿಕ್ಷಣದ ಸುಧಾರಣೆಗೆ ಪರಿಹಾರೋಪಾಯಗಳನ್ನು ಸೂಚಿಸಲಾಗಿದೆ. ಅಂತಿಮವಾಗಿ ಸಮರೋಪವನ್ನು ನೀಡಲಾಗಿದೆ.

## ೫. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ದೇಶದ ಮತ್ತು ಕರ್ನಾಟಕದ ಮುಸ್ಲಿಮರ ಸಮಾಜೋ–ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಚರ್ಚಿಸುತ್ತಾ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿಗಳ ವಿವಿಧ ಆಯಾಮಗಳ ಒಳನೋಟಗಳ ಮೇಲೆ ಬೆಳಕು ಚೆಲ್ಲುತ್ತದೆ. ಒಂದು ಶೈಕ್ಷಣಿಕ ಪರಿಸರವು ವಿವಿಧ ಸಮುದಾಯಗಳ ಮೇಲೆ ಸಕಾರಾತ್ಮಕ ಪರಿಣಾಮ ಬೀರುತ್ತದೆ ಎಂದು

ಭಾವಿಸಲಾಗುತ್ತದೆ. ಪ್ರಸ್ತುತ ಅಧ್ಯಯನವು ಬೆಳಗಾವಿ ನಗರದ ಶೈಕ್ಷಣಿಕ ಪರಿಸರವನ್ನು ವಿಶ್ಲೇಷಿಸುವ ಜೊತೆಗೆ ಬೆಳಗಾವಿ ನಗರದ ಮುಸ್ಲಿಮರ ಶೈಕ್ಷಣಿಕ ಪರಿಸರದ ಸ್ಥಿತಿ ಮತ್ತು ಮಿತಿಗಳನ್ನು ಗುರುತಿಸುತ್ತದೆ. ಮುಸ್ಲಿಮರು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಭಿನ್ನವಾದ ಸಮುದಾಯವಾಗಿದ್ದು, ಅವರ ಶಿಕ್ಷಣಕ್ಕೆ ಇರುವ ವಿವಿಧ ಅಡ್ಡಿಗಳನ್ನು ಗುರುತಿಸುತ್ತದೆ. ವಿವಿಧ ಹಂತಗಳ ಉನ್ನತ ಶಿಕ್ಷಣ ಪಡೆಯುವಲ್ಲಿ ನಿರತರಾಗಿರುವ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣದ ಅಪೇಕ್ಷೆ, ಉನ್ನತ ಶಿಕ್ಷಣದ ಬಗ್ಗೆ ಅವರ ನಿಲುವುಗಳು ಮತ್ತು ಉದ್ಯೋಗ ಹಾಗೂ ಮನೆಯ ಹೊರಗಡೆ ದುಡಿಮೆಯ ಬಗ್ಗೆ ಮುಸ್ಲಿಂ ಮಹಿಳೆಯರ ಮನೋಭಾವನೆಗಳ ಮೇಲೆ ಪ್ರಸ್ತುತ ಅಧ್ಯಯನವು ಬೆಳಕು ಚಲ್ಲುತ್ತದೆ. ಸರ್ಕಾರಗಳು ಮಾತ್ರ ಮುಸ್ಲಿಮರ ಶೈಕ್ಷಣಿಕ ಸ್ಥಿತಿಯನ್ನು ಉತ್ತಮಗೊಳಿಸುವುದು ಸಾಧ್ಯವಾಗುವುದಿಲ್ಲ. ಇದರ ಜೊತೆಗೆ ನಾಗರೀಕ ಸಮಾಜಗಳು ಸಕ್ರೀಯವಾಗಿ ಭಾಗವಹಿಸಿದಾಗ ಮಾತ್ರ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಉತ್ತಮಗೊಳ್ಳುತ್ತದೆ ಎಂದು ವಾದಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರಗಳು ಕೈಗೊಂಡಿರುವ ಸುಧಾರಣೆಗಳು ಮತ್ತು ಬೆಳಗಾವಿ ನಗರದ ನಾಗರೀಕ ಸಮಾಜಗಳ ಪಾತ್ರದ ಮೇಲೆ ಬೆಳಕು ಚೆಲ್ಲುತ್ತದೆ. ಅಧ್ಯಯನವು ಮುಸ್ಲಿಮರ ವಿವಿಧ ಆಯಾಮಗಳನ್ನು ಚರ್ಚಿಸಿ, ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆಗೆ ಇರುವ ಸಮಸ್ಯೆಗಳನ್ನು ಗುರುತಿಸಿ, ಇದರ ಜೊತೆಗೆ ಅವರ ಶೈಕ್ಷಣಿಕ ಸುಧಾರಣೆಗೆ ಸೂಕ್ತ ಶಿಫಾರಸ್ಸುಗಳನ್ನು ನೀಡುತ್ತದೆ.

## ೬. ಅಧ್ಯಯನದ ಮಿತಿ

ಪ್ರಸ್ತುತ ಅಧ್ಯಯನವು ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣದಲ್ಲಿ ಎದುರಿಸುತ್ತಿರುವ ಸಂಕೀರ್ಣ ಸಮಸ್ಯೆಗಳ ಗುರುತಿಸುವಿಕೆಗೆ ಸೀಮಿತಗೊಂಡಿದೆ. ಅಧ್ಯಯನವು ಕನ್ನಡ, ಇಂಗ್ಲೀಷ್ ಮತ್ತು ಉರ್ದು ಮಾಧ್ಯಮದ ಶಾಲೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದೆ. ಅದರೆ ಮದರಸಗಳಲ್ಲಿ ಕನಿಷ್ಠ ಸಂಖ್ಯೆಯ ಮುಸ್ಲಿಂ ಬಾಲಕರು ಮಾತ್ರ ವ್ಯಾಸಾಂಗ ಮಾಡುತ್ತಿರುವುದರಿಂದ ಅವರನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಲ್ಲ. ಅಧ್ಯಯನವು ಕೇವಲ ಜಾತ್ಯಾತೀತ ಶಿಕ್ಷಣ ಪಡೆಯುತ್ತಿರುವ ಮುಸ್ಲಿಂ ಬಾಲಕಿಯರನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದೆ. ಅಧ್ಯಯನವು ಕೇವಲ ಬೆಳಗಾವಿ ನಗರಕ್ಕೆ ಸೀಮಿತವಾಗಿರುವುದರಿಂದ, ಸಮಗ್ರ ಕರ್ನಾಟಕದ ನಗರವಾಸಿ ಮುಸ್ಲಿಮರ ಶೈಕ್ಷಣಿಕ ಚಿತ್ರಣ ನೀಡುವುದಿಲ್ಲ. ಪುರುಷ–ಮಹಿಳೆಯರು, ನಗರ ಮತ್ತು ಗ್ರಾಮೀಣ ಭಾಗಗಳು ಮುಂತಾದ ತೌಲನಿಕ ಅಧ್ಯಯನ ಕೈಗೊಳ್ಳುವುದು ಸಮಾಜ ವಿಜ್ಞಾನಗಳ ಮಾದರಿಯಾಗಿದೆ. ಈ ವಿಧಾನವನ್ನು ಅಧ್ಯಯನದಲ್ಲಿ ಅನುಸರಿಸಿಲ್ಲ. ಜೊತೆಗೆ ಇತರೆ ಸಮುದಾಯಗಳೊಂದಿಗೆ ಮುಸ್ಲಿಮರನ್ನು ಹೋಲಿಸುವ ಕ್ರಮವನ್ನು ಅಳವಡಿಸಿಕೊಂಡಿಲ್ಲ.

## ೭. ಅಧ್ಯಯನದ ವಿನ್ಯಾಸ

ಪ್ರಸ್ತಾವನೆ ಮತ್ತು ಸಮಾರೋಪಗಳನ್ನು ಒಳಗೊಂಡಂತೆ ಈ ಮಹಾ ಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಹೊಂದಿದೆ. ಈ ಅಧ್ಯಾಯಗಳು ಮತ್ತು ಅವುಗಳು ಒಳಗೊಂಡಿರುವ ವಿಷಯಗಳ ವಿವರಗಳನ್ನು ಇಲ್ಲಿ ಸಂಕ್ಷೀಪ್ತವಾಗಿ ನೀಡಲಾಗಿದೆ.

### ಪ್ರಸ್ತಾವನೆ

ಈ ಭಾಗವು ಪ್ರಸ್ತಾವನೆ, ವಿವಿಧ ಅಧ್ಯಯನಗಳ ವಿಶ್ಲೇಷಣಾತ್ಮಕ ವಿಮರ್ಶೆ, ಸಮಸ್ಯೀಕರಣ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ, ಅಧ್ಯಯನದ ಮಹತ್ವ ಮತ್ತು ಅಧ್ಯಯನದ ಮಿತಿಗಳನ್ನು ಒಳಗೊಂಡಿದೆ.

### ಅಧ್ಯಾಯ: ೧

ಈ ಅಧ್ಯಾಯದಲ್ಲಿ ವರಮಾನ ವರ್ಧನೆ ಮತ್ತು ಮಾನಾವಾಭಿವೃದ್ಧಿ ವರ್ಧನೆ ಚರ್ಚೆಗಳು, ಅಭಿವೃದ್ಧಿಯ ಲಿಂಗಸ್ಪಂದಿ ಆಯಾಮಗಳು, ಅಭಿವೃದ್ಧಿ ಮತ್ತು ಮಹಿಳೆ, ಮಹಿಳೆಯರ ಸಂಗೋಪನಾ ದುಡಿಮೆ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರವನ್ನು ಚರ್ಚಿಸಿದೆ. ಇದರ ಜೊತೆಗೆ ಶಿಕ್ಷಣ ಮತ್ತು ಸಬಲೀಕರಣದ ಸಂಬಂಧಗಳು, ಭಾರತದ ಸಂವಿಧಾನದಲ್ಲಿರುವ ಮಹಿಳಾ ಅಭಿವೃದ್ಧಿಯ ಆಶಯಗಳು, ಅಲ್ಪಸಂಖ್ಯಾತರ ಶಿಕ್ಷಣ ಮತ್ತು ಸಾಂಸ್ಕೃತಿಕ ರಕ್ಷಣೆಯನ್ನು ವಿಶ್ಲೇಷಿಸಲಾಗಿದೆ. ಇವುಗಳೊಂದಿಗೆ ಭಾರತದಲ್ಲಿ ಮುಸ್ಲಿಮರ ಹಿಂದುಳಿಯುವಿಕೆಗೆ ಕಾರಣಗಳು ಹಾಗೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳನ್ನು ವಿಶ್ಲೇಷಿಸಲಾಗಿದೆ.

### ಅಧ್ಯಾಯ: ೨

ಈ ಅಧ್ಯಾಯಊಲ್ಲಿ ಬೆಳಗಾವಿ ಜಿಲ್ಲೆಯ ಸಾಮಾನ್ಯ ಪರಿಸರವನ್ನು ಅಭ್ಯಾಸಿಸಲಾಗಿದೆ. ಬೆಳಗಾವಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಭೌಗೋಳಿಕ ಪರಿಸರ, ನೈಸರ್ಗಿಕ ಸಂಪನ್ಮೂಲಗಳು, ಆರ್ಥಿಕ ಪರಿಸ್ಥಿತಿ, ಆಡಳಿತ, ಮತ್ತು ಜನಸಂಖ್ಯೆಯನ್ನು ಪರಿಚಯಿಸಲಾಗಿದೆ. ಇದರ ಜೊತೆಗೆ ಭಾರತ ಮತ್ತು ಕರ್ನಾಟಕದ ಮುಸ್ಲಿಮರಲ್ಲಿರುವ ಜಾತಿ ವ್ಯವಸ್ಥೆ, ಶ್ರೇಣೀಕರಣ, ಆರ್ಥಿಕ ಮತ್ತು ಶೈಕ್ಷಣಿಕ ಹಿಂದುಳಿಯುವಿಕೆ, ಮುಂತಾದವುಗಳನ್ನು ಪರಿಚಯಿಸಿಕೊಳ್ಳಲಾಗಿದೆ.ಮುಸ್ಲಿಮರ ಉದ್ಯೋಗದ ಪ್ರಾತಿನಿಧ್ಯ, ಆರೋಗ್ಯ ಮತ್ತು ಮೂಲಭೂತ ಸೌಕರ್ಯಗಳನ್ನು ಚರ್ಚಿಸಲಾಗಿದೆ. ಇದರ ಜೊತೆಗೆ ಅಧ್ಯಯನ ಕ್ಷೇತ್ರವಾದ ಬೆಳಗಾವಿ ಮುಸ್ಲಿಮರ ಸಾಮಾಜಿಕ ಸ್ಥಿತಿ, ವಲಯವಾರು ಉದ್ಯೋಗ, ನಿರುದ್ಯೋಗ, ಆದಾಯ ಮತ್ತು ಮೂಲಭೂತ ಸೌಕರ್ಯಗಳ ಕೊರತೆಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ: ೩

ಈ ಅಧ್ಯಾಯದಲ್ಲಿ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥಮಾಡಿಕೊಳ್ಳಲಾಗಿದೆ. ಬೆಳಗಾವಿ ಜಿಲ್ಲೆಯ ಮರಾಠಿ ಪ್ರಾಭಲ್ಯ, ಕನ್ನಡಕ್ಕೆ ವೀರಶೈವ ಮಠಗಳ ಕೊಡುಗೆ, ಬ್ರಿಟೀಷರ ಕೊಡುಗೆಯನ್ನು ಚರ್ಚಿಸಲಾಗಿದೆ. ಇದರೊಂದಿಗೆ ಗಡಿನಾಡು ಭಾಗಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ವಿವಿಧ ಆಯೋಗಗಳು ನೀಡಿರುವ ಶಿಫಾರಸ್ಸುಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸೂಚಿಗಳಾದ ಸಾಕ್ಷರತೆ, ಶಾಲೆಗಳು, ದಾಖಲಾತಿ ಪ್ರಮಾಣ, ಮಾನವ ಸಂಪನ್ಮೂಲ ಮತ್ತು ಶಾಲೆಗಳಲ್ಲಿರುವ ಮೂಲಭೂತ ಸೌಕರ್ಯಗಳ ಲಭ್ಯತೆಗಳನ್ನು ಚರ್ಚಿಸಲಾಗಿದೆ. ಬೆಳಗಾವಿ ನಗರದ ಮುಸ್ಲಿಮರಿಗೆ ಸಂಬಂಧಿಸಿದ ವಸತಿ ನಿಲಯಗಳು, ಉರ್ದು ಶಾಲೆಗಳ ಪ್ರಮಾಣವನ್ನು ಚರ್ಚಿಲಾಗಿದೆ. ಇದರೊಂದಿಗೆ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರದಲ್ಲಿ ಶಿಕ್ಷಣ ಮತ್ತು ಮಹಿಳೆಯರ ನಡುವಿನ ತಪ್ಪು ಗ್ರಹಿಕೆಗಳು, ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ನಿಲುವುಗಳನ್ನು ಮತ್ತು ಬಾಲಕಿಯರ ಶಿಕ್ಷಣದ ಬಗ್ಗೆ ಪೋಷಕರ ನಿಲುವುಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ: ೪

ಈ ಅಧ್ಯಾಯದಲ್ಲಿ ಹೆಣ್ಣು ಮಕ್ಕಳ ಶಿಕ್ಷಣದ ಮೇಲೆ ಪ್ರಭಾವ ಬೀರುವ ಅಂಶಗಳನ್ನು ಚರ್ಚಿಸಲಾಗಿದೆ. ಮಹಿಳಾ ಶಿಕ್ಷಣ ಮತ್ತು ಸಬಲೀಕರಣದ ಸಂಬಂಧಗಳು, ಸಂವಿಧಾನದಲ್ಲಿ ಶಿಕ್ಷಣದ ಪ್ರಸ್ತಾವನೆ, ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ, ಮಹಿಳಾ ಶಿಕ್ಷಣ ಮತ್ತು ಇಸ್ಲಾಂ ಧರ್ಮದ ನಡುವಿನ ಸಂಬಂಧದ ಬಗ್ಗೆ ಪೋಷಕರ ಅರಿವು ಚರ್ಚಿಸಲಾಗಿದೆ. ಇದರ ಜೊತೆಗೆ ಮುಸ್ಲಿಂ ಬಾಲಕಿಯರ ಶಿಕ್ಷಣದ ಮೇಲೆ ಪೋಷಕರ ಶಿಕ್ಷಣ ವೃತ್ತಿ, ಜೀವನ ಮಟ್ಟಹಾಗೂ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣಕ್ಕೆ ಇರುವ ಅಡ್ಡಿಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ: ೫

ಈ ಅಧ್ಯಾಯದಲ್ಲಿ ಮುಸ್ಲಿಂ ಮಹಿಳೆಯರ ಶಿಕ್ಷಣದಲ್ಲಿ ಸರ್ಕಾರಗಳು ಮತ್ತು ನಾಗರಿಕ ಸಮಾಜಗಳ ಪಾತ್ರವನ್ನು ವಿಶ್ಲೇಷಿಸಲಾಗಿದೆ. ಸರ್ಕಾರಗಳ ಜವಾಬ್ದಾರಿ, ನಾಗರೀಕ ಸಮಾಜಗಳ ಪರಿಕಲ್ಪನೆ, ಸಾರ್ವತ್ರಿಕ ಶಿಕ್ಷಣಕ್ಕಾಗಿ ಸರ್ಕಾರಗಳ ಪ್ರಮಾಣ, ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದ ವರದಿಗಳು ಮತ್ತು ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗೆ ಕರ್ನಾಟಕ ಸರ್ಕಾರ ಕೈಗೊಂಡ ಕ್ರಮಗಳನ್ನು ಚರ್ಚಿಸಲಾಗಿದೆ. ಇವುಗಳೊಂದಿಗೆ ನಾಗರೀಕ ಸಮಾಜಗಳ ಅರಿವಿನ ಮಟ್ಟ, ಮುಸ್ಲಿಮರ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜಗಳ ಗ್ರಹಿಕೆಗಳು, ಜಾತ್ಯಾತೀತ ಮತ್ತು

ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಗುರುತಿಸುವಿಕೆ ಮತ್ತು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಅನುಸರಿಸುವ ವಿವಿಧ ಮಾರ್ಗಗಳನ್ನು ಚರ್ಚಿಸಲಾಗಿದೆ.

**ಅಧ್ಯಾಯ: ೬**

ಈ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ಮೂರು ಭಾಗಗಳಲ್ಲಿ ಮಂಡಿಸಲಾಗಿದೆ. ಮೊದಲನೆ ಭಾಗದಲ್ಲಿ ಐದು ಅಧ್ಯಾಯಗಳ ಫಲಿತಗಳನ್ನು ನೀಡಲಾಗಿದೆ. ಎರಡನೆ ಭಾಗದಲ್ಲಿ ಮುಸ್ಲಿಂ ಮಹಿಳೆಯರ ಶಿಕ್ಷಣದ ಸುಧಾರಣೆಗೆ ಕೈಗೊಳ್ಳಬೇಕಾದ ಕ್ರಮಗಳನ್ನು ಶಿಫಾರಸ್ಸು ಮಾಡಲಾಗಿದೆ. ಮೂರನೆಯ ಭಾಗದಲ್ಲಿ ಮುಸ್ಲಿಂ ಸಮುದಾಯ ಹೆಣ್ಣು ಮಕ್ಕಳ ಶಿಕ್ಷಣದ ಅಭಿವೃದ್ಧಿಗೆ ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ಚರ್ಚಿಸಲಾಗಿದೆ.

**ಉಪಸಂಹಾರ**

ಈ ಭಾಗದಲ್ಲಿ ಒಟ್ಟಾರೆ ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ ಮತ್ತು ಅಭಿವೃದ್ಧಿ ಸಂಬಂಧದ ಸಾರಾಂಶವನ್ನು ನೀಡಲಾಗಿದೆ.

**ಪರಾಮರ್ಶನ ಗ್ರಂಥಗಳು**

೧. ಅನುರಾಧ ರಾಮನ್, "ಎಜುಕೇಟಿಂಗ್ ಎ ನೇಷನ್ ಡ್ರಾಪ್‌ಔಟ್ ರೇಟ್ ಫಾರ್ ಗರ್ಲ್ಸ್ ರಿಲೇಟಿವ್ಲಿ ಹೈಯರ್ ಓಯಿಂಗ್ ಟು ಚಾಯ್ಸ್‌ಸ್ ಪೇರೆಂಟ್ಸ್ ಅಂಡ್ ಟೀಚರ್ಸ್ ಮೇಕ್", *ದಿ ಹಿಂದು*, ಶನಿವಾರ, ೧೭ ನೇ ಡಿಸೆಂಬರ್, ೨೦೧೬, ಪು.ಸಂ ೭

೨. ಮೊಹಮದ್ ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು, "ಕಂಟೆಕ್ಸ್‌ವಲ್ ಇಂಟರ್-ಇಂಟ್ರಾ ರಿಲೀಜಿಯಸ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್",*ಇಕನಾಮಿಕ ಅಂಡ್ ಪಲಿಟಿಕಲ್ ವೀಕ್ಲಿ*, ವಾ.ಸಂ.೪೮, ಸಂ.೮, ಮೇ ೫, ೨೦೦೭, ಪು-೧೬೧೩-೧೬೨೨)

೩. ಹುಸೇನ್ ಎಂ,"ಪರ್ಸ್‌ಪೆಕ್ಟಿವ್ ಆನ್ ಉರ್ದು ಲಾಂಗ್ವೇಜ್ ಅಂಡ್ ಎಜುಕೇಷನ್ ಇನ್ ಇಂಡಿಯ",*ಸೋಶಿಯಲ್ ಸೈಂಟಿಸ್ಟ್*, ವಾ.ಸ.೨, ಸಂ ೨, ಜುಲೈ-ಡಿಸೆಂಬರ್-೨೦೧೦, ಪು-೧೨೬-೧೪೩

೪. ಸುನೀತಾ ಕಿಷೋರ್ ಅಂಡ್ ಕಮಲಾ ಗುಪ್ತ, "ವಿಮನ್ ಎಂಪವರ್ಮೆಂಟ್ ಇನ್ ಇಂಡಿಯ ಅಂಡ್ ಇಟ್ಸ್ ಸ್ಟೇಟಸ್ ಎವಿಡೆನ್ಸ್ ಫ್ರಂ ಎನ್‌ಎಫ್‌ಹೆಚ್‌ಎಸ್",*ಇಕನಾಮಿಕ ಅಂಡ್*

*ಪೊಲಿಟಿಕಲ್ ವೀಕ್ಲಿ*, ವಾ.ಸಂ, ೩೯ ಸಂ.೭, ೨೦೦೪, ಪು.೬೯೪-೭೧೨, ಮತ್ತು ಪ್ರೀತ್ ರುಸ್ತಗಿ, "ಸಿಗ್ನಿಫಿಕೆನ್ಸ್ ಆಫ್ ಜೆಂಡರ್ ರಿಲೇಟೆಡ್ ಡೆವಲಪ್‌ಮೆಂಟ್ ಇಂಡಿಕೇಟರ್ಸ್: ಎನ್ ಎನಾಲಿಸಿಸ್ ಆಫ್ ಇಂಡಿಯನ್ ಸ್ಟೇಟ್ಸ್", *ಇಂಡಿಯನ್ ಜರ್ನಲ್ ಆಫ್ ಜೆಂಡರ್ ಸ್ಟಡಿಸ್*, ನ್ಯೂಡೆಲ್ಲಿ, ಸೇಜ್ ಪಬ್ಲಿಕೇಷನ್ಸ್, ೨೦೦೦, ಪು.೨೯೧-೩೪೩, ಮತ್ತು ಮೀನಾಚಾರ್ಯ ಅಂಡ್ ಪುಷ್ಪ ಫಿಮ್ಮೈರ್, "ಜೇಂಡರ್ ಇಂಡಿಕೇಟರ್ಸ್ ಆಫ್ ಇಕ್ವಾಲಿಟಿ, ಇಕ್ಲೂಷನ್ ಅಂಡ್ ಪವರ್ಟಿ ರಿಡಕ್ಷನ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ವಾ ಸಂ, ೪೦ ಸಂ.೪೪, ೨೦೦೫, ೪೫ ಪು.೪೭೧೯-೪೨೨೭

೫. ಡಾ. ನಜೀರುದೀನ್, "ಮುಸ್ಲಿಂ ಮೈನಾರಿಟಿ ಎಕ್ಸ್‌ಕ್ಲೂಜನ್ ಅಂಡ್ ಡೆವಲಪ್‌ಮೆಂಟ್ ಇಶ್ಯೂಸ್ : ನೀಡ್ ಫಾರ್ ಇನ್‌ಕ್ಲೂಜಿವ್ ಪಾಲಿಸಿ",*ಇಂಟರ್ ನ್ಯಾಷನಲ್ ಜರ್ನಲ್ ಆಫ್ ಮಲ್ಟಿಡಿಸಿಪ್ಲಿನರಿ ರೀಸರ್ಚ್*, ವಾ.ಸಂ ೨, ಸಂಚಿಕೆ ೧, ೨೦೧೨, ಪು.೩೯೫-೪೦೧

೬. ಮುಷುರುಲ್ ಹಸನ್, *ಮುಸ್ಲಿಂ ಇನ್ ಸೆಕ್ಯುಲರ್ ಇಂಡಿಯಾ: ಪ್ರಾಬ್ಲಂಸ್ ಅಂಡ್ ಪರ್ಸ್‌ಪೆಕ್ಟೀವ್ಸ್ ಇನ್ ಎಜ್ಯುಕೇಶನ್*, ನ್ಯೂಡೆಲ್ಲಿ, ಅಕಾಡೆಮಿ ಆಫ್ ಥರ್ಡ್ ವರ್ಡ್ ಸ್ಟಡೀಸ್, ಜಾಮೀಯಾ ಮಿಲಿಯಾ, ೨೦೦೩. ಪು.ಸಂ೨೫-೪೫

೭. ಫಯಾಜ್ ಅಹಮದ್ ಭಟ್ ಫೌಜಿಯಾ ಖುರ್ಶೀದ್, ನಜ್ಮುಲ್ ಹುಸೇನ್,"ಇಸ್ಲಾಂ, ಜೆಂಡರ್ ಅಂಡ್ ಎಜುಕೇಷನ್ : ಎ ಕೇಸ್ ಸ್ಟಡಿ ಆಫ್ ಜಮ್ಮು-ಕಾಶ್ಮೀರ",*ಏಷ್ಯಾ ಪೆಸಿಫಿಕ್ ಜರ್ನಲ್ ಆಫ್ ಸೋಶಿಯಲ್ ಸೈನ್ಸ್‌ಸ್*, ವಾ.ಸಂ.೩ ಸಂ.೨, ಜುಲೈ-ಡಿಸೆಂಬರ್, ೨೦೧೧, ಪು.೧೫೯-೧೮೭

೮. ಮೊಮ್ಮಿನ್ ಜಾನ್, "ವುಮನ್", *ಎಜ್ಯುಕೇಶನ್ ಅಂಡ್ ಸೋಶಿಯಲ್ ಚೆಂಜ್ ಇನ್-ಕಶ್ಮೀರ್* ವಾ.ಸಂಖ್ಯೆ ೨, ಪುಟ ಸಂಖ್ಯೆ ೧೩-೨೧

೯. ನಸ್ರೀನ್ ಪರ್ವೀನ್, *ಸ್ಟಡಿ ಅಫ್ ಆ್ಯಟಿಟ್ಯೂಸ್ಸ್ ಟುವರ್ಡ್ ಹೈಯರ್* ಎಜುಕೇಷನ್ *ಆಫ್ ಮುಸ್ಲಿಂ ಗರ್ಲ್ ಸ್ಟುಡೆಂಟ್ಸ್ ಅಂಡ್ ದೇರ್ ಪೇರೆಂಟ್ಸ್* ಎ.ಡೆಸರ್ಟೇಷನ್ ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ನ್ಯೂಡೆಲ್ಲಿ, ಜಾಮಿಯ ಮಿಲಿಯ ಇಸ್ಲಾಮಿಯ, ೧೯೯೯, ಪು.೧೦೫

೧೦. ಸುನೀತಾ ಚೂಗಾ, *ಎಜ್ಯುಕೇಶನಲ್ ಸ್ಟೇಟಸ್ ಆಫ್ ಚೆಲ್ಡರನ್ ಇನ್ ಹರ್ಬನ್ ಸ್ಲಂಸ್, ವಿಥ್ ರೆಫರೆನ್ಸ್ ಟೂ ಅವೆಲಬಲ್ ಎಜ್ಯುಕೇಶನಲ್ ಫಸಲಿಟಿಸ್:ಎ ಕೇಸ್ ಸ್ಟಡೀ ಆಫ್ ಸಂಜಯ್‌ಕಾಲೋನಿ ಆಫ್ ಓಕ್‌ಲಾ ಫೇಸ್‌ಗಿಗಿ*, ನ್ಯೂಡೆಲ್ಲಿ, ೨೦೦೦ ಪು.ಸಂ ೪೭-೬೩

೧೧. ಹೆಚ್.ಇ.ಎಂ. ಬೋರ್‌ಕರ್, *ಕಂಟೆಸ್ಟಿಂಗ್ ಡೈಲಮಾಸ್: ಮುಸ್ಲಿಂ ಐಡೆಂಟಿಟಿ ಅಂಡ್ ಎಜ್ಯುಕೇಶನ್*, ನ್ಯಾಷನಲ್ ಕ್ರೈ ರಿಸರ್ಚ್ ಫೆಲೋಷಿಪ್, ಕ್ರೈ ೨೦೧೧

೧೨. ಮಧುಸೂಧನ್ ಜೆ.ವಿ ಮತ್ತು ಜಿತೇಂದ್ರಕುಮಾರ್ ಸಿಂಗ್ ಮತ್ತು ಜಿತೇಂದ್ರ ಯಾದವ್,"ಟ್ರೆಂಡ್ಸ್ ಇನ್ ಸ್ಕೂಲಿಂಗ್ ಅಮಾಂಗ್ ಮುಸ್ಲಿಮ್ಸ್ ಅಂಡ್ ಹಿಂದೂಸ್ ಇನ್ ಇಂಡಿಯಾ", *ಏಷ್ಯಾ ಪೆಸಿಫಿಕ್ ಆಫ್ ಸೋಶಿಯಲ್ ಸೈನ್ಸ್*, ವಾ.ಸಂ.೨, ಸಂ.೨, ಜುಲೈ–ಡಿಸೆಂಬರ, ೨೦೧೦, ಪು.ಸಂ ೧೨೬–೧೪೩

೧೩. ಗುಲ್‌ಷನ್ ಜುಬೇರ್,"ಮೊಹಮ್ಮದ್ ಎಜ್ಯುಕೇಶನಲ್ ಕಾನ್ಫರೆನ್ಸ್ ಇಟ್ಸ್ ಇಂಪ್ಯಾಕ್ಸ್ ಆನ್ ದ ಡೆವೆಲೆಪ್‌ಮೆಂಟ್ ಆಫ್ ಮಾರ್ಡನ್ ಎಜ್ಯುಕೇಶನ್ ಫಾರ್ ಮುಸ್ಲಿಂ ಕಮ್ಯುನಿಟಿ ಇನ್ ರಾಜಸ್ತಾನ್ ಡ್ಯೂರಿಂಗ್ ಟ್ವೆಂಟಿಯತ್ ಸೆಂಚುರಿ", *ಜನರಲ್ ಆಫ್ ಹ್ಯೂಮ್ಯಾನಿಟಿಸ್ ಅಂಡ್ ಸೋಷಿಯಲ್ ಸೈನ್ಸ್*, ವಾ.ನಂ.೧೯, ಸ–೫, ಮೇ. ೨೦೧೪ ಪು.ಸಂ–೭೪–೭೮.

೧೪. ಇಸ್ತಿಯಾಕ್ ಡ್ಯಾನಿಷ್, "ರಿಸ್ಟಾರ್ಟಿಂಗ್ ಡ್ರಾಪ್‌ಔಟ್ ಮುಸ್ಲಿಂ ಗರ್ಲ್ಸ್ ಇನ್ ಎಜ್ಯುಕೇಷನ್", ಲಕ್ನೋ ಅಪ್ರಕಟಿತ ವಿಯೋಜಿತ ಕಾರ್ಯ ವರಧಿ, ಪ್ರಾಯೋಜಿತ ಯುನಿಸೆಫ್, ೨೦೦೪, ಪು.ಸಂ ೧೮೧

೧೫. ಇಮಾಮ್ ಪರ್ವಿನ್, "ಎಕ್ಸ್‌ಕ್ಲುಜನ್ ಆಫ್ ಮುಸ್ಲಿಂ ಗರ್ಲ್ಸ್ ಫ್ರಮ್ ಸ್ಕೂಲ್ ಎ ಪಾರ್ಟರಿಸ್ಪೆಟರಿ ಎನಾಲಿಸಿಸ್ ಇನ್ ದಿ ಡಿಸ್ಟ್ರಿಕ್ಟ್ ಆಫ್ ರಾಂಪುರ್", ಪ್ರಾಜೆಕ್ಟ್ ಸ್ಪಾನ್ಸರ್‌ಡ್ ಬೈ ಸ್ವ್ಕಯರ್, ಪು.ಸಂ ೩೧

೧೬. ಹೆಚ್.ವೈ ಸಿದ್ದೀಕಿ, *ಮುಸ್ಲಿಂ ವುಮೆನ್ ಇನ್ ಟ್ರಾನ್ಸ್‌ಷಿಷನ್ ಎ ಸೋಷಿಯಲ್ ಪ್ರೋಫೈಲ್*, ನ್ಯೂಡೆಲ್ಲಿ,ಹರ್ಮನಾ ಪಬ್ಲಿಕೇಷನ್ಸ್, ೧೯೮೭, ಪು.ಸಂ ೯೪

೧೭. ಅಜೀಮ್ ಖಾನ್, "ಸೋಷಿಯೊ ಎಕಾನಾಮಿಕ್ ಸ್ಟೇಟಸ್ ಆಫ್ ಮುಸ್ಲಿಂ ಇನ್ ವೆಸ್ಟರ್ನ್ ಯು.ಪಿ", *ದ ಇಂಡಿಯನ್ ಎಕಾನಾಮಿಕ್ ರಿವಿವ್ಯೂ*, ಲಕ್ನೋ, ವಾ.ಸಂ.೦೮, ಸಂ.೦೨, ಮೇ ೨೦೦೩, ಪು.ಸಂ ೭೯–೮೬

೧೮. ಮೃದುಲಾ ಗೋಯಲ್, *ಜಂಡರ್ ಬಯಾಸ್ ಅಂಡ್ ಎಕಾನಾಮಿಕ್ ಡೆವಲಪ್‌ಮೆಂಟ್ ಏತ್ ರೆಫರೆನ್ಸ್ ಟು ಫಿಮೆಲ್ ಎಜ್ಯುಕೇಶನ್*, ನ್ಯೂಡೆಲ್ಲಿ, ಮನೋಹರ್ ಪಬ್ಲಿಕೇಷನ್ಸ್, ೨೦೦೩, ಪು.ಸಂ ೧೧–೩೮

೧೯. ಸಜಿಹಾ ಹುಸೇನ್, "ಮಾಡರ್ನೈಜೇಷನ್ ಅಮಾಂಗ್ ಮುಸ್ಲಿಂ ವಿಮೆನ್ ಇನ್ ಇಂಡಿಯಾ:ಎ ಕೇಸ್ ಸ್ಟಡಿ ಆಫ್ ದರ್ಬಾಂಗ್ ಟೌನ್ ಇನ್ ನಾರ್ಥ್ ಬಿಹಾರ್", ಸೆಂಟರ್ ಫಾರ್ ಸ್ಟಡಿ ಆಫ್ ಸೋಶಿಯಲ್ ಸಿಸ್ಟಮ್, ನ್ಯೂಡೆಲ್ಲಿ, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ಪಿ.ಹೆಚ್.ಡಿ. ಮಹಾಪ್ರಬಂಧ, ೧೯೯೦, ಪು.೧೯

೨೦. ಮೊನಾಲಿಸ ಬಲ್, "ಇಕ್ವಾಲಿಟಿ ಅಂಡ್ ಎಕ್ಸಲನ್ಸ್ ಇನ್ ಹೈಯರ್ ಎಜ್ಯುಕೇಶನ್: ಎ ಕೇಸ್ ಸ್ಟಡೀ ಆಫ್. ಕನ್‌ವರ್ಜ್ವನ್ಸ್ ಇನ್ ಓರಿಸ್ಸಾ",*ಐಓಎಸ್‌ಆರ್ ಜರ್ನಲ್ ಆಫ್, ಎಕಾನಾಮಿಕ್ಸ್ ಅಂಡ್ ಫೈನಾನ್ಸ್,* ಐಎಸ್‌ಎಸ್‌ಎನ್ ೨೩೨೧-೫೯೩೩, ವಾ.ಸಂ.೫, ಸಂ.೨, ಸೆಪ್ಟೆಂಬರ್-ಅಕ್ಟೋಬರ್, ೨೦೧೪, ಪು.ಸ.೫೭-೬೧.

೨೧. ಜಾಗೃತಿ ರೇ, "ದ ಪ್ರಾಬ್ಲಂಸ್ ಆಫ್ ಗರ್ಲ್ಸ್ ಎಜ್ಯುಕೇಶನ್ ಇನ್ ಡೆಂಕನ್‌ನಾಲ್ ಡಿಸ್ಟಿಕ್ ಓರಿಸ್ಸಾ", ನ್ಯೂಡೆಲ್ಲಿ , ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೨, ಪು.ಸಂ ೧೧-೨೩

೨೨. ರೋಖಿಯಾ ಬೇಗಂ, "ಎಜುಕೇಷನ್ ಅಂಡ್ ಮುಸ್ಲಿಂ ವುಮೆನ್ ಇನ್ ರೂರಲ್ ವೆಸ್ಟ ಬೆಂಗಾಲ್ ಇನ್" ಸಿದೀಖಿ.ಎಂ.ಕೆ.ಎ (ಸಂ) "ಮುಸ್ಲಿಂ ಇನ್ ಫ್ರೀ ಇಂಡಿಯ: ದೇರ್ ಸೋಶಿಯಲ್ ಪ್ರೊಫೈಲ್ ಅಂಡ್ ಪ್ರಾಬ್ಲೆಮ್ಸ್", ನ್ಯೂಡೆಲ್ಲಿ , ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೮ ಪು ೩೬-೪೮)

೨೩. ಷೇಕ್‌ರಹೀಂ ಮಂಡಲ್, *ಎಜ್ಯುಕೇಷನ್ ಸ್ಟೇಟ್ಸ್ ಆಫ್ ಮುಸ್ಲಿಂ: ಪ್ರಾಬ್ಲಂಮ್ಸ್ ಫ್ರಾಸ್ಪೆಕ್ಟ್ಸ್, ಅಂಡ್ ಪ್ರಯಾರಿಟಿಸ್*, ನ್ಯೂಡೆಲ್ಲಿ, ಎಂ ಸಿ ಮಿಥೆಲ್ ಇಂಟರ್ ಇಂಡಿಯಾ ಪಬ್ಲಿಕೇಷನ್ಸ್, ೧೯೯೭, ಪು.ಸಂ ೧೦೭-೧೩೪

೨೪. ಮೊಹಮದ್ ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು,"ಕಾಂಟೆಕ್ಚುವಲ್ ಇಂಟರ್, ಇಂಟ್ರಾ ರಿಲೀಜಿಯನ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು-೧೬೧೬. ಮತ್ತು ಆಶೀಶ್ ಗಾರವರ್ ಎಂ.ಎಸ್. ೧೯೯೪, *ಇಂಡಿಯನ್ ಎಜುಕೇಷನ್ ಸ್ಟ್ರಕ್ಚರ್ ಅಂಡ್ ಪ್ರೊಸೆಸ್*, ನ್ಯೂಡೆಲ್ಲಿ, ರಾವತ್ ಪಬ್ಲಿಕೇಷನ್ಸ್, ೨೦೦೫, ಪು.ಸಂ ೬೮-೭೯

೨೫. ಕೆ.ಎನ್.ಜಹಾಂಗೀರ್, *ಮುಸ್ಲಿಂ ವುಮನ್ ಇನ್ ವೆಸ್ಟ್‌ಬೆಂಗಾಲ್, ಸೋಷಿಯೊ ಎಕಾನಾಮಿಕ್ ಆಂಡ್ ಪೊಲಿಟಿಕಲ್ ಸ್ಟೇಟಸ್*, ನ್ಯೂಡೆಲ್ಲಿ, ಮಿನೆರ್ವ ಅಸೋಷಿಯೆಟ್ ಪಬ್ಲಿಕೇಷನ್ಸ್, ೧೯೯೧, ಪು.ಸಂ ೧೫೨

೨೬. ಕಾಶಿಲಾಲ್ ವಾಸಿ, *ಎ ಸ್ಟಡೀ ಆಫ್ ಫ್ಯಾಕ್ಟರ್ಸ್ ಅಫೆಕ್ಟಿಂಗ್ ದ ಎಜ್ಯುಕೇಶನಲ್ ಡೆವೆಲಪ್‌ಮೆಂಟ್ ಆಫ್ ದಿ ಗರ್ಲ್ ಚೈಲ್ಡ್ ಅಂಡ್ ದೆರ್ ಟೀಚಿಂಗ್ ಲರ್ನಿಂಗ್ ಕಂಡಿಷನ್ಸ್ ಇನ್ ದ ಹಘೋಟ ಏರಯಾ*, ಕೋಟಾ, ಕೋಟಾ ಓಪನ್ ಯುನಿವರ್‌ಸಿಟಿ, ೨೦೦೩, ಪು.ಸಂ ೨೩–೪೫

೨೭. ಆಶೀಶ್ ಗಾರವರ್, *ಇಂಡಿಯನ್ ಎಜುಕೇಷನ್ ಸ್ಟ್ರಕ್ಚರ್ ಅಂಡ್ ಪ್ರೊಸೆಸ್*, ನ್ಯೂಡೆಲ್ಲಿ, ರಾವತ್ ಪಬ್ಲಿಕೇಷನ್ಸ್, ೨೦೦೫, ಪು.ಸಂ ೬೮–೭೯

೨೮. ಸೆಹರಾತುನ್ನಿಸಾ, "ಸೋಶಿಯೋ–ಇಕನಾಮಿಕ್ ಅಂಡ್ ಕಲ್ಚುರಲ್ ಬ್ಯಾರಿಯರ್ಸ್ ಇನ್ ದ ಎಜುಕೇಷನ್ ಆಫ್ ಮುಸ್ಲಿಂ ವಿಮೆನ್ ಇನ್ ದ ಸ್ಟೇಟ್ ಆಫ್ ಮಣಿಪೂರ್", ಪಿ.ಎಚ್.ಡಿ. ಮಹಾಪ್ರಬಂಧ, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಜಾಮಿಯಾ ಮಿಲಿಯಾ ಇಸ್ಲಾಮಿಯ, ನ್ಯೂಡೆಲ್ಲಿ, ೨೦೦೧, ಪು.೨೦೧

೨೯. ಅರ್.ಕೆ.ರಾವ್, *ವಿಮೆನ್ ಅಂಡ್ ಎಂಪವರ್‌ಮೆಂಟ್*, ನ್ಯೂಡೆಲ್ಲಿ, ಕಲ್ಪಾಜ್ ಪಬ್ಲಿಕೇಷನ್ಸ್, ಪು.ಸಂ ೪೫–೫೮

೩೦. ಜೋಯಾ ಹಸನ್ ಅಂಡ್ ರಿತು ಮೆನನ್, ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪ ಪು–೧೪೩

೩೧. ಡಾ. ಶಕೀಲ್ ಅಹಮದ್ ಮತ್ತು ಡಾ. ಮಲಿಕಾ ಮಿಸ್ತ್ರಿ, "ಮುಸ್ಲಿಂ ವುಮೆನ್ ಅಂಡ್ ಎಜುಕೇಷನ್", *ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾಮರ್ಸ್*,ವಾ.ಸಂ.೧ ಸಂ.೧ ಅಕ್ಟೋಬರ್ ೨೦೧೦, ಪು.ಸಂ ೧೩೯–೧೪೯

೩೨. ಪಿ.ಎಂ. ಕುಲಕರ್ಣಿ, "ಇಂಟರ್ ಸ್ಟೇಟ್ ವೇರಿಯೇಷನ್ ಇನ್ ಹ್ಯೂಮನ್ ಡೆವಲಪ್‌ಮೆಂಟ್, ಡಿಫರಡನ್‌ಶಿಯಲ್ಸ್ ಅಮಾಂಗ್ ಸೋಶಿಯಲ್ ಗ್ರೂಪ್ ಇನ್ ಇಂಡಿಯ", *ವರ್ಕಿಂಗ್ ಪೇಪರ್ ಸಿರೀಸ್ ನಂ.೫೦, ರೆಜಿಸ್ಟ್ರಾರ್ ಅಂಡ್ ಸೆಕ್ರೇಟರಿ, ನ್ಯಾಷನಲ್ ಕೌನ್ಸಿಲ್ ಫಾರ್ ಅಪ್ಲೈಡ್ ಇಕನಾಮಿಕ್ ರೀಸರ್ಚ್*, ನ್ಯೂಡೆಲ್ಲಿ, ೨೦೦೨, ಪು.ಸಂ ೧–೫೪

೩೩. ಮಂಗಳ ಡಿ. ಪಾಟೀಲ್, "ಎಜ್ಯುಕೇಶನಲ್ ಡೆವಲಪ್‌ಮೆಂಟ್ ಆಫ್ ಚೀಲ್ಡರನ್ ಇನ್ ಸ್ಲಂ ಏರಿಯಾಸ್: ಎ ಸ್ಟಡೀ ವಿಥ್ ಸ್ಪೆಷಲ್ ರೆಫರೆನ್ಸ್.೫ ಸ್ಲಂ ಏರಿಯಾಸ್ ಆಫ್ ಕೊಲ್ಲಾಪುರ ಸಿಟಿ", ೧೯೯೫, ಸೆಪ್ಟೆಂಬರ್, ವಾ.ಸಂ.೦೨ ಪು.ಸಂ. ೧೫೨

೩೪. ಎಂ.ಇಂದೂ ಕುಮಾರಿ, *ಎಜ್ಯುಕೇಶನ್ ಅಂಡ್ ಸೋಷಿಯಲ್ ಸ್ಟೇಟಸ್ ಆಫ್ ಮುಸ್ಲಿಂ ವುಮನ್ ಇನ್ ಕೇರಳ*, ನ್ಯೂಡೆಲ್ಲಿ, ಕ್ಲಾಸಿಕ್ ಪಬ್ಲಿಷರ್ಸ್, ೧೯೭೬, ಪು.ಸಂ ೮೮–೯೭

೩೫. ಸೈಯದ್ ಮೆಹದಿ ಹಸನ್, "ಮುಸ್ಲಿಂ ವುಮನ್ ಅಂಡ್ ಹೈಯರ್ ಎಜ್ಯುಕೇಷನ್:ಎ ಕೇಸ್ ಸ್ಟಡಿ ಆಫ್ ಹೈದ್ರಾಬಾದ್ ಇನ್ ಅಸ್ಗರ್ ಅಲೀ ಇಂಜಿನೇಯರ್(ಎಡಿಟ್ಸ್)ಪ್ರಾಬ್ಲಂಮ್ಸ್ ಆಫ್ ಮುಸ್ಲಿಂ ವುಮನ್ ಇನ್ ಇಂಡಿಯಾ ಹೈದ್ರಾಬಾದ್", ಓರಿಯಂಟ್ ಲಾಂಗ್ ಮ್ಯಾನ್, ೧೯೯೫ ಪು.ಸಂ ೧೨೫–೧೩೦

೩೬. ಕೆ.ಪದ್ಮಾವತಿ, *ಸೋಷಿಯಲ್ ಕನ್‌ಸ್ಟ್ರೇನ್ಸ್ ಆನ್ ವುಮನ್ ಎಜ್ಯುಕೇಶನ್ ಇನ್ ರೂರಲ್* ಆಂಧ್ರಪ್ರದೇಶ್, ಹೈದ್ರಾಬಾದ್, ಪೀಪಲ್ಸ್ ಪಬ್ಲಿಕೇಷನ್, *೨೦೦೦*, ಪು.ಸಂ ೧೦೫–೧೨೦

೩೭. ಆಶೀಶ್ ಗಾರವರ್,*ಇಂಡಿಯನ್ ಎಜುಕೇಷನ್: ಸ್ಟ್ರಕ್ಚರ್ ಅಂಡ್ ಪ್ರೋಸೆಸ್*, ನ್ಯೂಡೆಲ್ಲಿ, ರಾವತ್ ಪಬ್ಲಿಕೇಷನ್ಸ್, ೧೯೯೪, ಪು.ಸಂ ೧೬೭

೩೮. ಕೆ.ಕೃಷ್ಣಮ್ಮ, "ಸೋಶಿಯಲ್ ಅಂಡ್ ಎಕನಾಮಿಕ್ ಆಸ್‌ಪೆಕ್ಟ್ಸ್ ಆಫ್ ಫೀಮೆಲ್ ಎಜ್ಯುಕೇಶನ್: ಎ ಕೇಸ್ ಸ್ಟಡಿ ಆಫ್ ರಾಯಲಸೀಮಾ", *ಎಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ*, ಜುಲೈ ೧೯೯೧, ವಾ ನಂ.೦೨, ಸಂ,೧ ಪು.ಸಂ ೧೭–೨೧

೩೯. ಜೆಹರಾ ಜಬೀನ್, "ಇಸ್ಲಾಂ ಅಂಡ್ ವುಮೆನ್ಸ್ ಎಜುಕೇಷನ್ಸ್ ಇನ್ ಇಂಡಿಯಾ", *ಇಸ್ಲಾಂ ಅಂಡ್ ಮಾಡರ್ನ್ ಎಜ್*, ವಾ.ಸಂ ೩೪, ಸಂ.೦೨, ಮೇ.೨೦೦೩, ಪು.ಸಂ ೫೬–೬೧

೪೦. ಶಮೀಮ್ ಎಸ್ ಅಹಮ್ಮದ್ ಅಂಡ್ ಎಂ.ಕೆ ಚಕ್ರವರ್ತಿ, ಮುಸ್ಲಿಮ್ಸ್ ಇನ್ *ಫ್ರೀ ಇಂಡಿಯಾ: ದೇರ್ ಸೋಶಿಯಲ್ ಪ್ರೋಫೈಲ್ ಅಂಡ್* ಪ್ರಾಬ್ಲಮ್ಸ್, ನ್ಯೂಡೆಲ್ಲಿ, ಇನ್‌ಸ್ಟಿಟ್ಯೂಟ್ ಅಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೮, ಪು.ಸಂ ೨–೯

೪೧. ಆರೀಫ್ ಕುಲ್‌ಸುಮ್ ಜಾವಿದ್, "ಸೋಷಿಯಲ್ ಚೆಂಜ್ ಅಮಾಂಗ ದ ಮುಸ್ಲಿಮ್ಸ್ ಆಫ್ ಹೈದ್ರಾಬಾದ್", *ಜರ್ನಲ್ ಅಫ್ ಸೋಶಿಯಲ್ ಸೈನ್ಸ್‌ಸ್*, ಜೂನ್ ೧೯೮೮, ವಾ ಸಂಖ್ಯೆ.೦೨, ಸಂ.೦೧, ಪು.ಸಂ ೭೮–೮೪

೪೨. ರೆಹಮಾನ್‌ಖಾನ್, *ರಿಪೋರ್ಟ್ ಆಫ್ ಹೈಪವರ್ ಕಮಿಟಿ ಅನ್ ಸೋಶಿಯೊ–ಎಕನಾಮಿಕ್ ಆಂಡ್ ಎಜುಕೇಷನಲ್ ಸರ್ವೆ ಆಫ್ ರಿಲೀಜಿಯಸ್ ಮೈನಾರಿಟಿಸ್ ಇನ್ ಕರ್ನಾಟಕ*, ಬೆಂಗಳೂರು, ಕರ್ನಾಟಕ ಮೈನಾರಿಟಿ ಕಮಿಷನ್, ೧೯೯೪, ಪು.ಸಂ ೬೧

೪೩. ಎನ್.ಅಮಾನುಲ್ಲಾ, ಮುಸ್ಲಿಂ *ಗರ್ಲ್ಸ್ ಇನ್ ಎ ಫಸ್ಟ್ ಗ್ರೇಡ್* ಕಾಲೇಜು ಬೆಂಗಳೂರು ಯೂನಿವರ್ಸಿಟಿ, ಬೆಂಗಳೂರು, ೧೯೯೮, ಪು.ಸಂ.೧೩೨-೧೬೮

೪೪. ಜಿ.ಆಯಷಾ ಮತ್ತು ಹೇರೆನ್, *ವುಮನ್ ಇನ್ ಇಸ್ಲಾಂ, ಅಲಿಫರ್*, ಕ್ರೆಸೆಂಟ್ ಪಬ್ಲಿಕೇಷನ್ಸ್, ೧೯೭೭, ಪು.ಸಂ ೧೫

೪೫. ಗ್ಲೆನ್ ಅಂಡ್ ಹೈಲೆಂಡ್ ಮತ್ತು ಮುಲ್ಲರ್ ಮತ್ತು ಸ್ಯಾಡರ್ಸ್ ಡಬ್ಲ್ಯೂ, "ದ ಎಫೆಕ್ಟ್ ಆಫ್ ಎಥ್ನಿಸಿಟಿ ಅಂಡ್ ರಿಲಿಜಿಯನ್ ಆನ್ ಎಜುಕೇಷನಲ್ ಅಟೇನ್‌ಮೆಂಟ್", *ಎಕನಾಮಿಕ್ಸ್ ಆಫ್ ಎಜುಕೇಷನ್, ಎಜುಕೇಷನಲ್ ರಿವ್ಯೂ*, ವಾ.ಸ.೧೧ ಪು-೧೯-೩೫

೪೬. ಮಹಮ್ಮದ್ ಪೀರ್, *ರಿಲೀಜನ್ ಅಂಡ್ ಎಜ್ಯುಕೇಶನ್: ಎ ಕೇಸ್ ಸ್ಟಡೀ ಆಫ್ ಮುಸ್ಲಿಂ ಕಮ್ಯುನಿಟಿ ಇನ್ ಬೆಂಗಳೂರು ಸಿಟಿ*, ಡಿಪಾರ್ಟ್‌ಮೆಂಟ್ ಆಫ್ ಸೋಷಿಯಲಜಿ, ಬೆಂಗಳೂರು ೧೯೮೮, ಪು.ಸಂ ೩೨-೪೦

೪೭. ಶೈಕ್ಷಣಿಕ ವಿಶ್ಲೇಷಣಾ ವರದಿ ೨೦೧೦-೧೧, ಬೆಂಗಳೂರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ೨೦೧೧, ಪು.ಸಂ

೪೮. ಮುಚುಕುಂದ್ ದುಬೆ, "ಫ್ರೀ ಅಂಡ್ ಕಂಪಲ್ಸರಿ ಎಜುಕೇಷನ್, ಸ್ಟಿಲ್ ಎ ಲಾಂಗ್ ಡಿಸ್ಟೆನ್ಸ್ ಫಾರ್ ಇಂಡಿಯನ್ ಚಿಲ್ಡ್ರನ್", ಜೋಯಾ ಹಸನ್ ಅಂಡ್ ಮುಷಿರುಲ್ ಹಸನ್ (ಸಂ) *ಇಂಡಿಯಾ, ಸೋಶಿಯಲ್ ಡೆವಲಪ್‌ಮೆಂಟ್ ರಿಪೋರ್ಟ್ ೨೦೧೨,*"ಮೈನಾರಿಟಿ ಆಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್", ನ್ಯೂಡೆಲ್ಲಿ, ಅಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೨೦೧೩, ಪು.ಸಂ ೩೬-೪೪

೪೯. ಡಾ.ಉಮಾ ದಿಕ್ಷಿತ್, *ಎ ಸ್ಟಡೀ ಆನ್ ದ ಹೆಲ್ತ್ ಪ್ರೊಫಲ್ ಆಫ್, ಸ್ಕೂಲ್ ಡ್ರಾಪ್‌ಔಟ್ ಚಿಲ್ಡರನ್ಸ್ ಆಫ್ ಅರ್ಬನ್ ಸ್ಲಂ ಇನ್ ದ ಫೀಲ್ಡ್ ಪ್ರಾಕ್ಟೀಸ್ ಏರಿಯಾ ಆಫ್ ಅರ್ಬನ್ ಹೇಲ್ತ್ ಟ್ರೈನಿಂಗ್ಸ್ ಸೆಂಟರ್*, ಕಿಮ್ಸ್ ಹುಬ್ಬಳ್ಳಿ, ರಾಜೀವ್‌ಗಾಂಧಿ ಯುನಿವರ್ಸಿಟಿ ಆಫ್ ಹೆಲ್ತ್ ಸೈನ್ಸಸ್, ಕರ್ನಾಟಕ, ಬೆಂಗಳೂರು, ೨೦೧೦, ಪು.ಸಂ ೧೨-೨೩

೫೦. ಟಿ.ಎ. ಪ್ರಶಾಂತ್‌ಬಾಬು,*ಮಳವಳ್ಳಿ ತಾಲೂಕಿನ ಉರ್ದು ಶಾಲೆಗಳ ಅಧ್ಯಯನ ವರದಿ* ೨೦೦೮-೦೯, ಪು.ಸಂ ೨೫-೪೦

೫೧. ಕೆ ವೈಜಯಂತಿ, *ಎ ಸ್ಟಡಿ ಆಫ್ ಗವರ್ನಮೆಂಟ್ ಉರ್ದು ಪ್ರೈಮರಿ ಸ್ಕೂಲ್ ಇನ್ ಬೆಂಗಳೂರು*. ಬೆಂಗಳೂರು, *ಅಕ್ಷರ ಫೌಂಡೇಶನ್ಸ್*, ಜುಲೈ, ಕರ್ನಾಟಕ, ೨೦೧೧, ಪು.೫-೩೨

೫೨. ಹುಸೇನ್ ಎಂ. "ಫರ್‌ಸ್ಪಕ್ಟಿವ್ ಆನ್ ಉರ್ದು ಲ್ಯಾಂಗ್ವೇಜ್ ಅಂಡ್ ಎಜ್ಯುಕೇಷನ್ ಇನ್ ಇಂಡಿಯಾ", *ಸೋಷಿಯಲ್ ಸೈನ್‌ಟಿಸ್ಟ್*, ವಾ.ನಂ.೩೧, ೫.೬, ೨೦೦೩, ಪು. ೬೮-೭೩

೫೩. ಶ್ರೀಧರ ಬೋರಣ್ಣ, "ಡೆವಲಪ್‌ಮೆಂಟ್ ಆಫ್ ಎಜುಕೇಷನ್ ಇನ್ ಹೆಚ್.ಕೆ ರೀಜನ್: ಎ ಸ್ಟಡಿ, ಥೀಸಿಸ್ ಸಬ್‌ಮಿಟೆಡ್ ಟು ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್", ಗುಲ್ಬರ್ಗ ಯುನಿವರ್ಸಿಟಿ, ಗುಲ್ಬರ್ಗ, ೨೦೧೫, ಪು.ಸಂ ೫೨-೮೦

೫೪. ಮಲ್ಲಿಕಾರ್ಜುನಾ ನಾಗಶೆಟ್ಟಿ, "ಜಂಡರ್ ಪ್ರೊಫೈಲ್ ಆಫ್ ಪ್ರೊಫೆಷನಲ್ ಎಜ್ಯುಕೇಶನ್", *ಥೀಸಿಸ್ ಸಬ್ಮಿನಿಡೆಟ್ ಟು ಡಿಪಾರ್ಟ್‌ಮೆಂಟ್ ಆಫ್ ಎಜ್ಯುಕೇಶನ್* ಗುಲ್ಬರ್ಗಾ ಯೂನಿವರ್ಸಿಟಿ, ಗುಲ್ಬರ್ಗಾ, ೨೦೧೦, ಪು.ಸಂ ೧೫೮-೧೭೬

೫೫. ಮಲ್ಲಿಕಾರ್ಜುನ ಜಯಪ್ರಕಾಶ್, "ವಿಮೆನ್ ಅಂಡ್ ಡೆವೆಲಪ್‌ಮೆಂಟ್", ಎನ್ ಇಂಡಿಯನ್ *ಪರ್ಸ್‌ಪೆಕ್ಟಿವ್*, ವಿಮೆನ್ ಸ್ಟಡೀಸ್ ಗುಲ್ಬರ್ಗಾ ವಿ.ವಿ, ಗುಲ್ಬರ್ಗಾ, ಮಹಾ ಪ್ರಬಂಧ, ೨೦೦೮, ಪು.ಸಂ ೨೧೩-೨೫೮

೫೬. ಪ್ರಿಯದರ್ಶಿನಿ ಚಿಗರಿ ಮುಬಾಷಿ ಅಂಗೋಲಕರ್ ಮೃಣಾಲ್ ಶರ್ಮ, ವೈತ್‌ಫೇತ್ ಅಂಡ್ ಬಿ,ಆರ್. ಅಶೋಕ್ ಕುಮಾರ್, "ಡಿಟರ್ಮಿನೆಂಟ್ಸ್ ಆಫ್ ರೀಜನ್ಸ್ ಫಾರ್ ಸ್ಕೂಲ್ ಡ್ರಾಪ್‌ಔಟ್ಸ್ ಇನ್ ಅರ್ಬನ್ ಏರಿಯಾಸ್ ಆಫ್ ಬೆಳಗಾವಿ", *ಐಓಎಸ್‌ಆರ್ ಜರ್ನಲ್ ಆಫ್ ಹ್ಯುಮ್ಯಾನಿಟೀಸ್ ಅಂಡ್ ಸೋಶಿಯಲ್ ಸೈನ್ಸೆಸ್*, ವಾ.ಸಂ.೨೦, ಸಂ.೫, ಮೇ ೨೦೧೫, ಪು.೭೭-೯೭

## ಅಧ್ಯಾಯ: ಒಂದು

# ಅಭಿವೃದ್ಧಿ ಮತ್ತು ಮಹಿಳೆ

ಇಂದು ಜನರು ಅಭಿವೃದ್ಧಿಯ ಕೇಂದ್ರಬಿಂದುವಾಗಿದ್ದಾರೆ. ಏಕೆಂದರೆ ಜನರೇ ಒಂದು ದೇಶದ ನಿಜವಾದ ಸಂಪತ್ತು. ಅಭಿವೃದ್ಧಿಯ ನಿಜವಾದ ಉದ್ದೇಶವೆಂದರೆ ಜನರ ಅಭಿವೃದ್ಧಿ ಆಯ್ಕೆಯನ್ನು ಹೆಚ್ಚಿಸುವುದಾಗಿದೆ. ಆದಾಯವು ಈ ಆಯ್ಕೆಗಳಲ್ಲಿ ಒಂದು ಅತ್ಯಂತ ಪ್ರಮುಖವಾದ ಪರಿಪಕಲ್ಪನೆಯಾಗಿದೆ. ಆದರೇ ಆದಾಯವೇ ಮಾನವನ ಇರುವಿಕೆಯ ಒಟ್ಟಾರೆ ಗುರಿಯಲ್ಲ. ಆರೋಗ್ಯ, ಶಿಕ್ಷಣ, ಉತ್ತಮ ಭೌತಿಕ ಪರಿಸರ ಹಾಗೂ ಸ್ವಾತಂತ್ರ್ಯ ಮುಂತಾದ ಜೀವನದ ಅಂಶಗಳು ಆದಾಯದಷ್ಟೇ ಮಹತ್ವವನ್ನು ಪಡೆಯುತ್ತವೆ.ಅದ್ದರಿಂದ ಅಭಿವೃದ್ಧಿಯು ಒಂದು ಸಾಮಾಜಿಕ ವ್ಯವಸ್ಥೆಯ ಸಮಗ್ರ ಬದಲಾವಣೆಯನ್ನು ಪ್ರತಿನಿಧಿಸಬೇಕು. ಅದು ವ್ಯವಸ್ಥೆಯಲ್ಲಿನ ಸಾಮಾಜಿಕ ಗುಂಪುಗಳ ಮತ್ತು ಜನರ ಮೂಲಭೂತ ಆಶೋತ್ತರಗಳನ್ನು ಈಡೇರಿಸುವಂತಿರಬೇಕು.

ಅಭಿವೃದ್ಧಿ ಪ್ರಕ್ರಿಯೆಯುಮಹಿಳೆಯರು ಮತ್ತು ಪುರುಷರಿಬ್ಬರನ್ನು ಸಬಲೀಕರಣಗೊಳಿಸುವ ಆಶಯವನ್ನು ಹೊಂದಿರಬೇಕು. ಮೆಹಬೂಬ್ ಉಲ್ ಹಕ್ ವ್ಯಾಖ್ಯಾನಿಸುವ ಪ್ರಕಾರ ಸಬಲೀಕರಣವೆಂದರೆ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಜನರು ತಮ್ಮ ಜೀವನಕ್ಕೆ ಸಂಬಂಧಿಸಿದ ನಿರ್ಣಯಗಳನ್ನು ತಾವೇ ತೆಗೆದುಕೊಳ್ಳುವಂತಾಗಬೇಕು. ಅದಕ್ಕೆ ಅತ್ಯಧಿಕ ಆರ್ಥಿಕ ನಿಯಂತ್ರಣಗಳು ಮತ್ತು ನಿಯಮಾವಳಿಗಳಿಂದಮುಕ್ತವಾದ ಆರ್ಥಿಕ ವಾತಾವರಣ ಜನರಿಗೆ ದೊರೆಯುವಂತಾಗ ಬೇಕು.[1]ಸಬಲೀಕರಣವು ಲಿಂಗಾಧಾರಿತ ನೆಲೆಯಲ್ಲಿ ಮೊದಲ ಆದ್ಯತೆಯಾಗಿ ಕೈಗೊಳ್ಳುವ ಅಗತ್ಯವಿದೆ. ಇಂದು ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆ ತೀವ್ರವಾಗಿದೆ. ಮಹಿಳೆಯು ವಿವಿಧ ನೆಲೆಗಳಲ್ಲಿ ಅಸಮಾನತೆಯನ್ನು ಎದುರಿಸುತ್ತಿದ್ದಾಳೆ. ಮಹಿಳೆಯ ಮೊದಲ ಅಸಮಾನತೆಯ ನೆಲೆ ಅವಳ ದುಡಿಮೆ. ಮಹಿಳೆಯರ ದುಡಿಮೆಯನ್ನು ತಪ್ಪಾಗಿ ನಿರ್ವಚಿಸಿಕೊಂಡಿರುವುದರಿಂದ ಅವರ ದುಡಿಮೆ ಇಂದು ಅತ್ಯಂತ ಕೀಳು ಮಟ್ಟದಲ್ಲಿದೆ. ಹಾಗಾಗಿ ಅವರ ದುಡಿಮೆಯ ಫಲ ಪೂರ್ಣ ಪ್ರಮಾಣದಲ್ಲಿ ಸಮಾಜಕ್ಕೆ ಲಭ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಸಂಘಟಿತ ವಲಯಗಳಲ್ಲಿ ಅವರ ದುಡಿಮೆಯ ಸಹಭಾಗಿತ್ವ ಹೆಚ್ಚಾಗಬೇಕೆಂದು ಹೇಳಲಾಗುತ್ತಿದೆ. ಎರಡನೆಯದಾಗಿ, ಮಹಿಳೆಯರಲ್ಲಿ ಅತಿಯಾದ

ಅಪೌಷ್ಠಿಕತೆಯ ಸಮಸ್ಯೆ ಇದೆ.ಇದು ಮಹಿಳೆಯರಲ್ಲಿ ಅನಿಮೀಯ ಹೆಚ್ಚಾಗಲು ಕಾರಣವಾಗಿದ್ದು ಇದು ಲಿಂಗ ಸಂಬಂಧಿ ತಾರತಮ್ಯದ ಪ್ರತೀಕವಾಗಿದೆ. ಅಪೌಷ್ಠಿಕತೆಯನ್ನು ಹಿಡನ್ ಹಂಗರ್ ಎಂದು ವ್ಯಾಖ್ಯಾನಿಸಲಾಗುತ್ತಿದೆ. ನಮ್ಮಸಮಾಜದಲ್ಲಿ ಶೇ.೩೫ ರಿಂದ ಶೇ.೪೦ ರಷ್ಟು ಮಹಿಳೆಯರು ಅನಿಮೀಯದಿಂದ ಬಳಲುತ್ತಿದ್ದರೂ ಸರ್ಕಾರಗಳು ಸ್ಪಂದಿಸುತ್ತಿಲ್ಲ. ಮೂರನೆಯದಾಗಿ, ಸರ್ಕಾರಗಳು ಮಹಿಳೆಯರ ಆಸ್ತಿಯ ಹಕ್ಕಿಗಾಗಿ ಕಾನೂನುಗಳನ್ನು ರೂಪಿಸಿದೆ ಆದರೆ ವಾಸ್ತವಿಕವಾಗಿ ಮಹಿಳೆಯರು ಆಸ್ತಿಯ ಹಕ್ಕನ್ನು ಅನುಭವಿಸುತ್ತಿಲ್ಲ. ಈ ಸಂಗತಿಯಲ್ಲಿ ಶಾಸನಗಳಿಗಿಂತ ಮಹಿಳೆಯರ ಧಾರಣಾ ಶಕ್ತಿ ಹೆಚ್ಚಿಸುವ ಅಗತ್ಯವಿದೆ. ನಾಲ್ಕನೆಯದಾಗಿ, ಇಂದು ಸಮಾಜದಲ್ಲಿ ಪುರುಷಶಾಹಿ ಆಧಾರಿತ ಜ್ಞಾನ ಕ್ಷೇತ್ರಗಳು ನೆಲೆಗೊಂಡಿವೆ. ಪುರುಷರ ಅನುಭವಗಳು ವಸ್ತುನಿಷ್ಠವಾಗಿರುತ್ತವೆ ಮತ್ತು ವಿಶ್ವಾಸಾರ್ಹತೆ ಹೊಂದಿರುತ್ತವೆ ಇದಕ್ಕೆ ಪ್ರತಿಯಾಗಿ ಮಹಿಳೆಯರ ಅನುಭವಗಳು ಭಾವಾನಾತ್ಮಕವಾಗಿರುತ್ತವೆಎನ್ನುವ ವಾದವೇ ಇಂತಹ ಪರಿಸ್ಥಿತಿಯ ನಿರ್ಮಾಣಕ್ಕೆ ಕಾರಣವಾಗಿವೆ. ಇಂತಹ ಪುರುಷ ಪ್ರಧಾನ ಜ್ಞಾನ ಕ್ಷೇತ್ರಗಳನ್ನು ಬದಲಾಹಿಸುವ ಅಗತ್ಯವಿದೆ. ಐದನೆಯದಾಗಿ, ಮಹಿಳೆಯರು ಇನ್ನೊಬ್ಬರ ಮೇಲೆ ಅವಲಂಬಿಸುವುದನ್ನುಕಡಿಮೆ ಮಾಡುವ ಅಗತ್ಯವಿದೆ. ಮಹಿಳೆಯನ್ನು ಒಬ್ಬ ವ್ಯಕ್ತಿಯಾಗಿ ಗೌರವಿಸುವುದು ಅತಿ ಮುಖ್ಯ. ಎಲ್ಲಿಯವರೆಗೆ ಮಹಿಳೆ ಮತ್ತೊಬ್ಬರ ಅವಲಂಬಿತಳಾಗಿರುತ್ತಾಳೆಯೋ ಅಲ್ಲಿಯವರೆಗೆ ಅವಳು ತಾರತಮ್ಯವನ್ನು, ಅಸಮಾನತೆಯನ್ನು ಮತ್ತು ಹೊರಗಣತನವನ್ನು ಅನುಭವಿಸಬೇಕಾಗುತ್ತದೆ. ಲಿಂಗ ಸಂಬಂಧಗಳ ದೃಷ್ಟಿಯಿಂದ ನಮ್ಮದು ಅಧೀನತೆಯ ಪರಂಪರೆಯಾಗಿದೆ. ಹೆಣ್ಣು ತನ್ನ ವ್ಯಕ್ತಿತ್ವವನ್ನು, ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳಬಲ್ಲಳು. ಅದ್ದರಿಂದ ಮಹಿಳೆಯರನ್ನು ಅಧೀನತೆಯ ಸಂಸ್ಕೃತಿಯಿಂದ ಬಿಡುಗಡೆಗೊಳಿಸುವ ಅಗತ್ಯವಿದೆ.[೨]ಇಂತಹ ಪರಂಪರೆ ಮತ್ತು ಸಂಸ್ಕೃತಿಯಿಂದಾಗಿ ಲಿಂಗ ಅಸಮಾನತೆ ನಮ್ಮ ಸಮಾಜದಲ್ಲಿ ತೀವ್ರಗೊಂಡಿದೆ. ಲಿಂಗ ಸಮಾನತೆಯು ಮಹಿಳೆ ಮತ್ತು ಪುರುಷರ ನಡುವೆ ಅಧಿಕಾರದ ಹಂಚಿಕೆಯು ಹೇಗೆ ನಿರ್ಧರಿಸಲ್ಪಡುತ್ತದೆ ಎಂಬುದಕ್ಕೆ ಸಂಬಂಧಿಸಿದೆ. ಅಮರ್ತ್ಯಸೇನ್ ಹೇಳುವ ಅಭಿವೃದ್ಧಿಯ ಪ್ರಕ್ರಿಯೆಯನ್ನು ನಾವು ಮನಗಾಣಬೇಕಾದರೆ ಎಲ್ಲಾ ಜನರಿಗೂ ಸ್ವಾತಂತ್ರ್ಯವೆಂಬುದು ಲಭ್ಯವಾಗಬೇಕು. ಕೇವಲ ಅಭಿವೃದ್ಧಿ ಎಂಬುದು ಕಡಿಮೆ ಆದಾಯದ ಬಡತನ ಅಥವಾ ಉತ್ತಮ ನ್ಯಾಯದ ಬಳಕೆಯಲ್ಲ ಬದಲಾಗಿ ಮಹಿಳೆ ಮತ್ತು ಪುರುಷರ ನಡುವಿನ ಯೋಗಕ್ಷೇಮದ ಅಂತರವನ್ನು ಕಡಿಮೆ ಮಾಡುವುದಾಗಿದೆ.೩ಆದರೆ ಇತ್ತೀಚಿನವರೆಗೂ ನಮ್ಮ ಅಭಿವೃದ್ಧಿ ಸಿದ್ಧಾಂತಗಳು ಗಂಭೀರವಾಗಿ ಪರಿಗಣಿಸಿರಲಿಲ್ಲ.

## ೧.೧. ವರಮಾನ ವರ್ಧನೆ ಮತ್ತು ಮಾನವ ಅಭಿವೃದ್ಧಿ ವರ್ಧನೆ ಮುಖಾಮುಖಿ

ಅಭಿವೃದ್ಧಿ ಕುರಿತ ಸಾಹಿತ್ಯ, ಅಭಿವೃದ್ಧಿ ಸಿದ್ಧಾಂತಗಳು ಮತ್ತು ಅಭಿವೃದ್ಧಿಯ ಪ್ರಕ್ರಿಯೆ– ಇವೆಲ್ಲವನ್ನೂ ಕೂಲಂಕುಷವಾಗಿ, ಅಮೂಲಾಗ್ರವಾಗಿ ಪರಿಶೀಲಿಸಿದರೆ ನಮಗೆ ಅಲ್ಲಿ ವರಮಾನ

ವರ್ಧನೆಯನ್ನು ಕೇಂದ್ರ ಧಾತುವನ್ನಾಗಿ ಮಾಡಿಕೊಂಡಿರುವ ಪ್ರಧಾನ ಧಾರೆ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಮತ್ತು ಜನರನ್ನು ಮುಖ್ಯ ಧಾತುವನ್ನಾಗಿ ಮಾಡಿಕೊಂಡ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಎಂಬ ಎರಡು ವಿಭಿನ್ನವಾದ ಸೈದ್ಧಾಂತಿಕ ಧಾರೆಗಳು ಎದುರಾಗುತ್ತವೆ. ಮೆಹಬೂಬ್ ಉಲ್ ಹಕ್ ತನ್ನ 'ಮಾನವ ಅಭಿವೃದ್ಧಿ ಕುರಿತಅಭಿಮತ' ಎಂಬ ಕೃತಿಯನ್ನು ಹೀಗೆ ಆರಂಭಿಸುತ್ತಾನೆ "ಬದುಕಿನಲ್ಲಿ ಅತ್ಯಂತ ಕ್ಲಿಷ್ಟಕರವಾದ ಸಂಗತಿ ಯೆಂದರೆ ಸದಾ ಕಣ್ಣಿಗೆ ಕಾಣುವ ಸಂಗತಿಗಳನ್ನು ಗುರುತಿಸುವುದು" ಮುಂದುವರಿದು ಹಕ್ ಹೇಳುವ ಪ್ರಕಾರ ಮಾನವ ಅಭಿವೃದ್ಧಿ ಎಂಬುದು ನಮ್ಮ ಅನುಭವದ ಸಂಗತಿಯೇ ಅಗಿದ್ದರೂ ಅದನ್ನು ನಾವು ಗುರುತಿಸಿರಲಿಲ್ಲ. ಅಭಿವೃದ್ಧಿ ಕುರಿತ ಅನೇಕ ದಶಕಗಳು ಕಳೆದು ಹೋದ ಮೇಲೆ ವರಮಾನ ವರ್ಧನೆ ಎಂಬುದು ತನ್ನಷ್ಟಕ್ಕೆ ತಾನೆ ಸಹಜವಾಗಿ ಜನರ ಬದುಕಾಗಿ ಪರಿವರ್ತನೆಯಾಗುವುದಿಲ್ಲವೆಂಬುದು ತಿಳಿದುಬಂತು ಎಂದು ಬರೆಯುತ್ತಾನೆ. ಈ ಕಾರಣಕ್ಕಾಗಿಯೇ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಅಸಾಧಾರಣ ಸಾಧನೆ ಸಾಧಿಸಿಕೊಂಡಿದ್ದರೂ ಸ್ವಾತಂತ್ರ್ಯದ ನಂತರ ಭಾರತದಲ್ಲಿ ಮತ್ತು ಏಕೀಕರಣದ ನಂತರ ಕರ್ನಾಟಕದಲ್ಲಿ ಇಂದಿಗೂ ಪ್ರಾದೇಶಿಕ ಅಸಮಾನತೆ ಮತ್ತು ಲಿಂಗ ಸಂಬಂಧಿ ಅಸಮಾನತೆಗಳು ಇಂದಿಗೂ ಮುಂದುವರೆದಿವೆ. ಇವೆಲ್ಲವಕ್ಕೂ ಕಾರಣ ಮಾನವಾಭಿವೃದ್ಧಿ ಸಂಗತಿಯನ್ನು ನಿರ್ಲಕ್ಷಿಸಿರುವುದೇ ಪ್ರಮುಖ ಕಾರಣವಾಗಿದೆ. ಯುಎನ್‌ಡಿಪಿಯು೧೯೯೪ ರ ಮಾನವ ಅಭಿವೃದ್ಧಿ ವರದಿಯಲ್ಲಿ ಮಾನವ ಅಭಿವೃದ್ಧಿಯನ್ನು ಸ್ಪಷ್ಟವಾಗಿ ನಿರ್ವಚಿಸಿಕೊಂಡಿರುವ ಪ್ರಕಾರ "ಮಾನವ ಅಭಿವೃದ್ಧಿಯು ವರಮಾನವನ್ನು ವರ್ಧಿಸುವುದರ ಜೊತೆಗೆ ಅದನ್ನು ಸಮಾನವಾಗಿ ವಿತರಣೆ ಮಾಡುವ ಪ್ರಕ್ರಿಯೆಯನ್ನು ಒಳಗೊಂಡಿದೆ. ಅದು ಪರಿಸರವನ್ನು ನಾಶ ಮಾಡುವುದರ ಬದಲಾಗಿ ಅದನ್ನು ಅದು ಪುನರ್‌ಜ್ಜೀವನಗೊಳಿಸುತ್ತದೆ. ಬಡವರ ಬದುಕು ಉತ್ತಮಗೊಳ್ಳುವ ಪ್ರಕ್ರಿಯೆಗೆ ಅಲ್ಲಿ ಅದ್ಯತೆ ದೂರೆಯುತ್ತದೆ. ಬದುಕನ್ನು ಉತ್ತಮಪಡಿಸಿಕೊಳ್ಳಲು ಅಗತ್ಯವಾದ ಅವಕಾಶಗಳ ಹಾಗೂ ಆಯ್ಕೆಗಳ ವ್ಯಾಪ್ತಿಯನ್ನು ಅದು ವಿಸ್ತೃತಗೊಳಿಸುತ್ತದೆ. ಬದುಕಿನ ಮೇಲೆ ಪ್ರಭಾವ ಬೀರುವ ತೀರ್ಮಾನಗಳಿಗೆ ಸಂಬಂಧಿಸಿದ ಪ್ರಕ್ರಿಯೆಯಲ್ಲಿ ಜನರಿಗೆ ಸಹಭಾಗಿಗಳಾಗುವ ಅವಕಾಶವನ್ನು ಅದು ಒದಗಿಸಿಕೊಡುತ್ತದೆ. ಅದು ಜನರ ಪರವಾಗಿಯೂ, ಅದು ಉದ್ಯೋಗದ ಪರವಾಗಿಯೂ, ಅದು ಪರಿಸರದ ಪರವಾಗಿಯೂ ಮತ್ತು ಅದು ಮಹಿಳೆಯರ ಪರವಾಗಿಯೂ ಇರುತ್ತದೆ".[೪]

ಅಂದರೆ ಈ ಹಿಂದಿನ ಅಭಿವೃದ್ಧಿ ಸಿದ್ಧಾಂತಗಳು ಮಹಿಳೆಯರ ಅಭಿವೃದ್ಧಿಯನ್ನು ತಮ್ಮ ವಿಚಾರ ಪ್ರಣಾಳಿಕೆಯ ಭಾಗವಾಗಿಸಿಕೊಂಡಿರಲಿಲ್ಲ. ಹಾಗಾಗಿ ಮಹಿಳೆಯರು ನಿರಂತರವಾಗಿ ಅಸಮಾನತೆಯ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾರೆ. ಲಿಂಗ ಸಮಾನತೆಯು ಅಭಿವೃದ್ಧಿಯ ಉಪಕರಣವಾಗಿದೆ. ಇದು ಆರ್ಥಿಕ ದಕ್ಷತೆ ಮತ್ತು ಇತರ ಅಭಿವೃದ್ಧಿಯ ಸಾಧನಗಳನ್ನು ಹೆಚ್ಚಿಸಲು

ಮೂರು ಮಾರ್ಗಗಳನ್ನು ಒಳಗೊಂಡಿರುತ್ತದೆ. ಮೊದಲನೆಯದಾಗಿ,ಪುರುಷರು ಬಳಸುವ ಶಿಕ್ಷಣ, ಆರ್ಥಿಕ ಅವಕಾಶ ಮತ್ತು ಉತ್ಪಾದಕತೆಯನ್ನು ಸೃಷ್ಟಿಸುವ ವಿಶಾಲ ಉತ್ಪಾದಕತೆಯ ಅವಕಾಶಗಳು ಮಹಿಳೆಯರಿಗೂ ಸಮಾನವಾಗಿ ಲಭಿಸಬೇಕು. ಎರಡನೆಯದಾಗಿ, ತಮ್ಮ ಮಕ್ಕಳು ಸೇರಿದಂತೆ ಮಹಿಳಾ ನಿರಪೇಕ್ಷ ಮತ್ತು ಸಾಪೇಕ್ಷ ಸ್ಥಿತಿಯನ್ನು ಸುಧಾರಿಸುವುದು. ಮೂರನೆಯದಾಗಿ,ಸಮಾನ ಅವಕಾಶಗಳ ವೃದ್ಧಿ ಇಲ್ಲಿ ಮಹಿಳೆ ಮತ್ತು ಪುರುಷರಿಗೆ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತೀರ್ಮಾನ ತೆಗೆದುಕೊಳ್ಳುವ ಮತ್ತು ನೀತಿ ನಿಯಮಗಳನ್ನು ರೂಪಿಸುವ ಸಮಾನ ಅವಕಾಶಗಳನ್ನು ಕೊಡಬೇಕು.[೫]ಅದರೇ ಹಿಂದಿನ ಅಭಿವೃದ್ಧಿ ಪ್ರಣಾಳಿಕೆಗಳು ಇಂತಹ ವಿಚಾರಧಾರೆ ಯನ್ನು ಅಳವಡಿಸಿಕೊಳ್ಳದೇ ಇರುವುದರಿಂದ ಮಹಿಳೆಯರು ಇಂದಿಗೂ ಸಂಕಷ್ಟದಲ್ಲಿದ್ದಾರೆ.ಬಡತನ ಮನುಷ್ಯ ನಿರ್ಮಿಸಿದ ಅಸಮಾನತೆ ಮತ್ತು ಅಧೀನತೆಯು ಸಂಚಿನಿಂದ ಕೂಡಿದ್ದು, ಇಂದು ಮಹಿಳೆ ಅಕ್ಷರ ದಕ್ಕಿಸಿಕೊಡ್ಡಿದ್ದರೂ ಅಜ್ಞಾನದಿಂದ ಹೊರ ಬಂದಿಲ್ಲವಾದ್ದರಿಂದ ಅದಕ್ಕೆ ಪ್ರತಿ ಸಂಚನ್ನು ರೂಪಿಸಿ ತನ್ನ ಬದುಕನ್ನು ರೂಪಿಸಿಕೊಳ್ಳುವಲ್ಲಿ ಅಸಮರ್ಥಳಾಗಿದ್ದಾಳೆ.[೬] ಲೋಹಿಯರವರ ಪ್ರಕಾರ ಪುರುಷ ಮತ್ತು ಮಹಿಳೆಯರ ಮಧ್ಯೆ ಅಸಮಾನತೆ ಇರಕೂಡದು. ಅವರು ಪ್ರತಿಪಾದಿಸಿದ ಕ್ರಾಂತಿಯ ಏಳು ತತ್ವಗಳಲ್ಲಿ ಇದು ಪ್ರಮುಖವಾದುದು. ನಮ್ಮದು ಪಾರಂಪರಿಕವಾದ ಅಸಮಾನ ಸಮಾಜ. ಎಲ್ಲರಿಗೂ ಸಮಾನ ಅವಕಾಶ ನೀಡುವ ಮೂಲಕ ಸಮಾನತೆ ತರಲು ಸಾಧ್ಯವಿಲ್ಲ. ಮುಂದುವರಿದಿರುವ ಸಮಾಜದಲ್ಲಿ ಸಮಾನತೆ ತರಲು ಹಿಂದುಳಿದ ವರ್ಗಗಳು, ಮಹಿಳೆ, ಹರಿಜನ, ಆದಿವಾಸಿ ಹಾಗೂ ಧಾರ್ಮಿಕ ಅಲ್ಪಸಂಖ್ಯಾತರಲ್ಲಿ ದಮನಕ್ಕೊಳಗಾದವರಿಗೆ ವಿಶೇಷ ಅವಕಾಶಗಳನ್ನು ಶೇ.೬೦ ರಷ್ಟು ಮೀಸಲಾತಿ ನೀಡುವ ಮೂಲಕ ಸಾಧ್ಯವಾಗಿಸಬೇಕೆಂದು ಪ್ರತಿಪಾದಿಸುತ್ತಾರೆ.[೭] ಜೈವಿಕ ಆಧಾರದ ಮೇಲೆ ಅಥವಾ ಲಿಂಗಬೇಧದ ನೆಲೆಯಲ್ಲಿ ಮಾನವ ಜನಾಂಗವನ್ನು ಸ್ತ್ರಿಯರು ಮತ್ತು ಪುರುಷರು ಎಂದು ವರ್ಗೀಕರಿಸುವ ಕ್ರಮವಿದೆ. ಸಾಮಾಜೀಕರಣದ ಪ್ರಕ್ರಿಯೆಗಳು ಅವರಿಬ್ಬರ ನಡುವೆ ಹಲವಾರು ವ್ಯತ್ಯಾಸ ಮತ್ತು ಅಸಮಾನತೆಗಳನ್ನು ಸೃಷ್ಟಿಸಿವೆ. ಇದು ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿಫಲ. ಹಾಗಾಗಿ ಲಿಂಗತ್ವವು ಸಂಪೂರ್ಣವಾಗಿ ಜೈವಿಕ ಅಂಶವೆಂದು ಪರಿಗಣಿಸಲಾಗುತ್ತದೆ. ಇದು ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿಫಲವಾಗಿದೆ. ಲಿಂಗದ ಪರಿಕಲ್ಪನೆ ಇಂದಿಗೂ ವಿವಿಧ ಆಯಾಮಗಳಲ್ಲಿ ವಿಶ್ಲೇಷಿಸಲಾಗುತ್ತಿದೆ.

### ೧.೨. ಲಿಂಗಸಂಬಂಧಿ ಮುಖ್ಯವಾಹಿನೀಕರಣ: ಒಂದು ಪರಿಕಲ್ಪನೆ

ಲಿಂಗವೆಂಬ ಪರಿಕಲ್ಪನೆಯು ಸಾಂಸ್ಕೃತಿಕ ಲಕ್ಷಣವಾಗಿದೆ. ಇದು ಮಹಿಳೆ ಮತ್ತು ಪುರುಷರ ನಿರೀಕ್ಷೆಗಳು ಮತ್ತು ರೂಢಿಗಳಿಗೆ ಸಂಬಂಧಿಸಿರುತ್ತವೆ. ಕೆಲವು ಅರ್ಹತೆಗಳು ಮಹಿಳೆಯರಿಗೆ ನಿರಪೇಕ್ಷ ವಾಗಿರುತ್ತವೆ. ಮಹಿಳೆಯರಿಗೆ ಸಂಬಂಧಿಸಿದ ಅನನ್ಯತೆಗಳು ಸಾಮಾಜೀಕರಣದ

ಪ್ರಕ್ರಿಯೆಯಿಂದ ರೂಪುಗೊಂಡಿವೆ. ಈ ಪ್ರಕ್ರಿಯೆಗಳು ಮಹಿಳೆಯರು ನಿರ್ವಹಿಸಬೇಕಾದ ಪಾತ್ರಗಳನ್ನು ನಿರ್ಧರಿಸಿದೆ. ಭಾರತೀಯ ಸಮಾಜ ಪಿತೃಪ್ರಧಾನ ವ್ಯವಸ್ಥೆಯಾಗಿದ್ದು ಅದು ಮಹಿಳೆಯರಿಗೆ ದ್ವಿತೀಯ ಸ್ಥಾನವನ್ನು ನಿಗದಿಪಡಿಸಿದೆ. ಅವರ ದೇಹಮೇಲಿನ ನಿರ್ಧಾರ, ಸಂಪನ್ಮೂಲಗಳು ಮುಂತಾದವುಗಳ ಮೇಲೆ ಯಾವ ಅಧಿಕಾರವು ಇಲ್ಲದಂತೆ ರೂಪಿಸಿದೆ. ಹಾಗಾಗಿ ವ್ಯವಸ್ಥೆ ಮತ್ತು ರಚನೆಯಲ್ಲಿ ಅಮೂಲಾಗ್ರವಾದ ಬದಲಾವಣೆಯನ್ನು ತರುವ ಮೂಲಕ ಲಿಂಗಸಂಬಂಧಿ ಅಸಮಾನತೆಯನ್ನು ಹೋಗಲಾಡಿಸ ಬಹುದಾಗಿದೆ.[೮] ಆದರೆ ಮಹಿಳೆಯನ್ನು ಸಾಮಾಜಿಕ ಘಟಕವನ್ನಾಗಿ ಅಭಿವೃದ್ಧಿ ನೆಲೆಯಲ್ಲಿ ಪ್ರಜ್ಞಾ ಪೂರ್ವಕವಾಗಿ ಗುರುತಿಸುವುದಿಲ್ಲ. ಇದರ ಜೊತೆಗೆ ಅಭಿವೃದ್ಧಿ ಪರಿಕಲ್ಪನೆಯು ಇಂದು ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಿದೆ. ಇದರಲ್ಲಿ ಲಿಂಗ ಸ್ಪಂಧಿ ಅಯಾಮವು ಮುಖ್ಯವಾದುದು.

### ೧.೩. ಅಭಿವೃದ್ಧಿ: ಲಿಂಗಸ್ಪಂಧಿ ಆಯಾಮಗಳು

ಅಭಿವೃದ್ಧಿಯು ಇಂದು ಲಿಂಗಸ್ಪಂಧಿ ವಿಚಾರವಾಗಿದೆ. ಆದರೆ ಇದನ್ನು ಇಂದು ಪ್ರಜ್ಞಾಪೂರ್ವಕ ವಾಗಿ ನಿರ್ಲಕ್ಷಿಸಲಾಗುತ್ತಿದೆ. ಹಿಂದೆ ಅಭಿವೃದ್ಧಿ ಎಂದರೆ ವರಮಾನದ ಹೆಚ್ಚಳವೆಂದು ಪರಿಭಾವಿಸ ಲಾಗುತ್ತಿತ್ತು. ಅಭಿವೃದ್ಧಿಯ ಈ ಪರಿಕಲ್ಪನೆ ದುಡಿಮೆ, ವೇತನ, ವರಮಾನ ಮುಂತಾದ ಸಂಗತಿಗಳನ್ನು ಒಳಗೊಂಡಿತ್ತು. ಆದರೆ ಈ ಅಭಿವೃದ್ಧಿ ಪರಿಕಲ್ಪನೆ ಸಂಪೂರ್ಣವಾಗಿ ಸಾಮಾಜಿಕ ನೆಲೆಗಳನ್ನು ನಿರ್ಲಕ್ಷಿಸಿತ್ತು. ಸಾಮಾಜಿಕ ಅಭಿವೃದ್ಧಿಯ ಹೊರತಾಗಿ ಸಮಗ್ರ ಅಭಿವೃದ್ಧಿಯನ್ನು ಉಹಿಸಿಕೊಳ್ಳುವುದು ಸಾಧ್ಯವಿಲ್ಲ. ಸಾಮಾಜಿಕ ಅಭಿವೃದ್ಧಿಯು ಆರೋಗ್ಯ, ಸಾಕ್ಷರತೆ, ಶಾಲಾ ದಾಖಲೀಕರಣ ಮುಂತಾದ ಅಂಶಗಳನ್ನು ಒಳಗೊಂಡಿದೆ.[೯] ಈ ಎರಡು ಆಯಾಮಗಳು ಪ್ರಮಾಣಾನುಗುಣವಾಗಿ ಬೆರೆತುಕೊಂಡಾಗ ಸಮಗ್ರ ಅಭಿವೃದ್ಧಿ ಸಾಧ್ಯವಾಗುತ್ತದೆ. ಆದರೆ ಅಭಿವೃದ್ಧಿಯು ತನ್ನಷಕ್ಕೆ ತಾನೆ ಸಮಾಜದಲ್ಲಿರುವ ಬಡವರು, ಪರಿಶಿಷ್ಟರು, ಅಲ್ಪಸಂಖ್ಯಾತರು ಮತ್ತು ಮಹಿಳೆಯರು ಮುಂತಾದ ವರ್ಗಗಳನ್ನು ಸಮಾನವಾಗಿ ಒಳಗೊಳ್ಳುವುದಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯು ಇಂತಹ ಒಳಗೊಳ್ಳುವಿಕೆಯನ್ನು ಸಾಧ್ಯವಾಗಿಸುವ ಒಂದು ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯೆಂದು ಭಾವಿಸಲಾಗುತ್ತಿದೆ. ಇದರೊಂದಿಗೆ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಜೊತೆಯಾಗಿರಲು ಸಾಧ್ಯವಿಲ್ಲವೆಂದು ವಾದ ಮಂಡಿಸಲಾಗುತ್ತಿದೆ. ಆದರೆ ವಿವಿಧ ಅಧ್ಯಯನಗಳ ಫಲಿತಗಳು ಈ ವಾದವನ್ನು ಒಪ್ಪುವುದಿಲ್ಲ. ಅವುಗಳ ಪ್ರಕಾರ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಒಂದಕ್ಕೊಂದು ಪೂರಕವಾದ ಸಂಗತಿಗಳೇ ಹೊರತು ಪ್ರತ್ಯೇಕವಾದವುಗಳಲ್ಲ. ಆದರೆ ಪ್ರಜಾಪ್ರಭುತ್ವವು ತನ್ನಷ್ಟಕ್ಕೆ ತಾನೆ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುತ್ತದೆ ಎಂಬ ಗ್ರಹಿಕೆ ಸರಿಯಲ್ಲ. ಇಂದಿಗೂ ಆರ್ಥಿಕವಾಗಿ,

ಸಾಮಾಜಿಕವಾಗಿ, ರಾಜಕೀಯ ವಾಗಿ ಮತ್ತು ಮೂಲಭೂತ ಸಂಗತಿಗಳಲ್ಲಿ ಅಸಮಾನತೆಗಳು ತೀವ್ರಗೊಂಡಿರುವುದು ಈ ವಾದಕ್ಕೆ ಪುಷ್ಟಿ ನೀಡುತ್ತದೆ. ಜಗತ್ತಿನ ಬಹಳಷ್ಟು ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಗಟ್ಟಿಗೊಳ್ಳದಿರಲು ಲಿಂಗ ಅಸಮಾನತೆಯು ಪ್ರಮುಖವಾದ ಕಾರಣವೆಂದು ಗ್ರಹಿಸಲಾಗುತ್ತಿದೆ.[೧೦] ಸಾಮಾಜಿಕವಾಗಿ ಹೊರಗಣದ ಸಮುದಾಯಗಳಿಗೆ ಇತರರಿಗೆ ಲಭ್ಯವಾಗುವ ಆದಾಯ ಮತ್ತು ಸಂಪತ್ತು ಲಭ್ಯವಾಗುವುದಿಲ್ಲ. ದೇಶದ ಆರ್ಥಿಕತೆ ಮತ್ತು ಸಂಪತ್ತು ಹೆಚ್ಚಾದಾಗಲೂ ಈ ಸಮುದಾಯಗಳು ಹಿಂದುಳಿದು ಬಡತನದಲ್ಲಿಯೇ ಮುಂದುವರಿಯುತ್ತವೆ.[೧೧] ಇದಕ್ಕೆ ಮಹಿಳೆಯರು ಹೊರತಾಗಿಲ್ಲ. ಇಂದು ನಡೆಯು ತ್ತಿರುವ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಮಹಿಳೆಯರನ್ನು ಮುಖ್ಯ ಧಾತುವನ್ನಾಗಿ ಪರಿಗಣಿಸಬೇಕೆಂಬ ವಾದಗಳು ಚರ್ಚೆಯಲ್ಲಿವೆ.

### ೧.೪. ಅಭಿವೃದ್ಧಿ ಮತ್ತು ಮಹಿಳೆ

ಇಂದು ವಿವಿಧ ಅಭಿವೃದ್ಧಿ ಸಿದ್ಧಾಂತಗಳು ಚರ್ಚೆಯಲ್ಲಿವೆ. ಭೌತಿಕ ಅಭಿವೃದ್ಧಿಯಿಂದ ಆರಂಭವಾಗಿ ಇಂದು ಮಾನವಾಭಿವೃದ್ಧಿಯವರೆಗೂ ಚರ್ಚೆಗಳು ಮುಂದುವರೆದಿವೆ. ಹಿಂದಿನ ಅಭಿವೃದ್ಧಿಗಳು ಲಿಂಗ ನಿರಪೇಕ್ಷತೆಯನ್ನು ಗಟ್ಟಿಯಾಗಿ ಅಂತರ್ಗತ ಮಾಡಿಕೊಂಡಿದ್ದವು. ಮಹಿಳೆಯರನ್ನು ಸಾಮಾಜಿಕ ಘಟಕವಾಗಿ ಪರಿಭಾವಿಸುವುದಕ್ಕೆ ಪ್ರತಿಯಾಗಿ ಜನಸಂಖ್ಯಾ ಘಟಕವಾಗಿ, ಜೈವಿಕ ಘಟಕವಾಗಿ ಪರಿಭಾವಿಸಿಕೊಂಡಿದ್ದವು. ಸಮಾಜ ವಿಜ್ಞಾನಗಳು ಕೂಡ ಮಹಿಳೆಯರನ್ನು ನಾಗರೀಕರೆಂದು, ಉತ್ಪಾದಕರೆಂದು, ಘನತೆಯುಳ್ಳ ವ್ಯಕ್ತಿಗಳೆಂದು ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅವರನ್ನು ಗ್ರಾಹಕರೆಂದು, ಪುರುಷರಿಗೆ ಅಧೀನರೆಂದು, ಕೇವಲ ಅನುಭೋಗಿಗಳೆಂದು ಪರಿಭಾವಿಸಿಕೊಂಡಿವೆ. ಜ್ಞಾನವೆನ್ನುವುದನ್ನು ಪುರುಷರ ನೆಲೆಯಿಂದ ಪರಿಭಾವಿಸಿಕೊಳ್ಳುವುದರ ಮೂಲಕ ಮಹಿಳೆಯರಿಗೆ ನ್ಯಾಯ ಒದಗಿಸುವುದು ಸಾಧ್ಯವಿಲ್ಲ.[೧೨] ಮಹಿಳೆಯರ ಜಗತ್ತನ್ನು ಕೇವಲ ಮನೆ, ಮಕ್ಕಳು ಮತ್ತು ಕುಟುಂಬಕ್ಕೆ ಸೀಮಿತಗೊಳಿಸಲಾಗಿದೆ. ಅವರನ್ನು ಖಾಸಗಿ ಪ್ರಪಂಚಕ್ಕೆ ಸೀಮಿತಗೊಳಿಸಿ, ಅವರನ್ನು ಸಾರ್ವಜನಿಕ ಪಾತ್ರದಿಂದ ಮತ್ತು ಸ್ಥಾನದಿಂದ ವಂಚಿತಗೊಳಿಸಲಾಗಿದೆ. ಲಿಂಗಸಂಬಂಧಿ ಶ್ರಮ ವಿಭಜನೆಯನ್ನು ಪ್ರಾಕೃತಿಕವೆಂದೂ, ಜೈವಿಕವೆಂದೂ ಪರಿಗಣಿಸಲಾಗಿದೆ. ಅದರ ಜೈವಿಕ ನೆಲೆಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆದರೆ ಇದಕ್ಕಿರುವ ಸಾಮಾಜಿಕ ಆಯಾಮವನ್ನು ಕೂಡ ಅಲ್ಲಗಳೆಯುವಂತಿಲ್ಲ. ಜೈವಿಕ ಮತ್ತು ಪ್ರಾಕೃತಿಕ ನೆಲೆಗಳಲ್ಲಿ ವಿಭಜಿಸಲ್ಪಟ್ಟ ಲಿಂಗ ಸಂಬಂಧಿ ಶ್ರಮ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ ಎಂಬ ಚರ್ಚೆಗಳೂ ಕೂಡ ಇಂದು ಗಟ್ಟಿಗೊಳ್ಳುತ್ತಿವೆ. ಇದರಲ್ಲಿ ಮಹಿಳೆಯರ ಸಂಗೋಪನ ಶ್ರಮ ಪ್ರಮುಖ್ಯತೆ ಪಡೆಯುತ್ತಿದೆ.

## ೧.೫. ಮಹಿಳೆ ಮತ್ತು ಸಂಗೋಪನ ದುಡಿಮೆ

ಸಂಗೋಪನ ದುಡಿಮೆಯು ಮಹಿಳೆಯ ಧಾರಣಾ ಶಕ್ತಿಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದು ಗ್ರಹಿಸಲಾಗಿದೆ. ಸಂಗೋಪನ ದುಡಿಮೆಯು ಸಂಮೃದ್ಧ ಬದುಕಿಗೆ ಕಾರಣವಾಗುತ್ತದೆ. ಈ ದುಡಿಮೆಯು ಅಭಿವೃದ್ಧಿಯ ಫಲವೂ ಹೌದು ಮತ್ತು ಅಭಿವೃದ್ಧಿಯ ಉತ್ಪನ್ನವೂ ಹೌದು. ಸಂಗೋಪನ ದುಡಿಮೆಯು ಶುಶ್ರೂಷೆ, ಪಾಲನೆ, ಮನೆವಾರ್ತೆ ಮುಂತಾದ ಚಟುವಟಿಕೆಗಳನ್ನು ಒಳಗೊಂಡಿದೆ. ಮಾನವನ ಆಹಾರ, ಆರೋಗ್ಯ, ಶಿಕ್ಷಣ, ಆಶ್ರಯ ಮತ್ತು ಆರೈಕೆ ಮುಂತಾದವುಗಳು ಜನರ ಬದುಕಾಗಿ ಪರಿವರ್ತನೆಗೊಳ್ಳುವಲ್ಲಿ ಸಂಗೋಪನ ದುಡಿಮೆಯು ಪ್ರಮುಖ ಪಾತ್ರವಹಿಸುತ್ತದೆ. ಸಂಗೋಪನ ದುಡಿಮೆಗೆ ಸಂಬಂಧಿಸಿದಂತೆ ಇರುವ ಪ್ರಮುಖ ಸಂಗತಿ ಎಂದರೆ ಇವುಗಳನ್ನು ಕೇವಲ ಮಹಿಳೆಯರೇ ನಿರ್ವಹಿಸುತ್ತಾರೆ. ಹಾಗಾಗಿ ಇದನ್ನು ಲಿಂಗ ಸಂಬಂಧಿ ಶ್ರಮವಿಭಜನೆ ಎಂದು ಕರೆಯಲಾಗುತ್ತದೆ. ಈ ವಿಭಜನೆಯನ್ನು ಜೈವಿಕ ಆದಾರದ ಮೇಲೆ ನಿರ್ಧರಿಸಲಾಗುತ್ತದೆ. ಇದು ಪುರುಷಶಾಹಿಯು ಮಹಿಳೆಯ ಮೇಲೆ ಹೇರಿರುವ ಹುನ್ನಾರವಾಗಿದೆ. ಇಂದು ಸಂಗೋಪನ ಕಾರ್ಯಗಳು ಆಧುನಿಕ ಕಾಲಘಟ್ಟದಲ್ಲಿ ಉದ್ಯೋಗ ಸ್ವರೂಪವನ್ನು ಪಡೆದುಕೊಳ್ಳುತ್ತಿವೆ. ಆದರೂ ಸಂಗೋಪನ ದುಡಿಮೆಯನ್ನು ಖಾಸಗಿ ಎಂದು ಪರಿಗಣಿಸಿ ಕೇವಲ ಮಹಿಳೆಯರಿಗೆ ಸೀಮಿತಗೊಳಿಸಲಾಗಿದೆ. ಅಂದರೆ ಲಾಭವಿಲ್ಲದ ಮತ್ತು ಹಣಕಾಸಿನ ವಹಿವಾಟು ಇಲ್ಲದ ದುಡಿಮೆಗಳನ್ನು ಮಹಿಳೆಯರಿಗಷ್ಟೆ ಸೀಮಿತಗೊಳಿಸಿ ಅಭಿವೃದ್ಧಿಯಿಂದ ಮಹಿಳೆಯರನ್ನು ವಂಚಿತರನ್ನಾಗಿ ಮಾಡಲಾಗುತ್ತಿದೆ.[೧೨] ದುಡಿಮೆಗೆ ಸಂಬಂಧಿಸಿದ ಇಂತಹ ತಾರತಮ್ಯಗಳನ್ನು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಪ್ರಶ್ನಿಸುತ್ತಿದೆ. ಈ ಹಿನ್ನೆಲೆಯಲ್ಲಿ ಲಿಂಗ ಸಂಬಂಧಿ ಮಾನವ ಅಭಿವೃದ್ಧಿ ಅಯಾಮಗಳು ಹೆಚ್ಚು ಚರ್ಚೆಯಲ್ಲಿವೆ.

## ೧.೬. ಮಾನವ ಅಭಿವೃದ್ಧಿ ಲಿಂಗ ಸಂಬಂಧಿ ಆಯಾಮಗಳು

ವರಮಾನ ಹೆಚ್ಚಿಸುವ ಅಭಿವೃದ್ಧಿ ಸಿದ್ಧಾಂತ ಮಹಿಳೆಯರ ದುಡಿಮೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದೆ. ಇಂತಹ ಲಿಂಗ ನಿರಪೇಕ್ಷ ಧೋರಣೆ ಹೊಂದಿರುವ ಸಿದ್ಧಾಂತಗಳು ತೀವ್ರ ಟೀಕೆಗೆ ಒಳಗಾಗಿವೆ. ಆದರೆ ಮಾನವ ಅಭಿವೃದ್ಧಿ ಸಿದ್ಧಾಂತವು ಮಹಿಳೆಯರ ಸಂಗೋಪನ ದುಡಿಮೆಯನ್ನು ಅಭಿವೃದ್ಧಿ ಸಿದ್ಧಾಂತದಲ್ಲಿ ಒಳಗೊಳಿಸುವ ಪ್ರಯತ್ನಗಳನ್ನು ಇಂದು ಕೈಗೊಳ್ಳಲಾಗುತ್ತಿದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯು ಜೈವಿಕ ಘಟಕವೋ ಅಥವಾ ಸಾಮಾಜಿಕ ಘಟಕವೋ ಎನ್ನುವ ಸಂಗತಿಯನ್ನು ಮುಖಾಮುಖಿಯಾಗಿಸಲಾಗುತ್ತಿದೆ. ಇಲ್ಲಿಯವರೆಗಿನ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಮಹಿಳೆಯರನ್ನು ಜೈವಿಕ ಘಟಕಗಳಾಗಿ ಪರಿಭಾವಿಸಿಕೊಂಡು ಬರಲಾಗುತ್ತಿದೆ. ಇದರ ಹಿಂದೆ ಪುರುಷಶಾಹಿಯ ಪಾತ್ರವಿದೆ. ಮಹಿಳೆ ನಿರ್ವಹಿಸುವ ಕಾರ್ಯಗಳನ್ನು ಜೈವಿಕವೆಂದು ಪ್ರಾಕೃತಿಕ

ಮತ್ತು ನೈಸರ್ಗಿಕವೆಂದು ಪರಿಗಣಿಸುವ ಮೂಲಕ ಮಹಿಳೆಯರನ್ನು ಸಮಾಜದ ಅಂಚಿಗೆ ತಳ್ಳಲಾಗುತ್ತಿದೆ. ಅಮರ್ತ್ಯಸೇನ್ ಹೇಳುವ ಪ್ರಕಾರ ಮಹಿಳೆಗೆ ಸಮಾನತೆ ನೀಡಿದೆ ಎಂದಾದಲ್ಲಿ ಲಿಂಗ ಅನುಪಾತ ಹೆಚ್ಚಾಗಿರಬೇಕು ಆದರೆ ವರ್ಷದಿಂದ ವರ್ಷಕ್ಕೆ ಮಹಿಳೆಯರ ಸಂಖ್ಯೆ ಕಡಿಮೆಯಾಗುತ್ತಿದೆ. ಅಮರ್ತ್ಯಸೇನ್ ಹೇಳುವ ಪ್ರಕಾರ ಮರಣ ಪ್ರಮಾಣದಲ್ಲಿ ಅಸಮಾನತೆ ಇದೆ. ಹೆಣ್ಣು ಮಗು ಹುಟ್ಟುವ ಪೂರ್ವದಲ್ಲಿ ಮತ್ತು ಹುಟ್ಟಿನ ನಂತರ ಅಸುನೀಗುತ್ತಿರುವ ಪ್ರಮಾಣ ಹೆಚ್ಚಾಗುತ್ತಿದೆ. ಜನನ ಪ್ರಮಾಣದಲ್ಲೂ ಲಿಂಗ ಸಂಬಂಧಿ ಅಸಮಾನತೆ ಹೆಚ್ಚಾಗುತ್ತಿದೆ. ಪೋಷಕರು ಹೆಚ್ಚಾಗಿ ಗಂಡು ಮಗುವನ್ನೇ ಬಯಸುತ್ತಿರುವುದು ಹೆಣ್ಣು ಬ್ರೂಣ ಹತ್ಯೆಗೆ ಕಾರಣವಾಗಿದೆ. ವಿಜ್ಞಾನ– ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಹೆಚ್ಚು ಅವಕಾಶಗಳು ಸಿಗುತ್ತಿಲ್ಲ. ಇಂದಿಗೂ ನಮ್ಮ ಸಮಾಜದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ಸುಲಭವಾಗಿ ನೀಡಲಾಗುತ್ತಿಲ್ಲ. ವಿವಿಧ ವೃತ್ತಿಗಳಲ್ಲೂ ಮಹಿಳೆಯರು ಗಂಭೀರ ಅಸಮಾನತೆಗಳನ್ನು ಎದುರಿಸುತ್ತಿದ್ದಾರೆ. ಇದರ ಜೊತೆಗೆ ಅಭಿವೃದ್ಧಿಯ ಮೂಲ ಸಂಗತಿಗಳಾದ ಪ್ರಾಥಮಿಕ ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ ಮುಂತಾದ ಸಂಗತಿಗಳಿಂದ ವಂಚಿತರಾಗುತ್ತಿದ್ದಾರೆ. ಅಮರ್ತ್ಯಸೇನ್ ಹೇಳುವ ಪ್ರಕಾರ ಸಮಾಜದಲ್ಲಿ ಪುರುಷರು ಮತ್ತು ಮಹಿಳೆಯರ ನಡುವೆ ಸಮಾನತೆ ಇದ್ದಿದ್ದರೆ ಅಭಿವೃದ್ಧಿಯ ಪ್ರಾಥಮಿಕ ಸೂಚಿಗಳಾದ ಸಾಕ್ಷರತೆ, ಪ್ರಾಥಮಿಕ ಶಿಕ್ಷಣ, ಪೌಷ್ಟಿಕತೆ, ಉದ್ಯೋಗ, ಕೂಲಿ ಮುಂತಾದ ಸಂಗತಿಗಳಲ್ಲಿ ಮಹಿಳೆಯರು ತಾರತಮ್ಯ ಅನುಭವಿಸಬೇಕಾಗಿರಲಿಲ್ಲ. ಯು.ಎನ್.ಡಿ.ಪಿಯು ೧೯೯೦ರಿಂದ ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿಗಳಲ್ಲಿ ಕಂಡುಬರುವಂತೆ ಪ್ರಪಂಚದ ಎಲ್ಲಾ ದೇಶದಲ್ಲೂ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಪುರುಷರ ಸಾಕ್ಷರತೆ ಪ್ರಮಾಣಕ್ಕಿಂತ ಕಡಿಮೆ ಕಂಡುಬರುತ್ತದೆ.[೧೪] ಮಹಿಳೆಯರಿಗೆ ಇಂದು ಎಲ್ಲವೂ ಅನಿವಾರ್ಯದ ಸಂಗತಿಯಾಗಿದ್ದು, ಯಾವುದೂ ಆಯ್ಕೆಯ ಸಂಗತಿಯಾಗಿ ಉಳಿದುಕೊಂಡಿಲ್ಲ. ಇಂದು ಅಭಿವೃದ್ಧಿ ಎಂದರೆ ಆಯ್ಕೆಯ ವ್ಯಾಪ್ತಿಯ ವಿಸ್ತರಣೆ ಎಂದು ಗ್ರಹಿಸಲಾಗುತ್ತಿದೆ. ನಿಯಂತ್ರಣವಿಲ್ಲದ ಅಥವಾ ನಿರ್ಬಂಧಗಳಿಲ್ಲದ ಸ್ಥಿತಿಯನ್ನು ಸ್ವಾತಂತ್ರವೆಂದು ಪರಿಭಾವಿಸಲಾಗುತ್ತದೆ. ಆದರೆ ಇಂದು ಮಹಿಳೆಯರು ಅನಕ್ಷರತೆಯಿಂದ ಬಿಡುಗಡೆಗೊಳ್ಳಲು ಅವಕಾಶಗಳಿವೆಯೆ? ಎನ್ನುವುದು ಅಮರ್ತ್ಯಸೇನ್ ಅವರ ಪ್ರಮುಖ ಪ್ರಶ್ನೆ.[೧೫] ಅದ್ದರಿಂದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಒಳಗೊಳ್ಳುವಂತೆ ವ್ಯವಸ್ಥೆಯನ್ನು ರೂಪಿಸುವುದು ಇಂದಿನ ಅಗತ್ಯವಾಗಿದೆ ಎಂದು ಗ್ರಹಿಸಲಾಗಿದೆ.



## ೧.೭. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆ

ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಒಳಗೊಳ್ಳುವ ವ್ಯವಸ್ಥೆಯನ್ನು ರೂಪಿಸಬೇಕೆಂಬ ವಾದ ೭೦ ರ ದಶಕದಲ್ಲಿ ಆರಂಭವಾಯಿತು. ಆದರೆ ಇದು ಕೇವಲ ದೈನಂದಿನ ಅಗತ್ಯಗಳನ್ನು

ಪೂರೈಸುವ ಆಶಯವನ್ನು ಹೊಂದಿತ್ತು. ಮಹಿಳೆಯರಿಗೆ ಶಿಕ್ಷಣ ನೀಡುವುದು, ಕೂಲಿ ತಾರತಮ್ಯವನ್ನು ನಿವಾರಿಸುವುದು, ಹೆರಿಗೆ ಭತ್ಯೆ ನೀಡುವುದು, ಆರೋಗ್ಯ ಸೌಲಭ್ಯ ಒದಗಿಸುವುದು ಮತ್ತು ಉದ್ಯೋಗ ನೀಡುವುದು ಮುಂತಾದವುಗಳು. ಇಂತಹ ಕ್ರಮಗಳು ಮಹಿಳೆಯರ ಸ್ಥಿತಿಗಳನ್ನು ಉತ್ತಮವಾಗಿಸಬಹುದೇ ಹೊರತು ಅವರ ಸ್ಥಾನಮಾನಗಳನ್ನು ಉತ್ತಮವಾಗಿಸುವುದಿಲ್ಲ. ಮಹಿಳೆಯರ ಇಂತಹ ದೈನಂದಿನ ಅಗತ್ಯಗಳನ್ನು ಪೂರೈಸಲು ಅಧಿಕಾರ ಸಂಬಂಧ ಬದಲಾವಣೆಯ ಅಗತ್ಯವಿರುವುದಿಲ್ಲ. ಇಂತಹ ಅಗತ್ಯಗಳನ್ನು ಪೂರೈಸಲು ಸರ್ಕಾರಗಳು ಭಾಗ್ಯಲಕ್ಷ್ಮಿ ಯೋಜನೆ, ಬಾಲಕಿಯರಿಗೆ ಬೈಸಿಕಲ್ ವಿತರಣೆ, ಶಾದಿಭಾಗ್ಯ ಮತ್ತು ತಾಳಿ ಭಾಗ್ಯ ಕಾರ್ಯಕ್ರಮಗಳನ್ನು ರೂಪಿಸುತ್ತವೆ. ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಂಯೋಜಿಸಬೇಕು ಎಂಬ ವಿಚಾರ ಆಧಾರಿತ ಲಿಂಗ ಸಂಬಂಧಿ ಅಭಿವೃದ್ಧಿ ಸಿದ್ಧಾಂತ ಮಹಿಳೆಯರ ಅಗತ್ಯಗಳನ್ನು ಗುರುತಿಸಿ, ಅವರ ಸ್ಥಿತಿಗಳನ್ನು ಉತ್ತಮಪಡಿಸಿದವೇ ಹೊರತು ಅವರ ಸಮಾಜೋ-ಆರ್ಥಿಕ ಬದುಕಿನಲ್ಲಿ ಬದಲಾವಣೆ ತರುವಲ್ಲಿ ವಿಫಲವಾದವು. ಇದರ ಸಂವಾದಿಯಾಗಿ ಬಂದ ಪ್ರಣಾಳಿಕೆಯೇ ಅಭಿವೃದ್ಧಿ ಮತ್ತು ಮಹಿಳೆ.

### ೧.೮. ಮಹಿಳೆ ಮತ್ತು ಅಭಿವೃದ್ಧಿ

ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಂಯೋಜಿಸಿಕೊಳ್ಳಬೇಕು ಎಂಬ ವಿಚಾರ ಪ್ರಣಾಳಿಕೆಯಿಂದ ಮಹಿಳೆಯರ ಸ್ಥಿತಿಗಳನ್ನು ಸುಧಾರಿಸಿಕೊಳ್ಳಲು ಸಹಕಾರಿಯಾಯಿತೇ ಹೊರತು ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಬದಲಾವಣೆ ತರುವಲ್ಲಿ ವಿಫಲವಾಯಿತು. ಆದ್ದರಿಂದ ಇದಕ್ಕೆ ಪ್ರತಿಯಾಗಿ ಪ್ರವರ್ಧಮಾನಕ್ಕೆ ಬಂದ ಪ್ರಣಾಳಿಕೆಯೇ ಮಹಿಳೆ ಮತ್ತು ಅಭಿವೃದ್ಧಿ. ಈ ವಿಚಾರ ಪ್ರಣಾಳಕೆಯಿಂದ ರೂಪುಗೊಂಡ ಸಿದ್ಧಾಂತಗಳು ಮಹಿಳೆಯರು ಅನುಭವಿಸುತ್ತಿರುವ ಅಸಮಾನತೆ, ತಾರತಮ್ಯ, ಶೋಷಣೆಗೆ ಬಂಡವಾಳಶಾಹಿ ವ್ಯವಸ್ಥೆಯ ನಾಶವೇ ಮಹಿಳೆಯರ ವಿಮೋಚನೆಗೆ ದಾರಿಎಂದು ಪ್ರಚಾರಪಡಿಸಿದವು. ಮಹಿಳೆಯರು ಶ್ರಮ ಮಾರುಕಟ್ಟೆಯನ್ನು ಪ್ರವೇಶಿಸುವುದರಿಂದ ಮಹಿಳೆಯರ ಸಮಸ್ಯೆ ನಿವಾರಣೆಯಾಗುತ್ತದೆ ಎಂದು ಗ್ರಹಿಸಲಾಯಿತು. ಆದರೆ ಅಭಿವೃದ್ಧಿ ಅನುಭವಗಳು ಹೇಳುವ ಪ್ರಕಾರ ಬಂಡವಾಳಶಾಹಿ ವ್ಯವಸ್ಥೆಯ ನಾಶದಿಂದ ಮಹಿಳೆಯರ ವಿಮೋಚನೆ ಸಾಧ್ಯವಾಗುತ್ತದೆ ಎಂಬುದಕ್ಕೆ ಯಾವುದೇ ಆಧಾರಗಳಿಲ್ಲ. ಉಳಿಗಮಾನ್ಯ ವ್ಯವಸ್ಥೆ ಇರಲಿ ಬಂಡವಾಳ ಶಾಹಿ ವ್ಯವಸ್ಥೆ ಇರಲಿ ಅಥವಾ ಸಮಾಜವಾದಿ ವ್ಯವಸ್ಥೆಯೇ ಇರಲಿ ಲಿಂಗ ಸಂಬಂಧಿ ತಾರತಮ್ಯ, ಮಹಿಳೆಯರ ಶೋಷಣೆ ನಿರಂತರವಾಗಿ ನಡೆಯುತ್ತಲೆ ಬಂದಿದೆ. ಇದು ವ್ಯವಸ್ಥೆಯ ಸಹಜವಾದ ಭಾಗವಾಗಿಯೇ ಉಳಿದುಕೊಂಡಿದೆ. ಆದ್ದರಿಂದ ಮಹಿಳೆಯರ

ವಿಮೋಚನೆ ಪುರುಷರಶಾಹಿ ವ್ಯವಸ್ಥೆಯನ್ನು ನೇರವಾಗಿ ಎದುರಿಸುವುದೇ ಮುಖ್ಯ ಮಾರ್ಗವಾಗುತ್ತದೆ. ಅಭಿವೃದ್ಧಿ ಕುರಿತ ಚರ್ಚೆಗಳಲ್ಲಿ ಮಹಿಳೆಯರನ್ನು ಕೇವಲ ಅದರ ಫಲಾನುಭವಿಗಳನ್ನಾಗಿ, ಗ್ರಾಹಕರನ್ನಾಗಿ, ಅನುಭೋಗಿಗಳನ್ನಾಗಿ ಪರಿಗಣಿಸಲಾಗಿದೆ. ಇದು ಮಹಿಳೆಯರ ಅನ್ಯಾಯದ ಮೂಲ ನೆಲೆಯಾಗಿದೆ. ಅಮರ್ತ್ಯಸೇನ್ ಹೇಳುವ ಪ್ರಕಾರ ಮಹಿಳೆಯರನ್ನು ಪರಿವರ್ತವಾದ ದೃಷ್ಟಿಕೋನದಿಂದ ನೋಡುವ ಅಗತ್ಯವಿದೆ. ಅಂದರೆ ಮಹಿಳೆಯರನ್ನು ಅಭಿವೃದ್ಧಿಯ ಹರಿಕಾರರೆಂದು ಪರಿಗಣಿಸುವ ಅಗತ್ಯವಿದೆ. ಹೀಗೆ ಪರಿಗಣಿಸಲ್ಪಟ್ಟಾಗ ಮಹಿಳೆಯರು ಅಭಿವೃದ್ಧಿಯ ಕತೃಗಳು, ಅಭಿವೃದ್ಧಿಯ ಫಲಾನುಭವಿಗಳು ಆಗುತ್ತಾರೆ. ಹೀಗೆ ಮಹಿಳೆಯರನ್ನು ಕತೃತ್ವವಾದಿ ದೃಷ್ಟಿಕೋನದಿಂದ ಪರಿಭಾವಿಸಿಕೊಳ್ಳುವುದರ ಮೂಲಕ ಅವರಲ್ಲಿ ಮನೆ ಮಾಡಿಕೊಂಡಿರುವ ಲಿಂಗ ತಾರತಮ್ಯವಾದಿ ಭಾವವನ್ನು ಮತ್ತು ಅವರಲ್ಲಿ ಮನೆ ಮಾಡಿಕೊಂಡಿರುವ ತಮ್ಮ ದುಡಿಮೆಗೆ ಸಂಬಂಧಿಸಿರುವ ಕೀಳಿರಿಮೆಯನ್ನು ಹೋಗಲಾಡಿಸುವ ಅಗತ್ಯ ಇಂದು ಹೆಚ್ಚಾಗಿದೆ. ಅಮರ್ತ್ಯಸೇನ್ ಮತ್ತು ಮಾರ್ತನುಸ್‌ಬೌಮ್ ವಾದಿಸುತ್ತಿರುವಂತೆ ಮಹಿಳೆಯರು ತಮ್ಮಷ್ಟಕ್ಕೆ ತಾವೆ ಹಕ್ಕುದಾರಿಕೆ ಎಂಬುದು ಪುರುಷರಿಗೆ ಮಾತ್ರವೆಂಬ ನಂಬಿಕೆಯನ್ನು ಬಲವಾಗಿ ರಕ್ತಗತ ಮಾಡಿಕೊಂಡಿದ್ದಾರೆ. ಈ ಬಗೆಯ ನಂಬಿಕೆಯಿಂದಾಗಿ ಮಹಿಳೆಯರಿಗೆ ತಮ್ಮ ದುಡಿಮೆಯ ಮಹತ್ವದ ಬಗ್ಗೆ ವಿಶ್ವಾಸಯಿಲ್ಲದಿರುವುದರಿಂದ ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವುದು ಸುಲಭವಾಗಿ ಸಾಧ್ಯವಾಗುವುದಿಲ್ಲ. ಈ ಭ್ರಮೆಯನ್ನು ಹೋಗಲಾಡಿಸುವ ಅಗತ್ಯವಿದೆ. ಸಮಾಜದಲ್ಲಿ ಒದಗಿ ಬರುವ ಅವಕಾಶಗಳನ್ನು ಧಾರಣೆ ಮಾಡಲು ಅಗತ್ಯವಾದ ಸಾಮರ್ಥ್ಯ ಮತ್ತು ಸ್ವಾತಂತ್ರ್ಯವನ್ನು ಒದಗಿಸಿಕೊಡುವುದು ಇಂದಿನ ಮುಖ್ಯ ಸಂಗತಿಯಾಗಿದೆ. ಅಭಿವೃದ್ಧಿಯು ತನ್ನಷ್ಟಕ್ಕೆ ತಾನೇ ಲಿಂಗ ಸಮಾನತೆಯನ್ನು ತಂದುಕೊಡುತ್ತದೆ ಎಂಬ ನಂಬಿಕೆ ಇಂದಿಗೂ ನಿಜವಾಗಿಲ್ಲ.[೧೬] ಇಂದಿಗೂ ಮಹಿಳೆಯರು ಶಿಕ್ಷಣ, ಆರೋಗ್ಯ, ಆದಾಯ, ಲಿಂಗಾನುಪಾತ ಮುಂತಾದ ಸೂಚ್ಯಾಂಕಗಳಲ್ಲಿ ಎಲ್ಲಾ ಪಂಗಡಗಳ ಪುರುಷರಿಗೆ ಹೋಲಿಸಿದರೆ ಆಯಾಯ ಪಂಗಡದ ಮಹಿಳೆಯರು ಹಿಂದಿದ್ದಾರೆ. ಇದರ ಜೊತೆಗೆ ನಮ್ಮ ಸಾಮಾಜಿಕ ಮೌಲ್ಯಗಳು ಮತ್ತು ಬಂಡವಾಳ ಪ್ರೇರಿತ ಅಭಿವೃದ್ಧಿ ಭ್ರೂಣ ಹತ್ಯೆಯಂತಹ ಕ್ರಮದಿಂದ ಅವಳ ಸಂತಾನವೇ ವೃದ್ಧಿಯಾಗದಂತೆ ನೋಡಿಕೊಳ್ಳಲಾಗುತ್ತಿದೆ. ಸರ್ಕಾರ ಕಾನೂನಿನ ಮೂಲಕ ಭ್ರೂಣ ಹತ್ಯೆಯನ್ನು ತಡೆಯಲು ಹಲವಾರು ಕ್ರಮಗಳನ್ನು ಕೈಗೊಂಡಿದೆ. ಆದರೆ ಕಾನೂನಿನ ಪರಿಣಾಮಕಾರಿ ಅನುಷ್ಠಾನವಿಲ್ಲದ ಕಾರಣ ಭ್ರೂಣ ಹತ್ಯೆ ನಿರಂತರವಾಗಿ ನಡೆಯುತ್ತಿವೆ.[೧೭] ಇವುಗಳಿಗೆಲ್ಲ ಬಂಡವಾಳಶಾಹಿ ವ್ಯವಸ್ಥೆ ಮತ್ತು ಅಸ್ಮಿತೆಯನ್ನು ಆಧರಿಸಿದ ರಾಜಕಾರಣವೇ ಮೂಲ ಕಾರಣವೆಂದು ಗ್ರಹಿಸಲಾಗುತ್ತಿದೆ. ಮಹಿಳೆಯರ ಅಭಿವೃದ್ಧಿಯನ್ನು ಈ ಹಿನ್ನಲೆಯಲ್ಲಿ ನೋಡಲಾಗುತ್ತಿದೆ.

## ೧.೯. ಮಹಿಳೆಯರ ಅಭಿವೃದ್ಧಿ

ನಮ್ಮ ಇಡೀ ರಾಜಕಾರಣ ಗುರುತಿನ ರಾಜಕೀಯದ ಮೇಲೆ ನಿಂತಿದೆ. ಇದು ಬಂಡವಾಳ ವಿಸ್ತರಣೆಗೆ ಸುಗಮವಾದ ಸಂದರ್ಭ. ಇಂತಹ ಬಂಡವಾಳಶಾಹಿ ಅಭಿವೃದ್ಧಿ ಕೃಷಿ ವಿಧಾನ ಮತ್ತು ಸಂಬಂಧಗಳಲ್ಲಿ ಬದಲಾವಣೆ ತಂದಿದೆ. ಕೃಷಿ ಕಾರ್ಯಗಳು ಯಾಂತ್ರೀಕರಣಗೊಂಡಿರುವುದರಿಂದ ಬಡ ಮಹಿಳೆಯರ ಆದಾಯಗಳಿಗೆ ತೊಂದರೆಯಾಗಿದೆ. ಉತ್ಪಾದನ ವೆಚ್ಚದ ಮೇಲೆ ಕಡಿವಾಣ ಹಾಕಲು ಪುರುಷ ಕಾರ್ಮಿಕರಿಗಿಂತ ಮಹಿಳಾ ಕಾರ್ಮಿಕರೇ ಉತ್ತಮ ಎನ್ನುವ ಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದ ಶಿಕ್ಷಣ, ಆರೋಗ್ಯ, ಮಾಹಿತಿ ತಂತ್ರಜ್ಞಾನ, ಮ್ಯಾನೇಜ್‌ಮೆಂಟ್, ಶಾಪಿಂಗ್ ಮಾಲ್ ಮತ್ತು ಸಿದ್ಧ ಉಡುಪು ಉತ್ಪಾದನೆಯಲ್ಲಿ ಮಹಿಳಾ ದುಡಿಮೆದಾರರಿಗೆ ಹೆಚ್ಚಿನ ಬೇಡಿಕೆ ಇದೆ. ಅಂದರೆ ಮಹಿಳೆಯರು ಯಾವುದೆ ತಕರಾರು ಇಲ್ಲದೆ ಕಡಿಮೆ ಕೂಲಿಗಾಗಿ ಪುರುಷರಿಗಿಂತ ಹೆಚ್ಚು ಶಿಸ್ತಿನಿಂದ ಕಾರ್ಯನಿರ್ವಹಿಸುತ್ತಾರೆ ಎನ್ನುವುದು ಇದರ ಹಿಂದಿರುವ ಪ್ರಮುಖ ಕಾರಣ. ಹೀಗೆ ನಮ್ಮ ಸಮಾಜದಲ್ಲಿರುವ ಲಿಂಗ ಬೇಧ ಬಂಡವಾಳದ ಸಂಗ್ರಹಕ್ಕೆ ಅನುಕೂಲವಾಗಿದೆ. ಈ ಎಲ್ಲಾ ವಾದಗಳ ಹಿನ್ನೆಲೆಯಲ್ಲಿ ಮಹಿಳೆಯರ ಅಭಿವೃದ್ಧಿ ಸಾಧ್ಯವಾಗಿಲ್ಲವೆ ಎನ್ನುವ ಪ್ರಶ್ನೆ ಎದುರಾಗುತ್ತದೆ. ಕೆಲವು ಭೌತಿಕ ಸವಲತ್ತುಗಳು ಮತ್ತು ಮಹಿಳೆಯರ ಹಣಕಾಸಿನ ವಹಿವಾಟುಗಳನ್ನು ಗಮನಿಸಿದರೆ ತಕ್ಕಮಟ್ಟಿಗೆ ಬದಲಾವಣೆ ಆಗಿರುವುದು ನಿಜ. ಆದರೆ ಇವುಗಳು ಕೂಡ ಜಾತಿ, ಪ್ರದೇಶ, ಭಾಷೆ, ಧರ್ಮ ಮತ್ತು ವರ್ಗದ ಐಡೆಂಟಿಟಿಗಳನ್ನು ಆಧರಿಸಿ ಮಹಿಳೆಯರಿಗೆ ದಕ್ಕುವ ಸವಲತ್ತುಗಳ ಪ್ರಮಾಣ ಮತ್ತು ಗುಣಮಟ್ಟಗಳು ನಿರ್ಧರಿಸಲ್ಪಡುತ್ತಿವೆ. ಆದರೆ, ಅಭಿವೃದ್ಧಿ ಎನ್ನುವುದು ಕೇವಲ ಮೂಲಭೂತ ಸೌಕರ್ಯಗಳನ್ನು ಮಾತ್ರ ಒಳಗೊಳ್ಳುವುದಿಲ್ಲ, ಇದರ ಜೊತೆಗೆ ಅಭಿವೃದ್ಧಿಯು ಸ್ಥಾನಮಾನ, ಸ್ವಾತಂತ್ರ್ಯ, ಸಮಾನತೆ ಮತ್ತು ಸ್ವಾಯತ್ತತೆಯ ಪ್ರಶ್ನೆಗಳನ್ನು ಒಳಗೊಂಡಿದೆ. ಇಂತಹ ಬದಲಾವಣೆ ಸಾಧ್ಯವಾದರೆ ಮಾತ್ರ ಮಹಿಳೆಯರ ಅಭಿವೃದ್ಧಿ ಸಾಧ್ಯವಾಗುತ್ತದೆ.ಗಲಆದರೆ ಮಹಿಳೆಗೆ ಶಿಕ್ಷಣ ನೀಡದಿದ್ದರೆ ಅವರ ಸ್ಥಾನಮಾನ, ಸ್ವಾತಂತ್ರ್ಯ, ಸಮಾನತೆ ಮತ್ತು ಸ್ವಾಯತತ್ತೆಯನ್ನು ಸಾಧಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಶಿಕ್ಷಣವೇ ಸಬಲೀಕರಣದ ಮೂಲವೆಂದು ಪರಿಗಣಿಸಲಾಗುತ್ತಿದೆ. ಜನರು ಸಾಕ್ಷರರಾದಾಗ ಮಾತ್ರ ಆರ್ಥಿಕ ಪ್ರಗತಿ ಮತ್ತು ಮಾನವ ಪ್ರಗತಿಗಳು ಸಾಧ್ಯವಾಗುತ್ತವೆ. ಸಾಕ್ಷರತೆಯು ಆರ್ಥಿಕ ಪ್ರಗತಿಯನ್ನು ಮಾನವ ಪ್ರಗತಿಯನ್ನಾಗಿ ಪರಿವರ್ತಿಸಿದಾಗ ಸಮಾಜಕ್ಕೆ ಸಹಾಯವಾಗುತ್ತದೆ.ಉತ್ತಮ ಜೀವನ, ಯೋಗ್ಯತೆಯ ಯುಕ್ತತೆಯ ಅರಿವು, ಘನತೆ ಮತ್ತು ಗೌರವಗಳು ಕೇವಲ ಸಾಕ್ಷರತೆಯಿಂದ ಪ್ರಾಪ್ತವಾಗುತ್ತವೆ.ಇಂತಹ ಬದುಕಿನ ಪ್ರಾಪ್ತತೆಯನ್ನು ಮಹಿಳೆಯರಿಗೆ ನೀಡುವಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ ಎಂದು ಗ್ರಹಿಸಲಾಗಿದೆ.

## ೧.೧೦. ಶಿಕ್ಷಣ ಮತ್ತು ಸಬಲೀಕರಣ

ಬಡವರ ಮುಖ್ಯವಾಗಿ ಮಹಿಳೆಯರ ಚಾರಿತ್ರಿಕ, ಸಮಾಜೋ–ಆರ್ಥಿಕ ಮತ್ತು ರಾಜಕೀಯ ಅಂಶಗಳಿಗೆ ಉತ್ತರ ನೀಡುವ ಸಾಮರ್ಥ್ಯವನ್ನು ಶಿಕ್ಷಣ ನೀಡುತ್ತದೆ. ಮಹಿಳೆಗೆ ಮಾಹಿತಿ ಪಡೆಯುವ, ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ, ತಮ್ಮ ಭೌತಿಕ ಮತ್ತು ಸಾಮಾಜಿಕ ಸ್ಥಿತಿಗಳ ಬಗ್ಗೆ ಅಮೂಲಾಗ್ರ ಪರಿವರ್ತನೆಯನ್ನು ಪಡೆದುಕೊಳ್ಳಲು ಹಾಗೂ ವ್ಯಕ್ತಿ ಮತ್ತು ಸಮಾಜಕ್ಕೆ ಹೆಚ್ಚು ಜವಾಬ್ದಾರಿಗಳನ್ನು ನೀಡುತ್ತದೆ.[೧೯] ಶಿಕ್ಷಣವು ಮಹಿಳೆಗೆ ತನ್ನ ಆರೋಗ್ಯ, ತನ್ನ ಸ್ವಂತಕ್ಕೆ ಹಣ ಖರ್ಚುಮಾಡುವ ಸಂಗತಿಗಳಲ್ಲಿ  ನಿರ್ಣಯ ಕೈಗೊಳ್ಳುವ ಶಕ್ತಿ ನೀಡುತ್ತದೆ.[೨೦] ಮಹಿಳೆಯರ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವು ಅವರ ನಿರ್ಣಯ ಸಾಮರ್ಥ್ಯದ ಮೇಲೆ ಸಕಾರಾತ್ಮಕ ಪರಿಣಾಮ ಬೀರುವುದು ದೃಢಪಟ್ಟಿದೆ.[೨೧] ಬ್ಲೂಮ್ ಮತ್ತು ಹೋಲೋಸ್‌ರವರ ಅಧ್ಯಯಯನಗಳು ಹೇಳುವ ಪ್ರಕಾರ ಮಹಿಳೆಗೆ ಶಿಕ್ಷಣವು ಚಲನಾ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯ ಅಧಿಕಾರವನ್ನು ನೀಡುತ್ತದೆ.[೨೨] ಆರ್ಥಿಕ ಸ್ವಾಯತ್ತತೆಯನ್ನು ನೀಡುವ ಮೂಲಕ ಪಿತೃ ಪ್ರಧಾನ ಕುಟುಂಬ ರಚನೆಯಲ್ಲಿ ಅಮೂಲಾಗ್ರ ಬದಲಾವಣೆಯನ್ನು ತಂದಿದೆ. ಮಹಿಳೆಯರಿಗೆ ಆರ್ಥಿಕ ಸ್ವಾಯತ್ತತೆ ಇಲ್ಲದೆ ಇರುವುದರಿಂದ ಅವಳು ಪುರುಷರಿಗಿಂತ ಕಡಿಮೆ ಸ್ಥಾನವನ್ನು ಪಡೆದುಕೊಂಡಿದ್ದಾರೆ.[೨೩] ಅಮರ್ತ್ಯಸೇನ್ ಹೇಳುವ ಪ್ರಕಾರ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳೇ ಪೋಷಕರಿಗೆ ಹೆಚ್ಚು ಭದ್ರತೆ ನೀಡುತ್ತಾರೆಂದು ಭಾವಿಸಲಾಗುತ್ತದೆ.[೨೪] ಗಂಡು ಮಕ್ಕಳನ್ನು ಬಯಸುವ ಸಂಗತಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಮಹಿಳೆಯರಿಗಿಂತ ಉನ್ನತ ಶಿಕ್ಷಣ ಪಡೆದ ಮಹಿಳೆಯರ ಮೇಲೆ ಸಕಾರಾತ್ಮಕ ಪರಿಣಾಮ ಬೀರಿದೆ. ಅಂದರೆ ಮಹಿಳೆಯರು ಉನ್ನತ ಶಿಕ್ಷಣ ಪಡೆದಂತೆ ಅವರಲ್ಲಿನ ಲಿಂಗ ಸಂಬಂಧಿ ಗೊಂದಲಗಳು ಮಾಯವಾಗುತ್ತವೆ.[೨೫] ಎಂದು ವಿವಿಧ ಅಧ್ಯಯನಗಳು ತಿಳಿಸುತ್ತವೆ.

ಅಮರ್ತ್ಯಸೇನ್ ಹೇಳುವಂತೆ, ಭಾರತದಲ್ಲಿ ಉನ್ನತ ಶಿಕ್ಷಣವನ್ನು ಉತ್ತಮಗೊಳಿಸಬೇಕಾದರೆ ಮೊದಲು ಶಾಲಾ ಶಿಕ್ಷಣವನ್ನು ಸಮಗ್ರವಾಗಿ ಸುಧಾರಣೆ ಮಾಡುವ ಅಗತ್ಯವಿದೆ.[೨೬] ಬಹುಪಾಲು ಮುಸ್ಲಿಂ ಮಹಿಳೆಯರು ಇಂದಿಗೂ ಅಶಕ್ತರಾಗಿರಲು ಸಾಕ್ಷರತೆಯಿಂದ ದೂರ ಉಳಿದಿರುವುದೇ ಕಾರಣವಾಗಿದೆ. ಮುಸ್ಲಿಂ ಮಹಿಳೆಯರು ಅಧಿಕಾರದಿಂದ ವಂಚಿತರಾಗಲು ಕಾರಣವೆಂದರೆ ಅವರ ಕನಿಷ್ಟ ಶಿಕ್ಷಣ ಮಟ್ಟವೆಂದು ಹೇಳಲಾಗುತ್ತಿದೆ.[೨೭] ಎಪ್ಪತ್ತು ದಶಕಗಳ ನಂತರವು ಸರ್ಕಾರ ಮುಸ್ಲಿಂ ಮಹಿಳೆಯರಿಗೆ ಶೈಕ್ಷಣಿಕ ಪ್ರೋತ್ಸಾಹ ನೀಡಬೇಕು, ಹದಿನೈದು ಅಂಶಗಳ ಕಾರ್ಯಕ್ರಮಗಳು ಜಾರಿಗೊಳ್ಳಬೇಕು, ಮುಸ್ಲಿಂ ಮಹಿಳೆಯರ ಸಬಲೀಕರಣಕ್ಕಾಗಿ ವಿವಿಧ ಆಯೋಗಗಳು ನೀಡಿದ ಶಿಫಾರಸ್ಸುಗಳು ಪರಿಣಾಮಕಾರಿಯಾಗಿ ಜಾರಿಗೊಳ್ಳಬೇಕು, ಮುಸ್ಲಿಂ ಮಹಿಳೆಯರ ಸಬಲೀಕರಣಕ್ಕಾಗಿ

ಸರ್ಕಾರೇತರ ಸಂಸ್ಥೆಗಳು ಸಕ್ರೀಯವಾಗಿ ಪಾಲ್ಗೊಳ್ಳಬೇಕು ಹಾಗೂ ಮುಸ್ಲಿಂ ಧಾರ್ಮಿಕ ನಾಯಕರು ಸೂಕ್ತ ಮಾರ್ಗದರ್ಶನ ನೀಡಬೇಕು ಎಂದು ಚರ್ಚಿಸಲಾಗುತ್ತಿದೆ.[೨೮] ಆದರೆ ಇನ್ನೂ ಕೆಲವು ಅಧ್ಯಯನಗಳು ಹೇಳುವಂತೆ ಮದರಸ ವಿದ್ಯಾರ್ಥಿಗಳು ಸಾಮಾನ್ಯ ಶಾಲೆಗಳಿಗೆ ಸೇರುವಂತಾಗಬೇಕು, ಬಿಸಿಯೂಟ, ಶಿಷ್ಯ ವೇತನ ಹಾಗೂ ಸಮವಸ್ತ್ರ ನೀಡುವ ಮೂಲಕ ಶಾಲೆಗಳನ್ನು ಆಕರ್ಷಕಗೊಳಿಸಬೇಕು ಹಾಗೂ ಮುಸ್ಲಿಂ ಮಹಿಳೆಯರಿಗೆ ಪ್ರತ್ಯೇಕವಾದ ಶಾಲೆಗಳಾಗಬೇಕು ಎಂದು ವಾದ ಮಂಡಿಸುತ್ತಿವೆ.[೨೯] ಏಕೆಂದರೆ ಪ್ರಾಥಮಿಕ ಶಿಕ್ಷಣದ ಬೆಳವಣಿಗೆ ಎಲ್ಲಾ ಪ್ರದೇಶಗಳಲ್ಲಿ ಸಮಾನವಾಗಿಲ್ಲ, ಜೊತೆಗೆ ಶಾಲೆಗಳು ಜನಸಂಖ್ಯಾ ಬೆಳವಣಿಗೆಗೆ ಪೂರಕವಾಗಿಲ್ಲ. ಇದರ ಜೊತೆಗೆ ಮುಸ್ಲಿಂ ಮಹಿಳೆಯರು ಶಿಕ್ಷಕರ ಕೊರತೆ, ಮೂಲ ಸೌಲಭ್ಯಗಳ ಕೊರತೆ ಹಾಗೂ ಬಡತನ, ನಿರಾಸಕ್ತಿ ಹಾಗೂ ಪೂರಕವಲ್ಲದ ವಾತಾವರಣದಿಂದಾಗಿ ಅವರ ಶಿಕ್ಷಣದ ಮಟ್ಟ ಕುಂಠಿತಗೊಳ್ಳುತ್ತಿದೆ.[೩೦] ಅಮರ್ತ್ಯಸೇನ್ ಹೇಳುವಂತೆ ಲಿಂಗಸಂಬಂಧಿ ಅಸಮಾನತೆಯು ಅಂತಿಮವಾಗಿ ಸ್ವಾತಂತ್ರ್ಯದ ಉಲ್ಲಂಘನೆಯಾಗಿದೆ. ಲಿಂಗಸಂಬಂಧಿ ಅಸಮಾನತೆಗಳು ಅಧಿಕಾರ, ಬಲ, ವರ್ಗ, ಜಾತಿ ಶ್ರೇಣಿಗಳು ಮತ್ತು ಸಮಾಜೋ-ಆರ್ಥಿಕ ಸಂಪ್ರದಾಯಗಳು ನಡಾವಳಿಗಳ ಮೂಲದಿಂದ ಹುಟ್ಟಿಕೊಳ್ಳುತ್ತವೆ. ಸಂರಚನೆಗಳನ್ನು ಮತ್ತು ಸಂಸ್ಥೆಗಳನ್ನು ಆಮೂಲಾಗ್ರವಾಗಿ ರೂಪಿಸುವುದರ ಮೂಲಕ ತರುವ ಬದಲಾವಣೆಯನ್ನು ಸಬಲೀಕರಣವೆಂದು ಪರಿಭಾವಿಸಲಾಗಿದೆ.[೩೧] ಈ ಹಿನ್ನೆಲೆಯಲ್ಲಿ ಭಾರತದ ಮಹಿಳೆಯರನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಭಾರತದ ಸಂವಿಧಾನವು ಮಹಿಳಾ ಅಭಿವೃದ್ಧಿಯ ಆಶೋತ್ತರಗಳನ್ನು ಅಳವಡಿಸಿಕೊಂಡಿದೆ.

### ೧.೧೧. ಭಾರತದ ಸಂವಿಧಾನ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯ ಆಶೋತ್ತರಗಳು

ಭಾರತದ ಸಂವಿಧಾನದ ೩೯ನೇ ವಿಧಿಯು ಹೇಳುವ ಪ್ರಕಾರ ರಾಜ್ಯವು ಪುರುಷರಿಗೂ ಮತ್ತು ಮಹಿಳೆಯರಿಗೆ ಜೀವನಾವಶ್ಯಕ ಅಗತ್ಯಗಳನ್ನು ಪೂರೈಸಬೇಕು. ವಿದ್ಯಾಭ್ಯಾಸದ ಹಕ್ಕುಗಳಿಗೆ ಬೇಕಾದ ನಿಯಮಗಳನ್ನು ರೂಪಿಸಬೇಕೆಂದು ೪೧ನೇ ವಿಧಿ ಪ್ರಸ್ತಾಪಿಸಿದೆ. ಪುರುಷರು ಮತ್ತು ಮಹಿಳೆಯರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕು, ಕೆಲಸಕ್ಕೆ ಬೇಕಾಗುವ ಅಗತ್ಯ ಮತ್ತು ಮಾನವೀಯ ಪರಿಸ್ಥಿತಿಗಳನ್ನು ಮತ್ತು ಹೆರಿಗೆ ಸೌಲಭ್ಯಗಳನ್ನು ಒದಗಿಸಬೇಕೆಂದು ೪೨ನೇ ವಿಧಿ ತಿಳಿಸುತ್ತದೆ. ಪ್ರಜೆಗಳ ಪೌಷ್ಠಿಕ ಆಹಾರ ಪದಾರ್ಥಗಳ ಮತ್ತು ಜೀವನ ಮಟ್ಟವನ್ನು ಹೆಚ್ಚಿಸುವುದು ಹಾಗೂ ಸಾರ್ವಜನಿಕ ನೈರ್ಮಲ್ಯವನ್ನು ಕಾಪಾಡುವುದು ತನ್ನ ಆದ್ಯ ಕರ್ತವ್ಯವೆಂದು ರಾಜ್ಯವು ಭಾವಿಸಿ, ಆರೋಗ್ಯಕ್ಕೆ ಮಾರಕವಾದ ಮಧ್ಯಪಾನವನ್ನು ನಿಷೇಧಿಸಿ ಜಾರಿಗೊಳಿಸಬೇಕೆಂದು ೪೭ನೇ ವಿಧಿ ಹೇಳುತ್ತದೆ. ೨೪ನೇ ವಿಧಿಯನ್ವಯ, ೧೪ ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಅಪಾಯಕಾರಿ ಕೆಲಸಗಳಲ್ಲಿ ತೊಡಗಿಸುವಂತಿಲ್ಲ ಹಾಗೂ ಅನೈತಿಕ ಅಥವಾ ಇತರೆ ಉದ್ದೇಶಗಳಿಗಾಗಿ

ಮಹಿಳೆಯರು, ಮಕ್ಕಳು ಅಥವಾ ಬಲಹೀನರನ್ನು ಶೋಷಣೆ ಮಾಡಬಾರದೆಂದು ಸಂವಿಧಾನ ಸ್ಪಷ್ಟಪಡಿಸಿದೆ. ಸಂವಿಧಾನ ಮಹಿಳೆಯರನ್ನು ಶೋಷಣೆಯಿಂದ ಮುಕ್ತಗೊಳಿಸಿ, ಸಬಲೀಕರಣಗೊಳಿಸುವ ಆಶಯವನ್ನು ಈಡೇರಿಸಲು ಕೇಂದ್ರ ಮತ್ತು ರಾಜ್ಯಸರ್ಕಾರಗಳು ಕಾಯಿದೆಗಳನ್ನು ಜಾರಿಗೊಳಿಸಿವೆ. ೧೯೫೬ ರ ಅನೈತಿಕ ವ್ಯವಹಾರ ತಡೆ ಕಾಯಿದೆ ವೇಶ್ಯಾವೃತ್ತಿಯನ್ನು ನಿಷೇಧಿಸಿದೆ. ೧೯೭೮ ಮತ್ತು ೧೯೮೬ ರಲ್ಲಿ ತಿದ್ದುಪಡಿಗೊಂಡ ಕಾಯಿದೆಯು, ಮಕ್ಕಳನ್ನು ವೇಶ್ಯಾವೃತ್ತಿಗೆ ತರುವವರನ್ನು ಜೀವಾವಧಿ ಅಥವಾ ಏಳು ವರ್ಷ ಜೈಲುವಾಸ ವಿಧಿಸುತ್ತದೆ. ೧೯೬೧ರ ವರದಕ್ಷಿಣೆ ನಿಷೇಧ ಕಾಯಿದೆಯು ೧೯೮೪, ೧೯೮೫ ಮತ್ತು ೧೯೮೬ರಲ್ಲಿ ತಿದ್ದುಪಡಿಗೊಂಡಿದ್ದು, ಈ ಕಾಯಿದೆಯು ವರದಕ್ಷಿಣೆ ಸಾವಿಗೆ ಕಾರಣರಾದವರನ್ನು ಏಳುವರ್ಷಗಳ ಶಿಕ್ಷೆಗೆ ಗುರಿಪಡಿಸುತ್ತದೆ. ೧೯೭೬ರ ಸಮಾನ ವೇತನ ಕಾಯಿದೆಯು ಮಹಿಳೆಯರ ಶೋಷಣೆಯನ್ನು ನಿಯಂತ್ರಿಸುವಲ್ಲಿ ಸಹಾಯಕವಾಗಿದೆ. ಒಂದೇ ಕೆಲಸಕ್ಕೆ ಪುರುಷರು ಮತ್ತು ಮಹಿಳೆಯರಿಗೆ ಸಮಾನ ವೇತನ ನೀಡಬೇಕೆಂಬುದು ಇದರ ಆಶಯ.

೧೯೮೭ ರಲ್ಲಿ ರೂಪ ಕನ್ವರ್ ನಿಧನದಿಂದ ಉಂಟಾದ ಸಾಮಾಜಿಕ ತಲ್ಲಣದ ಹಿನ್ನಲೆಯಲ್ಲಿ ೧೯೮೭ರ ಸತಿ ನಿಷೇಧ ಕಾಯಿದೆಯನ್ನು ಜಾರಿಗೊಳಿಸಲಾಯಿತು. ಈ ಕಾಯಿದೆಯ ಪ್ರಕಾರ ಸತಿ ಪದ್ಧತಿಯನ್ನು ಪ್ರೇರಿಪಿಸುವವರಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ಮತ್ತು ಜುಲ್ಮಾನೆಯನ್ನು ವಿಧಿಸಲು ಅವಕಾಶವಿದೆ. ೧೯೯೦ ರಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರೀಯ ಮಹಿಳಾ ಆಯೋಗ ಕಾಯಿದೆಯನ್ನು ಜಾರಿಗೊಳಿಸಿತು. ಮಹಿಳೆಯರಿಗೆ ಸಂಬಂಧಿಸಿದ ಸಂವಿಧಾನಾತ್ಮಕ ಮತ್ತು ಕಾನೂನು ರಕ್ಷಣೆಗಳನ್ನು ಅಧ್ಯಯನ ಮಾಡುವುದು, ಜಾರಿಯಲ್ಲಿರುವ ಕಾನೂನುಗಳನ್ನು ಪರಿಶೀಲಿಸಿ, ಅವರ ರಕ್ಷಣೆಗೆ ಬೆಂಬಲ ನೀಡುವುದು ಮತ್ತು ಮಹಿಳೆಯರಿಗೆ ಸಂಬಂಧಪಟ್ಟಂತೆ ಸರ್ಕಾರ ನಿರ್ಧಾರಗಳನ್ನು ಕೈಗೊಳ್ಳುವಾಗ ಮಹಿಳಾ ಆಯೋಗದ ಜೊತೆ ಚರ್ಚಿಸುವುದು, ಇಂತಹ ಮಹಿಳಾ ಪರವಾದ ಮತ್ತು ಮಹಿಳಾ ಅಭಿವೃದ್ಧಿಗೆ ಪೂರಕವಾದ ಕಾರ್ಯಗಳನ್ನು ಮಹಿಳಾ ಆಯೋಗ ನಿರ್ವಹಿಸುತ್ತಿದೆ. ಕರ್ನಾಟಕ ಸರ್ಕಾರವು ಮಹಿಳಾ ಆಯೋಗವನ್ನು ರಚಿಸಿದೆ. ಇದರೊಂದಿಗೆ ದೇವದಾಸಿ ಪದ್ಧತಿಯನ್ನು ನಿಷೇಧಿಸಿ, ಕಾನೂನನ್ನು ಉಲ್ಲಂಘಿಸಿದವರಿಗೆ ೨,೦೦೦ ರೂ. ರಿಂದ ೫,೦೦೦ ರೂ. ಜುಲ್ಮಾನ ವಿಧಿಸುವ ಕಾನೂನನ್ನು ಕರ್ನಾಟಕ ಸರ್ಕಾರ ೧೯೮೨ರಲ್ಲಿ ಜಾರಿಗೊಳಿಸಿದೆ.

ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯು ೧೯೯೪ ರಲ್ಲಿ  ಜಾರಿಗೊಂಡು, ೨೦೧೧ ರಲ್ಲಿ ತಿದ್ದುಪಡಿಗೊಂಡಿತು. ಈ ಕಾಯಿದೆಯು ಭ್ರೂಣ ಲಿಂಗಪತ್ತೆ ಮಾಡುವುದನ್ನು ನಿಷೇದಿಸಿದ್ದು, ಕಾನೂನು ಉಲ್ಲಂಘಿಸಿದವರಿಗೆ ೫೦,೦೦೦ ರೂ. ದಂಡ ವಿಧಿಸಲಾಗುತ್ತದೆ. ಇದರ ಜೊತೆಗೆ ಕೇಂದ್ರ ಸರ್ಕಾರ ಕೌಟುಂಬಿಕ ದೌರ್ಜನ್ಯ ನಿಷೇಧ ಕಾಯ್ದೆಯನ್ನು ೨೦೦೫ ರಲ್ಲಿ ಜಾರಿಗೊಳಿಸಿದೆ.

ಈ ಕಾಯ್ದೆಯನ್ವಯ ದೈಹಿಕ ಅಥವಾ ಮಾನಸಿಕ ಹಿಂಸೆ ಮತ್ತು ವರದಕ್ಷಿಣೆ ಅಥವಾ ಆಸ್ತಿಗಾಗಿ ಕಿರುಕುಳ ನೀಡುವುದು ಕೌಟುಂಬಿಕ ದೌರ್ಜನ್ಯವಾಗುತ್ತದೆ. ದೌರ್ಜನ್ಯಕ್ಕೊಳಗಾದ ಮಹಿಳೆಗೆ ಉಚಿತ ನ್ಯಾಯ ಸೇವೆಯನ್ನು ಒದಗಿಸುವುದು ರಾಜ್ಯದ ಜವಾಬ್ದಾರಿ ಎಂದು ಕಡ್ಡಾಯಗೊಳಿಸಲಾಗಿದೆ. ಇವೆಲ್ಲವುಗಳ ಜೊತೆಗೆ ಮೊಹಮದನ್ ಕಾನೂನುಗಳು ಇಂದು ದೇಶದಲ್ಲಿ ಜಾರಿಯಲ್ಲಿದೆ. ಮುಸ್ಲಿಮರ ವಿವಾಹ, ವಿಚ್ಛೇದನ, ದತ್ತು ಮತ್ತು ಉತ್ತರಾಧಿಕಾರತ್ವಕ್ಕೆ ಸಂಬಂಧಿಸಿದ ವಿಷಯಗಳನ್ನು ಈ ಕಾನೂನುಗಳ ಅನ್ವಯ ಇತ್ಯರ್ಥಪಡಿಸಿಕೊಳ್ಳಲಾಗುತ್ತದೆ. ಇಂದಿಗೂ ಮುಸ್ಲಿಂ ಮಹಿಳೆಯರ ವಿಚ್ಛೇದನ ಪ್ರಕ್ರಿಯೆ ಚರ್ಚಾಸ್ಪದ ವಿಷಯವಾಗಿದೆ. ಮೂರು ಬಾರಿ ತಲಾಖ್ ಉಚ್ಛರಿಸುವ ಮೂಲಕ ವಿಚ್ಛೇಧನ ನೀಡುವ ವಿಧಾನವನ್ನು ಖಂಡಿಸಲಾಗುತ್ತಿದೆ. ಇದು ಸರಿ. ಆದರೆ, ತಲಾಖ್ ವಿಧಾನದ ಪರಿಷ್ಕರಣೆ, ಏಕರೂಪ ನಾಗರೀಕ ಸಂಹಿತೆ ಚುನಾವಣಾ ಸಂದರ್ಭದಲ್ಲಿ ಮಾತ್ರ ಚರ್ಚೆಯಾಗುವುದು ಮತ್ತು ಇದನ್ನು ಪುರುಷರ ಮಂಡಳಿಗಳು ಮಾತ್ರ ವಿರೋಧಿಸುವುದು ಮಹಿಳಾ ಪರವಾದ ಕಾಳಜಿಗಳಾಗಿ ಗೋಚರಿಸುವುದಿಲ್ಲ.[೨] ಶಿಕ್ಷಣವು ಮಹಿಳೆಯನ್ನು ಸಬಲೀಕರಿಸುತ್ತದೆ ಎಂಬುದನ್ನು ಸಂವಿಧಾನದ ಕರ್ತೃಗಳು ಹಿಂದೆಯೇ ಗ್ರಹಿಸಿದ್ದರು. ಈ ಹಿನ್ನೆಲೆಯಲ್ಲಿ ಸಂವಿಧಾನದ ಮೂಲಭೂತ ಹಕ್ಕುಗಳ ಪಟ್ಟಿಯಲ್ಲಿ ಶಿಕ್ಷಣ ಮತ್ತು ಸಾಂಸ್ಕೃತಿಕ ಹಕ್ಕನ್ನು ಸಂವಿಧಾನಬದ್ಧಗೊಳಿಸಲಾಗಿದೆ. ಇದರ ಜೊತೆಗೆ ಸಂವಿಧಾನದ ಪೂರ್ವದಲ್ಲೇ ಶಿಕ್ಷಣವನ್ನು ಹಕ್ಕಾಗಿ ರೂಪಿಸುವ ಯತ್ನಗಳು ಕಂಡುಬರುತ್ತವೆ.

## ೧.೧೨. ಭಾರತದ ಸಂವಿಧಾನ: ಅಲ್ಪಸಂಖ್ಯಾತರ ಶಿಕ್ಷಣ ಮತ್ತು ಸಾಂಸ್ಕೃತಿಕ ರಕ್ಷಣೆ

ಮಹಿಳಾ ಶಿಕ್ಷಣವು ಭಾರತಕ್ಕೆ ಹೊಸ ವಿಚಾರವಲ್ಲ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣಕ್ಕೆ ಉನ್ನತವಾದ ಪರಂಪರೆ ಇದೆ. ಗಾರ್ಗಿ, ಮೈತ್ರೇಯಿ, ಭಾರತಿ, ಲಖಿಮ ಮತ್ತು ಬಿಸ್ವಾಸ್ ದೇವಿಯವರ ಹೆಸರುಗಳು ಪ್ರಾಚೀನ ಭಾರತದ ಶೈಕ್ಷಣಿಕ ರಂಗದಲ್ಲಿ ಚಿರಪರಿಚಿತವಾಗಿವೆ. ಚಾರಿತ್ರಿಕ ದಾಖಲೆಗಳು ಹೇಳುವಂತೆ ಹಿಂದು ಮತ್ತು ಮುಸ್ಲಿಮರ ಪುರುಷ ಪ್ರಧಾನ ಸಮಾಜಗಳು ಪ್ರಾಚೀನ ಕಾಲದಲ್ಲಿ ಮಹಿಳಾ ಶಿಕ್ಷಣವನ್ನು ತೀವ್ರವಾಗಿ ವಿರೋಧಿಸಿದ್ದವು. ಭಾರತದಲ್ಲಿ ನಡೆದ ಪುನರುಜ್ಜೀವನ ಚಳುವಳಿಯು ಮಹಿಳಾ ಶಿಕ್ಷಣಕ್ಕೆ ಹೊಸ ಆಯಾಮವನ್ನು ಕೊಡುವಲ್ಲಿ ಯಶಸ್ವಿಯಾಯಿತು. ೧೯೧೪ರಲ್ಲಿ ಅನಿಬೆಸೆಂಟ್ ರವರು ಬಾಲ್ಯವಿವಾಹ ಮತ್ತು ಅನಕ್ಷರತೆಯ ವಿರುದ್ಧ ಒಂದಾಗುವಂತೆ ಭಾರತೀಯರಿಗೆ ಕರೆ ನೀಡಿದರು. ೧೯೨೧-೨೨ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಅಹಮದಾಬಾದ್‌ನಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನವನ್ನು ಆಯೋಜಿಸುವ ಮೂಲಕ ಮಹಿಳಾ ಅಭಿವೃದ್ಧಿಗೆ ಕ್ರಮಗಳನ್ನು ಕೈಗೊಂಡಿದೆ. ಮಹಾತ್ಮ ಗಾಂಧಿಯವರು ಕೂಡಾ ಮಹಿಳಾ ಶಿಕ್ಷಣದ ಬಗ್ಗೆ ಹೆಚ್ಚು ಒತ್ತು ನೀಡಿರುವುದು ಚರಿತ್ರೆಗಳಲ್ಲಿ ದಾಖಲಾಗಿದೆ.೩೩ಅದರೆ ಭಾರತದಲ್ಲಿ ಮಹಿಳಾ ಶಿಕ್ಷಣ ಅಧಿಕೃತವಾಗಿ ಬೆಳಕಿಗೆ ಬಂದಿದ್ದು ೧೯೨೦ರಲ್ಲಿ ಅಂದರೆ ೧೯೧೯ರ ಮಾಂಟೇಗೊ-

ಚೆಲ್ಸ್‌ಫರ್ಡ್ ಸುಧಾರಣೆಯ ನಂತರವಷ್ಟೆ. ಸಂವಿಧಾನದಲ್ಲಿ ಶಿಕ್ಷಣವು ವರ್ಗಾಯಿಸಲ್ಪಡುವ ವಿಷಯವಾಯಿತು. ೧೯೨೧ರಲ್ಲಿ ದ್ವಿ ಸರ್ಕಾರ ರಚನೆಯಾದ ನಂತರ ಶಿಕ್ಷಣವು ಇದರ ನಿಯಂತ್ರಣಕ್ಕೆ ಒಳಪಟ್ಟಿತು. ಈ ಸರ್ಕಾರದಲ್ಲಿ ಶಿಕ್ಷಣಕ್ಕೆ ಹೆಚ್ಚು ಬೆಂಬಲ ದೊರೆತು ಕಡ್ಡಾಯ ಶಿಕ್ಷಣ ಮಸೂದೆ ಪಾಸಾಯಿತು.೧೯೫೦ ರಲ್ಲಿ ಜಾರಿಗೊಂಡ ಭಾರತದ ಸಂವಿಧಾನದಲ್ಲಿ ಶಿಕ್ಷಣ ಮತ್ತು ಸಾಂಸ್ಕೃತಿಕ ಹಕ್ಕನ್ನು ಮೂಲಭೂತ ಹಕ್ಕಾಗಿ ಅಂಗೀಕರಿಸಲಾಯಿತು. ಸಂವಿಧಾನದ ೨೯ ಮತ್ತು ೩೦ನೇ ವಿಧಿಗಳು ಸಾಂಸ್ಕೃತಿಕ, ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಹಕ್ಕುಗಳನ್ನು ರಕ್ಷಿಸುವ ಉದ್ದೇಶ ಹೊಂದಿವೆ. ೨೯ನೇ ವಿಧಿಯ (೧)ನೇ ಉಪ ವಿಧಿಯ ಪ್ರಕಾರ ಪ್ರಜೆಗಳು ತಮ್ಮ ಭಾಷೆ, ಲಿಪಿ ಮತ್ತು ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವ ಹಕ್ಕನ್ನು ಹೊಂದಿದ್ದಾರೆ. ಅದೇ ವಿಧಿಯ (೨)ನೇ ಉಪ ವಿಧಿಯ ಪ್ರಕಾರ ಧರ್ಮ, ಕುಲ, ಜಾತಿ ಮತ್ತು ಭಾಷೆಗಳ ಆಧಾರದ ಮೇಲೆ ರಾಜ್ಯದಿಂದ ಮತ್ತು ರಾಜ್ಯದ ಧನ ಸಹಾಯದಿಂದ ನಡೆಸಲ್ಪಡುವ ಸಂಸ್ಥೆಗಳಿಗೆ ಪ್ರವೇಶವನ್ನು ನಿರಾಕರಿಸುವಂತಿಲ್ಲ. ೩೦ ನೇ ವಿಧಿಯಲ್ಲಿರುವ (೧)ನೇ ಉಪ ವಿಧಿಯನ್ವಯ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರು ತಮ್ಮದೇ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಬಹುದಾಗಿದೆ. ಜೊತೆಗೆ (೨)ನೇ ಉಪ ವಿಧಿಯನ್ವಯ ರಾಜ್ಯವು ಧನ ಸಹಾಯ ನೀಡುವಾಗ ಅಲ್ಪಸಂಖ್ಯಾತರಿಗೆ ತಾರತಮ್ಯ ಮಾಡುವಂತಿಲ್ಲ. ಈ ಹಕ್ಕುಗಳ ಜೊತೆಗೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಕಾಯಿದೆಯನ್ನು ರೂಪಿಸಿದೆ. ಈ ಕಾಯಿದೆಯ ಪ್ರಕಾರ ೬ ರಿಂದ ೧೪ ನೇ ವಯಸ್ಸಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣನೀಡುವುದು ಸರ್ಕಾರದ ಜವಬ್ದಾರಿಯಾಗಿದೆ. ಇದರ ಜವಾಬ್ದಾರಿಯನ್ನು ಪೋಷಕರಿಗೂ ನಿಗದಿಪಡಿಸಲಾಗಿದೆ.

ಭಾರತ ಸಂವಿಧಾನದ ಮೌಲ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಕ್ಕಳ ಪೂರ್ಣ ಬೆಳವಣಿಗೆಗೆ ಪೂರಕವಾಗುವ ಪಠ್ಯಕ್ರಮವನ್ನು ರಚಿಸುವುದು, ಜ್ಞಾನ ಸಂಪಾದನೆ, ಶಕ್ತಿ ವೃದ್ಧಿ, ಕುಶಲತೆ ಮತ್ತು ಮಕ್ಕಳ ಕೇಂದ್ರೀಕೃತ ಕಲಿಕೆಗೆ ಒತ್ತು ನೀಡುವುದು ಈ ಕಾನೂನಿನ ಆಶಯವಾಗಿದೆ.೩೪ಆದರೂ ಇಂದು ಭಾರತದಲ್ಲಿ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ್ದಾರೆ. ಇದರ ಜೊತೆಗೆ ಮುಸ್ಲಿಮರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ರಕ್ಷಣೆಗೆ ಸಂವಿಧಾನ ಹಕ್ಕುಗಳನ್ನು ಜಾರಿಗೊಳಿಸಿದೆ. ಆದರೂ ಒಟ್ಟಾರೆ ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದ್ದಿದ್ದಾರೆ.ವಿಶೇಷವಾಗಿ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ.ಇಷ್ಟೆಲ್ಲಾ ಸಂವಿಧಾನಾತ್ಮಕ ರಕ್ಷಣೆಯ ನಡುವೆಯು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿರುವುದು ಮೂಲಭೂತ ಪ್ರಶ್ನೆಯಾಗಿದೆ. ಮುಸ್ಲಿಮರು ಬಹುರೂಪಿ ಸಮುದಾಯವಾಗಿದ್ದರೂ, ಅವರನ್ನು ಏಕರೂಪಿ ಸಮುದಾಯವಾಗಿ ಗ್ರಹಿಸಲಾಗುತ್ತಿದೆ. ಇತರೆ ಸಮುದಾಯದ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಿಗೂ ಮುಸ್ಲಿಂ ಸಮುದಾಯದ

ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಿಗೂ ವ್ಯತ್ಯಾಸಗಳಿವೆ. ಭಾರತದಲ್ಲಿ ವಿವಿಧ ಸಮುದಾಯಗಳು ಶೈಕ್ಷಣಿಕವಾಗಿ ಹಿಂದುಳಿದಿರುವ ಕುರಿತು ಇರುವ ಚರ್ಚೆಗಳು ಮತ್ತು ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಗಿರುವ ಚರ್ಚೆಗಳು ತುಂಬಾ ಭಿನ್ನವಾಗಿವೆ.

### ೧.೧೩. ಭಾರತದಲ್ಲಿ ಶೈಕ್ಷಣಿಕ ಹಿಂದುಳಿಯುವಿಕೆ: ಸಾರ್ವತ್ರಿಕ ಚರ್ಚೆಗಳು

ಶಿಕ್ಷಣಕ್ಕೆ ಸಂಬಂಧಿಸಿದಂತೆ ಎರೆಡು ಪ್ರಮುಖ ವಾದಗಳು ಚರ್ಚೆಯಲ್ಲಿವೆ. ಮೊದಲನೆಯದಾಗಿ, ಭಾರತದಲ್ಲಿ ಶೈಕ್ಷಣಿಕ ಹಿಂದುಳಿಯುವಿಕೆಗೆ ಶಿಕ್ಷಣ ವ್ಯವಸ್ಥೆಯ ಸ್ವರೂಪವೇ ಕಾರಣವಾಗಿದೆ. ಶಿಕ್ಷಣವನ್ನು ಪಡೆದುಕೊಂಡಿರುವ ಮಟ್ಟವನ್ನು ಆಧರಿಸಿ ಮಾತ್ರವಲ್ಲ, ಜೊತೆಗೆ ಶಿಕ್ಷಣದ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವಿನ ಅಸಮಾನ ಹಂಚಿಕೆಯೂ ಕಾರಣವಾಗಿದೆ. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಸಾಮಾಜಿಕ ಅಸಮಾನತೆಯು ಶಿಕ್ಷಣ ಪಡೆಯುವ ಅವಕಾಶಗಳನ್ನು ಕ್ಷೀಣಿಸುತ್ತದೆ. ಮತ್ತೊಂದು ವಾದ ಹೇಳುವ ಪ್ರಕಾರ ನಿರ್ಲಕ್ಷಿತ ಸಮುದಾಯದ ಪರವಾಗಿ ಪ್ರಜ್ಞಾಪೂರ್ವಕವಾದ ಪ್ರಯತ್ನಗಳನ್ನು ಕೈಗೊಳ್ಳುವುದರಿಂದ ಶೈಕ್ಷಣಿಕ ಅಭಿವೃದ್ಧಿ ಸಾಧ್ಯವಾಗುತ್ತದೆ. ಕೇವಲ ಶೈಕ್ಷಣಿಕ ಅವಕಾಶಗಳನ್ನು ವಿಸ್ತರಿಸುವುದರಿಂದ ಅಸಮಾನತೆ ದೂರವಾಗುವುದಿಲ್ಲ. ಬದಲಾಗಿ ಶೈಕ್ಷಣಿಕ ಕ್ಷೇತ್ರದ ವಿವಿಧ ಹಂತಗಳಲ್ಲಿ ನಾಗರೀಕ ಸಮುದಾಯ ಸಕ್ರೀಯವಾಗಿ ಭಾಗವಹಿಸುವುದರಿಂದ ಸಾಧ್ಯವಾಗುತ್ತದೆ.[೩೫] ಎಂದು ಬಲವಾಗಿ ವಾದಿಸಲಾಗುತ್ತಿದೆ. ಆದರೆ ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಸಂಬಂಧಿಸಿದಂತೆ ವಿಭಿನ್ನವಾದ ವಾದಗಳನ್ನು ಮುಂದಿಡಲಾಗುತ್ತಿದೆ. ಅವುಗಳಲ್ಲಿ ಧಾರ್ಮಿಕ ಮತ್ತು ಚಾರಿತ್ರಿಕ ಚರ್ಚೆಗಳು ಪ್ರಮುಖವಾಗಿವೆ.

### ೧.೧೪. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ: ಚಾರಿತ್ರಿಕ ಮತ್ತು ಧಾರ್ಮಿಕ ಚರ್ಚೆಗಳು

ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಚಾರಿತ್ರಿಕ ಮತ್ತು ಧಾರ್ಮಿಕ ಅಡೆತಡೆಗಳೇ ಕಾರಣ ಎನ್ನುವುದು ಇಂದಿಗೂ ಚಾಲ್ತಿಯಲ್ಲಿರುವ ಜನಪ್ರಿಯವಾದ. ಮೊದಲನೆಯದಾಗಿ ಮುಖ್ಯವಾದ ಕಾರಣವೆಂದರೆ, ಚಾರಿತ್ರಿಕ ನೋವುಗಳು ಮುಸ್ಲಿಮರ ಪರವಾಗಿಲ್ಲ. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಯು ನಮ್ಮನ್ನು ಭಾರತದ ಚರಿತ್ರೆಗೆ ಕೊಂಡೊಯ್ಯುತ್ತದೆ. ಅಭಿವೃದ್ಧಿ ಚಿಂತಕರು ಮುಸ್ಲಿಮರ ಹಿಂದುಳಿಯುವಿಕೆಗೆ ಚರಿತ್ರೆಯತ್ತ ಮುಖಮಾಡುತ್ತಾರೆ. ಶಿಕ್ಷಣದ ಅಸಮಾನ ಹಂಚಿಕೆಯ ಕಾರಣದಿಂದಾಗಿ ಮುಸ್ಲಿಮರ ಶಿಕ್ಷಣ ಹಿಂದುಳಿದಿದೆ ಎಂದು ವಾದಿಸಲಾಗುತ್ತಿದೆ. ಬ್ರಿಟೀಷರ ಕಾಲದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಅನುಕೂಲಕರವಾದ ಸ್ಥಳಗಳಲ್ಲಿ ಅಂದರೆ ಬಂದರುಗಳಿರುವ ಸ್ಥಳಗಳಲ್ಲಿ ಸ್ಥಾಪಿಸುತ್ತಿದ್ದರು. ಈ ಸ್ಥಳಗಳಿಂದ ಶಿಕ್ಷಣ ಪ್ರಸಾರಗೊಳ್ಳಲು ಹೆಚ್ಚು ಸಮಯ ಬೇಕಾಯಿತು. ಬಹುಸಂಖ್ಯಾತ ಮುಸ್ಲಿಮರು ಇಂತಹ ಪಟ್ಟಣಗಳಿಂದ ಅತೀ ದೂರದಲ್ಲಿ ವಾಸವಿದ್ದುದರಿಂದ

ಅವರಿಗೆ ಶಿಕ್ಷಣ ಸಮಾನವಾಗಿ ಲಭ್ಯವಾಗಲಿಲ್ಲ. ಇಂತಹ ಪರಿಸ್ಥಿತಿಯಿಂದಾಗಿ ಮುಸ್ಲಿಮರಿಗೆ ಶಿಕ್ಷಣ ಅತ್ಯಂತ ತಡವಾಗಿ ಲಭ್ಯವಾಗಿದ್ದು, ಈ ಕ್ಷೇತ್ರದಲ್ಲಿ ಹೆಚ್ಚು ಸಾಧನೆ ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವರು ಶೈಕ್ಷಣಿಕವಾಗಿ ಹಿಂದುಳಿಯಬೇಕಾಯಿತು.[೩೬] ಇದು ಅವರನ್ನು ಇತರೆ ಸಮುದಾಯಗಳನ್ನು ಮುಟ್ಟಲು ಹೆಚ್ಚು ಸಮಯಬೇಕಾಯಿತು.

ಶೈಕ್ಷಣಿಕವಾಗಿ ಹಿಂದುಳಿಯುವಿಕೆ ಭಾರತದ ವಿಭಜನೆ ಮತ್ತು ಪಾಕಿಸ್ಥಾನದ ನಿರ್ಮಾಣದ ಸಂದರ್ಭ ಆಳವಾದ ಪ್ರಭಾವ ಬೀರಿತು. ಭಾರತದ ವಿಭಜನೆಯಾದಾಗ ಶಿಕ್ಷಿತರು ಮಧ್ಯಮ ವರ್ಗದವರು, ವೃತ್ತಿಪರರು, ಮತ್ತು ಸಮುದಾಯದ ಉನ್ನತ ವರ್ಗ ಪಾಕಿಸ್ಥಾನಕ್ಕೆ ವಲಸೆ ಹೋಯಿತು. ಭಾರತದಲ್ಲಿ ಉಳಿದವರು ಕೇವಲ ಕುಶಲ ಕರ್ಮಿಗಳು, ಕೃಷಿ ಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಸಣ್ಣ ಹಿಡುವಳಿದಾರರು ಮತ್ತು ಅಸಂಖ್ಯಾತ ಅವಿದ್ಯಾವಂತರು ಮಾತ್ರ, ಭಾರತದ ವಿಭಜನೆ ಮುಸ್ಲಿಂ ಸಮುದಾಯದ ಶೈಕ್ಷಣಿಕ ಬುನಾದಿಯನ್ನು ಅಲ್ಲಾಡಿಸಿದ್ದು ಮಾತ್ರವಲ್ಲ ಬದಲಾಗಿ ಶಿಕ್ಷಿತರು, ಉತ್ತಮ ಉದ್ಯೋಗಸ್ಥರ ಮಾದರಿಗಳನ್ನೂ ಕೂಡ ಮುಸ್ಲಿಮರಿಗೆ ಇಲ್ಲವಾಗಿಸಿತು.[೩೭] ಹಾಗಾಗಿ ಚಾರಿತ್ರಿಕ ಕಾಲಘಟ್ಟಗಳು ಮುಸ್ಲಿಮರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಿದವು.ಎರಡನೆಯದಾಗಿ ಇಸ್ಲಾಂ ಧರ್ಮವು ಧಾರ್ಮಿಕ ಶಿಕ್ಷಣಕ್ಕೆ ಅಧಿಕ ಒಲವು ತೋರಿಸುತ್ತದೆ. ಅದ್ದರಿಂದ ಇಸ್ಲಾಂ ಧರ್ಮದ ದೃಷ್ಟಿಕೋನವೇ ಮುಸ್ಲಿಮರಿಗೆ ಆಧುನಿಕ ಶಿಕ್ಷಣ ಪಡೆದುಕೊಳ್ಳಲು ಪ್ರಮುಖ ಅಡ್ಡಿ ಎಂದು ಭಾವಿಸಲಾಗಿದೆ. ಆದ್ದರಿಂದಲೇ ಪೋಷಕರು ತಮ್ಮ ಮಕ್ಕಳನ್ನು ಧಾರ್ಮಿಕ ಶಿಕ್ಷಣ ಪಡೆದುಕೊಳ್ಳಲು ಕಳುಹಿಸುತ್ತಾರೆ, ಆ ಮೂಲಕ ತಮ್ಮ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳುತ್ತಾರೆ.[೩೮] ಎಂದು ಹೇಳಲಾಗುತ್ತದೆ. ಮೂರನೆಯದಾಗಿ, ಸಾಮಾನ್ಯವಾಗಿ ಮುಸ್ಲಿಂ ಸಮಾಜಗಳು ಮಹಿಳೆಯರಿಗೆ ಕೆಳ ದರ್ಜೆಯ ಸ್ಥಾನವನ್ನು ನೀಡಿದ್ದು, ಅವರನ್ನು ಶಿಕ್ಷಣಕ್ಕಾಗಲಿ ಅಥವಾ ಉದ್ಯೋಗಕ್ಕಾಗಲಿ ಮನೆಯ ಹೊರಗಡೆ ಕಳುಹಿಸುವುದಿಲ್ಲ ಎಂದು ಗ್ರಹಿಸಲಾಗುತ್ತದೆ. ಶೈಕ್ಷಣಿಕವಾಗಿ ಹಿಂದುಳಿಯಲು ಮುಸ್ಲಿಂ ಬಾಲಕ ಮತ್ತು ಬಾಲಕಿಯರನ್ನು ಸಮಾನವಾಗಿ ನೋಡದಿರುವುದೇ ಪ್ರಮುಖ ಕಾರಣವಾಗಿದೆ. ಎಲ್ಲಿಯವರೆಗೂ ಇಬ್ಬರನ್ನೂ ಸಮವಾಗಿ ಕಾಣುವುದಿಲ್ಲವೋ ಅಲ್ಲಿಯವರೆಗೆ ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದಿರುತ್ತದೆ. ಈ ಲಕ್ಷಣಗಳು ಸಮುದಾಯದಲ್ಲಿ ಬೇರು ಮಟ್ಟದವರೆಗೆ ಆಳವಾಗಿ ಬೇರೂರಿವೆ.[೩೯] ಈ ಎಲ್ಲಾ ಕಾರಣಗಳಿಂದಾಗಿ ಮುಸ್ಲಿಮರು ಇಂದಿಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಈ ಅಂಶವನ್ನು ವಿವಿಧ ಅಧ್ಯಯನಗಳು ಮತ್ತು ಸರ್ಕಾರದ ದಾಖಲೆಗಳು ಸಾಬೀತುಪಡಿಸುತ್ತವೆ. ವಿವಿಧ ಸಮುದಾಯಗಳು ಶೈಕ್ಷಣಿಕವಾಗಿ ಹಿಂದುಳಿದಿರುವ ಚರ್ಚೆಗಳನ್ನು ಮುಸ್ಲಿಮರಿಗೆ ಅನ್ವಯಿಸು ವಂತಿಲ್ಲ. ಮುಸ್ಲಿಮರ ಅನನ್ಯತೆಗಳು ಇತರೆ ಸಮುದಾಯದ

ಅನನ್ಯತೆಗಳಿಗಿಂತ ಭಿನ್ನವಾಗಿರುವುದು ಇದಕ್ಕೆ ಕಾರಣ. ಮುಸ್ಲಿಮರು ಬಹುರೂಪಿ ಸಮುದಾಯವಾಗಿರುವುದರಿಂದ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ಇರುವ ಕಾರಣಗಳು ಕೂಡ ಭಿನ್ನ ಮತ್ತು ಬಹುರೂಪಿಯಾಗಿವೆ.

### ೧.೧೫. ಮುಸ್ಲಿಮರ ಕನಿಷ್ಟ ಶಿಕ್ಷಣ: ಸೈದ್ಧಾಂತಿಕ ಪರಿಕಲ್ಪನೆಗಳು

ಮುಸ್ಲಿಮರು ಕನಿಷ್ಟ ಶಿಕ್ಷಣ ಮಟ್ಟವನ್ನು ಹೊಂದಿರುವ ಬಗ್ಗೆ ಎರೆಡು ಸೈದ್ಧಾಂತಿಕ ವಾದಗಳು ಚರ್ಚೆಯಲ್ಲಿವೆ. ಮೊದಲನೆಯದಾಗಿ ಅದರ ಪರಿಕಲ್ಪನೆಯ ಮೂಲ. ಇದರ ಪ್ರಕಾರ ನಿರ್ದಿಷ್ಟಪಡಿಸಿದ ಧರ್ಮಶಾಸ್ತ್ರೀಯ ಊಹೆಗಳಲ್ಲಿ ಅದರ ಮೂಲವಿದೆಎನ್ನಲಾಗಿದೆ. ಈ ಊಹೆ ನಂಬುವ ಪ್ರಕಾರ ಒಂದು ಧರ್ಮವು ನಿರ್ದಿಷ್ಟ ನಂಬಿಕೆ, ಮೌಲ್ಯಗಳು, ಪದ್ಧತಿಗಳು, ನಡವಳಿಗಳು ಮತ್ತು ವರ್ತನೆಗಳನ್ನು ವ್ಯಕ್ತಿಯ ಜೀವನಕ್ಕೆ ನಿಗದಿಪಡಿಸುತ್ತದೆ. ಇವುಗಳನ್ನು ವ್ಯಕ್ತಿಯು ಗುಂಪಿನೊಂದಿಗೆ ಹಂಚಿಕೊಳ್ಳುತ್ತಾನೆ. ಈ ಸಂಗತಿಯಲ್ಲಿ ಒಂದು ಧರ್ಮವು ಮತ್ತೊಂದು ಧರ್ಮಕ್ಕಿಂತ ಭಿನ್ನವಾಗಿರುತ್ತದೆ. ಧರ್ಮವು ತನ್ನ ಅನುಯಾಯಿಗಳ ಸಮಾಜೋ-ಆರ್ಥಿಕ ಜೀವನ ಮತ್ತು ಸಾಧನೆಗಳನ್ನು ನಿಯಂತ್ರಿಸುವ ಪ್ರಭಾವಿಸುವ, ನಿರ್ಧರಿಸುವ, ಸೀಮಿತಗೊಳಿಸುವ ಮತ್ತು ನಿರ್ದೇಶಿಸುವ ಕೆಲಸವನ್ನು ಮಾಡುತ್ತದೆ.[೪೦] ಭಾರತದ ಮಟ್ಟಿಗೆ ಹೇಳುವುದಾದರೆ, ಮುಸ್ಲಿಮರ ಶಿಕ್ಷಣವು ಧರ್ಮದೊಂದಿಗೆ ಅಂತರ್ಗತಗೊಂಡಿದೆ. ಇಸ್ಲಾಂ ಧರ್ಮವು ಮುಸ್ಲಿಮರ ಶಿಕ್ಷಣವನ್ನು ನಿರ್ಧರಿಸುತ್ತದೆ ಎಂದು ಮೊದಲು ಹೇಳಿದವನು ಹಂಟರ್.ಹಾಗಾಗಿ ಬೇಗ್ ಹೇಳುವ ಪ್ರಕಾರ ಮುಸ್ಲಿಮರ ಗೊಡ್ಡು ಸಂಪ್ರದಾಯಗಳು ಹಾಗೂ ಅಲೌಕಿಕ ಸಂಗತಿಗಳು ಸಾಮಾಜಿಕ ಸುಧಾರಣೆ ಬರುವವರೆಗೂ ವೈಜ್ಞಾನಿಕ ಶಿಕ್ಷಣಕ್ಕೆ ವಿರುದ್ಧವಾಗಿತ್ತು.[೪೧] ಮುಸ್ಲಿಂ ಸಮುದಾಯದ ಆರ್ಥಿಕ ಅಡ್ಡಿಗಳು ಅವರ ಶಿಕ್ಷಣ ಪಡೆಯುವಿಕೆಗೆ ಬಾಗಶಃ ಅಡ್ಡಿಯಾಗಿವೆ. ಮುಸ್ಲಿಮರ ಧಾರ್ಮಿಕ ಪಠ್ಯಗಳು ಅವರಿಗೆ ಆಧುನಿಕ ಶಿಕ್ಷಣ ಪಡೆಯುವಲ್ಲಿ ಅಡ್ಡಿಯಾಗಿವೆ. ಹಾಗಾಗಿ ಸಾಮಾನ್ಯ ಶಾಲೆಗಳಲ್ಲಿ ಅವರ ಪ್ರಾತಿನಿಧ್ಯ ಕಷ್ಟವಾಗಿದೆ ಎಂದು ಶರ್ಮ ವಾದಿಸುತ್ತಾರೆ.[೪೨] ಈ ವಾದಗಳು ತೀವ್ರ ಟೀಕೆಗೆ ಒಳಗಾಗಿವೆ. ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಎಲ್ಲಾ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ ಎನ್ನುವುದು ಟೀಕೆಗೆ ನೀಡುತ್ತಿರುವ ಉತ್ತರವಾಗಿದೆ.

### ೧.೧೬. ಇಸ್ಲಾಂ ದೃಷ್ಟಿಕೋನ ಮತ್ತು ಮುಸ್ಲಿಂ ಮಹಿಳಾ ಶಿಕ್ಷಣ

ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಎಲ್ಲಾ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ.[೪೩] ಕುರಾನ್‌ನ ಉಲ್ಲೇಖದ ಪ್ರಕಾರ ಮಹಮದ್ ಪೈಗಂಬರರು ಕಡ್ಡಾಯವಾಗಿ ಜ್ಞಾನ ಪಡೆಯುವಂತೆ ಹಾಗೂ ಜ್ಞಾನಕ್ಕಾಗಿ ಎಷ್ಟೇ ದೂರವಾದರೂ ಪಯಣಿಸುವಂತೆ ಮುಸ್ಲಿಮರಿಗೆ ಉಪದೇಶ ನೀಡಿದ್ದಾರೆ.[೪೪] ಇಸ್ಲಾಂ ತನ್ನ ಅನುಯಾಯಿಗಳಿಗೆ ಜ್ಞಾನದಿಂದ ಸಬಲೀಕರಣಗೊಳ್ಳಲು ಪ್ರೇರೇಪಿಸುತ್ತದೆ ಮತ್ತು

ಎಲ್ಲಾ ಜ್ಞಾನ ಶಾಖೆಗಳಿಂದ ಪ್ರಭಲಗೊಳ್ಳಲು ಉತ್ತೇಜಿಸುತ್ತದೆ[೪೫] ಸಬಲೀಕರಣವನ್ನು ವಿವಿಧ ಆಯಾಮಗಳ ಮೂಲಕ ವ್ಯಾಖ್ಯಾನಿಸಲಾಗುತ್ತದೆ. ಒಬನ್ಯ.[೪೬] ವ್ಯಾಖ್ಯಾನಿಸುವ ಪ್ರಕಾರ ಸಬಲೀಕರಣ ನಿರಂತರ ಹಾಗೂ ಜೀವಮಾನದುದ್ದಕ್ಕೂ ಕೈಗೊಳ್ಳುವ ಪ್ರಕ್ರಿಯೆಯಾಗಿದ್ದು, ನಿರ್ದಿಷ್ಟ ಗುರಿ ಸಾಧಿಸುವತ್ತ ನಿರಂತರವಾಗಿ ನಿಗದಿಪಡಿಸುವ ಪ್ರಯತ್ನವಾಗಿದೆ. ದುಲಿಯೇಮಿ.ಎ.ಎನ್ ವ್ಯಾಖ್ಯಾನಿಸುವ ಪ್ರಕಾರ ಜನ ಅಥವಾ ಸಮುದಾಯಗಳು ತಮ್ಮ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಜೀವನವನ್ನು ನಿಯಂತ್ರಿಸಲು ಪಡೆದುಕೊಳ್ಳುವ ಶಕ್ತಿ ಮತ್ತು ಸಾಮರ್ಥ್ಯದ ಪ್ರಕ್ರಿಯೆಯಾಗಿದೆ[೪೭] ಕುರಾನ್ ಆಗಲಿ ಅಥವಾ ಹದೀಸ್ ಆಗಲಿ ಶಿಕ್ಷಣ ಪಡೆಯಲು ಮುಸ್ಲಿಮರಿಗೆ ಅಡ್ಡಿಪಡಿಸುವುದಿಲ್ಲ.[೪೮] ಇಸ್ಲಾಂ ದೃಷ್ಟಿಯಲ್ಲಿ ಶಿಕ್ಷಣವನ್ನು ಪಡೆಯುವುದು ಉತ್ತಮ ಕಾರ್ಯಗಳಲ್ಲೊಂದಾಗಿದೆ. ಇಸ್ಲಾಂ ಮಹಿಳಾ ಶಿಕ್ಷಣ ವಿರೋಧಿ ಎನ್ನವುದು ಒಂದು ತಪ್ಪು ಗ್ರಹಿಕೆಯಾಗಿದೆ. ಕುರಾನ್ ಮತ್ತು ಹದೀಸ್‌ಗಳಲ್ಲಿ ಪುರುಷ ಮತ್ತು ಮಹಿಳೆಯರು ಸಮಾನವಾಗಿ ಶಿಕ್ಷಣ ಪಡೆಯುವಂತೆ ಒತ್ತಾಯಿಸಲಾಗಿದೆ. ಮಹಿಳೆಯು ಶಿಕ್ಷಣದ ಮೂಲಕ ಜ್ಞಾನ ಮತ್ತು ನೈತಿಕ ಮಟ್ಟವನ್ನು ಎತ್ತರಿಸಿಕೊಂಡು ಅದನ್ನು ಸಮಾಜಕ್ಕೆ ವಿನಿಯೋಗ ಮಾಡಬೇಕೆಂದು ಹೇಳಿದೆ.[೪೯] ಇಸ್ಲಾಂ ದೃಷ್ಟಿಯಲ್ಲಿ ಪುರುಷ ಮತ್ತು ಮಹಿಳೆಯರು ಎಲ್ಲಾ ವಿಷಯದಲ್ಲಿ ಸಮಾನರಾಗಿದ್ದಾರೆ. ಇವರಿಬ್ಬರ ಮದ್ಯೆ ಯಾವುದೇ ವ್ಯತ್ಯಾಸವಿಲ್ಲ. ಕುರಾನ್ ಲಿಂಗಾಧಾರಿತ ಶ್ರೇಣಿಯನ್ನು ಪುರಷ್ಕರಿಸುವುದಿಲ್ಲ.[೫೧]

ಆರಂಭಿಕ ಇಸ್ಲಾಮಿಕ್ ದಿನಗಳಲ್ಲಿ ಪುರುಷ ಮತ್ತು ಮಹಿಳೆಯರಿಗೆ ಸಮಾನ ಶೈಕ್ಷಣಿಕ ಹಕ್ಕನ್ನು ನೀಡಲಾಗಿತ್ತು. ಆದರೆ ಅದು ಬಹಳ ದಿನ ಉಳಿಯಲಿಲ್ಲ. ಕೊನೆ ಕೊನೆಗೆ ಮಹಿಳೆಯರಿಗೆ ಶೈಕ್ಷಣಿಕ ಹಕ್ಕನ್ನು ನಿರಾಕರಿಸಲಾಯಿತು. ಅಂತಿಮವಾಗಿ ಮಹಿಳೆಯರನ್ನು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಲಾಯಿತು. ಮಹಿಳೆಗೆ ಕೇವಲ ಧಾರ್ಮಿಕ ಶಿಕ್ಷಣ ಸಾಕು ಎನ್ನುವ ತೀರ್ಮಾನಕ್ಕೆ ಬರಲಾಯಿತು. ಅವರನ್ನು ಮನೆಗೆ ಸೀಮಿತಗೊಳಿಸಿ, ಆಧುನಿಕ ಶಿಕ್ಷಣವನ್ನು ನಿರಾಕರಿಸಿ, ಆಧುನಿಕ ಶಿಕ್ಷಣವು ಸಂಪ್ರದಾಯ ವಿರೋಧಿ ಎಂದು ಬಿಂಬಿಸಲಾಯಿತು. ಅಂತಿಮವಾಗಿ ಇಸ್ಲಾಂ ಕೂಡ ಒಪ್ಪದ ಉಳಿಗಮಾನ್ಯ ಸಂಪ್ರದಾಯಗಳ ಮೂಲಕ ಮಹಿಳೆಗೆ ಶಿಕ್ಷಣವನ್ನು ನಿರಾಕರಿಸಿ, ಅವರನ್ನು ಕೃತಕ ಸಂಪ್ರದಾಯಗಳಿಗೆ ದೂಡಲಾಯಿತು.[೫೧]ಆದ್ದರಿಂದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆ, ಆಧುನಿಕ ಮನೋಭಾವದ ಕೊರತೆ ಮತ್ತು ಅವರಲ್ಲಿ ಮೌಲ್ಯಗಳ ಕೊರತೆಗೆ ಉಳಿಗಮಾನ್ಯ ಮನೋಭಾವನೆಯೇ ಕಾರಣವಾಗಿದೆ. ಧಾರ್ಮಿಕ ಕಂದಾಚಾರ, ಸಾಮಾಜಿಕ ಪೂರ್ವಗ್ರಹಗಳು ಇಸ್ಲಾಂ ಧರ್ಮದ ಕೊಡುಗೆಯಲ್ಲ. ಆದರೆ ಇಂದು ಇಸ್ಲಾಂನಲ್ಲಿರುವ ಮಹಿಳಾ ಮೌಲ್ಯಗಳನ್ನು ವಾಸ್ತವಿಕವಾಗಿ ಪಾಲಿಸಲಾಗುತ್ತಿಲ್ಲ. ಇಸ್ಲಾಂನಲ್ಲಿ ಮಹಿಳೆಯರಿಗೆ ನೀಡಿರುವ ಸ್ಥಾನಕ್ಕೂ ಅವರು ಇಂದು ಅನುಭವಿಸುತ್ತಿರುವ ಸ್ಥಾನ-ಮಾನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಮುಸ್ಲಿಂ

ಮಹಿಳೆಯರಲ್ಲಿ ಅನಕ್ಷರತೆ ವ್ಯಾಪಕವಾಗಿ ಬೆಳೆಯುತ್ತಿದೆ. ಇಂದಿಗೂ ಅದೇ ಸ್ಥಿತಿ ಮುಂದುವರೆದಿದೆ. ಹಲವಾರು ಪ್ರಯತ್ನಗಳ ಮಧ್ಯೆಯೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ.[೩೨] ಈ ಎಲ್ಲಾ ವಿವರಣೆಗಳು ಮುಸ್ಲಿಮರು ಏಕರೂಪಿ ಸಮುದಾಯವೆಂದು. ಒಂದು ಕಡೆ ಇಸ್ಲಾಂ ವ್ಯಕ್ತಿಯ ಕುಟುಂಬ ಸ್ವರೂಪ, ವಿಚ್ಛೇದನವನ್ನು ಮತ್ತು ಮತ್ತೊಂದೆಡೆ ಶಿಕ್ಷಣ, ಉದ್ಯೋಗ ಮತ್ತು ಬಡತನವನ್ನು ನಿಯಂತ್ರಿಸುವ ಮತ್ತು ಕಟ್ಟಳೆಗಳನ್ನು ವಿಧಿಸುವ ಧರ್ಮವೆಂದು ಪರಿಭಾವಿಸುವ ಪ್ರಜ್ಞೆಯನ್ನು ಮೂಡಿಸುತ್ತದೆ.೩೩ ವಿವಿಧ ವೈಜ್ಞಾನಿಕ ಮತ್ತು ವಿಶ್ಲೇಷಣಾತ್ಮಕ ಅಧ್ಯಯನಗಳು ನಿರೂಪಿಸಿರುವಂತೆ ಮುಸ್ಲಿಮರು ಬಹುರೂಪಿ ಸಮುದಾಯವಾಗಿದ್ದು, ಇತರೆ ಸಮುದಾಯಗಳಂತೆ ವರ್ಗ ಮತ್ತು ಜಾತಿ ಆಧಾರದಲ್ಲಿ ವಿಭಜಿಸಲ್ಪಟ್ಟಿದ್ದಾರೆ. ಬಹುತೇಕ ಪ್ರದೇಶಗಳಲ್ಲಿ ಮುಸ್ಲಿಮೇತರರ ಸಂಪ್ರದಾಯಗಳನ್ನೇ ಅನುಸರಿಸುತ್ತಿದ್ದಾರೆ.[೩೪] ಧರ್ಮಾಧಾರಿತ ಲಕ್ಷಣಗಳ ಊಹೆ ಆಧಾರಿತ ಮತ್ತೊಂದು ವಾದವೆಂದರೆ, ಮುಸ್ಲಿಮರ ಕನಿಷ್ಟ ಶೈಕ್ಷಣಿಕ ಮಟ್ಟಕ್ಕೂ ಅವರ ಸಮಾಜೋ-ಆರ್ಥಿಕ ಸ್ಥಿತಿಗಳಿಗೂ ನೇರವಾದ ಸಂಬಂಧವಿದೆ. ವಿವಿಧ ಪ್ರದೇಶಗಳಲ್ಲಿರುವ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳಲ್ಲಿರುವ ವ್ಯತ್ಯಾಸಗಳಿಗೆ ಅವರ ಸಮಾಜೋ-ಆರ್ಥಿಕ ಸ್ಥಿತಿಗಳೇ ಕಾರಣವಾಗಿದೆ. ಹಾಗಾಗಿ ಶಿಕ್ಷಣ ಎಲ್ಲಾ ಪ್ರದೇಶದ ಮುಸ್ಲಿಮರಿಗೆ ಸಮಾನವಾಗಿ ವಿತರಣೆಯಾಗಿಲ್ಲ.[೩೫] ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ, ಒಂದು ಸಮುದಾಯದ ಶೈಕ್ಷಣಿಕ ಮಟ್ಟವು ಆ ಸಮುದಾಯದಲ್ಲಿ ಶಿಕ್ಷಣ ಬಯಸುವವರ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಹಾಗಾಗಿ ಮುಸ್ಲಿಂ ಸಮುದಾಯದ ಶೈಕ್ಷಣಿಕ ಹಿಂದುಳಿಯುವಿಕೆಯನ್ನು ಸಮುದಾಯದ ಶಿಕ್ಷಣ ಅಪೇಕ್ಷಿತರ ಸಣ್ಣ ಸಂಖ್ಯೆಯ ನೆಲೆಯಲ್ಲಿ ನೋಡಲಾಗುತ್ತಿದೆ.[೩೬] ಈ ಉಹಾತ್ಮಕವಾದವನ್ನು ವ್ಯಾಪಕವಾಗಿ ಸ್ವೀಕರಿಸಲಾಗಿದೆ. ಸ್ವಾತಂತ್ರ್ಯ ನಂತರ ವಿವಿಧ ಹಂತಗಳು ಮತ್ತು ಅನೇಕ ಸಮುದಾಯಗಳ ನಡುವೆ ಶೈಕ್ಷಣಿಕ ಅವಕಾಶಗಳನ್ನು ವಿಸ್ತರಿಸಲಾಗಿದೆ.[೩೭] ಆದರೆ ಶಿಕ್ಷಣವು ಸಾರ್ವತ್ರಿಕವಾಗಿ ಮತ್ತು ಸಮಾನವಾಗಿ ವಿತರಣೆಯಾಗಿದೆಯೆ? ಎನ್ನುವ ಪ್ರಶ್ನೆ ಇನ್ನೂ ಜೀವಂತವಾಗಿದೆ.[೩೮] ಮುಸ್ಲಿಂ ಸಮುದಾಯದಲ್ಲಿ ಮಡುಗಟ್ಟಿರುವ ಸಮಾಜೋ-ಆರ್ಥಿಕ ಹಿಂದುಳಿಯುವಿಕೆಯು ಅವರನ್ನು ಶಿಕ್ಷಣಕ್ಕಾಗಿ ಒತ್ತಾಯಿಸುವಂತೆ ಪ್ರೇರೇಪಿಸಿಲ್ಲ[೩೯]ಎನ್ನುವುದು ಆಧುನಿಕ ಕಾಲಮಾನದ ಪ್ರಮುಖವಾದವಾಗಿದೆ. ಹಾಗಾಗಿ ಇಂದಿಗೂ ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದಿದೆ. ಈ ಸಮುದಾಯದ ಮಹಿಳೆಯ ಸ್ಥಿತಿಗಳು ಅತ್ಯಂತ ಕನಿಷ್ಟ ಸ್ಥಿತಿಯಲ್ಲಿವೆ. ವಿವಿಧ ಪ್ರದೇಶಗಳ ಅಧ್ಯಯನಗಳು ಇದನ್ನು ಸಾಬೀತುಪಡಿಸುತ್ತವೆ.

### ೧.೧೭. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು

ಸ್ವಾತಂತ್ರ್ಯದ ನಂತರ ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರ ಸಾಕ್ಷರತೆ ಪ್ರಮಾಣ ಅತ್ಯಂತ ಕಡಿಮೆಯಾಗಿದೆ. ಮುಸ್ಲಿಮರು ಮತ್ತು ಇತರೆ ಸಮುದಾಯಗಳ ನಡುವೆ

ಶೈಕ್ಷಣಿಕ ಅಂತರ ಹೆಚ್ಚಾಗಿದ್ದು, ೮೦ರ ದಶಕದ ನಂತರ ಅದರ ಅಂತರ ಇನ್ನೂ ಹೆಚ್ಚಾಗಿದೆ.[೬೦] ೨೦೦೧ರ ಜನಗಣತಿಯ ಪ್ರಕಾರ ರಾಜ್ಯದಲ್ಲಿ ಮುಸ್ಲಿಮರ ಸಾಕ್ಷರತೆ ಪ್ರಮಾಣ ಶೇ.೫೯.೧೧ ಇದ್ದು ರಾಷ್ಟ್ರೀಯ ಸರಾಸರಿ ಶೇ.೬೪.೮ ರಷ್ಟಿದೆ[೬೧] ಅರ್ಧದಷ್ಟು ಗ್ರಾಮೀಣ ಮುಸ್ಲಿಂ ಮಕ್ಕಳು ಮತ್ತು ೧/೩ ನಗರವಾಸಿ ಮುಸ್ಲಿಂ ಮಕ್ಕಳು ಅನಕ್ಷರಸ್ಥರು. ೧೦ ಮುಸ್ಲಿಂ ಮಕ್ಕಳಲ್ಲಿ ಒಂದು ಮಗು ಶಾಲೆಯಿಂದ ಹೊರಗುಳಿದಿದೆ. ಅಂದರೆ ಮುಸ್ಲಿಮರಲ್ಲಿ ಹೊರಗುಳಿದ ಮಕ್ಕಳ ಸಂಖ್ಯೆ ಅರ್ಧದಷ್ಟಿದೆ[೬೨] ೬-೧೪ ವಯೋಮಾನದ, ಶೇ.೨೫% ಮುಸ್ಲಿಂ ಮಕ್ಕಳು ಶಾಲೆಗೆ ಸೇರಿಲ್ಲ ಅಥವಾ ಅರ್ಧದಲ್ಲೇ ಶಾಲೆ ಬಿಟ್ಟವರಾಗಿದ್ದಾರೆ. ಇತರೆ ಎಲ್ಲಾ ಸಮುದಾಯದವರಿಗೆ ಹೋಲಿಸಿದರೆ ಪ್ರಾಥಮಿಕ ಶಾಲೆಯನ್ನು ಪೂರೈಸಿದವರ ಸಂಖ್ಯೆ ಮುಸ್ಲಿಮರಲ್ಲಿ ಅತ್ಯಂತ ಕಡಿಮೆ[೬೩] ಮಾನವ ಹಕ್ಕುಗಳ ಈ ಯುಗದಲ್ಲಿ ಶಿಕ್ಷಣವು ಕೇವಲ ಸಮಾಜ ಕಲ್ಯಾಣ ಕಾರ್ಯಕ್ರಮವಾಗಿರದೆ, ಅದು ಮೂಲಭೂತ ಹಕ್ಕಾಗಿ ಪರಿವರ್ತಿತಗೊಂಡಿದೆ. ಈ ಮೂಲಭೂತ ಹಕ್ಕು ಮಾನವ ಅಭಿವೃದ್ಧಿಯ ಮೂಲ ನೆಲೆಯಾಗಿ ರೂಪಿತಗೊಂಡಿದೆ. ಶಿಕ್ಷಣವು ಅಭಿವೃದ್ಧಿಯ ತಳಪಾಯವಾಗಿದೆ. ಮಾನವಾಭಿವೃದ್ಧಿ ಪರಿಕಲ್ಪನೆಯ ಪ್ರಕಾರ ಶಿಕ್ಷಣದ ಮೂಲಕವೇ ಅಭಿವೃದ್ಧಿ ಎಂಬ ಮಾತು ಹೆಚ್ಚಾಗಿ ಕೇಳಿಬರುತ್ತಿದೆ. ಯಾವ ಪ್ರದೇಶ ಶೈಕ್ಷಣಿಕವಾಗಿ ಅಭಿವೃದ್ಧಿ ಸಾಧಿಸಿರುತ್ತದೆಯೋ ಆ ಪ್ರದೇಶದಲ್ಲಿ ಸಾಮಾಜಿಕ ಅವಕಾಶಗಳು ಮತ್ತು ಸಮಾನತೆ ಹೆಚ್ಚು ಪರಿಣಾಮಕಾರಿಯಾಗಿ ದೊರೆತಿರುವುದನ್ನು ಮಾನವ ಅಭಿವೃದ್ಧಿ ವರದಿಗಳು ಸ್ಪಷ್ಟವಾಗಿ ಗುರುತಿಸಿವೆ. ಅಭಿವೃದ್ಧಿ ಎನ್ನುವುದು ಭಿಕ್ಷೆಯಲ್ಲ; ಅದು ಮೂಲಭೂತ ಹಕ್ಕು ಎಂಬ ವಾದಗಳು ಇಂದು ಪ್ರಬಲವಾಗಿ ಕೇಳಿಬರುತ್ತಿವೆ. ಶಿಕ್ಷಣವೇ ಅಭಿವೃದ್ಧಿಯ ಅವಿಭಾಜ್ಯ ಅಂಗವಾಗಿದೆ. ಅಮರ್ತ್ಯಸೇನ್ ಈ ವಾದಗಳನ್ನು ತಮ್ಮ ಕೃತಿಗಳಲ್ಲಿ ಗಟ್ಟಿಯಾಗಿ ಪ್ರತಿಪಾದಿಸಿದ್ದಾರೆ.[೬೪] ಹಕ್ಕು ಆಧಾರಿತ ಅಭಿವೃದ್ಧಿ ಕುರಿತು ಚರ್ಚಿಸುತ್ತಿರುವ ವಿದ್ವಾಂಸರು ಶಿಕ್ಷಣವು ಹೇಗೆ ವ್ಯಕ್ತಿಯನ್ನು ವಿಶೇಷವಾಗಿ ಮಹಿಳೆಯರು, ದಲಿತರು, ಅವಕಾಶ ವಂಚಿತರು ಮತ್ತು ಸಮಾಜದ ಅಂಚಿನ ಆಚೆ ತಳ್ಳಲ್ಪಟ್ಟ ಜನರನ್ನು ಸಬಲೀಕರಿಸಬಲ್ಲದು ಎಂಬುದನ್ನು ಒತ್ತಿ ಹೇಳಿದ್ದಾರೆ. ಮಾರ್ತಾಸುಸ್ಪಮ್ ಮತ್ತು ಜೊನಾಥನ್ ಗ್ಲೋವೇರಿ ಸಂಪಾದಿತ 'ವಿಮನ್ ಕಲ್ಚರ್ ಅಂಡ್ ಡೆವೆಲಪ್‌ಮೆಂಟ್' ಕೃತಿಯಲ್ಲಿ ಈ ವಿಚಾರಗಳನ್ನು ದಟ್ಟವಾಗಿ ಗುರುತಿಸಿರಬಹುದು. ಈ ಕೃತಿಯಲ್ಲಿ ಶಿಕ್ಷಣವು ಮಹಿಳೆಯರ ಸಬಲೀಕರಣಕ್ಕೆ ಹೇಗೆ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತದೆ ಎಂಬುದರ ಧಾಳವಾದ ಚರ್ಚೆಗಳನ್ನು ಗುರುತಿಸಬಹುದು. ಶಿಕ್ಷಣವೆಂದರೇನು? ಸಾಕ್ಷರತೆ ಮತ್ತು ಶಿಕ್ಷಣ ಒಂದೇ ಎಂದು ಪರಿಭಾವಿಸಬಹುದೇ? ಎಂಬ ಚರ್ಚೆಗಳು ಹಿಂದಿನಿಂದಲೂ ನಡೆಯುತ್ತಲಿವೆ. ಶಿಕ್ಷಣವು ಜ್ಞಾನ ಸಂಪಾದನೆಯ ಒಂದು ಸಾಧನವೇ ಹೊರತು ಅಂತಿಮವಲ್ಲ ಎಂಬ ವಾದಗಳು ಚಾಲ್ತಿಯಲ್ಲಿವೆ. ಮನುಷ್ಯನನ್ನು ಸ್ವಾವಲಂಬಿ ಮತ್ತು

ನಿಸ್ವಾರ್ಥಿಯನ್ನಾಗಿ ರೂಪಿಸುವುದೇ ಶಿಕ್ಷಣ ಎಂಬ ವಾದ ಋಗ್ವೇದದ್ದಾದರೆ, ಮನುಷ್ಯನಲ್ಲಿ ಸುಪ್ತವಾಗಿರುವ ದೈವೀಪೂರ್ಣತೆಯ ಅವಿರ್ಭಾವವೇಶಿಕ್ಷಣ ಎನ್ನುವುದು ವಿವೇಕಾನಂದರ ವಾದ. ಸಂಪತ್ತನ್ನು ತಂದುಕೊಡುವ ಮೂಲಭೂತ ಸತ್ಯವನ್ನು ಕಂಡುಹಿಡಿಯಲು ಮನಸ್ಸನ್ನು ತರಬೇತುಗೊಳಿಸಲು ಪ್ರೇರೇಪಿಸುವುದೇ ಶಿಕ್ಷಣ ಎಂದು ವ್ಯಾಖ್ಯಾನಿಸುತ್ತಾರೆ ರವೀಂದ್ರನಾಥ್ ಠಾಗೂರ್. ಇವುಗಳು ಶಿಕ್ಷಣ ಕುರಿತಾದ ವಿಶಾಲವಾದ ವ್ಯಾಖ್ಯಾನಗಳೆಂದು ಪರಿಭಾವಿಸುವುದಾದರೆ, ಸಂಕುಚಿತ ಅರ್ಥದಲ್ಲಿ ಶಿಕ್ಷಣವೆಂದರೆ ಪ್ರಜ್ಞಾ ಪೂರ್ವಕವಾಗಿ ಶಾಲೆಯಲ್ಲಿನ ಕಲಿಕೆ. ಜಾನ್‌ಡ್ಯೂಹಿ ಪರಿಭಾವಿಸುವ ಪ್ರಕಾರ 'ಪಾಠಶಾಲೆ ಒಂದು ಪ್ರಜ್ಞಾ ಪೂರ್ವಕವಾಗಿ ರೂಪಿಸಿದ ಒಂದು ಸಂಸ್ಥೆ ಅದರ ಮುಖ್ಯ ಜವಾಬ್ದಾರಿ ಮಕ್ಕಳಿಗೆ ಶಿಕ್ಷಣ ನೀಡುವುದಾಗಿದೆ.[೬೫]

ಈ ಹಿನ್ನಲೆಯಲ್ಲಿ ಶಾಲೆ ಮತ್ತು ಶಿಕ್ಷಣ ಎರಡೂ ನಿಕಟವಾದ ಸಂಬಂಧವನ್ನು ಹೊಂದಿವೆ. ಒಂದು ನಿರ್ಧಿಷ್ಟ ಕ್ರಮಬದ್ಧತೆಗಾಗಿ ಇಂದು ಶಿಕ್ಷಣ ಪಡೆಯುವ ಹಂತಗಳನ್ನು ಮತ್ತು ವರ್ಷಗಳನ್ನು ನಾವು ನಿರ್ಧಿಷ್ಟ ರೀತಿಯಲ್ಲಿ ಪರಿಭಾವಿಸಿಕೊಂಡಿದ್ದೇವೆ. ಸಂವಿಧಾನ ನಾಲ್ಕನೇ ಅಧ್ಯಾಯದ ರಾಜ್ಯ ನಿರ್ದೇಶಕ ತತ್ವಗಳಲ್ಲಿನ, ೪೫ನೇ ಪರಿಚ್ಛೇದವು ೬ ರಿಂದ ೧೪ ವರ್ಷದೊಳಗಿನ ಶಿಕ್ಷಣವನ್ನು ಉಚಿತ ಮತ್ತು ಕಡ್ಡಾಯಗೊಳಿಸಿದೆ[೬೬] ಈ ಉದ್ದೇಶಕ್ಕಾಗಿ ೨೦೦೯ರ ಕಾಯಿದೆಯ ಪ್ರಕಾರ ಪ್ರಾಥಮಿಕ ಶಿಕ್ಷಣವನ್ನು ೧ ರಿಂದ ೮ನೇ ತರಗತಿಯವರೆಗೆ, ಮಾಧ್ಯಮಿಕ ಶಿಕ್ಷಣವನ್ನು ೯ ರಿಂದ ೧೨ನೇ ತರಗತಿಯವರೆಗೆ ನಂತರದ ಶಿಕ್ಷಣವನ್ನು ಪದವಿ ಹಾಗೂ ಸ್ನಾತಕೋತ್ತರ ಎಂದು ರೂಪಿಸಿಕೊಳ್ಳಲಾಗಿದೆ. ಇಷ್ಟೆಲ್ಲಾ ಕಾನೂನಾತ್ಮಕ ಮತ್ತು ಸಂವಿಧಾನಾತ್ಮಕ ಬೆಂಬಲದ ನಡುವೆಯೂ ಇಂದು ಮುಸ್ಲಿಮರ ಅನಕ್ಷರತೆ ಒಂದು ಗಂಭೀರ ಸಮಸ್ಯೆಯಾಗಿದೆ. ವಿವಿಧ ಅಧ್ಯಯನಗಳು ಈ ವಾದಗಳನ್ನು ಪುಷ್ಠೀಕರಿಸುತ್ತವೆ. ಅನಕ್ಷರತೆಯು ಜಾಗತಿಕ ಸಮಸ್ಯೆಯಾಗಿಯೂ ಪರಿಣಮಿಸಿದೆ. ೨೦೦೧ರ ಜನಗಣತಿಯವರೆಗೂ ಮುಸ್ಲಿಮರ ಸಾಕ್ಷರತೆ ಪ್ರಮಾಣ ದಾಖಲಾಗಿರಲಿಲ್ಲ. ಸಾಚಾರ್ ವರದಿ ಬಹಿರಂಗ ಪಡಿಸಿರುವಂತೆ ದೇಶದ ಒಟ್ಟು ಸಾಕ್ಷರತೆ ಪ್ರಮಾಣ ಶೇ.೬೫.೧ ರಷ್ಟು ಕಂಡುಬಂದರೆ, ಅದರಲ್ಲಿ ಮುಸ್ಲಿಮರ ಸಾಕ್ಷರತೆ ಪ್ರಮಾಣ ಕೇವಲ ಶೇ.೫೯.೧ ರಷ್ಟು ಕಂಡುಬರುತ್ತದೆ. ನಗರವಾಸಿ ಮುಸ್ಲಿಮರು ಮತ್ತು ಮುಸ್ಲಿಮೇತರರ ನಡುವೆ ಸಾಕ್ಷರತೆಯಲ್ಲಿ ಹೆಚ್ಚು ಅಂತರ ಕಂಡುಬರುತ್ತದೆ. ೬ ರಿಂದ ೧೪ವರ್ಷ ವಯೋಮಿತಿಯ ಶೇ.೨೫ರಷ್ಟು ಮುಸ್ಲಿಂ ಮಕ್ಕಳು ಶಾಲೆಗೆ ದಾಖಲಾಗಿಲ್ಲ. ೭ನೇ ತರಗತಿ ಹಂತದಲ್ಲಿ ಶಾಲೆ ಬಿಡುವವರಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದಾರೆ. ಮದರಸಗಳಿಗೆ ಹೋಗುವ ಮಕ್ಕಳ ಪ್ರಮಾಣ ಶೇ.೩ ರಷ್ಟು ಮಾತ್ರ ಕಂಡುಬರುತ್ತದೆ.[೬೭] ೧೪ ರಾಜ್ಯಗಳು ಮತ್ತು ಒಂದು ಕೇಂದ್ರಾಡಳಿತ ಪ್ರದೇಶದ ಒಟ್ಟು ೩೫ ಜಿಲ್ಲೆಗಳ ೨,೯೫ ಮುಸ್ಲಿಂ ಪುರುಷರು ಮತ್ತು ೯೭ ಮುಸ್ಲಿಮೇತರ ಪುರುಷರ ನಮೂನೆ ಆಧಾರಿತ ಅಧ್ಯಯನದಲ್ಲಿ

ಗುರುತಿಸಿರುವಂತೆ ಶೇ.೫೫.೪ ರಷ್ಟು ಮುಸ್ಲಿಮರು ಮತ್ತು ಕೇವಲ ಶೇ.೨೯.೮ ರಷ್ಟು ಮುಸ್ಲಿಮೇತರರು ಅವಿದ್ಯಾವಂತರಾಗಿದ್ದಾರೆ.[೬೮] ೧೯೭೭-೭೮ ಮತ್ತು ೧೯೭೯- ೮೦ ರಲ್ಲಿ ಮುರಾದಾಬಾದ್ ಜಿಲ್ಲೆಯ ವಿದ್ಯಾರ್ಥಿಗಳ ಫಲಿತಾಂಶದ ಅಧ್ಯಯನದಲ್ಲೂ ಮುಸ್ಲಿಂ ವಿದ್ಯಾರ್ಥಿಗಳು ಮುಸ್ಲಿಮೇತರರಿಗಿಂತ ಅತ್ಯಂತ ಹಿಂದುಳಿದಿರುವುದು ಕಂಡುಬಂದಿದೆ. ದೆಹಲಿಯ ಒಟ್ಟು ೬೬೦ ಪ್ರೌಢಶಾಲೆಗಳಲ್ಲಿ ಶೇ.೧.೭ರಷ್ಟು ಮುಸ್ಲಿಂ ವಿದ್ಯಾರ್ಥಿಗಳು ಮಾತ್ರ ಪರೀಕ್ಷೆಗೆ ಕುಳಿತಿರುವುದು ಕಂಡುಬಂದಿದೆ.[೬೯] ೧೯೪೭ ರಿಂದ ೧೯೭೭ರ ವರೆಗಿನ ಅವಧಿಯಲ್ಲಿ ಷೇಖ್ ಅಹಮದ್ ಅವರ ಅಹಮದ್ ನಗರದ ಶೈಕ್ಷಣಿಕ ಅಧ್ಯಯನದಲ್ಲಿ ನಗರದ ಒಟ್ಟು ೨೮,೦೦೦ ಮುಸ್ಲಿಂ ಜನಸಂಖ್ಯೆಯಲ್ಲಿ ಕೇವಲ ೧೦೧ ವಿದ್ಯಾರ್ಥಿಗಳು ಮತ್ತು ೪೨ ವಿದ್ಯಾರ್ಥಿನಿಯರು ಮಾತ್ರ ಎಸ್.ಎಸ್.ಎಲ್.ಸಿ. ವರೆಗಿನ ಶಿಕ್ಷಣ ಪಡೆದಿದ್ದು, ೪೨ ವಿದ್ಯಾರ್ಥಿಗಳು ಮತ್ತು ಕೇವಲ ೧೦ ವಿದ್ಯಾರ್ಥಿನಿಯರು ಮಾತ್ರ ಪದವಿ ಮಟ್ಟದ ಶಿಕ್ಷಣ ಪಡೆದಿದ್ದಾರೆ ಮತ್ತು ಕೇವಲ ೧೨ ವಿದ್ಯಾರ್ಥಿಗಳು ಮಾತ್ರ ಸ್ನಾತಕೋತ್ತರ ಪದವಿ ಪಡೆದಿರುವುದು ಕಂಡುಬಂದಿದೆ. ಅದೇ ಪ್ರಕಾರ ಕೇವಲ ಮೂವರು ವಕೀಲ ವೃತ್ತಿಯಲ್ಲಿ ಮತ್ತು ಒಬ್ಬರು ಮಾತ್ರ ವೈದ್ಯ ವೃತ್ತಿಯಲ್ಲಿ ತೊಡಗಿರುವುದು ಕಂಡುಬಂದಿದೆ.[೭೦] ೧೯೮೩ರಲ್ಲಿ ಹಮ್‌ದರ್ದ್ ಶಿಕ್ಷಣ ಸಂಸ್ಥೆಯವರು ಕೈಗೊಂಡ ಶೈಕ್ಷಣಿಕ ಸಮೀಕ್ಷೆ ಹೇಳುವಂತೆ ಮುಸ್ಲಿಂ ಒಡೆತನದ ಒಟ್ಟು ೪೪ ಕಾಲೇಜುಗಳಲ್ಲಿ ಶೇ.೪೦.೩ ರಷ್ಟು ಮುಸ್ಲಿಮರು ಮತ್ತು ಶೇ.೫೯.೭ ರಷ್ಟು ಮುಸ್ಲಿಮೇತರ ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದಾರೆ.[೭೧] ಎಂ.ಬಿ. ಬುಚ್ (೧೯೮೯) ಅವರ ಗುಜರಾತ್ ಅಧ್ಯಯನದ ಪ್ರಕಾರ ಮುಸ್ಲಿಮರಿಗೆ ಪ್ರೌಢ ಶಿಕ್ಷಣದ ಅವಕಾಶಗಳೇ ಅತ್ಯಂತ ಕನಿಷ್ಠ ಪ್ರಮಾಣದಲ್ಲಿವೆ. ರಾಜ್ಯದ ಒಟ್ಟು ಶೇ.೯.೫ ರಷ್ಟು ಜನಸಂಖ್ಯೆಗೆ ಕೇವಲ ಶೇ.೩.೦೮ ರಷ್ಟು ಮಾತ್ರ ಖಾಸಗಿ ಸಂಸ್ಥೆಗಳಿರುವುದನ್ನು ಗುರುತಿಸುತ್ತಾರೆ. ೧೯೯೫ರಲ್ಲಿ ಅಹಮದ್ ಅವರು ಕೈಗೊಂಡ ಜಾತ್ಯಾತೀತ ಭಾರತದಲ್ಲಿ ಮುಸ್ಲಿಮರ ಸ್ಥಾನ ಎಂಬ ಅಧ್ಯಯನದಲ್ಲಿ ಹೇಳುವಂತೆ ಬಹುಸಂಸ್ಕೃತಿ ನೆಲೆಗೊಂಡಿರುವ ಸಮಾಜದಲ್ಲಿ ಜಾತ್ಯಾತೀತ ತತ್ವ ಮತ್ತು ರಾಷ್ಟ್ರೀಯ ಐಕ್ಯತೆಗಳು ಪರಸ್ಪರ ಪೂರಕವಾಗಿವೆ ಇಂತಹ ಸನ್ನಿವೇಶದಲ್ಲಿ ಮುಸ್ಲಿಮರನ್ನು ಮುಖ್ಯವಾಹಿನಿಗೆ ತರದೆ ಸಮಗ್ರ ರಾಷ್ಟ್ರೀಯ ನೀತಿಯನ್ನು ರೂಪಿಸಲು ಸಾಧ್ಯವಿಲ್ಲ.[೭೨] ಈ ಎಲ್ಲಾ ಅಧ್ಯಯನಗಳು ಮುಸ್ಲಿಮರಲ್ಲಿ ಪುರುಷರು ಶೈಕ್ಷಣಿಕವಾಗಿ ಹಿಂದುಳಿದಿರುವುದನ್ನು ಸ್ಪಷ್ಟಪಡಿಸುತ್ತವೆ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಪ್ರಮಾಣವು ಇನ್ನೂ ಚಿಂತಾಜನಕವಾಗಿದೆ.

ಸಾಚಾರ್ ವರದಿ ಹೇಳುವಂತೆ ದೇಶದಲ್ಲಿ ಶೇ.೭೨ ರಷ್ಟು ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಶಾಲೆಗೆ ದಾಖಲಾಗಿದ್ದು, ಮುಸ್ಲಿಮರಲ್ಲಿ ಶೇ.೬೮ ರಷ್ಟು ಬಾಲಕಿಯರು ಮಾತ್ರ ಶಾಲೆಗೆ ದಾಖಲಾಗಿದ್ದಾರೆ.[೭೩] ಇಡೀ ದೇಶದಾದ್ಯಂತ ವಿವಿಧ ಕಾಲಘಟ್ಟಗಳಲ್ಲಿ ಕೈಗೊಂಡ ಅಧ್ಯಯನಗಳು ಮುಸ್ಲಿಮರು ಶೈಕ್ಷಣಿಕ ಅವಕಾಶಗಳಿಂದ ವಂಚಿತರಾಗಿರುವ ಮತ್ತು ಶೈಕ್ಷಣಿಕವಾಗಿ

ಹಿಂದುಳಿದಿರುವ ಅಂಶವನ್ನು ಎತ್ತಿತೋರಿಸುತ್ತವೆ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ವಿವಿಧ ಕಾರಣಗಳನ್ನು ಅಧ್ಯಯನಗಳು ತೋರಿಸಿಕೊಟ್ಟಿವೆ. ಇವರ ಶೈಕ್ಷಣಿಕ ಹಿಂದುಳಿಯುವಿಕೆ ೧೮೮೦ರ ವರೆಗೆ ಸರ್ ಸೈಯದ್ ಅಹಮದರ ಶೈಕ್ಷಣಿಕ ಅಭಿವೃದ್ಧಿ ಉದ್ದೇಶಿತ ಅಲಿಘಡ ಚಳುವಳಿ ಗಟ್ಟಿಗೊಳ್ಳುವವರೆಗೆ ಮುಸ್ಲಿಂ ಸಮುದಾಯ ಶಿಕ್ಷಣ ಕ್ಷೇತ್ರದಿಂದ ದೂರವೇ ಉಳಿದಿತ್ತು. ಆ ಹೊತ್ತಿಗಾಗಲೇ ಪಾರ್ಸಿ, ಕ್ರಿಶ್ಚಿಯನ್ ಮತ್ತು ಹಿಂದೂ ಸಮುದಾಯಗಳು ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶ ಪಡೆದಿದ್ದವು. ಇವರಿಗೆ ಹೋಲಿಸಿದರೆ ಮುಸ್ಲಿಮರು ಸುಮಾರು ೭೦–೮೦ ವರ್ಷಗಳಷ್ಟು ತಡವಾಗಿ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದರು. ಇವರ ಒಟ್ಟಾರೆ ಕನಿಷ್ಠ ಪ್ರಮಾಣದ ಸಾಕ್ಷರತೆಯಿಂದಾಗಿ ಮಹಿಳೆಯರ ಸಾಕ್ಷರತೆ ಪ್ರಮಾಣವೂ ಅತ್ಯಂತ ಕನಿಷ್ಟವಾಯಿತು.[೨೪] ಡಾ.ಮಹಮದ್ ಪೀರ್ ಅವರು ಮಹಿಳೆಯರ ಕನಿಷ್ಠ ಸಾಕ್ಷರತೆಗೆ ಶೈಕ್ಷಣಿಕ ಮಹತ್ವ ತಿಳಿಯದಿರುವಿಕೆ, ಸಾಂಸ್ಕೃತಿಕ ಅಡೆ ತಡೆಗಳು, ಪರದಾ ಪದ್ಧತಿ, ಪ್ರತ್ಯೇಕ ಶಿಕ್ಷಣ ಸಂಸ್ಥೆಗಳಿಲ್ಲದಿರುವುದು, ಬಡತನ ಮತ್ತು ಸೂಕ್ತ ವರ ಸಿಗದಿರುವ ಆತಂಕಗಳು ಇವೇ ಮೊದಲಾದ ಕಾರಣಗಳನ್ನು ಗುರುತಿಸುತ್ತಾರೆ.[೨೫]

ಮುಸ್ಲಿಮರ ಕನಿಷ್ಠ ಸಾಕ್ಷರತೆಗೆ ಭಾರತ ಶಿಕ್ಷಣ ಪದ್ಧತಿಯ ದೋಷವೂ ಕೂಡ ಕಾರಣವೆಂದು ಗ್ರಹಿಸಲಾಗುತ್ತಿದೆ. ಇಲ್ಲಿನ ಶಿಕ್ಷಣ ಪದ್ಧತಿಯು 'ವೈಟ್ ಕಾಲರ್' ಉದ್ಯೋಗ ಪಡೆಯುವ ಮಾಧ್ಯಮವಾಗಿದ್ದು, ಇದು ಕನಿಷ್ಠ ಆದಾಯ ಅವಲಿಂಬಿಸಿರುವ ಮತ್ತು ಶೈಕ್ಷಣಿಕ ಅರ್ಹತೆಯ ಅಗತ್ಯವಿಲ್ಲದ ಉದ್ಯೋಗಗಳನ್ನು ಅವಲಂಬಿಸಿರುವ ಜನರಿಗೆ ಅನುಕೂಲಕರವಾಗಿಲ್ಲ. ಮುಸ್ಲಿಮರಲ್ಲಿ ವೈಟ್‌ಕಾಲರ್ ಶಿಕ್ಷಣ ಬಯಸುವ ಹಾಗೂ ಸರ್ಕಾರಿ ನೌಕರಿ ಅಪೇಕ್ಷಿಸುವವರು ಕನಿಷ್ಠ ಸಂಖ್ಯೆಯಷ್ಟು ಮಾತ್ರ ಇದ್ದಾರೆ. ಈ ವೈರುಧ್ಯವು ಮುಸ್ಲಿಮರಲ್ಲಿರುವ ವರ್ಗತಾರತಮ್ಯ ಮತ್ತು ಅವರ ವಿವಿಧ ಶೈಕ್ಷಣಿಕ ಅಪೇಕ್ಷೆಗಳನ್ನು ಸ್ಪಷ್ಟಪಡಿಸುತ್ತದೆ. ಅನಕ್ಷರತೆ ಮತ್ತೊಂದು ಕಾರಣವೆಂದರೆ ಮದರಸಗಳ ಧಾರ್ಮಿಕ ಶಿಕ್ಷಣವು ಮಾರುಕಟ್ಟೆಯ ಉದ್ಯೋಗಗಳನ್ನು ಪಡೆಯಲು ಪೂರಕವಾಗಿಲ್ಲ. ಜೊತೆಗೆ ಮಕ್ಕಳನ್ನು ಉನ್ನತ ವ್ಯಾಸಂಗಕ್ಕಾಗಿ ಕಳುಹಿಸುವ ಸಾಮರ್ಥ್ಯವೂ ಪಾಲಕರಿಗಿಲ್ಲ ಆದ್ದರಿಂದ ಅವರ ಆರ್ಥಿಕ ಅಭಿವೃದ್ಧಿಯ ನಂತರವೇ ಅವರಿಗೆ ಶಿಕ್ಷಣದ ಆಕಾಂಕ್ಷೆ ಮೂಡಬಹುದೆಂದು ಗ್ರಹಿಸಲಾಗುತ್ತಿದೆ.[೨೬] ಸಾಚಾರ್ ವರದಿಯು ಕೂಡ ಈ ಅಂಶವನ್ನು ಹೇಳಿದ್ದು. ಖಾಸಗಿ ಸರ್ಕಾರಿ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಲು ಪಾಲಕರು ಆಸಕ್ತರಾಗಿದ್ದರೂ, ಅವುಗಳು ದುಬಾರಿಯಾದ್ದರಿಂದ ಸಾಧ್ಯವಾಗುತ್ತಿಲ್ಲ. ಕೆ.ಡಿ.ಶರ್ಮಾರವರು ೧೯೭೫ರ ಮುಸ್ಲಿಮರ ಶೈಕ್ಷಣಿಕ ಅಧ್ಯಯನದಲ್ಲಿ ಮುಸ್ಲಿಮರು ಶೈಕ್ಷಣಿಕ ಅವಕಾಶಗಳನ್ನು ಉಪಯೋಗಿಸಿಕೊಳ್ಳದಿರಲು ನಾಲ್ಕು ಮುಖ್ಯ ಕಾರಣಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ ಉದ್ಯೋಗಕ್ಕೆ ಪೂರಕವಲ್ಲದ ಶಿಕ್ಷಣ, ಅನಕ್ಷರಸ್ಥ ಪಾಲಕರು, ಉರ್ದುಭಾಷೆಗೆ ಪ್ರೋತ್ಸಾಹ ಇಲ್ಲದಿರುವುದು ಮತ್ತು ದುಬಾರಿ ವೆಚ್ಚ ಮುಂತಾದವುಗಳು.[೨೭] ಮಹಿಳೆಯರ ಅಭಿವೃದ್ಧಿಯು ಮಹಿಳೆಯರಿಗೆ ನೀಡುವ ಸ್ವಾತಂತ್ರ್ಯವನ್ನು ಅವಲಂಬಿಸಿದೆ.

ಅಮರ್ತ್ಯಸೇನ್ ತಮ್ಮ ಅಧ್ಯಯನಗಳಲ್ಲಿ ಇದನ್ನು ಪ್ರಭಲವಾಗಿ ಪ್ರತಿಪಾದಿಸಿದ್ದಾರೆ. ಇಂದಿಗೂ ಮಹಿಳೆಯರು ಹಿಂದುಳಿಯಲು ವಿವಿಧ ರಂಗಗಳಲ್ಲಿ ಅವಳಿಗೆ ಸ್ವಾತಂತ್ರ್ಯ ನೀಡದಿರುವುದೇ ಕಾರಣವಾಗಿದೆ. ಮಹಿಳೆಯರ ಅಭಿವೃದ್ಧಿ ಸಾಧ್ಯವಾಗಬೇಕಾದರೆ ಮೊದಲು ಅವರನ್ನು ಮುಖ್ಯವಾಹಿನಿಗೆ ತರುವುದರ ಅಗತ್ಯವಿದೆ. ಅಭಿವೃದ್ಧಿಗೆ ಎಲ್ಲರನ್ನೂ ಒಳಗೊಳ್ಳುವ ಗುಣವಿಲ್ಲ, ಅಭಿವೃದ್ಧಿ ಎನ್ನುವುದು ಪಡೆದುಕೊಂಡವರ ಪಾಲಾಗುತ್ತದೆ. ಪಡೆದುಕೊಳ್ಳುವ ಸಾಮರ್ಥ್ಯ ಬಡವರಿಗೆ, ಹಿಂದುಳಿದವರಿಗೆ, ಅಲ್ಪಸಂಖ್ಯಾತರಿಗೆ ಮತ್ತು ಮಹಿಳೆಯರಿಗೆ ಇರುವುದಿಲ್ಲ. ಇಂತಹ ಸಮುದಾಯಗಳಿಗೆ ಅಭಿವೃದ್ಧಿಯ ಪಾಲನ್ನು ಪಡೆದುಕೊಳ್ಳುವ ಸಾಮರ್ಥ್ಯ ನೀಡುವುದು ರಾಜಕೀಯ ವ್ಯವಸ್ಥೆಯ ಮತ್ತು ಸರ್ಕಾರಗಳ ಜವಾಬ್ದಾರಿಯಾಗಿರುತ್ತದೆ.ಆದರೆ ಪ್ರಜಾಸತ್ತಾತ್ಮಕ ರಾಜಕೀಯ ವ್ಯವಸ್ಥೆ ಒಂದು ಉತ್ತಮ ವ್ಯವಸ್ಥೆಯಾಗಿದ್ದರೂ ಅಲ್ಲಿ ಎಲ್ಲರನ್ನು ಒಳಗೊಳ್ಳುವ ಸಾಧ್ಯತೆಗಳು ತುಂಬಾ ಕಡಿಮೆಯಾಗಿರುತ್ತದೆ. ಪ್ರಜಾತಂತ್ರ ವ್ಯವಸ್ಥೆಯೂ ದಲಿತರು, ಹಿಂದುಳಿದವರು, ಅಲ್ಪಸಂಖ್ಯಾತರು ಮತ್ತು ಮಹಿಳೆಯರನ್ನು ಒಳಗೊಳ್ಳುವ ವ್ಯವಸ್ಥೆಗಳನ್ನು ರೂಪಿಸುವಲ್ಲಿ ಕ್ರಮಗಳನ್ನು ಕೈಗೊಂಡಿಲ್ಲ ಇದಕ್ಕಿರುವ ಮುಖ್ಯ ಆಧಾರ ಇಂದಿಗೂ ವಿವಿಧ ಸಮುದಾಯಗಳು ಮತ್ತು ಮಹಿಳೆಯರು ನಿಕೃಷ್ಟ ಸ್ಥಿತಿಯಲ್ಲಿಯೇ ಮುಂದುವರಿದಿರು ವುದು. ಇದು ಪ್ರಜಾತಂತ್ರ ವ್ಯವಸ್ಥೆಯ ದೌರ್ಬಲ್ಯವೆನ್ನಲು ಸಾಧ್ಯವಿಲ್ಲ ಬದಲಾಗಿ ಪ್ರಜಾತಂತ್ರ ವ್ಯವಸ್ಥೆಯಿಂದ ರೂಪುಗೊಳ್ಳುವ ಅಭಿವೃದ್ಧಿಯ ಫಲಗಳನ್ನು ಪಡೆದುಕೊಳ್ಳಲು ಪಡೆದುಕೊಳ್ಳುವ ಅವಕಾಶಗಳನ್ನು ನಿರಾಕರಿಸಲಾಗಿದೆ. ಇದು ವ್ಯವಸ್ಥೆಯ ದೌರ್ಬಲ್ಯ. ಅವಕಾಶಗಳನ್ನು ನಿರಾಕರಿಸಲಾಗು ತ್ತಿರುವ ಸಂಗತಿಗಳನ್ನು ಇಂದು ಶೋಧಿಸುವ ಅಗತ್ಯವಿದೆ. ಮಹಿಳೆಯರಿಗೆ ಆಯ್ಕೆಯ ವಿಸ್ತರಣೆಯನ್ನು ಕೈಗೊಳ್ಳುವ ಕ್ರಮಗಳ ಬಗ್ಗೆ ಗಂಭೀರವಾಗಿ ಚಿಂತಿಸುವ ಅಗತ್ಯವಿದೆ. ಮಹಿಳೆಯರನ್ನು ಅಭಿವೃದ್ಧಿಯ ಕತೃಗಳನ್ನಾಗಿ, ಅಭಿವೃದ್ಧಿಯ ಫಲಾನುಭವಿಗಳಾಗಿ ಗ್ರಹಿಸಿಕೊಳ್ಳುವ ವಿಚಾರ ಪ್ರಣಾಳಿಕೆಯನ್ನು ಗಟ್ಟಿಗೊಳಿಸುವ ಕ್ರಮಗಳು ಇಂದು ಅಗತ್ಯವಾಗಿವೆ. ಮಹಿಳೆಯರ ಸಾಮರ್ಥ್ಯದ ಬಗ್ಗೆ ನಮ್ಮಲ್ಲಿ ರಕ್ತಗತವಾಗಿರುವ ಗ್ರಹಿಕೆಗಳು ಬದಲಾಗದಿದ್ದರೆ, ಮಹಿಳಾ ಅಭಿವೃದ್ಧಿ ಅಸಾಧ್ಯ ಮಹಿಳಾ ಸಾಮರ್ಥ್ಯವನ್ನು ವಿಸ್ತರಿಸಲು ಶಿಕ್ಷಣ ಪ್ರಧಾನ ಪಾತ್ರವಹಿಸುತ್ತದೆ ಎನ್ನುವುದು ಸಾಬೀತುಪಟ್ಟಿರುವ ಅಂಶ. ಆದರೆ ಇಂದಿಗೂ ಮುಸ್ಲಿಂ ಸಮುದಾಯ, ವಿಶೇಷವಾಗಿ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಇಂದಿಗೂ ಇದರ ಹಿಂದುಳಿಯುವಿಕೆಗೆ ಚರಿತ್ರೆ, ಧರ್ಮ, ಸಂಸ್ಕೃತಿ ಮುಂತಾದವುಗಳೇ ಕಾರಣವೆನ್ನುವ ವಾದಗಳು ಅಪ್ರಸ್ತುತವಾಗಿವೆ. ಏಕೆಂದರೆ ಧರ್ಮ ಸಂಸ್ಕೃತಿಗಳು ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಅಡ್ಡಿಯಾಗಿಲ್ಲವೆನ್ನುವುದನ್ನು ವಿವಿಧ ಅಧ್ಯಯನಗಳು ನಿರೂಪಿಸಿವೆ. ಹಾಗಾದರೆ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆಯ ಮೂಲ ಯಾವುದು? ಇದರ ಮೂಲವನ್ನು ಮುಸ್ಲಿಮರ ಜೀವನಮಟ್ಟದಲ್ಲಿ ಹುಡುಕಬಹುದೆ ಎನ್ನುವುದು ಇಂದಿನ ಪ್ರಭಲವಾದ ಜಿಜ್ಞಾಸೆ. ಮುಸ್ಲಿಂ ಮಹಿಳೆಯರ

ಶೈಕ್ಷಣಿಕ ಹಿಂದುಳಿಯುವಿಕೆಗೆ ಪ್ರಧಾನವಾಗಿ ಮೂರು ಕಾರಣಗಳನ್ನು ಮಂಡಿಸಲಾಗುತ್ತಿದೆ. ಒಂದು ಇಸ್ಲಾಂ ಧರ್ಮ, ಎರಡನೆಯದು ಮುಸ್ಲಿಂ ಸಮುದಾಯದ ಮಹಿಳೆಯರ ಮೇಲೆ ಹೇರಿರುವ ಸಾಂಸ್ಕೃತಿಕ ಆಚರಣೆಗಳು ಮತ್ತು ಅವರ ಜೀವನ ಮಟ್ಟ. ಈ ಮೂರು ಕಾರಣಗಳಲ್ಲಿ ಇಸ್ಲಾಂ ಧರ್ಮ ಮತ್ತು ಸಾಂಸ್ಕೃತಿಕ ಅಡೆತಡೆಗಳು ಅಧ್ಯಯನಗಳ ಪ್ರಕಾರ ಗಂಭೀರವಾಗಿ ಉಳಿದುಕೊಂಡಿಲ್ಲ. ಹಾಗಾದರೆ ಇತರೆ ಪ್ರಭಾವಗಳ ಜೊತೆಗೆ ಮುಸ್ಲಿಮರ ಜೀವನ ಮಟ್ಟದ ಪ್ರಭಾವವೇನು ಎನ್ನುವುದು ಒಂದು ಅಧ್ಯಯನಕ್ಕೆ ಒಳಗಾಗಿರಬೇಕಾಗಿರುವ ಅಗತ್ಯವಿದೆ. ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನ ಮಾಡಲು ಬೆಳಗಾವಿ ನಗರವನ್ನು ಆಯ್ದುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಭಾರತ, ಕರ್ನಾಟಕ ಮತ್ತು ಬೆಳಗಾವಿ ನಗರದ ಮುಸ್ಲಿಮರ ಸಮಸ್ಯೆಗಳನ್ನು ಮುಂದಿನ ಅಧ್ಯಯದಲ್ಲಿ ಚರ್ಚಿಸಲಾಗಿದೆ.

**ಪರಾಮರ್ಶನ ಗ್ರಂಥಗಳು**


೧. *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೧–೬

೨. ಡಾ. ಟಿ. ಅರ್. ಚಂದ್ರಶೇಖರ,"ಪ್ರಜಾಪ್ರಭುತ್ವದ ಆಧಾರ 'ಜನರನ್ನು ಒಳಗೊಳ್ಳುವ ಅಭಿವೃದ್ಧಿ'; ಒಂದು ಅನುಸಂಧಾನ", *ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ*, ಬಳ್ಳಾರಿ, ಗಾಯತ್ರಿ ಪ್ರಕಾಶನ, ೨೦೧೪, ಪು.ಸಂ ೨೩–೨೫

೩. "ಲಿಂಗ ಮತ್ತು ಅಭಿವೃದ್ಧಿ", *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೧೮೩

೪. ಡಾ. ಟಿ. ಅರ್. ಚಂದ್ರಶೇಖರ, *ಮಾನವ ಅಭಿವೃದ್ಧಿ ಮೀಮಾಂಸೆ– ಒಂದು ಪರಿಚಯ*, ಹಂಪಿ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ೨೦೦೯, ಪು.ಸಂ ೧–೬

೫. "ಲಿಂಗ ಮತ್ತು ಅಭಿವೃದ್ಧಿ", *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೧೮೩

೬. ಡಾ. ಅನಸೂಯ ಕಾಂಬಳೆ, "ದಲಿತ ಮಹಿಳೆಯರ ಪ್ರಶ್ನೆಗಳು ಮತ್ತು ಸಾಂಸ್ಕೃತಿಕ ಆಯಾಮಗಳು", *ಸಂವಾದ*, ಬೆಂಗಳೂರು, ಸ್ಫೂರ್ತಿಧಾಮ, ೨೦೦೪, ಸಂ–೧೨, ಮಾರ್ಚ್, ಪು.೩೧

೭. ಡಾ.ಕೆ.ಷರೀಫಾ, ಲೋಹಿಯ,"ಮಹಿಳೆ ಮತ್ತು ಸಮಾನತೆ",*ಸಂವಾದ*, ಬೆಂಗಳೂರು, ಸ್ಫೂರ್ತಿಧಾಮ, ಮಾರ್ಚ್, ೨೦೦೪, ಸಂಪುಟ ೧೨, ಸಂಖ್ಯೆ೫, ಪು.೩೧

೮. ಯುನೈಎಡ್ ನೇಷನ್ ಡೆವಲಪ್‌ಮೆಂಟ್, ನ್ಯೂಡೆಲ್ಲಿ, ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್, ಮತ್ತು ಕಾರ್ಲ್ ಮಾರ್ಕ್ಸ್, *ವುಮೆನ್ ಅಂಡ್ ಎಂಪವರ್‌ಮೆಂಟ್: ಪಾರ್ಟಿಸಿಪೇಷನ್ ಅಂಡ್ ಡಿಸಿಷನ್ ಮೇಕಿಂಗ್*, ಲಂಡನ್, ಜೇಸ್ ಬುಕ್ಸ್ ಲಿಮಿಟೆಡ್,೧೯೯೫, ಮತ್ತು ಸುನೀತಾ ಕಿಷೋರ್ ಅಂಡ್ ಕಮಲಾ ಗುಪ್ತ, ೨೦೦೪. "ವಿಮನ್ ಎಂಪವರ್ಮೆಂಟ್ ಇನ್ ಇಂಡಿಯ ಅಂಡ್ ಇಟ್ಸ್ ಸ್ಟೇಟ್ಸ್–ಎವಿಡೆನ್ಸ್ ಫ್ರಂ ಎನ್‌ಎಫ್‌ಹೆಚ್‌ಎಸ್",*ಇಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ*, ವಾ.ಸಂ, ೩೯ ಸಂ ೭ ಪು.೬೯೪–೭೧೨, ಮತ್ತು ಪ್ರೀತ್ ರುಸ್ತಗಿ, *ಸಿಗ್ನಿಫಕೆನ್ಸ್ ಆಫ್ ಜೆಂಡರ್ ಲೇಟೆಡ್ ಡೆವಲಪ್‌ಮೆಂಟ್ ಇಂಡಿಕೇಟರ್ಸ್: ಎನ್ ಎನಾಲಿಸಿಸ್ ಆಫ್*, ನ್ಯೂಡೆಲ್ಲಿ, ಸೇಜ್ ಪಬ್ಲಿಕೇಷನ್ಸ್, ೨೦೦೦, ಪು–೨೯೧–೩೪೩, ಮತ್ತು ಮೀನಾಚಾರ್ಯ ಅಂಡ್ ಪುಸ್ಪ ಘಿಮೈರ್, "ಜೇಂಡರ್ ಒಂಡಿಕೇಟರ್ಸ್ ಆಪ್ ಇಕ್ವಾಲಿಟಿ, ಇಕ್ಲೂಷನ್ ಅಂಡ್ ಪವರ್ಟಿ ರಿಡಕ್ಷನ್", *ಇಕನಾಮಿಕ್ ಅಂಡ್ ಪೂಲಿಟಿಕಲ್ ವೀಕ್ಲಿ*, ವಾ.ಸಂ ೪೦ ಸಂ.೪೪,೪೫, ೨೦೦೫, ಪು–೪೭೧೯–೪೨೨೭

೯. ಡಾ.ಟಿ.ಆರ್ ಚಂದ್ರಶೇಖರ, *ವಿಜಾಪುರ ಜಿಲ್ಲೆ ಅಭಿವೃದ್ಧಿ ಮತ್ತು ದುಃಸ್ಥಿತಿ ಒಂದು ಅಧ್ಯಯನ*, ಹಂಪಿ, ಕನ್ನಡ ವಿಶ್ವವಿದ್ಯಾಲಯ, ೨೦೧೨, ಪು–೧೨ ಮತ್ತು ೧೩

೧೦. ಟಿ.ಆರ್ ಚಂದ್ರಶೇಖರ್, *ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ*, ಬಳ್ಳಾರಿ, ಗಾಯತ್ರಿ ಪ್ರಕಾಶನ, ೨೦೧೪, ಪು.ಸಂ ೪–೫

೧೧. ಡಾ. ನಜೀರುದೀನ್, "ಮುಸ್ಲಿಂ ಮೈನಾರಿಟಿ ಎಕ್ಸ್‌ಕ್ಲೂಜನ್ ಅಂಡ್ ಡೆವಲಪ್‌ಮೆಂಟ್ ಇಶ್ಯೂಸ್ : ನೀಡ್ ಫಾರ್ ಇನ್‌ಕ್ಲೂಜಿವ್ ಪಾಲಿಸಿ",*ಇಂಟರ್ ನ್ಯಾಷನಲ್ ಜರ್ನಲ್ ಆಫ್ ಮಲ್ಟಿಡಿಸಿಪ್ಲಿನರಿ ರೀಸರ್ಚ್*, ವಾ.ಸಂ ೨, ಸಂಚಿಕೆ ೧, ೨೦೧೨, ಪು.೩೯೫–೪೦೧

೧೨. ನೈಲಾ ಕಬೀರ್, *ದಿ ರಿವರ್ಸಡ್ ರಿಯಾಲಿಟೀಸ್ : ಜೆಂಡರ್ ಹೈರಾರ್ಕೀಸ್ ಇನ್ ಡೆವಲಪ್‌ಮೆಂಟ್ ಥಾಟ್*,ನ್ಯೂಡೆಲ್ಲಿ, ಕಾಳಿ ಫಾರ್ ವುಮೆನ್, ೧೯೯೬, ಉಲ್ಲೇಖ :ಡಾ. ಟಿ. ಅರ್ ಚಂದ್ರಶೇಖರ್, ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಹಂಪಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೮, ಪು–೦೩

೧೩. ಡಾ. ಟಿ.ಅರ್ ಚಂದ್ರಶೇಖರ್,*ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು*,ಪೂರ್ವೋಕ್ತ ಪು.ಸಂ ೫–೭

೧೪. ಡಾ.ಟಿ.ಅರ್ ಚಂದ್ರಶೇಖರ್, ಪೂರ್ವೋಕ್ತ, ಪು.ಸಂ ೨೩-೨೭

೧೫. ಡಾ.ಟಿ.ಅರ್ ಚಂದ್ರಶೇಖರ್, ಪೂರ್ವೋಕ್ತ, ಪು-೨೯

೧೬. ಡಾ.ಟಿ.ಅರ್ ಚಂದ್ರಶೇಖರ್, ಪೂರ್ವೋಕ್ತ, ಪು ಸಂ ३೨-३೯

೧೭. ಡಾ.ಎಂ. ಚಂದ್ರ ಪೂಜಾರಿ, *ರಾಜಕೀಯದ ಬಡತನ*, ಹೊಸಪೇಟೆ, ಸಿದ್ಧಾರ್ಥ ಪ್ರಕಾಶನ, ೨೦೦೮, ಪು.ಸಂ ೧೦೬

೧೮. ಡಾ. ಎಂ. ಚಂದ್ರ ಪೂಜಾರಿ, *ಅಭಿವೃದ್ಧಿ ಮತ್ತು ರಾಜಕೀಯ*, ಚನ್ನಪಟ್ಟಣ, ಪಲ್ಲವ ಪ್ರಕಾಶನ, ೨೦೧೪, ಪು ಸಂ ೭೯-೮೯

೧೯. ಮಾರ್ಕಜ್ ಕೆಲ್ಲಾರ್, "ಏಮಿಂಗ್ ಅಟ್ ದ ಫ್ಯೂಚರ್ ಇನ್ ಡೇವಿಡ್ ಮ್ಯಾಕ್ ಕೋನ್ಕೆ", ಎಜುಕೇಷನ್ ಡಿಪಾರ್ಟ್‌ಮೆಂಟ್, ಯುನೈಟೆಡ್ ಮಿಷನ್, ಕಠ್ಮಂಡು, ೧೯೯೨, ಉಲ್ಲೇಖ: *ಸುಧಾ ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ೪೨

೨೦. ಮನೀಷ್ ಸೇನ್ ಗುಪ್ತ ಅಂಡ್ ಜಾನ್ ಈ ಜಾನ್‌ಸನ್, *ಡಜ್ ಎಜುಕೇಷನಲ್ ಸುಪಿರಿಯಾರಿಟಿ ಆಟೋಮೈಜ್ ಡಾಟರ್ಸ್ ಇನ್‌ಲಾ ಹು ಲಿವ್ ವಿತ್ ದೇರ್ ಮದರ್ ಇನ್‌ಲಾ ಇನ್ ಇಂಡಿಯಾ?* ಎ ಟೆಸ್ಟ್ ಅಫ್ ಕಾಲ್ಡ್‌ವೆಲ್ಸ್ ಥಿಸಿಸ್ ಅನಿವಲ್ ಮೀಟಿಂಗ್ ಅಫ್ ದ ಪಾಪುಲೇಷನ್ ಆಸೋಷಿಯೇಷನ್ ಅಫ್ ಅಮೇರಿಕ, ಮೀನಿಯಾಪೋಲಿಸ್, ಮಿನ್ನಿಸೋಟ, ೨೦೦३ ಉಲ್ಲೇಖ : ಟಿ.ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೧೨

೨೧. ದಬೋರ ಬಲ್ಕ್, "ಡಿಫೈನಿಂಗ್ ಜೆಂಡರ್‌ನಾರ್ಮ್ಸ್ ಇನ್ ಬಾಂಗ್ಲಾದೇಶ್: ಎ ಸೋಷಿಯಲ್ ಡೆಮೋಗ್ರಾಫಿಕ್ ಎನಾಲಿಸಿಸ್",*ಪಾಪುಲೇಷನ್ ಸ್ಟಡೀಸ್*, ೧೯೯೭, ವಾ.ಸಂ.೫೧, ಸಂ.೨, ಪು.ಸಂ.೧೫३-೧೭೨

೨೨. ಶೇಲಾ ಎಸ್. ಬ್ಲೂಮ್, *ಡೈಮೆನ್‌ಷನ್ಸ್ ಅಫ್ ವಿಮೆನ್ಸ್ ಅಟಾನಮಿ ಅಂಡ್ ದ ಇನ್‌ಫ್ಲೂಯನ್ಸ್ ಆನ್ ಹೇಲ್ತ್ ಕೇರ್ ಯುಟಿಲೈಜೇಷನ್ ಇನ್ ಎ ನಾರ್ತ್ ಇಂಡಿಯನ್ ಸಿಟಿ*, ಡೆಮೋಗ್ರಾಫಿ, ವಾ.ಸಂ.३೮.ಸಂ. ೧, ಪು.ಸಂ.೬೭.೭೮ ಮತ್ತು ಮರಿಡಾ ಹೋಲೋಸ್, ೧೯೯೮, *ದ ಸ್ಟೇಟಸ್ ಅಫ್ ವಿಮೆನ್ ಇನ್ ಸದರನ್ ನೈಜೀರಿಯ: ಈಜ್ ಎಜುಕೇಷನ್ ಹೆಲ್ಪ್ ಆರ್ ಎ ಹಿಂಡ್ರೆನ್ಸ್?* ಕೊಲೋರಾಡೂ, ಲಿನ್‌ರಿನ್ನರ್ಸ್ ಪಬ್ಲೀಷರ್ಸ್, ೨೦೦೧, ಪು.ಸಂ.೨೪೭-೨೭೬

೨೩. ಕ್ಯಾರೂನ್ ವ್ಯಾಸೋಫ್, ಫ್ರಮ್ ರಗ್ಸ್ ಟು ರಿಚ್ಚೆಸ್: ದ ಇಂಪ್ಯಾಕ್ಟ್ ಆಫ್ ರೂರಲ್ ಡೆವಲಪ್‌ಮೆಂಟ್ ನ್ ಆವಿಮೆನ್ಸ್ ಸ್ಟೆಟಸ್ ಇನ್ ಎನ್ ಇಂಡಿಯನ್ ವಿಲೇಜ್, ವರ್ಲ್ಡ್ ಡೆವಲೆಪ್‌ಮೆಂಟ್, ವಾ. ಸಂ.೨೨ ಸಂ.೫, ೧೯೯೪, ಪು.ಸಂ.೭೦೭–೭೧೯

೨೪. ಅಮರ್ತ್ಯಸೇನ್,"ಜೆಂಡರ್ ಅಂಡ್ ಕೋ–ಅಪರೇಟಿವ್ ಕಾನ್‌ಫ್ಲಿಕ್ಟ್ಸ್ ಇನ್ ಪರ್ಸಿಸ್ಟೆಂಟ್ ಇನ್ ಇಕ್ವಾಲಿಟಿಸ್".ಐರನ್ ಟಿಂಕರ್(ಸಂ)ವಿಮೆನ್ ಅಂಡ್ ಡೆವಲೆಪ್‌ಮೆಂಟ್, ಲಂಡನ್, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ಉಲ್ಲೇಖ ಸುಧಾ ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೪೪

೨೫. ಪಾವಲವಲ್ಲಿ ಗೋವಿಂದಸ್ವಾಮಿ ಅಂಡ್ ಬಿ ಎಂ. ರಮೇಶ್, "ಮಟಿರಿಯಲ್ ಎಜುಕೇಷನ್ ಅಂಡ್ ಜೆಂಡರ್ ಚಾಯ್ಸ್ ಇನ್ ಚೈಲ್ಡ್‌ಕೇರ್ ಪ್ರಾಕ್ಟಿಸೆಸ್ ಇನ್ ಇಂಡಿಯಾ",ಅನಿವಲ್ ಮೀಟಿಂಗ್ಸ್ ಅಫ್ ದ ಪಾಪುಲೇಷನ್ ಅಸೋಸಿಯೇಷನ್ ಅಫ್ ಅಮೇರಿಕ, ನ್ಯೂ ಓರ್ಲಿನ್ಸ್, ೧೯೯೬, ಉಲ್ಲೇಖ: ಸುಧಾ ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೪೫

೨೬. ಅಮರ್ತ್ಯಸೇನ್ ಅಂಡ್ ಜೀನ್‌ಡ್ರಿಜ್, ಎನ್ ಅನ್‌ಸರ್ಟೆನ್ ಗ್ಲೋರಿ ಇಂಡಿಯ ಅಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್, ನ್ಯೂಡೆಲ್ಲಿ, ಪೆಂಗ್ವಿನ್ ಬುಕ್ಸ್, ೨೦೧೨, ಪು.ಸಂ ೩೯–೫೮

೨೭. ಐನಾ.ಟಿ.ಎ, ಕ್ವಾಲಿಟಿ ಅಂಡ್ ರಿಲವೆನ್ಸ್ ಆಫ್ ಆಫ್ರಿಕನ್ ಯುನಿವರ್ಸಿಟಿಸ್ ಇನ್ ಟ್ವೆಂಟಿಯತ್ ಸೇಂಚುರಿ ಲೆಸೋತೊ, ಎಎಯು, ೧೯೯೮, ಪು.ಸಂ ೭೦–೭೨.

೨೮. ಡಾ. ಶಕೀಲ್ ಅಹಮದ್ ಅಂಡ್ ಡಾ. ಮಲಿಕಾ ಮಿಸ್ತ್ರಿ, "ಮಾಡರ್ನ್ ಎಜುಕೇಷನ್ ಅಂಡ್ ಸೋಶಿಯೋ–ಎಕನಾಮಿಕ್ ಚೇಂಜ್, ಎ ಕೇಸ್ ಸ್ಟಡಿ ಆಫ್ ಮುಸ್ಲಿಂ ವುಮೆನ್ ಇನ್ ಪುಣೆ ಸಿಟಿ", ಇಂಡಿಯ ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾರ್ಮರ್ಸ್, ವಾ.ಸಂ.೧, ಸಂ.೧, ಆಕ್ಟೋಬರ್ ೨೦೧೦, ಪು.ಸಂ ೧೩೯–೧೪೯.

೨೯. ಯೋಗೇಂದ್ರ.ಎಸ್.ಸಿಕಂದ್, ಮುಸ್ಲಿಂ ಎಜುಕೇಷನ್ ಇನ್ ಕಾನ್‌ಟೆಂಪರರಿ ಇನ್ ಇಂಡಿಯ, ಗುರ್‌ಗಾಂವ್, ಹೋಪ್ ಇಂಡಿಯಾ ಪಬ್ಲಿಕೇಷನ್ಸ್, ೨೦೦೮, ಪು–೨೫೧–೨೯೧

೩೦. ಶ್ರೀಧರ ಬೋರಣ್ಣ, "ಡೆವಲಪ್ ಮೆಂಟ್ ಆಫ್ ಎಜುಕೇಷನ್ ಇನ್ ಹೈದ್ರಾಬಾದ್–ಕರ್ನಾಟಕ ರೀಜನ್: ಎ ಸ್ಟಡಿ", ಥೀಸಿಸ್ ಸಬ್ಮಿಟೆಡ್ ಟು ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್. ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ. ೨೦೦೫, ಪು.ಸಂ ೫೨–೮೦.

೩೧. ಅಮರ್ತ್ಯಸೇನ್, *ಕ್ಲಾಸ್.ಜೆಂಡರ್ ಅಂಡ್ ಅದರ ಗ್ರೂಪ್ಸ್ ಎನ್ ಇನ್ ಇಕ್ವಾಲಿಟಿ ರಿಎಕ್ಸಾಮೈನ್ಡ್* ಆಕ್ಸ್‌ಫರ್ಡ್ ಕೇರ್ಡನ್ ಪ್ರೆಸ್, ೧೯೯೨, ಉಲ್ಲೇಖ: ಸುಧಾ.ಟಿ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೮–೩೧

೩೨. ಡಾ.ದುರ್ಗದಾಸ್ ಬಸು, *ಇಂಟ್ರೊಡಕ್ಷನ್ ಟು ದ ಕಾನ್‌ಸ್ಟಿಟ್ಯೂಷನ್ ಅಫ್ ಇಂಡಿಯಾ*, ನ್ಯೂಡೆಲ್ಲಿ, ವಾಡ್ವಾ ಅಂಡ್ ಕಂಪನಿ ಲಾ ಪಬ್ಲಿಷರ್ಸ್, ೨೦೦೭, ಪು.ಸಂ ೭೯–೧೪೩ ಮತ್ತು ೧೪೪–೧೫೩

೩೩. ಬೈಜ್‌ನಾಥ್ ಸಿಂಗ್, *ಎಕನಾಮಿಕ್ ಅಫ್ ವಿಮೆನ್ ಎಜುಕೇಷನ್ ಆಂಡ್ ಎಂಪವರ್‌ಮೆಂಟ್*, ಅಭಿಜೀತ್ ಪಬ್ಲಿಕೇಷನ್ ಡೆಲ್ಲಿ, ೨೦೧೧ ಪು.ಸಂ೧೩–೧೪

೩೪. ಡಾ.ಹೆಚ್.ಎಂ ರಾಜಶೇಖರ, *ಭಾರತ ಸರ್ಕಾರ* ಮತ್ತು *ರಾಜಕೀಯ*, ಮೈಸೂರು, ಕಿರಣ ಪ್ರಕಾಶನ, ೨೦೧೩, ಪು.ಸಂ ೬೧–೯೭

೩೫. ಬೇಗ್ ಎಂ.ಆರ್.ಎ, *ಮುಸ್ಲಿಂ ಡೈಲೆಮಾ ಇನ್ ಇಂಡಿಯ*, ಡೆಲ್ಲಿ, ವಿಕಾಸ್ ಪಬ್ಲಿಷಿಂಗ್ ಹೌಸ್,ಡೆಲ್ಲಿ, ೧೯೮೩, ಪು.ಸಂ ೧೨೫–೧೩೦ ಮತ್ತು ವಾಣಿ ಕೆ. ಬರೂವಾ ಅಂಡ್ ಶ್ರೀಯಾ ಅಯ್ಯರ್, ವಿದ್ಯಾ, "ವೇದ ಅಂಡ್ ವರ್ಣ, ಎನ್ ಇನ್‌ಫ್ಲೂಯನ್ಸ್ ಆಫ್ ಕ್ಯಾಸ್ಟ್ ಅನ್ ಎಜುಕೇಷನ್ ಇನ್ ರೂರಲ್ ಇಂಡಿಯಾ",*ಜರ್ನಲ್ ಆಫ್ ಡೆವೆಲಪ್‌ಮೆಂಟ್ ಸ್ಟಡೀಸ್*, ವಾ.ನಂ.೪೮, ಸಂ.೮ ಪು–೧೩೬೯–೧೪೦೪ ಮತ್ತು ಶರ್ಮ ಕೆ.ಡಿ. *ಎಜುಕೇಷನ್ ಆಫ್ ಎ ನ್ಯಾಷನಲ್ ಮೈನಾರಿಟಿ: ಎ ಕೇಸ್ ಸ್ಟಡಿ ಆಫ್ ಮುಸ್ಲಿಮ್ಸ್*, ನ್ಯೂಡೆಲ್ಲಿ, ಕಲಮ್‌ಕರ್ ಪ್ರಕಾಶನ್, ೧೯೭೮, ಪು.ಸಂ ೫೨–೬೬, ಮತ್ತು ಧಿರೇಂದ್ರ ವಾಜಪೇಯಿ, "ಮುಸ್ಲಿಂ ಫಂಡಮೆಂಟಲಿಸಂ ಇನ್ ಇಂಡಿಯ ಎಕ್ಸ್‌ರ್‌ಸೈಸ್ ಆಫ್ ಐಡೆಂಟಿಟಿ ಇನ್ ಎ ಸೆಕ್ಯೂಲರ್ ಸ್ಟೇಟ್ ಇನ್ ಧಿರೇಂದ್ರ ವಾಜಪೇಯಿ ಅಂಡ್ ಯೋಗೇಂದ್ರ ಕೆ. ಮಲ್ಲಿಕ್" (ಸಂಪಾದಿತ) *ರಿಲಿಜಿಯಸ್ ಎಂಡ್ ಎಥ್‌ನಿಕ್ ಮೈನಾರಿಟೀಸ್ ಇನ್ ಸೌಥ್ ಏಷ್ಯಾ*, ನ್ಯೂಡೆಲ್ಲಿ, ಮನೋಹರ ಪಬ್ಲಿಕೇಷನ್, ೧೯೮೯, ಪು – ೫೦.೭೦

೩೬. *ಅಸೀಲ್ ಸೀಲ್, ದಿ ಎಮರ್ಜೆನ್ಸ್ ಆಫ್ ಇಂಡಿಯನ್ ನ್ಯಾಷನ್ಯಾಲಿಸಂ*, ಕೇಂಬ್ರಿಡ್ಜ್, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್,೧೯೬೮, ಪು.ಸಂ ೩೫–೪೮, ಮತ್ತು ಡಬ್ಲ್ಯೂ.ಸಿ.ಸ್ಮಿತ್, ಮಾಡರ್ನ್ ಇಸ್ಲಾಂ ಇನ್ ಇಂಡಿಯ: ಎ *ಸೋಶಿಯಾಲಾಜಿಕಲ್ ಎನಾಲಿಸಿಸ್*, ನ್ಯೂಡೆಲ್ಲಿ, ೧೯೪೬, ಉಷಾ ಪಬ್ಲಿಕೇಷನ್, ರಿಪ್ರಿಂಟ್, ೧೯೭೯, ಪು.ಸಂ ೫೮–೭೯

೩೭. ಜಾಫರ್ ಇಮಾಮ್ (ಸಂ),"ಸಂಲ್ಯಸ್ಪಕ್ಟ್ಸ್ ಆಫ್ ದ ಸೋಶಿಯಲ್ ಸ್ಟ್ರಕ್ಚರ್", ಮುಸ್ಲಿಮ್ಸ್ ಇನ್ ಇಂಡಿಯ, ನ್ಯೂಡೆಲ್ಲಿ, ಓರಿಯಂಟ್ ಲಾಂಗ್‌ಮನ್, ಪು.ಸಂ ೭೦–೧೧೦

೩೮. ಬೇಗ್ ಎಂ. ಆರ್.ಎ ಬೇಗ್ ಎಂ. ಆರ್.ಎ ಪೂರ್ವೋಕ್ತ ಪು.ಸಂ.೬

೩೯. ಬೇಗ್ ಎಂ. ಆರ್.ಎ ಬೇಗ್ ಎಂ. ಆರ್.ಎ ಪೂರ್ವೋಕ್ತ ಪು.ಸಂ.೬

೪೦. ಮೇಯರ್ .ಎ. ಅಂಡ್ ಹೆಚ್.ಎಸ್. ಶಾರ್ಪ್, *ರಿಲೀಜಿಯಸ್ ಪ್ರಿಫರೆನ್ಸೆಸ್ ಅಂಡ್ ವರ್ಡ್ಲಿ ಸಕ್ಸೆಸ್ ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಪಂ. ೨೭, ಪು.ಸಂ ೨೧೮–೨೨೭ ಮತ್ತು ವರ್ಸೂಫ್(ಸಂ), "ಆಚೀವ್ ಮೆಂಟ್, ಮೋಟಿವೇಷನ್, ಅಂಡ್ ರಿಲೀಜಿಯಸ್ ಬ್ಯಾಕ್ ಗ್ರೌಂಡ್"*ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಸಂ.೨೭ ಪು.ಸಂ ೨೦೫–೨೧೮ ಮತ್ತು ಸಿ.ಡಬ್ಲ್ಯೂ, ಮುಲ್ಲರ್, "ಎವಿಡೆನ್ಸ್ ಆನ್ ದ ರಿಲೇಷನ್‌ಶಿಪ್ ಬಿಟ್ವೀನ್ ರಿಲಿಜಿಯನ್ ಅಂಡ್ ಎಜುಕೇಷನ್" *ಅಟೇನ್‌ಮೆಂಟ್ ಸೋಶಿಯಾಲಜಿ ಅಫ್ ಎಜುಕೇಷನ್*, ೧೯೮೦ ವಾ.ಸಂ. ೨೩ ಪು.ಸಂ ೧೪೦–೧೫೨, ಮತ್ತು ಹಿರ್ಚಮನ್ ಅಂಡ್ ಎಲ್.ಎಂ. ಫಾಲ್‌ಕೋನ್, "ದ ಎಜುಕೇಷನ್‌ಲ್ ಅಟೇನ್‌ಮೆಂಟ್ ಆಫ್ ರಿಲೀಜಿಯೋ–ಎಥ್‌ನಿಕ್ ಗ್ರೂಪ್ ಇನ್ ದ ಯುನೈಟೆಡ್ ಸ್ಟೇಟ್ಸ್", *ರಿಸರ್ಚ್‌ಇನ್ ಸೋಶಿಯೋಲಜಿ ಆಫ್ ಎಜುಕೇಷನ್ ಅಂಡ್ ಸೋಶಿಯಾಲೈಜೇಷನ್*, ೧೯೮೮, ವಾ.ಸಂ ೫, ಪು.ಸಂ ೮೩–೧೨೦ ಮತ್ತು ಸ್ಯಾಡರ್ಸ್ ಡಬ್ಲ್ಯೂ, "ದ ಎಫೆಕ್ಟ್ ಆಫ್ ಎಥ್‌ಸಿಸಿಟಿ ಅಂಡ್ ರಿಲಿಜಿಯನ್ ಇನ್ ಎಜುಕೇಷನ್‌ಲ್ ಅಟೇನ್‌ಮೆಂಟ್", *ಎಕನಾಮಿಕ್ ಆಫ್ ಎಜುಕೇಷನ್ ರಿವ್ಯೂ*, ೧೯೯೨, ವಾ.ಸಂ.೧೧ ಪು.ಸಂ ೧೯–೩೫, ಉಲ್ಲೇಖ: ಮಹಮದ್ ಸಂಜೀರ್ ಅಲಂ, ಅಂಡ್ ಸರಸ್ವತಿ ರಾಜು, "ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯನ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್",*ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು.ಸಂ ೧೬೧೩–೧೬೨೨

೪೧. ಬೇಗ್ ಎಂ.ಅರ್. ಎ, *ಮುಸ್ಲಿಂ ಡೈಲೆಮಾ ಇನ್ ಇಂಡಿಯ*, ವಿಕಾಸ್ ಪಬ್ಲಿಷಿಂಗ್ ಹೌಸ್, ಡೆಲ್ಲಿ ೧೯೭೪, ಪು.ಸಂ ೧೭೫

೪೨. ಶರ್ಮ ಕೆ.ಡಿ, *ಎಜಿಕೇಷನ್ ಆಫ್ ಎ ನ್ಯಾಷನಲ್ ಮೈನಾರಿಟಿ: ಎ ಕೇಸ್ ಆಫ್ ಇಂಡಿಯನ್* ಮುಸ್ಲಿಮ್ಸ್, ಕಮಲಾಕರ್ ಪ್ರಕಾಶನ್, ನ್ಯೂಡೆಲ್ಲಿ, ೧೯೭೮, ಪು.ಸಂ ೪೪–೪೮

೪೩. ಶಫೀದ ಅಲ್ ಹರೀರಿ, "ಇಸ್ಲಾಂಸ್ ಪಾಯಿಂಟ್ ಆಫ್ ವ್ಯೂವ್ ಆನ್ ವಿಮೆನ್ಸ್ ಎಜಿಕೇಷನ್ ಇನ್ ಸೌದಿ ಅರೇಬಿಯ",*ಕಂಪ್ಯಾರೇಟಿವ್ ಎಜುಕೇಷನ್*, ೧೯೮೭, ವಾಸ, ೨೩ ಪು.ಸಂ ೫೧–೫೭

೪೪. ಜಿ.ಎಸ್. ಸಿಂಗ್, *ಮುಸ್ಲಿಂ ಇನ್ ಇಂಡಿಯ ಆನ್ಯೂಯಲ್ ಪಬ್ಲಿಕೇಷನ್ಸ್*, ನ್ಯೂಡೆಲ್ಲಿ, ೨೦೦೩ ಪು.ಸಂ ೧೯೪

೪೫. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ೨೦೦೩, ರೆಫೆರನ್ಸ್ ಪ್ರಸ್, ಪು–೨೯೯–೩೦೬ ಮತ್ತು ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್", *ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೪೬. ಒಬನ್ಯ ಪಿ.*ರಿವೈಟಲೈಜಿಂಗ್ ಎಜುಕೇಷನ್ ಇನ್ ಆಫ್ರಿಕ*, ಇಬಾಡನ್, ಸ್ಟರ್ಲಿಂಗ್–ಹೋರ್ಡೆನ್ ಪಬ್ಲಿಷರ್ಸ್, ನೈಜೇರಿಯಾ. ೨೦೦೨, ಪು.ಸಂ ೧೩೦–೧೩೫

೪೭. ದುಲಿಯೇಮಿ.ಎ.ಎನ್, "ಗರ್ಲ್ ಚೈಲ್ಡ್ ಎಜುಕೇಷನ್ ಆಂಡ್ ಎಂಪವರ್‌ಮೆಂಟ್, ಕಿನೋಟ್ ಅಡ್ರಸ್ ಪ್ರೆಸೇಂಟೆಡ್ ಆಟ್ ವರ್ಕ್‌ಷಾಪ್ ಫಾರ್ ಸೀನಿಯರ್ ಸೆಕೆಂಡರಿ ಸ್ಕೂಲ್ ಫಿಮೇಲ್ ಸ್ಟೂಡೆಂಟ್ಸ್", *ಟೀಚರ್ಸ್ ಆಂಡ್ ಎಜುಕೇಷನ್ ಆಫೀಸರ್ಸ್ ಇನ್ ಓಂಡೊ ಸೌತ್‌ವೆಸ್ಟ್ ಸೇನಾಟೋರಿಯಲ್ ಡಿಸ್ಟ್ರಿಕ್ಸ್*, ಒಕಿಟಿಪೂಪ ಉಲ್ಲೇಖ: ಆದೇಜುಮ್ ಓಜೀರೆ ಆಂಡ್ ಓಕೊಮೊಲಾಫೇ, "ಎಂಪವರಿಂಗ್ ಫಿಮೇಲ್ ಯೂತ್ ಥ್ರೂ ಹೈಯರ್ ಎಜುಕೇಷನ್ ಇನ್ ನೈಜೇರಿಯ", *ಜರ್ನಲ್ ಆಫ್ ಎಮರ್ಜಿಂಗ್ ಟ್ರೆಂಡ್ಸ್ ಇನ್ ಎಜುಕೇಷನಲ್ ರೀಸರ್ಚ್ ಆಂಡ್ ಪಾಲಿಸಿ ಸ್ಟಡೀಸ್*, ೨೦೦೯, ವಾ.ಸಂ.೧, ಸಂ.೨, ಪು.ಸಂ ೫೦–೫೪

೪೮. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರೆಫೆರೆನ್ಸ್ ಪ್ರಸ್, ೨೦೦೩, ಪು–೨೯೯–೩೦೬ ಮತ್ತು ಮುಹಸಿನ್ ವದೂದ್, *ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್*, ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೪೯. ಅಹಮದ್ ಜವಾದ್. ಹೆಚ್, *ರೈಟ್ಸ್ ಆಫ್ ವಿಮೆನ್ ಇನ್ ಇಸ್ಲಾಂ*, ನ್ಯೂಯಾರ್ಕ್, ಸೇಂಟ್ ಮಾರ್ಟಿನ್ಸ್ ಪ್ರಸ್, ೧೯೯೮, ಪು.ಸಂ ೨೦–೨೧

೫೦. ಮುಹಸಿನ್ ವದೂದ್, *ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್*, ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್ ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೫೧. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರೆಫೆರೆನ್ಸ್ ಪ್ರಸ್, ೨೦೦೩, ಪು.ಸಂ ೨೯೯–೩೦೬ ಮತ್ತು ಅಸ್ಗರ್ ಅಲಿ ಇಂಜಿನಿಯರ್, *ಕುರಾನ್, ವುಮೆನ್, ಮಾಡರ್ನ್ ಸೊಸೈಟಿ*, ನ್ಯೂಡಾನ್ ಪ್ರೆಸ್, ಇಂಕ್, ಯುಕೆ, ಪು.ಸಂ ೨೦೯

೫೨. ಜಾನ್ ಎಲ್. *ಎಪೋಸಿಟೊ.ಇಸ್ಲಾಂ. ಜೆಂಡರ್ ಅಂಡ್ ಸೋಶಿಯಲ್ ಛೇಂಜ್*. ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ೧೯೯೮, ಪು.ಸಂ ೧೫

೫೩. ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೪-೧೪೭

೫೪. ಇಮ್ತಿಯಾಜ್ ಅಹಮದ್, "ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್",*ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿಸ್ಟ್ರೇಷನ್*, ೧೯೮೭, ವಾ.ಸಂ.೧ ಸಂ.೨ ಪು.ಸಂ ೧೯೭-೨೦೯, ಮತ್ತು ಅಸ್ಗರ್ ಅಲಿ ಇಂಜಿನಿಯರ್, "ಮುಸ್ಲಿಮ್ಸ್ ಅಂಡ್ ಎಜುಕೇಷನ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೨೦೦೧, ಆಗಸ್ಟ ೨೫, ವಾ.ಸಂ.೩೬ ಸಂ.೨ ಪು.ಸಂ ೩೨೨೧-೨೩ ಮತ್ತು ಜೋಯಾಹಸನ್ ಅಂಡ್ ರಿತುಮೆನನ್, ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೪-೧೪೭

೫೫. ಮಾರೀಶ್, *ದಿ ಸೋಶಿಯಾಲಜಿ ಆಫ್ ಎಜುಕೇಷನ್*, ಜಾರ್ಜ್‌ಅಲೆನ್ ಅಂಡ್ ಉರ್ಮಿನ್, ಲಂಡನ್ ಮತ್ತು ಮುಲ್ಲರ್ ಡಬ್ಲ್ಯೂ, *ಫ್ಯಾಮಿಲಿ ಬ್ಯಾಕ್‌ಗ್ರೌಂಡ್, ಎಜುಕೇಷನ್ ಅಂಡ್ ಕೆರಿಯರ್ ಮೊಬಿಲಿಟಿ ಸೋಶಿಯಲ್ ಸೈನ್ಸ್ ಇನ್ಫಾರ್ಮೆಷನ್*, ೧೯೭೨, ವಾ.ಸಂ. ೧೧ ಪು.ಸಂ ೨೨೩-೫೫ ಮತ್ತು ಆ ಕ್ರೋನ್ (ಸಂ) ೧೯೯೧, "ಫ್ಯಾಮಿಲಿ ಸ್ಟ್ರಕ್ಚರ್, ಪೇರೆಂಟಲ್ ಪ್ರಾಕ್ಟೀಸಸ್ ಅಂಡ್ ಹೈಸ್ಕೂಲ್ ಕಂಪ್ಲೀಷನ್",ಅಮೇರಿಕನ್ ಸೋಶಿಯಲೋಜಿಕಲ್ ರಿವ್ಯೂ, ವಾ.ಸಂ ೫೬, ಪು.ಸಂ ೩೦೯-೨೦ ಮತ್ತು ಜಾನ್ ರಾಬರ್ಟ್ ವಾರೆನ್, "ಎಜುಕೇಷನ್ ಇನ್ ಇಕ್ವಾಲಿಟಿ ಅಮಾಂಗ್ ವೈಟ್ ಅಮಡ್ ಮೆಕ್ಸಿಕನ್ ಆರಿಜನ್ ಅಡಾಲ್‌ಸೆಂಟ್ಸ್ ಇನ್ ದ ಅಮೇರಿಕನ್ ಸೌಥ್-ವೆಸ್ಟ", ೧೯೯೬, *ಜರ್ನಲ್ ಆಫ್ ಸೋಶಯಾಲಜಿ*, ಉಲ್ಲೇಖ:- ಮಹಮದ್ ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು,"ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯನ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್",*ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು.ಸಂ ೧೬೧೩-೧೬೨೨

೫೬. ಇಮ್ತಿಯಾಜ್ ಅಹಮದ್, "ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್",*ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿಸ್ಟ್ರೇಷನ್*, ೧೯೮೭, ವಾ.ಸಂ.೧, ಸಂ.೨, ಪು.ಸಂ ೧೯೭-೨೦೯, ಮತ್ತು ಅಸ್ಗರ್ ಅಲಿ ಇಂಜಿನಿಯರ್, "ಮುಸ್ಲಿಮ್ಸ್ ಅಂಡ್

ಎಜುಕೇಷನ್". *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೨೦೦೧, ಆಗಸ್ಟ ೨೫, ವಾ.ಸಂ.೨೬, ಸಂ.೨, ಪು.ಸಂ ೩೨೨೧-೨೩ ಮತ್ತು ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೨-೧೪೬

೫೭. ಕಾಮತ್ ಎ.ಆರ್. *ಸ್ಟಡೀಸ್ ಇನ್ ಎಜುಕೇಷನ್ ರಿಫಾರ್ಮ್ಸ್ ಇನ್ ಇಂಡಿಯ*, ಬಾಂಬೆ, ಹಿಮಾಲಯ ಪಬ್ಲಿಷಿಂಗ್ ಹೌಸ್, ೧೯೮೯, ಪು.ಸಂ ೧೫೫-೧೬೮ ಮತ್ತು ತಿಲಕ್ ಎ. ಜಿ.ಬಿ, "ಹೌ ಫ್ರೀ ಈಸ್ ಫ್ರೀ ಎಜುಕೇಷನ್ ಇನ್ ಇಂಡಿಯ?" *ಅಕೇಷನಲ್ ಪೇಪರ್ ೨೧* , ನ್ಯೂಡೆಲ್ಲಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್‌ಲ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಷನ್, ೧೯೯೫, ಪು.ಸಂ ೧೪-೧೮

೫೮. ಜೆ.ಪಿ. ಸಿಂಗ್, "ಯೂನಿವರ್ಸಲೈಜೇಷನ್ ಆಫ್ ಎಜುಕೇಷನ್ ಇನ್ ಇಂಡಿಯ", *ಪ್ರಾಮಿಸೆಸ್ ಅಮಿಡ್ ಪರ್ಫಾರ್ಮೆನ್ಸ್‌ಸಸ್ ಮ್ಯಾನ್ ಅಂಡ್ ಡೆವೆಲಪ್‌ಮೆಂಟ್*, ೨೦೦೫, ವಾ.ಸಂ. ೨೭. ಸಂ.೧ ಪು.ಸಂ ೧೦೩-೧೨೪ ಮತ್ತು ತಿಲಕ್ ಜೆ.ಬಿ.ಜಿ. ಎಜುಕೇಷನ್: *ಸಾಗಾ ಆಫ್ ಸ್ಪೆಕ್ಟಾಕುಲರ್ ಅಚಿವ್‌ಮೆಂಟ್ ಅಂಡ್ ಫಿಲ್ಯೂರ್ ಇನ್ ಇಂಡಿಯ*, ಸೋಶಿಯಲ್ ಡೆವೆಲಪ್‌ಮೆಂಟ್ ರಿಪೋರ್ಟ್, ಆಕ್ಸಫರ್ಡ್ ಯೂನಿವರ್ಸಿಟಿ ನ್ಯೂಡೆಲ್ಲಿ, ೨೦೦೬, ಪು.ಸಂ ೬೮-೮೯

೫೯. ಜೈನ್ ಎಸ್.ಪಿ. "ರಿಲಿಜಿಯನ್, ಕಾಸ್ಟ್ ಕ್ಲಾಸ್ ಅಂಡ್ ಪೇರೆಂಟಲ್ ಎಜುಕೇಷನ್‌ಲ್ ಆಸ್ಪರೇಷನ್ಸ್ ಇನ್ ನಾರ್ತ್ ಇಂಡಿಯನ್ ಕಮ್ಯುನಿಟಿ", *ಇಂಡಿಯನ್ ಎಜುಕೇಷನ್‌ಲ್ ರಿವ್ಯೂ*, ೧೯೬೯, ವಾ.ಸಂ.೪, ಪು.ಸಂ ೬೪-೭೨, ಮತ್ತು ಇಮ್ತಿಯಾಜ್ ಅಹಮದ್, "ಮುಸ್ಲಿಂ ಎಜುಕೇಷನ್ ಬ್ಯಾಕ್ ವರ್ಡ್‌ನೆಸ್ ಎನ್ ಇನ್ ಫಕಿನ್ಷ್ಯಲ್ ಎನಾಲಿಸಿಸ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೧೯೮೧ ವಾ,ಸಂ.೧೦, ಪು.ಸಂ ೧೪೫೭-೬೫ ಮತ್ತು ಸುಶೀಲ್ ಜೈನ್, *ಮುಸ್ಲಿಮ್ಸ್ ಅಂಡ್ ಮಾಡರ್ನೈಜೇಷನ್*, ರಾವತ್ ಪಬ್ಲಿಕೇಷನ್, ಜೈಪುರ್, ೧೯೮೦, ಪು.ಸಂ ೨೦೧-೨೧೧ ಮತ್ತು ಇಮ್ತಿಯಾಜ್ ಅಹಮದ್,"ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್", *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡಿಮಿಸ್ಟ್ರೇಷನ್*, ೧೯೮೭, ವಾ.ಸಂ.೧ ಸಂ.೨ ಪು.ಸಂ ೧೯೧-೨೦೯, ಮತ್ತು ಮೆಹನಾಜ್ ಅನ್ಸಾರಿ, "ಟ್ರಡಿಷನಲ್ ಅಕ್ಯೂಪೇಷನ್ಸ್, ಚೈಲ್ಡ್ ಲೇಬರ್ ಅಂಡ್ ಟ್ರೇಡ್ ಪಾಲಿಸಿ: ಎವಿಸಿಯಸ್ ಸರ್ಕಲ್ ಆರೌಂಡ್ ಎಜುಕೇಷನ್‌ಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಮ್ಸ್", *ಜರ್ನಲ್ ಆಫ್ ಎಜುಕೇಷನ್‌ಲ್ ಪ್ಲಾನಿಂಗ್ ಅಂಡ್ ಅಡಿಮಿಸ್ಟ್ರೇಷನ್*, ೨೦೦೨, ವಾ.ಸಂ.೧೫, ಸಂ೩, ಪು.ಸಂ ೩೭೩-೩೫೩

೬೦. ರಾಜೇಂದರ್ ಸಾಚಾರ್, *ಹೈ ಲೇವಲ್ ಕಮಿಟಿ ರಿಪೋರ್ಟ್ ಆನ್ ಸೋಶಿಯಲ್, ಎಕನಾಮಿಕ್ ಆಂಡ್ ಎಜುಕೇಷನಲ್ ಸ್ಟೇಟಸ್ ಅಫ್ ದ ಮುಸ್ಲಿಂ ಕಮ್ಯೂನಿಟಿ ಅಫ್ ಇಂಡಿಯ*, ಡೆಲ್ಲಿ, ಅಕಲಂಕ್ ಪಬ್ಲಿಕೆಷನ್ಸ್, ೨೦೦೭, ಪು-೧೩೦

೬೧. *ಸೆನ್ಸಸ್ ಅಫ್ ಇಂಡಿಯಾ*, ೨೦೧೧, ಕರ್ನಾಟಕ ಸೀರಿಸ್.೩೧, *ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್ ಡೈರೆಕ್ಟೋರೆಟ್ ಆಪ್ ಸೆನ್ಸಸ್ ಅಪರೇಷನ್*, ಕರ್ನಾಟಕ, ಪು.ಸಂ ೩೪

೬೨. ರಾಜೇಂದರ್ ಸಾಚಾರ್, *ಹೈ ಲೇವಲ್ ಕಮಿಟಿ ರಿಪೋರ್ಟ್ ಆನ್ ಸೋಶಿಯಲ್, ಎಕನಾಮಿಕ್ ಆಂಡ್ ಎಜುಕೇಷನಲ್ ಸ್ಟೇಟಸ್ ಅಫ್ ದ ಮುಸ್ಲಿಂ ಕಮ್ಯೂನಿಟಿ ಅಫ್ ಇಂಡಿಯ*, ಡೆಲ್ಲಿ, ಅಕಲಂಕ್ ಪಬ್ಲಿಕೆಷನ್ಸ್, ೨೦೦೭, ಪು-೧೩೦

೬೩. ಮಾನವಾಭಿವೃದ್ಧಿ ಇಲಾಖೆ, ೧೧ನೇ ಯೋಜನೆಯ ಕ್ರಿಯಾ ವರದಿ, ಪ್ಲಾನ್ ವರ್ಕಿಂಗ್ ಗ್ರೂಪ್, ನ್ಯೂಡೆಲ್ಲಿ, ಭಾರತ ಸರ್ಕಾರ, ೨೦೦೪,

೬೪. ಡಾ.ಟಿ.ಆರ್. ಚಂದ್ರಶೇಖರ, *ಭಾರತದ ವರ್ತಮಾನದ ಸಾಮಾಜೀಕ ಮತ್ತು ಆರ್ಥಿಕ ಬಿಕ್ಕಟ್ಟುಗಳು: ಡಾ.ಬಿ.ಆರ್. ಅಂಬೇಡ್ಕರ್ ಚಿಂತನೆ, ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ*, ಬಳ್ಳಾರಿ, ಗಾಯತ್ರಿ ಪ್ರಕಾಶನ, ೨೦೧೪, ಪು.ಸಂ ೩೭-೫೫

೬೫. ಡಾ.ಟಿ.ಆರ್. ಚಂದ್ರಶೇಖರ, *ಭಾರತದ ವರ್ತಮಾನದ ಸಾಮಾಜೀಕ ಮತ್ತು ಆರ್ಥಿಕ ಬಿಕ್ಕಟ್ಟುಗಳು:* ಪೂರ್ವೋಕ್ತ ಪು.ಸಂ ೪೩

೬೬. ಮರಿದೇವರ, *ಶಿಕ್ಷಣ ತತ್ವಶಾಸ್ತ್ರ*, ತುಮಕೂರು, ಉದಯಬಾನು ಪ್ರಕಾಶನ, ೧೯೭೬, ಪು.ಸಂ ೮೧

೬೭. ಗ್ರಾನ್‌ವಿಲ್ಲೆ ಆಸ್ಟಿನ್, *ದ ಇಂಡಿಯನ್ ಕಾನ್‌ಸ್ಟಿಟ್ಯೂಷನ್: ಕಾರ್ನರ್ ಸ್ಟೋನ್ ಆಫ್ ಎ ನೇಷನ್*, ಬಾಂಬೆ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೭೨, ಪು-೧೪೪

೬೮. ರಾಜೇಂದರ್ ಸಾಚಾರ್, *ಹೈ ಲೇವಲ್ ಕಮಿಟಿ ರಿಪೋರ್ಟ್ ಆನ್ ಸೋಶಿಯಲ್, ಎಕನಾಮಿಕ್ ಆಂಡ್ ಎಜುಕೇಷನಲ್ ಸ್ಟೇಟಸ್ ಅಫ್ ದ ಮುಸ್ಲಿಂ ಕಮ್ಯೂನಿಟಿ ಅಫ್ ಇಂಡಿಯ*, ಡೆಲ್ಲಿ, ಅಕಲಂಕ್ ಪಬ್ಲಿಕೆಷನ್ಸ್, ೨೦೦೭, ಪು-೫೨

೬೯. ಗೋಪಾಲ ಕೃಷ್ಣ, *ರಿಪೋರ್ಟ್ ಆನ್ ನ್ಯಾಷನಲ್ ಸರ್ವೆ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ*, ನ್ಯೂಡೆಲ್ಲಿ; ಐಸಿಎಸ್‌ಆರ್, ೧೯೮೨, ಉಲ್ಲೇಖ: ಆರೀಫ್‌ಹಸನ್, ಎಜ್ಯುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ, ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್, ಸಂ.೫, ಸಂಖ್ಯೆ೧, ೧೯೯೩, ಪು.೧೪೨-೧೫೪

೭೦. ಸಕ್ಸೇನ.ಎನ್.ಪಿ. "ಪಬ್ಲಿಕ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಅಮಾಂಗ್ ಮುಸ್ಲಿಮ್ಸ್ ಇನ್ ಇಂಡಿಯಾ",*ಮ್ಯಾನ್ ಆ್ಯಂಡ್ ಡೆವಲಪ್‌ಮೆಂಟ್*, ಸಂ.೪, ಸಂಖ್ಯೆ.೪, ೧೯೮೩. ಪು.೫೫–೬೩

೭೧. ಮೊಹಮ್ಮದ್ ಅಖ್ತರ್ ಸಿದ್ದಿಖಿ, *ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್ ಇನ್ ಮುಸ್ಲಿಂ ಇನ್‌ಸ್ಟಿಟ್ಯೂಷನ್ಸ್*, ನ್ಯೂಡೆಲ್ಲಿ: ಆಶಿಶ್ ಪಬ್ಲಿಷಿಂಗ್ ಹೌಸ್, ೧೯೯೫ ಉಲ್ಲೇಖ: ಇಸ್ಮಾಯಿಲ್ ಎಂ. ಮಕಾಂದಾರ್, ಎ "ಸೋಶಿಯಾಲಾಜಿಕಲ್ ಸ್ಟಡಿ ಆಫ್ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್ ಇನ್ ಕರ್ನಾಟಕ; ಎ ಕೇಸ್‌ಸ್ಟಡಿ ಆಫ್ ಮುಸ್ಲಿಂ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್", ಸಮಾಜಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ೨೦೦೨, ಪು.೯೪

೭೨. ಔಸಾಫ್ ಅಹಮದ್, *ಇಂಡಿಯನ್ ಮುಸ್ಲಿಮ್ಸ್: ಇಶ್ಯೂಸ್ ಇನ್ ಸೋಶಿಯಲ್ ಆಂಡ್ ಇಕನಾಮಿಕ್ ಡೆವಲಪ್‌ಮೆಂಟ್*, ನ್ಯೂಡೆಲ್ಲಿ, ಖಾಮಾ ಪಬ್ಲಿಷರ್ಸ್, ೧೯೯೩, ಪು. ೪೦ ಮತ್ತು ಡಾ. ಷೇಖ್ ರಹೀಂ ಮೊಂಡಲ್, *ಸೋಶಿಯಲ್ ಆರ್ಗನೈಜೇಷನ್ ಅಮಾಂಗ್ ರೂರಲ್ ವೆಸ್ಟ್ ಬೆಂಗಾಲ್*, ಡಿಪಾರ್ಟ್‌ಮೆಂಟ್ ಆಫ್ ಸೋಶಿಯಾಲಜಿ ಆ್ಯಂಡ್ ಸೋಶಿಯಲ್ ಆಂಥ್ರೋಪಾಲಜಿ, ನಾರ್ಥ್ ಬೆಂಗಾಲ್ ಯೂನಿವರ್ಸಿಟಿ, ೧೯೯೮, ಉಲ್ಲೇಖ: ಡಾ. ಷೇಖ್ ರಹೀಮ್ ಮೊಂಡಲ್, "ಇಕನಾಮಿಕ್ ಆ್ಯಂಡ್ ಸೋಶಿಯಲ್ ಸಿಚ್ಯೂಎಷನ್ ಅವಾಂಗ್ ವುಸ್ಲಿವ್ಸ್ ಆಫ್ ವೆಸ್ಟ್ ಬೆಂಗಾಲ್; ಸವ್ ಎಂಫಿರಿಕಲ್ ಅಬ್‌ಸರ್ವೇಷನ್"*ಜರ್ನಲ್ ಆಫ್ ಆಬ್ಜೆಕ್ಟೀವ್ ಸ್ಟಡೀಸ್*, ಸಂ.೨, ಸಂಖ್ಯೆ. ೧, ಜನವರಿ ೧೯೯೯, ಪು. ೧೪೦೯–೧೪೧೯

೭೩. ಬುಚ್.ಎಂ.ಬಿ. ಆ್ಯಂಡ್ ಸುದಾನೆ.ಜಿ.ಆರ್, *ಎಸ್ಟಾಬ್ಲಿಷಿಂಗ್ ಎನ್ ಎಜುಕೇಷನಲ್ ರಿಸೋರ್ಸ್ ಸೆಂಟರ್ ಫಾರ್ ಮುಸ್ಲಿಂ ಮ್ಯಾನೇಜ್ಡ್ ಸ್ಕೂಲ್ಸ್ ಇನ್ ಇಂಡಿಯಾ, ವಡೋದ್ರಾ; ೧೯೮೯, ಪು.೩೬, ಆ್ಯಂಡ್ ಷೇಖ್‌ಅಹಮದ್, ಮುಸ್ಲಿಂ ಮೈನಾರಿಟಿ ಎಜುಕೇಷನ್ ಇನ್ ಗುಜರಾತ್, ಉಲ್ಲೇಖ: ಮೊಹಮದ್ ಅಖ್ತರ್ ಸಿದ್ಧಿಕಿ*, ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್ ಇನ್ ಮುಸ್ಲಿಮ್ ಇನ್‌ಸ್ಟಿಟ್ಯೂಷನ್ಸ್, ನ್ಯೂಡೆಲ್ಲಿ; ಆಶಿಶ್ ಪಬ್ಲಿಷಿಂಗ್ ಹೌಸ್, ೧೯೯೫, ಪು.೭೯, ಉಲ್ಲೇಖ: ಇಸ್ಮಾಯಿಲ್.ಎಂ. ಮುಕಾಂದಾರ್, "ಎ ಸೋಶಿಯಾಲಾಜಿಕಲ್ ಸ್ಟಡಿ ಆಫ್ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್ ಇನ್ ಕರ್ನಾಟಕ; ಎ ಕೇಸ್‌ಸ್ಟಡಿ ಆಫ್ ಮುಸ್ಲಿಂ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್", ಸಮಾಜಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ೨೦೦೨, ಪು.೯೪

೭೪. ರಾಜೇಂದರ್ ಸಾಚಾರ್ ಪೂರ್ವೋಕ್ತ, ಪು.೫೭-೫೯

೭೫. ಔಸಾಫ್ ಅಹಮದ್, ಪೂರ್ವೋಕ್ತ, ಪು.೪೦, ಮತ್ತು ಡಾ.ಷೇಖ್‌ರಹೀಂ ಮೊಂಡಲ್, ಪೂರ್ವೋಕ್ತ, ಪು.೧೪೨-೧೫೪

೭೬. ಮಹಮದ್ ಪೀರ್, *ಮುಸ್ಲಿಮ್ ಎಜುಕೇಷನ್ ಇನ್ ಇಂಡಿಯಾ*, ಮಂಗಳೂರು: ಮುಸ್ಲಿಂ ಪ್ರಗತಿ ಪ್ರಕಾಶನ, ೧೯೯೧, ಪು.೧೦

೭೭. ಇಮ್ತಿಯಾಜ್ ಅಹಮದ್, "ಎಜುಕೇಷನಲ್ ಡೆವಲಪ್‌ಮೆಂಟ್ ಆಫ್ ಮೈನಾರಿಟೀಸ್ ಇನ್ ಇಂಡಿಯಾ", *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆ್ಯಂಡ್ ಅಡ್ಮಿನಿಸ್ಟ್ರೇಷನ್* ಸಂ.೧, ಸಂಖ್ಯೆ ೨, ಪು.೧೯೧-೨೦೯ ಮತ್ತು ಗೋಪಾಲಕೃಷ್ಣ ರಿಪೋರ್ಟ್, ಪೂರ್ವೋಕ್ತ ಮತ್ತು ರಾಧಾಕೃಷ್ಣ.ಆರ್, "ಎಂಪ್ಲಾಯಿಮೆಂಟ್ ಪ್ರೋಫಾಯಿಲ್ ಆಫ್ ಅರ್ಬನ್ ಡಿಪ್ರೈವ್ಡ್ ಕ್ಲಾಸೆಸ್; ಎ ಕೇಸ್ ಸ್ಟಡಿ ಆಫ್ ಅಹಮದಬಾದ್ ಸ್ಲಮ್", *ಪೇಪರ್ ಪ್ರೆಸೆಂಟೆಡ್ ಆಟ್ ದ ಥರ್ಟೀನ್ತ್ ಇಂಟರ್ ಡಿಸಿಪ್ಲಿನರಿ ರಿಸರ್ಚ್ ಮಥಡಾಲಜಿ ವರ್ಕ್‌ಷಾಪ್ ಅಟ್ ವಾಲ್ಟೇರ್*, ಜೂನ್ ೧ ರಿಂದ ೦೪, ಮತ್ತು ಪ್ರಕಾಶ್ ರಾವ್ ಆ್ಯಂಡ್ ತಿವಾರಿ. ಎನ್, *ಸೋಶಿಯಲ್ ಸ್ಟ್ರಕ್ಚರ್ ಆಫ್ ಎನ್ ಮೆಟ್ರೋಪೋಲೀಸ್; ಎ ಸ್ಟಡಿ ಆಫ್ ಬೆಂಗಳೂರ್*, ನ್ಯೂಡೆಲ್ಲಿ: ಅಲೈಡ್ ಪಬ್ಲಿಷರ್ಸ್ ಉಲ್ಲೇಖ: ಆರೀಫ್ ಹುಸೇನ್, ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಂ, ಪೂರ್ವೋಕ್ತ ಪು.೧೪೨-೧೫೪

೭೮. ರಾಜೇಂದರ್ ಸಾಚಾರ್ ಪೂರ್ವೋಕ್ತ, ಪು.೮೫ ಮತ್ತು ಶರ್ಮಾ.ಕೆ.ಡಿ, *ಎಜುಕೇಷನ್ ಆಫ್ ನ್ಯಾಷನಲ್ ಮೈನಾರಿಟೀಸ್*, ನ್ಯೂಡೆಲ್ಲಿ: ಕಲಮ್‌ಕರ್ ಪ್ರಕಾಶನ್, ಪ್ರೈಲಿ, ೧೯೭೮, ಪು.೧೫-೧೬

ಅಧ್ಯಾಯ: ಎರಡು

# ಬೆಳಗಾವಿ ಜಿಲ್ಲೆ: ಬಹುಮುಖ ಆಯಾಮಗಳು

ಹಿಂದಿನ ಅಧ್ಯಾಯದಲ್ಲಿ ಅಭಿವೃದ್ಧಿ ಮತ್ತು ಮಹಿಳೆಗೆ ಸಂಬಂಧಿಸಿದ ಚರ್ಚೆಗಳನ್ನು ಅರ್ಥೈಸಿಕೊಳ್ಳಲಾಗಿದೆ. ಹಿಂದಿನ ಅಭಿವೃದ್ಧಿ ಸಿದ್ಧಾಂತಗಳು ಮಹಿಳೆಯರನ್ನು ನಿರ್ವಚಿಸಿಕೊಂಡಿರುವ ವಿಧಾನವನ್ನು, ಇಂದಿನ ಅಭಿವೃದ್ಧಿ ಸಿದ್ಧಾಂತಗಳು ಮಹಿಳೆಯರನ್ನು ಕೇಂದ್ರಧಾತುವನ್ನಾಗಿ ಪರಿಗಣಿಸಿಕೊಂಡಿರುವ ವಿಧಾನಗಳನ್ನು ಚರ್ಚಿಸಲಾಗಿದೆ. ಮಹಿಳಾ ಅಭಿವೃದ್ಧಿಯಲ್ಲಿ ಶಿಕ್ಷಣ ವಹಿಸುವ ಪಾತ್ರವನ್ನು, ಮುಖ್ಯವಾಗಿ ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದ ವಾದಗಳು ಮತ್ತು ಅಭಿವೃದ್ಧಿ ನೆಲೆಗಳನ್ನು ಅರ್ಥಮಾಡಿಕೊಳ್ಳಲಾಗಿದೆ. ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಅಧ್ಯಯನಕ್ಕೆ ಬೆಳಗಾವಿ ನಗರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಭಾರತ, ಕರ್ನಾಟಕ ಮುಸ್ಲಿಮರ ಸ್ಥಿತಿಗಳನ್ನು ವಿಶ್ಲೇಷಿಸುತ್ತಾ ಬೆಳಗಾವಿ ನಗರದ ಮುಸ್ಲಿಮರ ಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲಾಗಿದೆ.

ಉತ್ತರ ಕನಾಟಕದಲ್ಲಿ ಮಧ್ಯದಲ್ಲಿ ಶಾಲೆ ಬಿಡುವ ಪ್ರಮಾಣ ಹೆಚ್ಚಾಗಿದೆ. ಈ ಸಂಗತಿಯಲ್ಲಿ ಗುಲ್ಬರ್ಗಾದಲ್ಲಿ ಶೇ.೫೭.೧೫ರಷ್ಟು ಮಕ್ಕಳು ಮಧ್ಯದಲ್ಲಿ ಶಾಲೆ ಬಿಡುತ್ತಿದ್ದು ಇದು ಮೊದಲ ಸ್ಥಾನದಲ್ಲಿದ್ದರೆ, ಬೆಳಗಾವಿಯಲ್ಲಿ ಶೇ.೨೦.೭೩ ರಷ್ಟು ದಾಖಲಾಗಿದ್ದು ಎರಡನೆಯ ಸ್ಥಾನದಲ್ಲಿದೆ. ಈಗಾಗಲೆ ಹೈದ್ರಾಬಾದ್-ಕರ್ನಾಟಕ ಮತ್ತು ಗುಲ್ಬರ್ಗಾ ಜಿಲ್ಲೆಯನ್ನು ಕೇಂದ್ರೀಕರಿಸಿಕೊಂಡು ಕೈಗೊಂಡ ವಿವಿಧ ಅಧ್ಯಯನಗಳನ್ನು ಹಿಂದೆ ಚರ್ಚಿಸಲಾಗಿದೆ. ಇಂತಹ ಅಧ್ಯಯನಗಳು ಮುಂಬೈ-ಕರ್ನಾಟಕ ಭಾಗದ ಬೆಳಗಾವಿಯಲ್ಲಿ ಕಂಡುಬರುವುದಿಲ್ಲ. ಮುಸ್ಲಿಂ ಸಮುದಾಯ ನಗರ ಕೇಂದ್ರಿತವಾಗಿದೆ. ಬಹುಸಂಖ್ಯಾತ ಮುಸ್ಲಿಮರು ನಗರ ಪ್ರದೇಶದಲ್ಲೇ ಹೆಚ್ಚಾಗಿ ವಾಸವಾಗಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮುಸ್ಲಿಮರ ಪ್ರಮಾಣ ಕಡಿಮೆ ಕಂಡುಬರುತ್ತದೆ. ಅದ್ದರಿಂದ ಪ್ರಸ್ತುತ ಅಧ್ಯಯನವನ್ನು ಬೆಳಗಾವಿ ನಗರದಲ್ಲಿ ಕೈಗೊಳ್ಳಲಾಗಿದೆ. ನಿಸ್ಸಂದೇಹವಾಗಿ ಬೆಳಗಾವಿ

ಜಿಲ್ಲೆಯು ಕೆಲವು ದಶಕಗಳಿಂದೀಚೆಗೆ ಸಾಕಷ್ಟು ಪರಿಣಾಮಕಾರಿಯಾಗಿ ಅಭಿವೃದ್ಧಿ ಹೊಂದುತ್ತಿದೆ. ಆದರೂ ಜಿಲ್ಲೆಯಲ್ಲಿ ಅಪಾರವಾದ ಅವಕಾಶಗಳಿದ್ದು ನೀತಿ ರಚನಾಕಾರರು ಇದರ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕಾಗಿದೆ. ಇಂದಿಗೂ ಜಿಲ್ಲೆಯಲ್ಲಿ ಪ್ರಾದೇಶಿಕವಾರು ಅಸಮಾನತೆಗಳು ಜೀವಂತವಾಗಿವೆ. ಇವುಗಳನ್ನು ನೀವಾರಿಸುವತ್ತ ಗಮನ ಹರಿಸುವುದು ಅಗತ್ಯವಾಗಿದೆ. ಇದರ ಜೊತೆಗೆ ಜಿಲ್ಲೆಯಲ್ಲಿ ಲಿಂಗ ಅಸಮಾನತೆ ಕೂಡ ಈ ಜಿಲ್ಲೆಯ ಸಮಸ್ಯೆಯಾಗಿ ಉಳಿದುಕೊಂಡಿದೆ. ಇವುಗಳ ನಿವಾರಣೆಗೆ ಶೀಘ್ರ ಕ್ರಮಗಳನ್ನು ಕೈಗೊಳ್ಳಲು ಜಿಲ್ಲೆಯ ಮಾನವ ಅಭಿವೃದ್ಧಿ ವರದಿ ಒತ್ತಯಿಸಿದೆ.[೧] ಈ ಅಧ್ಯಾಯಕ್ಕೆ ಪೂರಕವಾಗಿ ಬೆಳಗಾವಿ ಜಿಲ್ಲೆಯ ಸಾಮಾನ್ಯ ಪರಿಸರ ಹಾಗೂ ಭಾರತ, ಕರ್ನಾಟಕದ ಮತ್ತು ಬೆಳಗಾವಿ ನಗರ ಪ್ರದೇಶದ ಮುಸ್ಲಿಮರ ಸಮಾಜೋ–ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೨.೧. ಬೆಳಗಾವಿ ಜಿಲ್ಲೆಯ ಸಾಮಾನ್ಯ ಪರಿಸರ

### ೧. ಬೆಳಗಾವಿಯ ಚಾರಿತ್ರಿಕ ಹಿನ್ನೆಲೆ

ಕರ್ನಾಟಕ ರಾಜ್ಯದ ವಾಯುವ್ಯ ಭಾಗದಲ್ಲಿರುವ ಬೆಳಗಾವಿ ಮಹಾನಗರವು ವೈವಿಧ್ಯಮಯವಾದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಿಂದ ಕೂಡಿದ್ದು, ಕರ್ನಾಟಕದ ಮುಖ್ಯ ಭಾಗವಾಗಿದೆ. ಮಹಾರಾಷ್ಟ್ರ ರಾಜ್ಯದ ಗಡಿಗೆ ಹೊಂದಿಕೊಂಡಿರುವ ಈ ಜಿಲ್ಲೆಯು ಭಾಷಾವೈವಿಧ್ಯತೆಗೆ ಹೆಸರಾಗಿದೆ.[೨] ಬೆಳಗಾವಿಯ ಹಿಂದಿನ ಹೆಸರು ವೇಣು ಗ್ರಾಮವೆಂದು ಶಿಲಾಶಾಸನಗಳಿಂದ ಗುರುತಿಸುತ್ತೇವೆ. ವೇಣು ಅಂದರೆ **"ಬಿದಿರು"** ಸುತ್ತಮುತ್ತಲಿನ ಕಾಡಿನಲ್ಲಿ ಬಿದಿರನ್ನು ಬೆಳೆಯುವಲ್ಲಿ ಹೆಸರುವಾಸಿಯಾಗಿದ್ದ ಈ ನಾಡು **"ವೇಣುಗ್ರಾಮ"** ವೆಂದು ಹೆಸರಾಯಿತು. ಬೆಳಗಾವಿಯ ವಿಶೇಷತೆಯನ್ನು ಸಾರುವ ಅನೇಕ ಶಾಸನಗಳು ಈ ಭಾಗದಲ್ಲಿ ಸಿಕ್ಕಿವೆ. ವೇಳುಗ್ರಾಮೆ, ವೇಳುಗ್ರಾಮ, ವೇಣುಗ್ರಾಮ, ಬೆಳಗುಗ್ರಾಮ, ಬೆಳುಗಾಮು, ಬೆಳಗಾವಿ ಈ ರೀತಿ ಬೆಳಗಾವಿಯ ಹೆಸರು ಬೆಳವಣಿಗೆ ಹೊಂದಿರುವುದಾಗಿ ತಿಳಿದುಬರುತ್ತದೆ.

ಬೆಳಗಾವಿ ಜಿಲ್ಲೆಯು ಕ್ರಿ.ಶ. ೩೨೭ ರಿಂದ ಕ್ರಿ.ಶ. ೨೨೯ ರವರೆಗೆ ಶಾತವಾಹನರ ಆಳ್ವಿಕೆಯಲ್ಲಿದ್ದದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಮುಂದೆ ಈ ನಾಡು ಚಾಲುಕ್ಯರ ವಶವಾಯಿತು. ಕ್ರಿ.ಶ. ೩೩೦ ರಿಂದ ಖಾನಾಪುರದ ಹಲಸಿ ಗ್ರಾಮವು ಕದಂಬರ ಎರಡನೆಯ ರಾಜಧಾನಿಯಾಗಿತ್ತೆಂದು ಅಂದಿನ ತಾಮ್ರ ಪಟಗಳ ಶಾಸನದಿಂದ ತಿಳಿದು ಬರುತ್ತದೆ. ಕ್ರಿ.ಶ. ೭೬೦ ರಲ್ಲಿ ಚಾಲುಕ್ಯರು ರಾಷ್ಟ್ರಕೂಟರನ್ನು ಸೋಲಿಸಿ ಬೆಳಗಾವಿಯನ್ನು ತಮ್ಮ ಕೈವಶ ಮಾಡಿಕೊಂಡರು. ರಾಷ್ಟ್ರಕೂಟರ ಆಳ್ವಿಕೆಯ ಅವನತಿಯ ನಂತರ ರಠ್ಠರ ವಂಶದವರು ಕ್ರಿ.ಶ. ೮೭೫ ರಿಂದ ಕ್ರಿ.ಶ. ೧೨೫೦ ರ

ವರೆಗೆ ಆಳ್ವಿಕೆ ನಡೆಸಿದರು. ೧೨ ನೇ ಶತಮಾನದ ರಠ್ಠರ ಕಾಲದಲ್ಲಿ ಸವದತ್ತಿಯನ್ನು ಆಧಾರವಾಗಿಟ್ಟುಕೊಂಡು ಬೆಳಗಾವಿಯು ಹೊಸ ನಗರವಾಗಿ ಸ್ಥಾಪಿತವಾಯಿತೆಂದು ತಿಳಿದುಬರುತ್ತದೆ. ರಠ್ಠರು ಬೆಳಗಾವಿ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೨೧೦ರಿಂದ ಕ್ರಿ.ಶ. ೧೨೫೦ರವರೆಗೆ ರಾಜ್ಯಭಾರ ಮಾಡಿಕೊಂಡು ತದನಂತರ ದೇವಗಿರಿಯ ಯಾದವರಿಂದ ರಠ್ಠರು ಸೋತು ಹೋದರು. ಯಾದವರ ನಂತರ ದೆಹಲಿಯ ಖಿಲ್ಜಿಯ ಸಂತತಿಯು ಬೆಳಗಾವಿಯಲ್ಲಿ ಆಳ್ವಿಕೆ ಮಾಡಿತು. ಕ್ರಿ.ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯದ ದೊರೆಗಳು ಕೆಲ ಕಾಲ ಬೆಳಗಾವಿಯನ್ನು ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದರು.

ಭೌಗೋಳಿಕ ಸನ್ನಿವೇಶಗಳು ಈ ನಗರವನ್ನು ಪ್ರಮುಖ ವ್ಯಾಪಾರ ಕೇಂದ್ರವನ್ನಾಗಿ ಮಾರ್ಪಾಡಿಸಿ ಕಟ್ಟಿಗೆ, ವಜ್ರ, ಮತ್ತು ನೇಕಾರಿಕೆಗೆ ಮಹತ್ವ ನೀಡಿದವು. ಕ್ರಿ.ಶ. ೧೪೭೪ ರಲ್ಲಿ ಬಹುಮನಿಯ ಸುಲ್ತಾನರು ಬೆಳಗಾವಿಯನ್ನು ಆಳಿದರು. ಕ್ರಿ.ಶ. ೧೫೧೮ ರಲ್ಲಿ ಬಹುಮನಿ ರಾಜ್ಯವು ೫ ಚಿಕ್ಕ ಚಿಕ್ಕ ಭಾಗಗಳಾಗಿ ಹಂಚಿ ಹೋಯಿತು. ಬಿಜಾಪುರದ ಆದಿಲ್ ಷಾಹಿಯು ಬೆಳಗಾವಿಯನ್ನು ಕ್ರಿ.ಶ. ೧೫೮೯ ರಿಂದ ಆಳಿದನು. ನಂತರ ಕ್ರಿ.ಶ. ೧೬೮೬ ರಲ್ಲಿ ಮೊಗಲ್ ಸಾಮ್ರಾಜ್ಯದ ದೊರೆ ಔರಂಗಜೇಬನು ಬಿಜಾಪುರ ಸುಲ್ತಾನರನ್ನು ಸೋಲಿಸಿ ಬೆಳಗಾವಿಯನ್ನು ತನ್ನ ವಶ ಮಾಡಿಕೊಂಡನು. ಕ್ರಿ.ಶ. ೧೭೦೭ ರಲ್ಲಿ ಔರಂಗಜೇಬನ ಆಳ್ವಿಕೆಯ ಅವನತಿ ನಂತರ ಆತನ ಪ್ರಮುಖ ವಿರೋಧಿಗಳು ಮತ್ತು ಮರಾಠಾ ಒಕ್ಕೂಟಗಳ ಸಹಾಯದಿಂದ ಪೇಶ್ವೆಗಳ ಆಡಳಿತಕ್ಕೆ ಸಹಾಯಕವಾಯಿತು.ಕ್ರಿ.ಶ. ೧೭೭೬ ರಲ್ಲಿ ಮೈಸೂರಿನ ಹೈದರಾಲಿಯು ಬೆಳಗಾವಿಯನ್ನು ತನ್ನ ಕೈವಶ ಮಾಡಿಕೊಂಡನು. ನಂತರ ಬ್ರಿಟೀಷರ ಸಹಾಯ ಪಡೆದು ಪೇಶ್ವೆಗಳು ಪುನಃ ಅಧಿಕಾರ ಪಡೆದರು. ಕ್ರಿ.ಶ.೧೮೧೮ ರಲ್ಲಿ ಬ್ರಿಟಿಷರು ಪೇಶ್ವೆಯ ಕೊನೆಯ ದೊರೆಗಳನ್ನು ಸೋಲಿಸಿ ಬೆಳಗಾವಿಯನ್ನು ತಮ್ಮದಾಗಿಸಿಕೊಂಡರು.[೨] ಚಾರಿತ್ರಿಕ ಹಿನ್ನೆಲೆಯ ಜೊತೆಗೆಈ ಜಿಲ್ಲೆಯ ಭೌಗೋಳಿಕ ಅಂಶಗಳು ವಿಶಿಷ್ಟತೆಯಿಂದ ಕೂಡಿವೆ.

**೨. ಬೆಳಗಾವಿಯ ಭೌಗೋಳಿಕ ಪರಿಸರ**

ಬೆಳಗಾವಿ ಜಿಲ್ಲೆಯ ಪ್ರದೇಶದ ಭೌಗೋಳಿಕ ವೈಶಿಷ್ಟ್ಯಕ್ಕೆ ಸ್ಥಾನೀಕರಣ ಬಹುಮುಖ್ಯ ಕಾರಣವಾಗಿದೆ. ಜಿಲ್ಲೆಯ ಭೂ ಭಾಗವು ೧೫೦ ೨೩೧ ದಿಂದ ೧೬೦ ೫೮೧ ಉತ್ತರ ಅಕ್ಷಾಂಶಗಳ ಮಧ್ಯೆ ಹಾಗೂ ೭೪೦ ೫೧ ದಿಂದ ೭೫೦ ೨೮೧ ಪೂರ್ವ ರೇಖಾಂಶಗಳ ಮಧ್ಯದಲ್ಲಿ ಹರಡಿದ್ದು, ಸಮುದ್ರ ಮಟ್ಟದಿಂದ ೨೫೦೦ ಅಡಿ ಎತ್ತರದಲ್ಲಿದೆ. ರಾಜ್ಯದ ವಾಯುವ್ಯದಲ್ಲಿರುವ ಈ ಜಿಲ್ಲೆಯ ಪಶ್ಚಿಮ ಭಾಗ ಪಶ್ಚಿಮ ಘಟ್ಟಗಳ ಪ್ರದೇಶವಾಗಿದೆ. ೧೩,೪೫೪ ಚ.ಕಿ.ಮೀ ವಿಸ್ತಾರ ಹೊಂದಿದ್ದು, ರಾಜ್ಯದ ಭೌಗೋಳಿಕ ವಿಸ್ತೀರ್ಣದ ಶೇ.೬.೯ ರಷ್ಟು ಪಾಲನ್ನು ಹೊಂದಿದೆ. ಈ ಜಿಲ್ಲೆ ರಾಜ್ಯದ

೩೦ ಜಿಲ್ಲೆಗಳಲ್ಲಿ ಅತೀ ವಿಸ್ತಾರವಾದ ಜಿಲ್ಲೆಯಾಗಿದ್ದು, ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನ ಪಡೆದುಕೊಂಡಿದೆ. ಜಿಲ್ಲೆಯ ಭೂಪ್ರದೇಶದ ವ್ಯಾಪ್ತಿ ದಕ್ಷಿಣೋತ್ತರವಾಗಿ ೧೬೦ ಕಿ.ಮೀ ಹಾಗೂ ಪೂರ್ವ ಪಶ್ಚಿಮವಾಗಿ ೮೦ ರಿಂದ ೧೩೦ ಕಿ.ಮೀ ಗಳಷ್ಟಿದೆ. ಜಿಲ್ಲೆಯ ಬಹು ಭಾಗ ಮೈದಾನವಾಗಿದ್ದು, ಕೆಳಮಟ್ಟದ ಬೆಟ್ಟ ಶಿಖರಗಳು ಅಲ್ಲಲ್ಲಿ ಹರಡಿವೆ. ಪಶ್ಚಿಮಕ್ಕೆ ಸಹ್ಯಾದ್ರಿ ಬೆಟ್ಟಗಳ ಸಾಲು ಹಂಚಿಕೊಂಡಿದ್ದರೆ, ಪೂರ್ವಕ್ಕೆ ಸಮೃದ್ದವಾದ ಬೆಳವಲ ನಾಡಿನಿಂದ ಕೂಡಿದೆ. ಈ ಜಿಲ್ಲೆ ಪೂರ್ವ ದಿಕ್ಕಿನಲ್ಲಿ ವಿಜಯಪುರ, ಬಾಗಲಕೋಟೆ ಹಾಗೂ ದಕ್ಷಿಣದಲ್ಲಿ ಧಾರವಾಡ, ಉತ್ತರ ಕನ್ನಡ, ಮತ್ತು ಗದಗ ಪಶ್ಚಿಮದಲ್ಲಿ ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳು ಉತ್ತರದಲ್ಲಿ ಮಹಾರಾಷ್ಟ್ರ ರಾಜ್ಯದ ಕೊಲ್ಲಾಪುರ ಹಾಗೂ ರತ್ನಾಗಿರಿ ಜಿಲ್ಲೆಗಳು ಇರುತ್ತವೆ, ಜಿಲ್ಲೆಯಲ್ಲಿ ಐದು ಪ್ರಮುಖವಾದ ಕೃಷ್ಣ, ಮಲಪ್ರಭ, ಘಟಪ್ರಭ, ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳಿವೆ.[೪] ಜಿಲ್ಲೆಯ ವಾತಾವರಣವು ಉತ್ತಮ ಸ್ಥಿತಿಯಲ್ಲಿದೆ.

**೩. ಬೆಳಗಾವಿ ಹವಾಮಾನ ಮತ್ತು ನೈಸರ್ಗಿಕ ಸಂಪನ್ಮೂಲಗಳು**

ಬೆಳಗಾವಿ ಜಿಲ್ಲೆಯು ವರ್ಷವೆಲ್ಲಾ ಸದಾ ಆರೋಗ್ಯಕರ ಮತ್ತು ಅಹ್ಲಾದಕರವಾದ ವಾತಾವರಣದಿಂದ ಕೂಡಿರುತ್ತದೆ. ತಾಪಮಾನವು ಸಾಮಾನ್ಯವಾಗಿ ಚಳಿಗಾಲದಲ್ಲಿ ೧೭೦ ಸೆ ಮತ್ತು ಮತ್ತು ಬೇಸಿಗೆ ಕಾಲದಲ್ಲಿ ೩೮೦ ಸೆ ಗಳ ನಡುವೆ ಬದಲಾಗುತ್ತಿರುತ್ತದೆ. ಜಿಲ್ಲೆಯ ಸರಾಸರಿ ವಾಡಿಕೆ ಮಳೆ ಸರಾಸರಿ ೮೭೩.೩ ಮಿ.ಮೀ ಇದೆ. ಖಾನಾಪೂರವು ಅತೀ ಹೆಚ್ಚು ಮಳೆ ಬೀಳುವ ಪ್ರದೇಶವಾದರೆ, ರಾಯಬಾಗವು ಅತೀ ಕಡಿಮೆ ಮಳೆ ಬೀಳುವ ಪ್ರದೇಶವಾಗಿದೆ.೫ಬೆಳಗಾವಿ ಜಿಲ್ಲೆಯು ಶ್ರೀಮಂತ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿದೆ. ಮ್ಯಾಂಗನೀಸ್, ಬಾಕ್ಸೈಟ್, ಕಬ್ಬಿಣದ ಅದಿರು, ಸುಣ್ಣದ ಕಲ್ಲು, ಮರಳು, ಕಟ್ಟಡದ ಕಲ್ಲು ಇತ್ಯಾದಿಗಳು ಜಿಲ್ಲೆಯಲ್ಲಿ ಕಂಡುಬರುವ ಮುಖ್ಯವಾದ ಖನಿಜ ಸಂಪನ್ಮೂಲಗಳಾಗಿವೆ. ಅದರಲ್ಲೂ ಜಿಲ್ಲೆಯಲ್ಲಿ ಅಪಾರ ಪ್ರಮಾಣದ ಮ್ಯಾಂಗನೀಸ್ ನಿಕ್ಷೇಪವು 'ವಿ' ಆಕಾರದ ವಲಯಗಳಾದ ಲೋಂಡಾ ಮತ್ತು ಖಾನಾಪೂರ ನಡುವಿನ ಪಶ್ಚಿಮ ಖಾನಾಪೂರ ತಾಲ್ಲೂಕು ಪ್ರದೇಶದಲ್ಲಿದೆ.

**೪. ಬೆಳಗಾವಿ ಆರ್ಥಿಕ ಸ್ಥಿತಿ**

ಬೆಳಗಾವಿ ಜಿಲ್ಲೆಯಲ್ಲಿ ಅತ್ಯುತ್ತಮ ಹವಮಾನದ ಜೊತೆಗೆ ನಿರಂತರ ಮಳೆ ಮತ್ತು ಫಲವತ್ತಾದ ಭೂಮಿಯಿಂದಾಗಿ ಜಿಲ್ಲೆಯಲ್ಲಿ ಕೃಷಿ ಉತ್ತಮವಾಗಿದೆ. ಘಟಪ್ರಭಾ ಮತ್ತು ಮಲಪ್ರಭಾ ನದಿಗಳಿಗೆ ಕ್ರಮವಾಗಿ ಹಿಡಕಲ್ ಮತ್ತು ನವಿಲು ತೀರ್ಥಗಳಲ್ಲಿ ಭವ್ಯವಾದ ಆಣೆಕಟ್ಟುಗಳನ್ನು ನಿರ್ಮಿಸಿರುವದರಿಂದ ಒಟ್ಟು ೧೦ ತಾಲೂಕುಗಳಲ್ಲಿ ೮ ತಾಲೂಕುಗಳು ನೀರಾವರಿಗೆ ಒಳಪಟ್ಟಿವೆ. ಶೇ.೭೫ ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದು, ಇವರ ಮುಖ್ಯ ಕಸಬು

ವ್ಯವಸಾಯವಾಗಿದೆ. ಆಹಾರ ಧಾನ್ಯಗಳ ಜೊತೆಗೆ ಕಬ್ಬು, ತಂಬಾಕು ಮತ್ತು ಇನ್ನಿತರೆ ವಾಣಿಜ್ಯ ಬೆಳೆಗಳನ್ನು ನೀರಾವರಿಗೊಳಪಟ್ಟ ತಾಲೂಕುಗಳಲ್ಲಿ ಬೆಳೆಯಲಾಗುತ್ತಿದೆ. ಬೆಳಗಾವಿ ಜಿಲ್ಲೆಗಳಲ್ಲಿ ೨೨ ಸಕ್ಕರೆ ಕಾರ್ಖಾನೆಗಳಿದ್ದು, ಕರ್ನಾಟಕದ 'ಸಕ್ಕರೆಯ ಬಟ್ಟಲು' ಎಂದು ಪ್ರಸಿದ್ಧಿಯನ್ನು ಪಡೆದಿದೆ. ಇತ್ತೀಚೆಗೆ ತೋಟಗಾರಿಕೆ ಮತ್ತು ಪುಷ್ಪೋದ್ಯಮವು ರೈತರಲ್ಲಿ ಜನಪ್ರಿಯತೆಯನ್ನು ಗಳಿಸುತ್ತಿದೆ. ಹಾಲಿನ ಉತ್ಪಾದನೆಯಲ್ಲಿ ರಾಜ್ಯದ ಶೇ.೩೩ ರಷ್ಟು ಹಾಲನ್ನು ಅಂದರೆ ೧/೩ ರಷ್ಟನ್ನು ಬೆಳಗಾವಿ ಜಿಲ್ಲೆ ಪೂರೈಸುತ್ತಿದೆ. ಬೆಳಗಾವಿಯು ರಾಜ್ಯದ ಪ್ರಮುಖ ಜವಳಿ ಕೇಂದ್ರಗಳಲ್ಲಿ ಒಂದಾಗಿದ್ದು. ಇಲ್ಲಿ ೫೦,೦೦೦ ಕ್ಕೂ ಹೆಚ್ಚಿನ ಪವರ್ ಲೂಮ್ಸ್‌ಗಳಿವೆ. ಎಲ್ಲವೂ ಹಳೆಯ ಬೆಳಗಾವಿ ಪ್ರದೇಶಗಳಾದ ವಡಗಾಂವ್, ಖಾಸ್‌ಭಾಗ್ ಮತ್ತು ಶಹಪೂರಗಳಲ್ಲಿ ಹೆಚ್ಚಾಗಿವೆ. ಬೆಳಗಾವಿಯು ಸೀರೆಗಳಿಗೆ ಹೆಸರುವಾಸಿಯಾಗಿದ್ದು, ವಿವಿಧ ಬ್ರ್ಯಾಂಡ್‌ಗಳಲ್ಲಿ ವ್ಯಾಪಾರವಾಗುತ್ತದೆ. ಸುಮಾರು ೩೦,೦೦೦ ಜನರು ನೇರವಾಗಿ ಬೆಳಗಾವಿ-ಶಹಾಪೂರ ಸೀರೆಗಳ ಉದ್ಯಮದ ಮೇಲೆ ಅವಲಂಬಿತವಾಗಿದ್ದು, ಇತ್ತೀಚೆಗೆ ಸಿದ್ಧ ಉಡುಪನ್ನು ತಯಾರಿಸಿ ರಫ್ತು ಮಾಡುತ್ತಿದ್ದಾರೆ. ಇನ್ನು ಕೆಲವರು ಖಾದಿ ಬಟ್ಟೆಗಳನ್ನು ತಯಾರಿಸಿ ಮಾರಾಟ ಮಾಡುತ್ತಾರೆ.

ಬೆಳಗಾವಿ ಜಿಲ್ಲೆಯಲ್ಲಿ ಅಗಾಧ ಪ್ರಮಾಣದ ಖನಿಜಾಂಶವಿದೆ. ಅದರಲ್ಲೂ ಮ್ಯಾಂಗನೀಸ್, ಬಾಕ್ಸೈಟ್, ಸುಣ್ಣದಕಲ್ಲು ಇತ್ಯಾದಿಗಳು ಹೇರಳವಾಗಿದೆ. ಇತ್ತೀಚೆಗೆ ಬೆಳಗಾವಿ ತಾಲೂಕಿನ ದೇಶನೂರಿನಲ್ಲಿ ಯುರೇನೀಯಂ ನಿಕ್ಷೇಪವನ್ನು ಪತ್ತೆ ಹಚ್ಚಲಾಗಿದೆ. ಬೆಳಗಾವಿ ನಗರವು ಸಣ್ಣ ಕೈಗಾರಿಕೆಗಳ ಪ್ರಮುಖ ಕೇಂದ್ರವಾಗಿ ಅಭಿವೃದ್ಧಿ ಹೊಂದುತ್ತಿದ್ದು, ವಿಶೇಷವಾಗಿ ಇಂಜನೀಯರಿಂಗ್ ಘಟಕಗಳು ತಮ್ಮ ಉತ್ಪನ್ನಗಳನ್ನು ರಫ್ತು ಮಾಡುತ್ತಿವೆ. ಹೆವಿ ಮೆಷಿನ್ಸ್‌ಟೂಲ್ಸ್‌ಗಳ ಉತ್ಪಾದನೆ ಅಭಿವೃದ್ಧಿ ಹೊಂದುತ್ತಿದೆ. ವಾಹನದ ಬಿಡಿ ಭಾಗಗಳಾದ ಕ್ರಾಂಕಸಾಫ್ಟ್ ಮತ್ತು ಕಾಸ್ಟಿಂಗ್‌ನ್ನು ತಯಾರಿಸಲಾಗುತ್ತಿದೆ. ೨೦೧೩-೧೪ ನೇ ಸಾಲಿನ ಜಿಲ್ಲಾವಾರು ತಲಾ ಆದಾಯದಲ್ಲಿ ಬೆಳಗಾವಿ ಜಿಲ್ಲೆಯು ೨೭ ನೇ ಸ್ಥಾನದಲ್ಲಿದ್ದು, ಅದರ ಮೊತ್ತ ೭೨,೪೨೮ ರೂಪಾಯಿಗಳಾಗಿರುತ್ತದೆ.[೬] ಸುಗಮ ಕಾರ್ಯ ನಿರ್ವಹಣೆಗಾಗಿ ಆಡಳಿತ ವ್ಯವಸ್ಥೆಯನ್ನು ವಿವಿಧ ಘಟಕಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

### ೫. ಬೆಳಗಾವಿ ಆಡಳಿತ ವ್ಯವಸ್ಥೆ

ಜಿಲ್ಲೆಯ ಆಡಳಿತ ಕೇಂದ್ರ ಸ್ಥಳವು ಬೆಳಗಾವಿಯಾಗಿದೆ. ಈ ಜಿಲ್ಲೆಯು ೧೦ ತಾಲೂಕುಗಳನ್ನು ಹೊಂದಿದ್ದು, ೨೦೧೧ರ ಜನಗಣತಿಯಂತೆ ಬೆಳಗಾವಿ ಜಿಲ್ಲೆಯು ಒಟ್ಟು ೧೨೭೦ ಹಳ್ಳಿಗಳನ್ನು, ೪೮೫ ಗ್ರಾಮ ಪಂಚಾಯತಿಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಒಂದು ಮಾಹಾನಗರ ಪಾಲಿಕೆ, ೨

ನಗರ ಸಭೆಗಳು, ೭ ಪಟ್ಟಣ ಪುರಸಭೆಗಳು, ೬ ಪಟ್ಟಣ ಪಂಚಾಯತಿಗಳು, ಮತ್ತು ಒಂದು ಸೂಚಿತ ಪ್ರದೇಶ ಕೌನ್ಸಿಲ್‌ನಿಂದ ಕೂಡಿದ ಒಟ್ಟು ೧೭ ನಗರ ಸ್ಥಳೀಯ ಸಂಸ್ಥೆಗಳಿವೆ. ಭೌಗೋಳಿಕ ಪ್ರದೇಶದ ವಿಸ್ತಾರದಲ್ಲಿ ಅಥಣಿ ದೊಡ್ಡ ತಾಲ್ಲೂಕಾಗಿದ್ದು, ರಾಯಬಾಗ ಮತ್ತು ಹುಕ್ಕೇರಿ ಸಣ್ಣ ತಾಲ್ಲೂಕಗಳಾಗಿವೆ. ಅವುಗಳು ಕ್ರಮವಾಗಿ ೧೯೯೫ ಚ.ಕಿ.ಮೀ. ೯೯೧ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿವೆ. ಬೆಳಗಾವಿ ಜಿಲ್ಲೆಯು ಅಗಾಧವಾದ ಮಾನವ ಸಂಪನ್ಮೂಲವನ್ನು ಒಳಗೊಂಡಿದೆ.

**೬. ಬೆಳಗಾವಿಯ ಜನಸಂಖ್ಯೆ**

೨೦೧೧ರ ಜನಗಣಿತಿಯ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ ೪೭,೭೮,೪೩೯ ಜನಸಂಖ್ಯೆ ಇದೆ. ಪುರುಷರ ಪ್ರಮಾಣವು ೨೪,೨೭,೧೦೪ ಮತ್ತು ಮಹಿಳೆಯರ ಪ್ರಮಾಣವು ೨೩,೫೧,೩೩೫ ಆಗಿದ್ದು ಲಿಂಗಾನುಪಾತವು ೧೦೦೦ ಪುರುಷರಿಗೆ ೯೬೯ ಮಹಿಳೆಯರಿದ್ದಾರೆ. ಈ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೭,೮೯,೧೬೪ ಕುಟುಂಬಗಳಿದ್ದು ಇವುಗಳಲ್ಲಿ ೫,೯೦,೭೫೧ ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿದ್ದರೆ ೧,೯೮,೪೧೩ ಕುಟುಂಬಗಳು ನಗರ ಪ್ರದೇಶದಲ್ಲಿವೆ. ಬೆಳಗಾವಿ ತಾಲೂಕಿನಲ್ಲಿ ೯,೫೬,೦೧೯ ಮತ್ತು ಜನಸಂಖ್ಯೆ ಇದ್ದು ಅದರಲ್ಲಿ ೪,೮೭,೧೯೪ ಪುರುಷರು ಮತ್ತು ೪,೬೮,೮೨೫ ಮಹಿಳೆಯರಿದ್ದಾರೆ. ಜನಗಣತಿಯ ಪ್ರಕಾರ ಬೆಳಗಾವಿ ತಾಲೂಕಿನಲ್ಲಿ ೧,೫೯,೪೭೨ ಕುಟುಂಬಗಳ ಸಂಖ್ಯೆ ಇದ್ದು ಅವುಗಳಲ್ಲಿ ೧,೦೨೩,೦೦ ಕುಟುಂಬಗಳು ನಗರ ಪ್ರದೇಶದಲ್ಲಿ ಮತ್ತು ೫೭,೧೭೨ ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ.[೭]

**೭. ಬೆಳಗಾವಿ ಮುಸ್ಲಿಮರ ಜನಸಂಖ್ಯೆ**

೨೦೦೧ರ ಜನಗಣತಿಯ ಪ್ರಕಾರ ಕರ್ನಾಟಕದ ಮುಸ್ಲಿಮರ ಜನಸಂಖ್ಯಾ ಪ್ರಮಾಣ ಶೇ.೧೨.೨೩ ರಷ್ಟು ದಾಖಲಾಗಿದೆ. ಅದರಲ್ಲಿ ಶೇ.೫೯ ರಷ್ಟು ಮುಸ್ಲಿಮರು ನಗರ ಪ್ರದೇಶದಲ್ಲಿ ಮತ್ತು ಶೇ.೪೧ ರಷ್ಟು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಈ ಜನಗಣತಿಯ ಪ್ರಕಾರ ಶೇ.೨೨.೦೭ ರಷ್ಟು ಮುಸ್ಲಿಂ ಜನಸಂಖ್ಯೆ ಹೊಂದಿರುವ ದಕ್ಷಿಣ ಕನ್ನಡ ಮೊದಲ ಸ್ಥಾನದಲ್ಲಿದ್ದರೆ, ಶೇ.೩.೪೯ ರಷ್ಟು ಮುಸ್ಲಿಂ ಜನಸಂಖ್ಯೆ ಹೊಂದಿರುವ ಮಂಡ್ಯ ಕೊನೆಯ ಸ್ಥಾನದಲ್ಲಿದೆ. ಈ ಜನಗಣತಿಯ ಪ್ರಕಾರ ಮುಂಬೈ ಕರ್ನಾಟಕ ಪ್ರಾಂತ್ಯದಲ್ಲಿ ಗುಲ್ಬರ್ಗ ವಿಭಾಗವು ಶೇ.೧೫ ರಷ್ಟು ಮುಸ್ಲಿಂ ಜನಸಂಖ್ಯೆಯನ್ನು ಹೊಂದಿದ್ದರೆ ಬೆಳಗಾವಿ ವಿಭಾಗವು ಶೇ.೧೪ ರಷ್ಟು ಮುಸ್ಲಿಂ ಜನಸಂಖ್ಯೆಯನ್ನು ಹೊಂದಿದೆ.[೮] ಬೆಳಗಾವಿ ನಗರದಲ್ಲಿ ಧಾರ್ಮಿಕವಾರು ಶೇ.೭೩.೨೪ ರಷ್ಟು ಹಿಂದುಗಳು, ಶೇ.೨೦.೬೨ ರಷ್ಟು ಮುಸ್ಲಿಮರು, ಶೇ.೪.೨೨ ರಷ್ಟು ಜೈನರು ಮತ್ತು ಶೇ.೧.೧೦ ರಷ್ಟು ಕ್ರೈಸ್ತ ಸಮುದಾಯದ ಜನರಿದ್ದಾರೆ.[೯] ಭಾರತದ ಮುಸ್ಲಿಮರು ದೇಶದ ವಿವಿಧ ಭಾಗಗಳಲ್ಲಿ

ನೆಲೆಸಿದ್ದಾರೆ. ಇಸ್ಲಾಂ ಧರ್ಮದ ಜೊತೆಗೆ ಇತರೆ ಧರ್ಮ, ಭಾಷೆ, ಸಂಸ್ಕೃತಿ, ಆಚರಣೆ ಮುಂತಾದವುಗಳ ಪ್ರಭಾವಕ್ಕೆ ಒಳಗಾಗಿದೆ. ವಿವಿಧ ಅನನ್ಯತೆಗಳ ಪ್ರಭಾವಕ್ಕೆ ಒಳಗಾಗಿರುವುದರಿಂದ ಮುಸ್ಲಿಮರು ಏಕರೂಪಿ ಸಮುದಾಯವಾಗಿ ಉಳಿದಿಲ್ಲ. ಇವರ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸ್ಥಿತಿಗಳು ಇತರರೊಂದಿಗೆ ಹೋಲಿಸುವಂತಿಲ್ಲ. ಹಿಂದು ಸಮುದಾಯದ ಓಬಿಸಿಗಳಿಗಿಂತಲೂ ಸಾಮಾಜಿಕವಾಗಿ ಹಿಂದುಳಿದಿರುವ ಮುಸ್ಲಿಮರು, ಆರ್ಥಿಕವಾಗಿ ದಲಿತರೊಂದಿಗೆ ಸಮಾನವಾಗಿ ನಿಲ್ಲುತ್ತಾರೆ. ರಾಜಕೀಯವಾಗಿ ನಿರ್ಲಕ್ಷಿಸಲ್ಪಟ್ಟಿರುವ ಮುಸ್ಲಿಮರು ಮತದಾರರಾಗಿ ನಗರ ಪ್ರದೇಶಗಳಲ್ಲಿ ನಿರ್ಣಾಯಕ ಪಾತ್ರವಹಿಸುತ್ತಾದರೂ, ಅವರ ಮತದಾನದ ಶಕ್ತಿಯಿಂದ ರಾಜಕೀಯವಾಗಿ ಸಬಲೀಕರಣಗೊಳ್ಳಲು ಸಾಧ್ಯವಾಗಿಲ್ಲ. ಈ ಅಂಶಗಳನ್ನು ಒಳಗೊಂಡ ಮುಸ್ಲಿಮರ ಸ್ಥಿತಿಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೨.೨. ಭಾರತ ಮತ್ತು ಕರ್ನಾಟಕದಲ್ಲಿ ಮುಸ್ಲಿಮರು

ಮುಸ್ಲಿಮರು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಮೊದಲ ಅತೀ ದೊಡ್ಡ ಅಲ್ಪಸಂಖ್ಯಾತ ಸಮುದಾಯವಾಗಿದ್ದಾರೆ. ದೇಶದ ಅನೇಕ ಭಾಗಗಳಲ್ಲಿ ನೆಲೆಸಿರುವ, ವಿವಿಧ ಭಾಷೆಗಳನ್ನಾಡುವ ಮುಸ್ಲಿಮರು ವಿವಿಧ ಬಣ್ಣಗಳನ್ನು ಹೊಂದಿರುವ ಜನರಾಗಿದ್ದಾರೆ.[೧೦] ಅವರ ಸಾಮಾಜಿಕ, ಸಾಂಸ್ಕೃತಿಕ ಜೀವನವು ಇಸ್ಲಾಂ ಮತ್ತು ಸ್ಥಳೀಯ ಸಂಪ್ರದಾಯಗಳ ಮಿಶ್ರಣವಾಗಿದೆ. ವಿವಿಧ ಸಾಮಾಜಿಕ, ಸಾಂಸ್ಕೃತಿಕ ಮತ್ತು ಪ್ರಾದೇಶಿಕ ಗುಂಪುಗಳಾಗಿ ರೂಪುಗೊಂಡಿರುವುದರಿಂದ ಮುಸ್ಲಿಮರನ್ನು ಏಕರೂಪಿ ಸಮುದಾಯವಾಗಿ ಗ್ರಹಿಸುವುದು ಸರಿಯಾದ ಕ್ರಮವಲ್ಲ.[೧೧] ಉತ್ತರ ಭಾರತದ ಮುಸ್ಲಿಮರಲ್ಲಿ ಜಾತಿ ಪದ್ಧತಿಯು ತೀವ್ರವಾಗಿದೆ ಮತ್ತು ಅಸ್ಪೃಶ್ಯತೆಯೂ ಜಾತಿಯಲ್ಲಿ ಅಂತರ್ಗತವಾಗಿದೆ. ಹಿಂದೂ ಮೇಲ್ಜಾತಿ ಅಥವಾ ವಿದೇಶಿ ಮೂಲದವರನ್ನು 'ಅಶ್ರಫ್'ಎಂದು, ಹಿಂದೂ ಸಮುದಾಯದ ಹಿಂದುಳಿದ ಜಾತಿಗಳಿಂದ ಮತಾಂತರಗೊಂಡ ಮುಸ್ಲಿಮರನ್ನು 'ಅಜ್ಲಫ್'ಎಂದು ಗುರುತಿಸಲಾಗುತ್ತಿದೆ. ಅದೇ ಪ್ರಕಾರ ಪರಿಶಿಷ್ಟ ಮೂಲದಿಂದ ಮತಾಂತರಗೊಂಡವರನ್ನು 'ಅರ್ಜಲ್' ಎಂಬ ಹೆಸರಿನ ಮೂಲಕ ಗುರುತಿಸುತ್ತಾರೆ. ಇವರು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ದುರ್ಬಲರಾಗಿದ್ದು, ಸಾಮಾಜಿಕವಾಗಿ ಅತ್ಯಂತ ಕೆಳಸ್ಥಾನದಲ್ಲಿದ್ದಾರೆ.[೧೨]

ಉತ್ತರ ಭಾರತದಂತೆ ಕರ್ನಾಟಕದಲ್ಲಿ ಅಸ್ಪೃಶ್ಯತೆ ವ್ಯವಸ್ಥೆಗಳು ಇಲ್ಲವಾದರೂ ಅವರಲ್ಲಿ ಭಗವಾನ್, ಚಪ್ಪರಬಂದ್, ದರ್ವೇಶ್, ಫಕೀರ, ಹನಫಿ, ಜಾತಿಗಾರ, ಕಲಾಲ್, ಕಸಾಯಿ, ಲಬ್ಬೆ, ಲದಾಫ್, ಮಾದರಿ, ಮಾಪಿಳ್ಳೆ, ಕಾರ-ಬ್ಯಾರಿ, ಮಹಮದೀಯ, ಮೋಮಿನ್, ಪಠಾಣ, ಪೆಂಡಾರ್, ಫೂಲ್‌ಮಾಲಿ, ಪಿಂಜಾರ್, ದೂದಕಲ, ಖುರೇಶಿ, ಸೈಯ್ಯದ್, ಶಫಾಯ್, ಶೇಖ್ ಮುಂತಾದ

ಉಪಜಾತಿಗಳಿವೆ. ಧಾರ್ಮಿಕವಾಗಿ ಸುನ್ನಿ ಮತ್ತು ಶಿಯಾ ಗುಂಪುಗಳಿವೆ.[೧೩] ಸ್ವಾತಂತ್ರ್ಯ ನಂತರವೂ ಮುಸ್ಲಿಮರು ರಾಜಕೀಯವಾಗಿ ವಿವಾದಾತ್ಮಕ ಸಮುದಾಯವಾಗಿಯೇ ಗುರುತಿಸಲ್ಪಡುತ್ತಿದೆ ಎಂದು ಸಾಚಾರ್ ವರದಿ ಹೇಳಿದೆ. ಮುಸ್ಲಿಮರು ರಾಷ್ಟ್ರ ವಿರೋಧಿಗಳಾಗಿದ್ದಾರೆ ಮತ್ತು ಇವರನ್ನು ಕಾಲಕಾಲಕ್ಕೆ ಬಂದ ಸರ್ಕಾರಗಳು ಓಲೈಸುತ್ತಿವೆ ಎಂಬ ಎರಡು ಗುರುತರವಾದ ಆರೋಪಗಳನ್ನು ಎದುರಿಸುತ್ತಿದ್ದಾರೆ. ಸರ್ಕಾರಗಳು ಮುಸ್ಲಿಮರನ್ನು ಓಲೈಸುತ್ತಿವೆ ಎಂಬ ಸಂಗತಿಯು ಭಾರತದ ರಾಜಕಾರಣದಲ್ಲಿ ಅಪಾರ ಜನಮನ್ನಣೆಯನ್ನು ಪಡೆದುಕೊಂಡಿದೆ ಮತ್ತು ಲಾಭದಾಯಕ ಸಂಗತಿಯೂ ಆಗಿದೆ.[೧೪] ಮುಸ್ಲಿಮರನ್ನು ಮುಖ್ಯವಾಹಿನಿಗೆ ಸೇರ್ಪಡೆಗೊಳಿಸುವ ಸಂಗತಿಯನ್ನು ಚರ್ಚಿಸುವ ಸಂದರ್ಭದಲ್ಲಿ ಅವರ ಚರಿತ್ರೆ, ಸಮಾಜ, ಸಂಸ್ಕೃತಿ, ರಾಜಕೀಯವರ್ತನೆ, ವೈಯಕ್ತಿಕ ಕಾನೂನು, ಉರ್ದುಭಾಷೆ, ಬಾಬರಿ ಮಸೀದಿ ವಿವಾದ, ಕುಟುಂಬಯೋಜನೆ, ಭಯೋತ್ಪಾದನೆ ಮತ್ತು ಕೋಮುಸಂಘರ್ಷ ಮುಂತಾದ ಸಂಗತಿಗಳು ಮಾತ್ರ ಬಹುಮುಖಿ ಚರ್ಚೆಗೆ ಒಳಪಡುತ್ತವೆ. ಆದರೆ ಈ ವಾದಾಂಶಗಳ ಭರಾಟೆಯಲ್ಲಿ ಮುಸ್ಲಿಮರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳು ವ್ಯಾಪಕ ಚರ್ಚೆಗೆ ಒಳಗಾಗುವುದಿಲ್ಲ. ಮುಸ್ಲಿಮರು ಕೂಡ ಭಾವನಾತ್ಮಕ ಅಂಶಗಳನ್ನೇ ವಾಸ್ತವಿಕ ಸಮಸ್ಯೆಗಳಾಗಿ ಬಿಂಬಿಸುವುದು ಕಂಡುಬರುತ್ತದೆ. ಕೇಂದ್ರ ಸರ್ಕಾರ ಮುಸ್ಲಿಮರ ಸ್ಥಿತಿಗಳ ಅಧ್ಯಯನಕ್ಕಾಗಿ ಡಾ.ಗೋಪಾಲಸಿಂಗ್ ಆಯೋಗ ಮತ್ತು ಇತ್ತೀಚೆಗೆ ಸಾಚಾರ್ ಸಮಿತಿಗಳನ್ನು ನೇಮಿಸಿತ್ತು.

೧೯೮೩ರ ಡಾ.ಗೋಪಾಲಸಿಂಗ್ ಸಮಿತಿ ವರದಿ ಪ್ರಕಾರ ಭಾರತದ ಆರ್ಥಿಕಾಭಿವೃದ್ಧಿಯು ಮುಸ್ಲಿಮರನ್ನು ಪ್ರಭಾವಿಸಿಲ್ಲ. ಸತತ ಪಂಚವಾರ್ಷಿಕ ಯೋಜನೆಗಳ ನಂತರವೂ ಅವರ ಸ್ಥಿತಿ ಇನ್ನೂ ನಿಕೃಷ್ಟವಾಗಿದೆ. ೨೦೦೬ರ ಸಾಚಾರ್ ವರದಿಯೂ ಈ ಅಂಶವನ್ನು ದೃಢೀಕರಿಸಿದೆ. ಕರ್ನಾಟಕದಲ್ಲಿ ಗೂಡ್ವಾಲ ಆಯೋಗ ಮತ್ತು ರೆಹಮಾನ್‌ಖಾನ್ ವರದಿಗಳೂ ಕೂಡ ಇತರೆ ಸಮುದಾಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲೂ ಮುಸ್ಲಿಮರು ನಿಕೃಷ್ಟ ಸ್ಥಿತಿಯಲ್ಲಿರುವ ಅಂಶವನ್ನು ದೃಢಪಡಿಸಿವೆ.೧೫ ಸಮುದಾಯಗಳ ನಡುವೆ ಭವಿಷ್ಯದಲ್ಲಾಗಬಹುದಾದ ಅಸಮಾನತೆಯನ್ನು ಸಂವಿಧಾನ ರಚನಾ ಸಮಿತಿಯು ಗ್ರಹಿಸಿರಬಹುದು. ಬಹುಸಂಖ್ಯಾತರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಆಸಕ್ತಿಗಳನ್ನು ಗಮನಿಸುವ ಭರದಲ್ಲಿ ಅಲ್ಪಸಂಖ್ಯಾತರ ಆಸಕ್ತಿಗಳು ಮೂಲೆ ಗುಂಪಾಗಬಹುದೆಂಬ ಗ್ರಹಿತದ ಹಿನ್ನೆಲೆಯಲ್ಲಿ ಅಲ್ಪಸಂಖ್ಯಾತರಿಗಾಗಿ ಸಂವಿಧಾನದಲ್ಲಿ ವಿಶೇಷ ಹಕ್ಕುಗಳನ್ನು ರೂಪಿಸಲಾಯಿತು. ಆರು ಮೂಲಭೂತ ಹಕ್ಕುಗಳಲ್ಲಿ ಮುಸ್ಲಿಮರಿಗಾಗಿ ಕೆಲವು ವಿಶೇಷ ಹಕ್ಕುಗಳನ್ನು ರೂಪಿಸಲಾಯಿತು. ಸಂವಿಧಾನದ ೨೫ನೇ ವಿಧಿಯನ್ವಯ ಧಾರ್ಮಿಕ ಹಕ್ಕು ನೀಡಲಾಗಿದೆ. ೨೯ ಮತ್ತು ೩೦ ನೇ ವಿಧಿಗಳನ್ನು ಮುಸ್ಲಿಮರ ಶಿಕ್ಷಣ ಮತ್ತು ಸಾಂಸ್ಕೃತಿಕ

ಸಂಗತಿಗಳ ರಕ್ಷಣೆಗಾಗಿ ರೂಪಿಸಲಾಗಿದೆ. ಸಂವಿಧಾನದ ೪೨ ನೇ ತಿದ್ದುಪಡಿಯ ಮೂಲಕ ಸಂವಿಧಾನಕ್ಕೆ ಜಾತ್ಯಾತೀತ ಸ್ವರೂಪ ನೀಡಲಾಗಿದೆ. ವಿಶೇಷ ಹಕ್ಕುಗಳ ಜೊತೆಗೆ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಸಂವಿಧಾನ ನೀತಿಯನ್ನು ಕೂಡ ರೂಪಿಸಿದೆ. ನಿರ್ಲಕ್ಷಿತ, ಅಲ್ಪಸಂಖ್ಯಾತ ಸಮುದಾಯಗಳ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ಸಂವಿಧಾನದ ೩೮(೨), ೩೯(ಎ) (ಬಿ) (ಸಿ) ಅನುಚ್ಛೆದಗಳಲ್ಲಿ ಸ್ಪಷ್ಟ ಅಭಿವೃದ್ಧಿ ನೀತಿಯನ್ನು ಅಳವಡಿಸಿಕೊಂಡಿದೆ. ಈ ಎಲ್ಲಾ ಪ್ರಯತ್ನಗಳ ನಡುವೆಯೂ ಮುಸ್ಲಿಮರ ವಾಸ್ತವಿಕ ಬದುಕು ಚಿಂತಾಜನಕವಾಗಿದೆ.

ಸ್ವಾತಂತ್ರ್ಯದ ಅರವತ್ತು ದಶಕಗಳ ನಂತರವೂ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದ, ಆರ್ಥಿಕವಾಗಿ ಬಡವರಾದ ಮತ್ತು ರಾಜಕೀಯವಾಗಿ ನಿರ್ಲಕ್ಷಿತ ಸಮುದಾಯವಾಗಿಯೇ ಮುಂದುವರೆದಿದ್ದಾರೆ. ಈ ಅಂಶವನ್ನು ರಾಷ್ಟ್ರೀಯ ಮತ್ತು ರಾಜ್ಯ ಸರ್ಕಾರಗಳ ಆಯೋಗಗಳು ಮತ್ತು ಸಮಿತಿಗಳು ಹಾಗೂ ವಿವಿಧ ಪ್ರದೇಶಗಳಲ್ಲಿ ಕೈಗೊಂಡ ಮುಸ್ಲಿಮರ ಅಧ್ಯಯನಗಳು ದೃಢೀಕರಿಸುತ್ತವೆ. ಅಧ್ಯಯನಗಳ ಪ್ರಕಾರ ಮುಸ್ಲಿಮರಲ್ಲಿ ಬಹುತೇಕರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರಲ್ಲಿ 'ಗಣ್ಯರ'ಪ್ರಮಾಣ ಅತ್ಯಂತ ಕಡಿಮೆ ಕಂಡುಬರುತ್ತದೆ. ವಿವಿಧ ವಲಯಗಳಲ್ಲಿ ಮುಸ್ಲಿಮರ ಉದ್ಯೋಗದ ಪ್ರಾತಿನಿಧ್ಯ ತೃಪ್ತಿಕರವಾಗಿಲ್ಲ. ಅಖಿಲ ಭಾರತ ಸೇವೆಗಳಾದ ಐಎಎಸ್‌ನಲ್ಲಿ ಶೇ.೩ರಷ್ಟು, ಐಎಫ್‌ಎಸ್‌ನಲ್ಲಿ ಶೇ.೧.೮ರಷ್ಟು ಮತ್ತು ಐಪಿಎಸ್‌ನಲ್ಲಿ ಕೇವಲ ಶೇ.೪ರಷ್ಟು ಮುಸ್ಲಿಮರು ಪ್ರಾತಿನಿಧ್ಯ ಪಡೆದಿದ್ದಾರೆ. ರಾಜ್ಯ ಸರ್ಕಾರದ ಉದ್ಯೋಗಗಳಲ್ಲಿ ಮುಸ್ಲಿಮರು ಕೇವಲ ಶೇ.೬.೩ರಷ್ಟು ಮಾತ್ರ ಪ್ರಾತಿನಿಧ್ಯ ಪಡೆದಿದ್ದಾರೆ. ಕುಶಲತೆಯ ಅಗತ್ಯವಿಲ್ಲದ ನಾಲ್ಕನೇ ದರ್ಜೆಯ ನೌಕರಿಗಳಲ್ಲೂ ಇವರ ಪ್ರಾತಿನಿಧ್ಯ ಶೇ.೫ರಷ್ಟು ಮಾತ್ರ ಇರುವುದು ಆತಂಕಕಾರಿ ಬೆಳವಣಿಗೆಯಾಗಿದೆ.[೧೬] ಬಹುಸಂಖ್ಯಾತ ಮುಸ್ಲಿಮರು ವ್ಯಾಪಾರವನ್ನು ಅವಲಂಬಿಸಿದ್ದರೂ, ದೇಶದ ಒಟ್ಟು ಕೈಗಾರಿಕಾ ಘಟಕಗಳಲ್ಲಿ ಕೇವಲ ಕನಿಷ್ಠ ಪ್ರಮಾಣದ ಕೈಗಾರಿಕೆಗಳ ಮೇಲೆ ಮಾತ್ರ ಒಡೆತನ ಹೊಂದಿದ್ದಾರೆ. ಸಹಕಾರಿ ವಲಯಗಳ ಸಾಲಸೌಲಭ್ಯ ಪಡೆಯುವಲ್ಲಿಯೂ ಇವರ ಸ್ಥಿತಿ ಆಶಾದಾಯಕವಾಗಿಲ್ಲ. ಆದರೆ ಉತ್ತರ ಭಾರತದ ಮುಸ್ಲಿಮರಿಗೆ ಹೋಲಿಸಿದರೆ ಕರ್ನಾಟಕದ ಮುಸ್ಲಿಮರ ಸ್ಥಿತಿ ಉತ್ತಮವಾಗಿದ್ದರೂ, ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರು ಉತ್ತಮವಾಗಿಲ್ಲ. ಒಂದು ಕಡೆ ಅನನ್ಯತೆಯನ್ನು ಉಳಿಸಿಕೊಂಡು ಮತ್ತೊಂದು ಕಡೆ ಸಮಷ್ಠೀಕರಣಗೊಳ್ಳುತ್ತಾ ಕೇವಲ ಕೆಲವೇ ವಾದಾಂಶಗಳ ಸುತ್ತವೇ ತನ್ನ ಹೋರಾಟವನ್ನು ಕೇಂದ್ರೀಕರಿಸಿಕೊಂಡಿರುವುದು ಕಂಡುಬರುತ್ತದೆ.

ಕರ್ನಾಟಕದ ಮೈಸೂರು ಸಂಸ್ಥಾನದಲ್ಲಿ ದಿವಾನರಂಥ ಹುದ್ದೆಯನ್ನು ಮುಸ್ಲಿಮರು ಕೂಡ ಅಲಂಕರಿಸಿದ್ದರು ಎಂಬುದು ಸಂಸ್ಥಾನದ ಜಾತ್ಯಾತೀತ ತತ್ವದ ಬದ್ಧತೆಯ ದ್ಯೋತಕವಾಗಿದೆ.

ಸಂಸ್ಥಾನದಲ್ಲಿ ಬ್ರಾಹ್ಮಣರ ನಂತರ ಮುಸ್ಲಿಮರು ವಿವಿಧ ಕ್ಷೇತ್ರಗಳಲ್ಲಿ ಎರಡನೆಯ ಸ್ಥಾನವನ್ನು ಪಡೆದುಕೊಂಡಿದ್ದರು. ಆದರೂ ಮಿಲ್ಲರ್ ಸಮಿತಿ ದಾಖಲಿಸಿರುವಂತೆ ಮುಸ್ಲಿಮರು ಅಂದು ಶೈಕ್ಷಣಿಕವಾಗಿ ಹಿಂದುಳಿದಿದ್ದರು. ಅವರ ಆರ್ಥಿಕ ಬಡತನವೇ ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣ ಎಂಬ ಅಂಶ ಆಗಿನ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆಯಾಗಿದೆ. ೧೮೮೧ ರಲ್ಲಿ ಬ್ರಿಟೀಷರಿಂದ ಮೈಸೂರಿನ ಮಹಾರಾಜರಿಗೆ ಅಧಿಕಾರ ಹಸ್ತಾಂತರವಾಯಿತು. ಪ್ರಜಾಪ್ರತಿನಿಧಿ ಸಭೆ ಸ್ಥಾಪನೆಗೊಂಡು ಮುಸ್ಲಿಮರಿಗೆ ಶಿಕ್ಷಣ, ಸಾರ್ವಜನಿಕ ಸೇವೆ, ವಕ್ಫ್, ಉರ್ದು ಭಾಷೆಗೆ ಉತ್ತಮ ಪ್ರೋತ್ಸಾಹ ದೊರೆಯಿತು. ಉತ್ತಮ ಶೈಕ್ಷಣಿಕ ಹಿನ್ನೆಲೆ ಇರುವವರನ್ನು ಪ್ರತಿನಿಧಿ ಸಭೆಗೆ ನಾಮಕರಣ ಮಾಡುವ ವ್ಯವಸ್ಥೆಯಿಂದಾಗಿ ಉತ್ತಮ ರಾಜಕೀಯ ಪ್ರಾತಿನಿಧ್ಯ ಕೂಡ ದೊರೆಯಿತು. ೧೯೨೬ ರಿಂದ ೧೯೪೧ರ ವರೆಗೆ ಮಿರ್ಜಾ ಇಸ್ಮಾಯಿಲರು ದಿವಾನರಾಗಿ ಕಾರ್ಯನಿರ್ವಹಿಸಿದರು. ಜೇಮ್ಸ್‌ಮ್ಯಾನರ್ ಹೇಳುವಂತೆ ಮಹಾರಾಜರು ಇಸ್ಮಾಯಿಲರೊಂದಿಗೆ ಉತ್ತಮ ಸಂಬಂಧ ಹೊಂದಿದ್ದರು. ಹಿಂದಿನ ಯಾವ ದಿವಾನರೊಂದಿಗೂ ಈ ರೀತಿಯ ಸಂಬಂಧ ಹೊಂದಿರಲಿಲ್ಲ.[೧೭] ಪ್ರಜಾಪ್ರತಿನಿಧಿ ಸಭೆಗೆ ನಾಮಕರಣ ವ್ಯವಸ್ಥೆ ಇದ್ದುದರಿಂದ ಸಮುದಾಯದ ಸಮಸ್ಯೆಗಳನ್ನು ಪ್ರತಿನಿಧಿಗಳು ಸರ್ಕಾರದ ಮುಂದೆ ಮಂಡಿಸುವ ಅವಕಾಶ ದೊರೆಯುತ್ತಿತ್ತು. ಹೀಗಾಗಿ ಮುಸ್ಲಿಮರು ಬ್ರಾಹ್ಮಣರ ನಂತರ ಉತ್ತಮ ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ಇಂದಿಗೂ ಕರ್ನಾಟಕದ ಮುಸ್ಲಿಮರು ಆರ್ಥಿಕವಾಗಿ ನಿಕೃಷ್ಟ ಸ್ಥಿತಿಯಲ್ಲಿದ್ದಾರೆ. ಕರ್ನಾಟಕದ ಬೆಂಗಳೂರು ಸಹಿತ ವಿವಿಧ ಕೊಳಚೆ ಪ್ರದೇಶಗಳಲ್ಲಿ ಮುಸ್ಲಿಮರು ಮತ್ತು ಪರಿಶಿಷ್ಟರೇ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಮುಸ್ಲಿಮರ ಮೊಹಲ್ಲಾಗಳು ನೈರ್ಮಲ್ಯದಿಂದ ವಂಚಿತವಾಗಿವೆ. ಆರ್ಥಿಕ ಸ್ಥಿತಿಯಲ್ಲಿ ಮುಸ್ಲಿಮರು ಅನುಸೂಚಿತ ಜಾತಿಗಳ ಸ್ಥಾನದಲ್ಲಿದ್ದು ಅವರು ಅರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ಮುಸ್ಲಿಮರಲ್ಲಿ ಕೇವಲ ಶೇ.೩೮.೦೫ರಷ್ಟು ಮಾತ್ರ ಪ್ರಾಥಮಿಕ ಹಂತದ ಶಿಕ್ಷಣ ಪಡೆದವರು ಕಂಡು ಬರುತ್ತಾರೆ. ಅಲ್ಪಸಂಖ್ಯಾತರ ಆಯೋಗದ ವರದಿಗಳ ಪ್ರಕಾರ ಮುಸ್ಲಿಮರಲ್ಲಿ ಅನಕ್ಷರಸ್ಥರು, ಪ್ರಾಥಮಿಕ ಶಿಕ್ಷಣ ಮತ್ತು ಪ್ರೌಢ ಶಿಕ್ಷಣ ಪಡೆದವರು ಮಾತ್ರ ಅಧಿಕವಾಗಿದ್ದು, ಪದವಿ ಮತ್ತು ವೃತ್ತಿಪರ ಶಿಕ್ಷಣ ಪಡೆದವರು ಕಡಿಮೆ ಕಂಡುಬರುತ್ತಾರೆ. ಸರ್ಕಾರಿ ಉದ್ಯೋಗದಲ್ಲೂ ಕೇವಲ ಶೇ.೧.೨೬ರಷ್ಟು ಪ್ರಾತಿನಿಧ್ಯವನ್ನು ಪಡೆದುಕೊಂಡಿದ್ದಾರೆ. ಮುಸ್ಲಿಮರಲ್ಲಿ ಅತ್ಯಂತ ಕಡಿಮೆ ಭೂಮಾಲೀಕರಿದ್ದು ಬಹುತೇಕರು ಕೃಷಿ ಕಾರ್ಮಿಕರಾಗಿಯೇ ಜೀವನ ನಿರ್ವಹಿಸುತ್ತಿದ್ದಾರೆ. ಕೈಗಾರಿಕೆ ಮತ್ತು ಖಾಸಗಿ ವಲಯಗಳಲ್ಲಿ ಕನಿಷ್ಠ ವೇತನದ ಉದ್ಯೋಗಗಳನ್ನು ಅವಲಂಬಿಸಿದ್ದಾರೆ.[೧೮] ಮುಸ್ಲಿಮರ ನಿಕೃಷ್ಟ ಸ್ಥಿತಿಗೆ ಅಧ್ಯಯನಗಳು ಹಲವಾರು ಕಾರಣಗಳನ್ನು ಮುಂದಿಟ್ಟಿವೆ. ಶೈಕ್ಷಣಿಕ, ಆರ್ಥಿಕ ಹಿನ್ನೆಡೆಗೆ ವಿವಿಧ ಕಾರಣಗಳನ್ನು ಚರ್ಚಿಸಲಾಗುತ್ತಿದೆ.

## ೨.೩. ಮುಸ್ಲಿಮರ ಅನಭಿವೃದ್ಧಿ: ವಿವಿಧ ಚರ್ಚೆಗಳು

ಇಡೀ ಭಾರತದ ಮತ್ತು ಕರ್ನಾಟಕದಲ್ಲಿ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದ, ಆರ್ಥಿಕವಾಗಿ ಬಡವರಾದ ಮತ್ತು ರಾಜಕೀಯವಾಗಿ ನಿರ್ಲಕ್ಷಿತ ಸಮುದಾಯವಾಗಿದ್ದಾರೆ. ಈ ಅಂಶವನ್ನು ರಾಷ್ಟ್ರೀಯ ಮತ್ತು ರಾಜ್ಯಮಟ್ಟದ ಆಯೋಗಗಳು, ಸಮಿತಿಗಳು ಮತ್ತು ವಿವಿಧ ಪ್ರದೇಶದ ಅಧ್ಯಯನಗಳು ಗುರುತಿಸಿವೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರು ಕನಿಷ್ಠ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಕೃಷಿಭೂಮಿ ಇಲ್ಲದ, ಕೈಗಾರಿಕೆಗಳ ಒಡೆತನವಿಲ್ಲದ ಮುಸ್ಲಿಮರು ಕೇವಲ ಸಣ್ಣ ಪುಟ್ಟ ವ್ಯಾಪಾರವನ್ನು ಮತ್ತು ಕಡಿಮೆ ಆದಾಯದ ಉದ್ಯೋಗಗಳನ್ನೇ ಅವಲಂಬಿಸಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಜನಪ್ರಿಯವಾಗಿದ್ದ ಸರ್ಕಾರಿ ನೌಕರಿಗಳು ಸ್ವಾತಂತ್ರ್ಯ ನಂತರ ಮುಸ್ಲಿಮರಿಗೆ ದೊರೆಯುವುದು ಕಷ್ಟವಾಯಿತು. ಮುಸ್ಲಿಮರು ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿಯಲು ವಿವಿಧ ಕಾರಣಗಳನ್ನು ಅಧ್ಯಯನಗಳು ಪಟ್ಟಿಮಾಡಿವೆ. ಅವುಗಳಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಮುಸ್ಲಿಂ ಲೀಗ್ ಬಡಮುಸ್ಲಿಮರ ಪರವಾದ ಯಾವ ಬೇಡಿಕೆಯನ್ನು ಮಂಡಿಸಲಿಲ್ಲ, ದೇಶ ವಿಭಜನೆ ಕಾಲದಲ್ಲಿ ಮುಸ್ಲಿಂ ಭೂಮಾಲೀಕರು, ವಿದ್ಯಾವಂತರು ಮತ್ತು ಮಧ್ಯಮ ವರ್ಗದವರು ಪಾಕಿಸ್ತಾನಕ್ಕೆ ವಲಸೆ ಹೋದರು, ಸ್ವಾತಂತ್ರ್ಯನಂತರ ಮುಸ್ಲಿಂ ನಾಯಕತ್ವ ಸಮುದಾಯದ ಸಮಸ್ಯೆಗಳನ್ನು ಸಂಘರ್ಷವನ್ನಾಗಿ ಪರಿವರ್ತಿಸಲು ವಿಫಲವಾಯಿತು ಮತ್ತು ಇಂದಿಗೂ ಮುಸ್ಲಿಮರು ಭಾವನಾತ್ಮಕ ಸಂಗತಿಗಳಿಗೆ ಮಾತ್ರ ಒತ್ತು ನೀಡುತ್ತಿರುವುದು ಮುಂತಾದ ಕಾರಣಗಳನ್ನು ಅಧ್ಯಯನಗಳು ಚರ್ಚಿಸುತ್ತಿವೆ. ದೇಶ ಸ್ವಾತಂತ್ರ್ಯ ಪಡೆದು ಅರವತ್ತು  ದಶಕಗಳು ಕಳೆದು ಹೋಗಿವೆ. ಸ್ವಾತಂತ್ರ್ಯ ಪೂರ್ವದ ಮುಸ್ಲಿಂ ಲೀಗ್‌ನ ಪ್ರಮಾದಗಳನ್ನು ಇಂದಿನ ಮುಸ್ಲಿಮರ ಸಮಸ್ಯೆಗಳಿಗೆ ಕಾರಣಗಳಾಗಿ ಬಿಂಬಿಸಲಾಗುತ್ತಿದೆ.

ಭಾರತದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಮುಸ್ಲಿಮರ ಹಿಂದುಳಿಯುವಿಕೆಗೆ ಚಾರಿತ್ರಿಕ ಮತ್ತು ಧಾರ್ಮಿಕ ಪೂರ್ವಗ್ರಹಗಳ ಕಾರಣಗಳನ್ನು ಗುರುತಿಸಲಾಗುತ್ತಿದೆ. ದೇಶದಲ್ಲಿ ಇವರು ಹೆಚ್ಚು-ಕಡಿಮೆ ಎಲ್ಲರೊಂದಿಗೆ ಸಮಾನ ಹಕ್ಕುಗಳನ್ನು ಮತ್ತು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಶಿಕ್ಷಣ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಹಭಾಗಿತ್ವ, ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿ ಕೆಳಮಟ್ಟದ ಪ್ರಾತಿನಿಧ್ಯ ಮುಂತಾದ ಸಾರ್ವತ್ರಿಕ ಸಮಸ್ಯೆಗಳನ್ನು ಇತರೆ ಸಮುದಾಯಗಳೊಂದಿಗೆ ಸಮಾನವಾಗಿ ಎದುರಿಸುತ್ತಿದ್ದಾರೆ. ಆದರೆ ಧಾರ್ಮಿಕ-ಸಾಂಸ್ಕೃತಿಕ ಅನನ್ಯತೆಗಳಾದ ವೈಯಕ್ತಿಕ ಕಾನೂನಿನಲ್ಲಿ ಹಸ್ತಕ್ಷೇಪದ ಭಯ, ಅಲಿಘಡ ವಿಶ್ವವಿದ್ಯಾಲಯದ ಸ್ವರೂಪದ ಆತಂಕ, ಉರ್ದುಭಾಷೆಯ ನಿರ್ಲಕ್ಷತನ ಮತ್ತು ಕೋಮುವಾದ ಮುಂತಾದ ಸಮಸ್ಯೆಗಳನ್ನು ಕೇವಲ ಮುಸ್ಲಿಮರು ಮಾತ್ರ ಎದುರಿಸುತ್ತಿದ್ದಾರೆ. ಮೊದಲ ಗುಂಪಿನ ಸಮಸ್ಯೆಗಳು ಯಾವುದೇ ಸರ್ಕಾರ ಸ್ಪಂಧಿಸಬೇಕಾದ ಅಭಿವೃದ್ಧಿ ಅಪೇಕ್ಷಿತ

ಸಮಸ್ಯೆಗಳಾದರೆ ಎರಡನೇ ಗುಂಪಿನ ಸಮಸ್ಯೆಗಳು ಕೇವಲ ಮುಸ್ಲಿಮರನ್ನು ರಾಜಕೀಯವಾಗಿ ಪ್ರೇರೇಪಿಸುವ,ಅವರನ್ನು ಮತ ಬ್ಯಾಂಕುಗಳಾಗಿ ಪರಿವರ್ತಿಸಿ ಲಾಭ ಪಡೆಯುವ ಭಾವನಾತ್ಮಕ ಸಮಸ್ಯೆಗಳಾಗಿವೆ. ಮುಸ್ಲಿಂ ನಾಯಕತ್ವ ಒಳಗೊಂಡಂತೆ ಎಲ್ಲರೂ ಕೇವಲ ಭಾವನಾತ್ಮಕ ಸಮಸ್ಯೆಗಳನ್ನು ಮಾತ್ರ ಪ್ರಸ್ತಾಪಿಸುವುದು ಕಂಡುಬರುತ್ತದೆ.[೧೯] ಮುಸ್ಲಿಂ ಸಮುದಾಯವನ್ನು ದುರಂತಕ್ಕೀಡು ಮಾಡುವಲ್ಲಿ ಇದು ಮುಖ್ಯ ಪಾತ್ರವಹಿಸಿದೆ.

## ೨.೪. ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು

೨೦೦೧ರ ಜನಗಣತಿಯವರೆಗೂ ಮುಸ್ಲಿಮರ ಸಾಕ್ಷರತೆ ಪ್ರಮಾಣ ದಾಖಲಾಗಿರಲಿಲ್ಲ. ಸಾಚಾರ್ ವರದಿ ಬಹಿರಂಗ ಪಡಿಸಿರುವಂತೆ ದೇಶದ ಒಟ್ಟು ಸಾಕ್ಷರತೆ ಪ್ರಮಾಣ ಶೇ.೬೫.೧ರಷ್ಟು ಕಂಡುಬಂದರೆ, ಅದರಲ್ಲಿ ಮುಸ್ಲಿಮರ ಸಾಕ್ಷರತೆ ಪ್ರಮಾಣ ಕೇವಲ ಶೇ.೫೯.೧ರಷ್ಟು ಕಂಡುಬರುತ್ತದೆ. ನಗರವಾಸಿ ಮುಸ್ಲಿಮರು ಮತ್ತು ಮುಸ್ಲಿಮೇತರರ ನಡುವೆ ಸಾಕ್ಷರತೆಯಲ್ಲಿ ಹೆಚ್ಚು ಅಂತರ ಕಂಡುಬರುತ್ತದೆ. ೬ ರಿಂದ ೧೪ವರ್ಷ ವಯೋಮಿತಿಯ ಶೇ.೨೫ರಷ್ಟು ಮುಸ್ಲಿಂ ಮಕ್ಕಳು ಶಾಲೆಗೆ ದಾಖಲಾಗಿಲ್ಲ. ೭ನೇ ತರಗತಿ ಹಂತದಲ್ಲಿ ಶಾಲೆ ಬಿಡುವವರಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದಾರೆ. ಮದರಸಗಳಿಗೆ ಹೋಗುವ ಮಕ್ಕಳ ಪ್ರಮಾಣ ಶೇ.೩ರಷ್ಟು ಮಾತ್ರ ಕಂಡುಬರುತ್ತದೆ.[೨೦] ೧೪ ರಾಜ್ಯಗಳು ಮತ್ತು ಒಂದು ಕೇಂದ್ರಾಡಳಿತ ಪ್ರದೇಶದ ಒಟ್ಟು ೩೫ ಜಿಲ್ಲೆಗಳ ೨,೯೫ ಮುಸ್ಲಿಂ ಪುರುಷರು ಮತ್ತು ೯೯೭ ಮುಸ್ಲಿಮೇತರ ಪುರುಷರ ನಮೂನೆ ಆಧಾರಿತ ಅಧ್ಯಯನದಲ್ಲಿ ಗುರುತಿಸಿರುವಂತೆ ಶೇ.೫೫.೪ರಷ್ಟು ಮುಸ್ಲಿಮರು ಮತ್ತು ಕೇವಲ ಶೇ.೨೯.೮ರಷ್ಟು ಮುಸ್ಲಿಮೇತರರು ಅವಿದ್ಯಾವಂತರಾಗಿದ್ದಾರೆ.[೨೧] ೧೯೭೭–೭೮ ಮತ್ತು ೧೯೭೯–೮೦ರಲ್ಲಿ ಮುರಾದಾಬಾದ್ ಜಿಲ್ಲೆಯ ವಿದ್ಯಾರ್ಥಿಗಳ ಫಲಿತಾಂಶದ ಅಧ್ಯಯನದಲ್ಲೂ ಮುಸ್ಲಿಂ ವಿದ್ಯಾರ್ಥಿಗಳು ಮುಸ್ಲಿಮೇತರರಿಗಿಂತ ಅತ್ಯಂತ ಹಿಂದುಳಿದಿರುವುದು ಕಂಡುಬಂದಿದೆ. ದೆಹಲಿಯ ಒಟ್ಟು ೬೬೦ ಪ್ರೌಢಶಾಲೆಗಳಲ್ಲಿ ಶೇ.೧.೭ರಷ್ಟು ಮುಸ್ಲಿಂ ವಿದ್ಯಾರ್ಥಿಗಳು ಮಾತ್ರ ಪರೀಕ್ಷೆಗೆ ಕುಳಿತಿರುವುದು ಕಂಡುಬಂದಿದೆ.[೨೨] ೧೯೪೭ ರಿಂದ ೧೯೭೭ರ ವರೆಗಿನ ಅವಧಿಯಲ್ಲಿ ಷೇಖ್ ಅಹಮದ್ ಅವರ ಅಹಮದ್ ನಗರದ ಶೈಕ್ಷಣಿಕ ಅಧ್ಯಯನದಲ್ಲಿ ನಗರದ ಒಟ್ಟು ೨೮,೦೦೦ ಮುಸ್ಲಿಂ ಜನಸಂಖ್ಯೆಯಲ್ಲಿ ಕೇವಲ ೧೦೧ ವಿದ್ಯಾರ್ಥಿಗಳು ಮತ್ತು ೪೨ ವಿದ್ಯಾರ್ಥಿನಿಯರು ಮಾತ್ರ ಎಸ್.ಎಸ್.ಎಲ್.ಸಿ. ವರೆಗಿನ ಶಿಕ್ಷಣ ಪಡೆದಿದ್ದು, ೪೨ ವಿದ್ಯಾರ್ಥಿಗಳು ಮತ್ತು ಕೇವಲ ೧೦ ವಿದ್ಯಾರ್ಥಿನಿಯರು ಮಾತ್ರ ಪದವಿ ಮಟ್ಟದ ಶಿಕ್ಷಣ ಪಡೆದಿದ್ದಾರೆ ಮತ್ತು ಕೇವಲ ೧೨ ವಿದ್ಯಾರ್ಥಿಗಳು ಮಾತ್ರ ಸ್ನಾತಕೋತ್ತರ ಪದವಿ ಪಡೆದಿರುವುದು ಕಂಡುಬಂದಿದೆ. ಅದೇ ಪ್ರಕಾರ ಕೇವಲ ಮೂವರು ವಕೀಲ ವೃತ್ತಿಯಲ್ಲಿ ಮತ್ತು

ಒಬ್ಬರು ಮಾತ್ರ ವೈದ್ಯ ವೃತ್ತಿಯಲ್ಲಿ ತೊಡಗಿರುವುದು ಕಂಡುಬಂದಿದೆ.[೨೩] ೧೯೮೩ರಲ್ಲಿ ಹಮ್‌ದರ್ದ್ ಶಿಕ್ಷಣ ಸಂಸ್ಥೆಯವರು ಕೈಗೊಂಡ ಶೈಕ್ಷಣಿಕ ಸಮೀಕ್ಷೆ ಹೇಳುವಂತೆ ಮುಸ್ಲಿಂ ಒಡೆತನದ ಒಟ್ಟು ೪೪ ಕಾಲೇಜುಗಳಲ್ಲಿ ಶೇ.೪೦.೩ರಷ್ಟು ಮುಸ್ಲಿಮರು ಮತ್ತು ಶೇ.೫೯.೭ರಷ್ಟು ಮುಸ್ಲಿಮೇತರ ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದಾರೆ.[೨೪] ಎಂ.ಬಿ. ಬುಚ್(೧೯೮೯) ಅವರ ಗುಜರಾತ್ ಅಧ್ಯಯನದ ಪ್ರಕಾರ ಮುಸ್ಲಿಮರಿಗೆ ಪ್ರೌಢ ಶಿಕ್ಷಣದ ಅವಕಾಶಗಳೇ ಅತ್ಯಂತ ಕನಿಷ್ಠ ಪ್ರಮಾಣದಲ್ಲಿವೆ. ರಾಜ್ಯದ ಒಟ್ಟು ಶೇ.೯.೫ರಷ್ಟು ಜನಸಂಖ್ಯೆಗೆ ಕೇವಲ ಶೇ.೩.೦೮ರಷ್ಟು ಮಾತ್ರ ಖಾಸಗಿ ಸಂಸ್ಥೆಗಳಿರುವುದನ್ನು ಗುರುತಿಸುತ್ತಾರೆ. ೧೯೯೫ರಲ್ಲಿ ಅಹಮದ್ ಅವರು ಕೈಗೊಂಡ ಜಾತ್ಯಾತೀತ ಭಾರತದಲ್ಲಿ ಮುಸ್ಲಿಮರ ಸ್ಥಾನ ಎಂಬ ಅಧ್ಯಯನದಲ್ಲಿ ಹೇಳುವಂತೆ ಬಹುಸಂಸ್ಕೃತಿ ನೆಲೆಗೊಂಡಿರುವ ಸಮಾಜದಲ್ಲಿ ಜಾತ್ಯಾತೀತ ತತ್ವ ಮತ್ತು ರಾಷ್ಟ್ರೀಯ ಐಕ್ಯತೆಗಳು ಪರಸ್ಪರ ಪೂರಕವಾಗಿವೆ ಇಂತಹ ಸನ್ನಿವೇಶದಲ್ಲಿ ಮುಸ್ಲಿಮರನ್ನು ಮುಖ್ಯವಾಹಿನಿಗೆ ತರದೆ ಸಮಗ್ರ ರಾಷ್ಟ್ರೀಯ ನೀತಿಯನ್ನು ರೂಪಿಸಲು ಸಾಧ್ಯವಿಲ್ಲ.[೨೫] ಈ ಎಲ್ಲಾ ಅಧ್ಯಯನಗಳು ಮುಸ್ಲಿಮರಲ್ಲಿ ಪುರುಷರು ಶೈಕ್ಷಣಿಕವಾಗಿ ಹಿಂದುಳಿದಿರು ವುದನ್ನು ಸ್ಪಷ್ಟಪಡಿಸುತ್ತವೆ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಪ್ರಮಾಣವು ಇನ್ನೂ ಚಿಂತಾಜನಕವಾಗಿದೆ. ಸಾಚಾರ್ ವರದಿ ಹೇಳುವಂತೆ ದೇಶದಲ್ಲಿ ಶೇ.೭೨ರಷ್ಟು ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಶಾಲೆಗೆ ದಾಖಲಾಗಿದ್ದು, ಮುಸ್ಲಿಮರಲ್ಲಿ ಶೇ.೬೮ರಷ್ಟು ಬಾಲಕಿಯರು ಮಾತ್ರ ಶಾಲೆಗೆ ದಾಖಲಾಗಿದ್ದಾರೆ.[೨೬] ಇಡೀ ದೇಶದಾದ್ಯಂತ ವಿವಿಧ ಕಾಲಘಟ್ಟಗಳಲ್ಲಿ ಕೈಗೊಂಡ ಅಧ್ಯಯನಗಳು ಮುಸ್ಲಿಮರು ಶೈಕ್ಷಣಿಕ ಅವಕಾಶಗಳಿಂದ ವಂಚಿತರಾಗಿರುವ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ಅಂಶವನ್ನು ಎತ್ತಿತೋರಿಸುತ್ತವೆ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ವಿವಿಧ ಕಾರಣಗಳನ್ನು ಅಧ್ಯಯನಗಳು ತೋರಿಸಿಕೊಟ್ಟಿವೆ. ಇವರ ಶೈಕ್ಷಣಿಕ ಹಿಂದುಳಿಯುವಿಕೆಯು ಚರಿತ್ರೆಯೊಂದಿಗೆ ತಳಕು ಹಾಕಿಕೊಂಡಿದೆ. ೧೮೮೦ರ ವರೆಗೆ ಸರ್ ಸೈಯದ್ ಅಹಮದರ ಶೈಕ್ಷಣಿಕ ಅಭಿವೃದ್ಧಿ ಉದ್ದೇಶಿತ ಅಲಿಘಡ ಚಳುವಳಿ ಗಟ್ಟಿಗೊಳ್ಳುವವರೆಗೆ ಮುಸ್ಲಿಂ ಸಮುದಾಯ ಶಿಕ್ಷಣ ಕ್ಷೇತ್ರದಿಂದ ದೂರವೇ ಉಳಿದಿತ್ತು. ಆ ಹೊತ್ತಿಗಾಗಲೇ ಪಾರ್ಸಿ, ಕ್ರಿಶ್ಚಿಯನ್ ಮತ್ತು ಹಿಂದೂ ಸಮುದಾಯಗಳು ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶ ಪಡೆದಿದ್ದವು. ಇವರಿಗೆ ಹೋಲಿಸಿದರೆ ಮುಸ್ಲಿಮರು ಸುಮಾರು ೭೦–೮೦ ವರ್ಷಗಳಷ್ಟು ತಡವಾಗಿ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದರು. ಇವರ ಒಟ್ಟಾರೆ ಕನಿಷ್ಠ ಪ್ರಮಾಣದ ಸಾಕ್ಷರತೆಯಿಂದಾಗಿ ಮಹಿಳೆಯರ ಸಾಕ್ಷರತೆ ಪ್ರಮಾಣವೂ ಅತ್ಯಂತ ಕನಿಷ್ಟವಾಯಿತು.[೨೭] ಡಾ.ಮಹಮದ್ ಪೀರ್ ಅವರು ಮಹಿಳೆಯರ ಕನಿಷ್ಠ ಸಾಕ್ಷರತೆಗೆ ಶೈಕ್ಷಣಿಕ ಮಹತ್ವ ತಿಳಿಯದಿರುವಿಕೆ, ಸಾಂಸ್ಕೃತಿಕ ಅಡೆ ತಡೆಗಳು, ಪರದಾ ಪದ್ಧತಿ, ಪ್ರತ್ಯೇಕ ಶಿಕ್ಷಣ ಸಂಸ್ಥೆಗಳಿಲ್ಲದಿರುವುದು, ಬಡತನ ಮತ್ತು ಸೂಕ್ತ ವರ ಸಿಗದಿರುವ ಆತಂಕಗಳು ಇವೇ ಮೊದಲಾದ ಕಾರಣಗಳನ್ನು ಗುರುತಿಸುತ್ತಾರೆ.[೨೮]

ಮುಸ್ಲಿಮರ ಕನಿಷ್ಠ ಸಾಕ್ಷರತೆಗೆ ಭಾರತ ಶಿಕ್ಷಣ ಪದ್ಧತಿಯ ದೋಷವೂ ಕೂಡ ಕಾರಣವೆಂದು ಗ್ರಹಿಸಲಾಗುತ್ತಿದೆ. ಇಲ್ಲಿನ ಶಿಕ್ಷಣ ಪದ್ಧತಿಯು 'ವೈಟ್ ಕಾಲರ್' ಉದ್ಯೋಗ ಪಡೆಯುವ ಮಾಧ್ಯಮವಾಗಿದ್ದು, ಇದು ಕನಿಷ್ಠ ಆದಾಯ ಅವಲಂಬಿಸಿರುವ ಮತ್ತು ಶೈಕ್ಷಣಿಕ ಅರ್ಹತೆಯ ಅಗತ್ಯವಿಲ್ಲದ ಉದ್ಯೋಗಗಳನ್ನು ಅವಲಂಬಿಸಿರುವ ಜನರಿಗೆ ಅನುಕೂಲಕರವಾಗಿಲ್ಲ. ಮುಸ್ಲಿಮರಲ್ಲಿ ವೈಟ್‌ಕಾಲರ್ ಶಿಕ್ಷಣ ಬಯಸುವ ಹಾಗೂ ಸರ್ಕಾರಿ ನೌಕರಿ ಅಪೇಕ್ಷಿಸುವವರು ಕನಿಷ್ಠ ಸಂಖ್ಯೆಯಷ್ಟು ಮಾತ್ರ ಇದ್ದಾರೆ. ಈ ವೈರುದ್ಯವು ಮುಸ್ಲಿಮರಲ್ಲಿರುವ ವರ್ಗತಾರತಮ್ಯ ಮತ್ತು ಅವರ ವಿವಿಧ ಶೈಕ್ಷಣಿಕ ಅಪೇಕ್ಷೆಗಳನ್ನು ಸ್ಪಷ್ಟಪಡಿಸುತ್ತದೆ. ಅನಕ್ಷರತೆ ಮತ್ತೊಂದು ಕಾರಣವೆಂದರೆ ಮದರಸಗಳ ಧಾರ್ಮಿಕ ಶಿಕ್ಷಣವು ಮಾರುಕಟ್ಟೆಯ ಉದ್ಯೋಗಗಳನ್ನು ಪಡೆಯಲು ಪೂರಕವಾಗಿಲ್ಲ. ಜೊತೆಗೆ ಮಕ್ಕಳನ್ನು ಉನ್ನತ ವ್ಯಾಸಂಗಕ್ಕಾಗಿ ಕಳುಹಿಸುವ ಸಾಮರ್ಥ್ಯವೂ ಪಾಲಕರಿಗಿಲ್ಲ ಆದ್ದರಿಂದ ಅವರ ಆರ್ಥಿಕ ಅಭಿವೃದ್ಧಿಯ ನಂತರವೇ ಅವರಿಗೆ ಶಿಕ್ಷಣದ ಆಕಾಂಕ್ಷೆ ಮೂಡಬಹುದೆಂದು ಗ್ರಹಿಸಲಾಗುತ್ತಿದೆ.[೨೯] ಸಾಚಾರ್ ವರದಿಯು ಕೂಡ ಈ ಅಂಶವನ್ನು ಹೇಳಿದ್ದು. ಖಾಸಗಿ ಸರ್ಕಾರಿ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಲು ಪಾಲಕರು ಆಸಕ್ತರಾಗಿದ್ದರೂ, ಅವುಗಳು ದುಬಾರಿಯಾದ್ದರಿಂದ ಸಾಧ್ಯವಾಗುತ್ತಿಲ್ಲ. ಕೆ.ಡಿ.ಶರ್ಮಾರವರು ೧೯೭೫ರ ಮುಸ್ಲಿಮರ ಶೈಕ್ಷಣಿಕ ಅಧ್ಯಯನದಲ್ಲಿ ಮುಸ್ಲಿಮರು ಶೈಕ್ಷಣಿಕ ಅವಕಾಶಗಳನ್ನು ಉಪಯೋಗಿಸಿಕೊಳ್ಳದಿರಲು ನಾಲ್ಕು ಮುಖ್ಯ ಕಾರಣಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ ಉದ್ಯೋಗಕ್ಕೆ ಪೂರಕವಲ್ಲದ ಶಿಕ್ಷಣ, ಅನಕ್ಷರಸ್ಥ ಪಾಲಕರು, ಉರ್ದುಭಾಷೆಗೆ ಪ್ರೋತ್ಸಾಹ ಇಲ್ಲದಿರುವುದು ಮತ್ತು ದುಬಾರಿ ವೆಚ್ಚ ಮುಂತಾದವುಗಳು.[೩೦] ಹೀಗೆ ಅಧ್ಯಯನಗಳು ಮುಸ್ಲಿಮರು ವಿವಿಧ ಕಾರಣಗಳಿಂದ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವುದನ್ನು ನಿರೂಪಿಸುತ್ತವೆ. ಮುಸ್ಲಿಮರು ಆರ್ಥಿಕವಾಗಿ ಹಿಂದುಳಿಯಲು ಅವರು ಶೈಕ್ಷಣಿಕವಾಗಿ ಹಿಂದುಳಿದಿರುವುದೇ ಮುಖ್ಯ ಕಾರಣವೆಂದು ಗ್ರಹಿಸಲಾಗುತ್ತಿದೆ.

### ೨.೫. ಮುಸ್ಲಿಮರ ಆರ್ಥಿಕ ಸ್ಥಿತಿಗಳು

ಮುಸ್ಲಿಮರಿಗೆ ಸಂಬಂಧಿಸಿದಂತೆ ಶೈಕ್ಷಣಿಕ ಹಿಂದುಳಿಯುವಿಕೆ ಮತ್ತು ಆರ್ಥಿಕ ಸ್ಥಿತಿಗಳ ನಡುವೆ ಸಂಬಂಧವಿದೆ. ಮುಸ್ಲಿಮರ ಎಲ್ಲಾ ಆರ್ಥಿಕ ಸಂಕಷ್ಟಗಳಿಗೆ ಶೈಕ್ಷಣಿಕ ಹಿಂದುಳಿಯುವಿಕೆಯೇ ಮೂಲ ಕಾರಣವೆಂದು ಗ್ರಹಿಸಲಾಗುತ್ತದೆ.[೩೧] ಸರ್ಕಾರದ ವಿವಿಧ ಆಯೋಗಗಳ ವರದಿಗಳೂ ಕೂಡ ಮುಸ್ಲಿಮರ ಆರ್ಥಿಕ ಸ್ಥಿತಿಗಳನ್ನು ಬಹಿರಂಗಪಡಿಸಿವೆ. ೨೦೦೧ರ ಜನಗಣತಿಯಲ್ಲಿ ಮೊದಲ ಬಾರಿಗೆ ಮುಸ್ಲಿಮರ ಶೈಕ್ಷಣಿಕ ಮಾಹಿತಿ ನೀಡಿದ್ದು ಹೊರತುಪಡಿಸಿದರೆ ಆರ್ಥಿಕ ಸ್ಥಿತಿಯ ಅಂಶಗಳು ಎಲ್ಲಿಯೂ ಲಭ್ಯವಿಲ್ಲದಿರುವುದು ಸಾಚಾರ್ ವರದಿಯ ಮಂಡನೆಯವರೆಗೂ ಅಧ್ಯಯನಗಳು ಎದುರಿಸಿದ ಮುಖ್ಯ ಕೊರತೆಯಾಗಿದೆ. ಇದಕ್ಕೂ ಮುಂಚೆ ಅಲ್ಲಲ್ಲಿ ಲಭ್ಯವಿರುವ ಮಾಹಿತಿಯನ್ನು

ಆಧರಿಸಿ ಒಂದು ಅಂದಾಜು ಮಾಡಲಾಗಿದೆ. ಡಾ.ನವಲಖ ಇನ್‌ಸ್ಟಿಟ್ಯೂಟ್ ಆಫ್ ಇಕನಾಮಿಕ್ ಗ್ರೋಥ್ ಸಂಸ್ಥೆಯು ಕೈಗೊಂಡ ಅಧ್ಯಯನದ ಪ್ರಕಾರ ದೆಹಲಿಯ ಶೇ.೯೬.೪ರಷ್ಟು ದೂರವಾಣಿ ಸಂಪರ್ಕಗಳು ಹಿಂದೂ ಮತ್ತು ಸಿಖ್ ಸಮುದಾಯದವರಿಗೆ ಸೇರಿದ್ದು, ಉಳಿದ ಶೇ.೨.೦೬ರಷ್ಟು ಕ್ರಿಶ್ಚಿಯನ್ ಮತ್ತು ಕೇವಲ ಶೇ.೧.೫೨ ರಷ್ಟು ಮಾತ್ರ ಮುಸ್ಲಿಮರು ಹೊಂದಿದ್ದಾರೆ. ಇಂಧನ, ಗ್ಯಾಸ್ ಮತ್ತು ಸೀಮೆ ಎಣ್ಣೆ ಮಾರಾಟಮಾಡುವವರಲ್ಲಿ ಮುಸ್ಲಿಮರ ಪ್ರಮಾಣ ಕ್ರಮವಾಗಿ ಶೇ.೨.೩, ಶೇ.೨.೩ ಮತ್ತು ಶೇ.೬.೨ರಷ್ಟು ಮಾತ್ರ ಕಂಡುಬರುತ್ತದೆ. ವಿವಿಧ ಸಮುದಾಯಗಳಲ್ಲಿರುವ ಗಣ್ಯರ ಪ್ರಮಾಣವು ಈ ರೀತಿಯಲ್ಲಿರುವುದು ಕಂಡುಬಂದಿದೆ. ಹಿಂದೂಗಳಲ್ಲಿ ಶೇ.೮೫.೩ರಷ್ಟು, ಕ್ರಿಶ್ಚಿಯನ್‌ರಲ್ಲಿ ಶೇ.೩.೫ರಷ್ಟು, ಸಿಖ್‌ರಲ್ಲಿ ಶೇ.೩.೬ರಷ್ಟು, ಜೈನರಲ್ಲಿ ಶೇ.೨.೮ರಷ್ಟು ಮತ್ತು ಮುಸ್ಲಿಮರಲ್ಲಿ ಶೇ.೪.೫ರಷ್ಟು ಮಾತ್ರ ಗಣ್ಯರಿದ್ದಾರೆ. ಗಮನಾರ್ಹ ಸಂಗತಿ ಎಂದರೆ ಮುಸ್ಲಿಮರನ್ನು ಹೊರತುಪಡಿಸಿ ಉಳಿದ ಎಲ್ಲಾ ಸಮುದಾಯಗಳಲ್ಲಿ ಜನಸಂಖ್ಯೆ ಪ್ರಮಾಣಕ್ಕಿಂತ ಗಣ್ಯರ ಸರಾಸರಿ ಪ್ರಮಾಣವು ಅಧಿಕವಾಗಿದ್ದು ಅದು ಮುಸ್ಲಿಮರಲ್ಲಿ ಮಾತ್ರ ಕಡಿಮೆ ಇದೆ.

೧೯೭೯ರಲ್ಲಿ ಕೈಗಾರಿಕೆಗಳ ಸರ್ಕಾರ ಸ್ಥಾಪನೆಗೆ ಒಟ್ಟು ೪೧೯ ಪರವಾನಿಗೆಗಳನ್ನು ನೀಡಿದ್ದು ಅವುಗಳಲ್ಲಿ ಮುಸ್ಲಿಮರು ಕೇವಲ ೫ (ಶೇ.೧.೨೫ರಷ್ಟು) ಪರವಾನಿಗೆ ಪಡೆದಿದ್ದಾರೆ. ೧೯೮೦ರಲ್ಲಿ ಸ್ವಲ್ಪ ಪ್ರಗತಿ ಕಂಡುಬಂದಿದ್ದು ಸರ್ಕಾರ ನೀಡಿದ ಒಟ್ಟು ೩೧೯ ಪರವಾನಿಗೆಗಳಲ್ಲಿ ಮುಸ್ಲಿಮರು ೬ (ಶೇ.೧.೫ರಷ್ಟು) ಪರವಾನಿಗೆಗಳನ್ನು ಪಡೆದಿದ್ದಾರೆ. ಗಣ್ಯ ಸಮುದಾಯದ ಕೊರತೆ ಇರುವುದು ಮತ್ತು ಕೈಗಾರಿಕೆಗಳ ಒಡೆತನ ಪಡೆಯದೇ ಇರುವುದು ಇವರ ಆರ್ಥಿಕ ಪ್ರಗತಿ ಕುಂಠಿತವಾಗಲು ಪ್ರಮುಖ ಪಾತ್ರವಹಿಸಿದೆ. ಮುಸ್ಲಿಮರು ಕನಿಷ್ಠ ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿರುವುದನ್ನು ಅಧ್ಯಯನಗಳು ಬಹಿರಂಗ ಪಡಿಸಿವೆ. ೧೯೭೨ರಲ್ಲಿ ಗುಜರಾತ್ ರಾಜ್ಯದ ಅಹಮದಾಬಾದ್ ನಗರದಲ್ಲಿ ಕೈಗೊಂಡ ಮುಸ್ಲಿಮರ ಸಾಮಾಜಿಕ ಆರ್ಥಿಕ ಅಧ್ಯಯನದ ಪ್ರಕಾರ ಶೇ.೭೦ರಷ್ಟು ಕುಟುಂಬಗಳು ಬಾಡಿಗೆ ಮನೆಗಳಲ್ಲಿ ವಾಸಿಸುತ್ತಾರೆ. ಶೇ.೫ರಷ್ಟು ಕುಟುಂಬಗಳು ಬಾಡಿಗೆ ಗುಡಿಸಲುಗಳ ನಿವಾಸಿಗಳಾಗಿದ್ದಾರೆ. ಶೇ.೧.೨ರಷ್ಟು ಕುಟುಂಬಗಳಿಗೆ ನಿವೇಶನಗಳಿಲ್ಲದಿರುವುದು ಕಂಡುಬಂದಿದೆ. ಅದೇ ಪ್ರಕಾರ ಶೇ.೬೪ರಷ್ಟು ಕುಟುಂಬಗಳಿಗೆ ಫ್ಯಾನ್ ಸೌಲಭ್ಯ, ಶೇ.೬೭ರಷ್ಟು ಕುಟುಂಬಗಳಿಗೆ ರೇಡಿಯೊ, ಶೇ.೬೫ರಷ್ಟು ಕುಟುಂಬಗಳಿಗೆ ವಿದ್ಯುತ್ ಸೌಕರ್ಯ ಮತ್ತು ಶೇ.೪೧ರಷ್ಟು ಕುಟುಂಬಗಳಿಗೆ ಸೈಕಲ್ ಸೌಲಭ್ಯಗಳಿರಲಿಲ್ಲ. ಒಟ್ಟು ಶೇ.೫೩ರಷ್ಟು ಕುಟುಂಬಗಳಿಗೆ ಯಾವುದೇ ವಾಹನ ಸೌಲಭ್ಯಗಳಿಲ್ಲ. ಕನಿಷ್ಠ ಸಂಖ್ಯೆಯ ಕುಟುಂಬಗಳು ಮಾತ್ರ ಕೆಲವು ಸೌಕರ್ಯಗಳನ್ನು ಹೊಂದಿದ್ದಾರೆ. ಅವರಲ್ಲಿ ಶೇ.೩.೯ರಷ್ಟು ಕುಟುಂಬಗಳು ಸ್ಕೂಟರ್ ಮತ್ತು ಶೇ.೨.೨ರಷ್ಟು ಕುಟುಂಬಗಳು ಕಾರು ಸೌಲಭ್ಯವನ್ನು ಹೊಂದಿದ್ದಾರೆ. ಸರ್ಕಾರಿ ಯೋಜನೆಯ ಮನೆಗಳಿಗೆ ಕೇವಲ ಶೇ.೨.೮೬ರಷ್ಟು ಮುಸ್ಲಿಮರು

ಮಾತ್ರ ಫಲಾನುಭವಿಗಳಾಗಿದ್ದಾರೆ. ಶೇ.೦.೨೫ರಷ್ಟು ಮಾತ್ರ ಖಾದಿ ಮತ್ತು ಗ್ರಾಮೋದ್ಯೋಗ ಯೋಜನೆಯ ಫಲಾನುಭವಿಗಳಾಗಿದ್ದಾರೆ. ಶೇ.೬.೯ರಷ್ಟು ಮಾತ್ರ ನ್ಯಾಯ ಬೆಲೆ ಅಂಗಡಿಗಳ ಪರವಾನಿಗೆ ಪಡೆದದ್ದು ಕಂಡುಬಂದಿದೆ. ಸಹಕಾರಿ ವಲಯದಲ್ಲಿ ಸಾಲಸೌಲಭ್ಯ ಪಡೆಯುವ ಯೋಜನೆಗಳಲ್ಲೂ ಇವರ ಸ್ಥಿತಿ ಆಶಾದಾಯಕವಾಗಿಲ್ಲ. ೫೦.೦೦೦ ದಿಂದ ೧ ಲಕ್ಷ ರೂ. ವರೆಗೆ ಸಾಲ ಪಡೆದವರ ಪ್ರಮಾಣ ಶೇ.೩ರಷ್ಟು, ಒಂದು ಲಕ್ಷದಿಂದ ಎರಡು ಲಕ್ಷ ರೂ.ವರೆಗೆ ಸಾಲ ಪಡೆದವರು ಶೇ.೨ರಷ್ಟು ಮತ್ತು ಒಂದು ಲಕ್ಷದಿಂದ ಒಂದು ಮಿಲಿಯನ್‌ವರೆಗೆ ಸಾಲ ಪಡೆದವರು ಕೇವಲ ಶೇ.೦೧ರಷ್ಟು ಮುಸ್ಲಿಮರು ಮಾತ್ರ ಕಂಡುಬರುತ್ತಾರೆ.[೨೨] ಇತರೆ ಸಮುದಾಯಗಳೊಂದಿಗೆ ಹೋಲಿಸಿದರೆ ಮುಸ್ಲಿಮರ ಸ್ಥಿತಿಯು ಆಶಾದಾಯಕವಾಗಿಲ್ಲ ಎಂಬ ಅಂಶವನ್ನು ಅಧ್ಯಯನಗಳು ದೃಢಪಡಿಸಿವೆ. ದೆಹಲಿಯ ಶ್ರೀಮಂತ ಬಡಾವಣೆಯಲ್ಲಿ ಹಿಂದೂ, ಸಿಖ್, ಕ್ರಿಶ್ಚಿಯನ್ ಮತ್ತು ಮುಸ್ಲಿಮರ ಆದಾಯ ಮತ್ತು ಉಳಿತಾಯ ಸಾಮರ್ಥ್ಯವನ್ನು ಅಧ್ಯಯನ ಮಾಡಲಾಗಿದೆ. ಅದರ ಫಲಿತಗಳ ಪ್ರಕಾರ ಶೇ.೯೨.೯೮ ರಷ್ಟು ಹಿಂದೂ ಕುಟುಂಬಗಳ ವಾರ್ಷಿಕ ಆದಾಯ ೩೫,೧೫೯ ರೂ.ಗಳಿದ್ದು ವಾರ್ಷಿಕ ಉಳಿತಾಯ ೧೪,೧೫೩ ರೂ. ಗಳಾಗಿದ್ದು ಅವರ ಉಳಿತಾಯ ಸಾಮರ್ಥ್ಯವು ಶೇ೦.೪೦ರಷ್ಟು ಇದೆ. ಶೇ.೨೫ರಷ್ಟು ಕ್ರಿಶ್ಚಿಯನ್ ಕುಟುಂಬಗಳ ವಾರ್ಷಿಕ ಆದಾಯ ೩೩,೬೨೫ ರೂ.ಗಳಿದ್ದು, ಉಳಿತಾಯ ಸಾಮರ್ಥ್ಯ ಶೇ.೦.೪೭ರಷ್ಟು ಕಂಡಬರುತ್ತದೆ. ಆದರೆ ಕೇವಲ ಶೇ.೧.೮ರಷ್ಟು ಮುಸ್ಲಿಂ ಕುಟುಂಬಗಳ ಆದಾಯ ೩೨.೪೧೧ ರೂ.ಗಳಾಗಿದ್ದು ಉಳಿತಾಯ ೧೦,೭೬ ರೂ.ಗಳಿದ್ದು ಅವರ ಉಳಿತಾಯ ಸಾಮರ್ಥ್ಯವು ಕೇವಲ ಶೇ.೦.೩೮ರಷ್ಟು ಮಾತ್ರ ಕಂಡುಬರುತ್ತದೆ. ಅಧ್ಯಯನದ ಅಂತಿಮ ಸಾರಾಂಶದನ್ವಯ ಇತರೆ ಸಮುದಾಯಗಳೊಂದಿಗೆ ಹೋಲಿಸಿದರೆ ಮುಸ್ಲಿಂ ಕುಟುಂಬಗಳ ಆದಾಯ, ಉಳಿತಾಯ ಮತ್ತು ಉಳಿತಾಯ ಸಾಮರ್ಥ್ಯಗಳು ಕನಿಷ್ಠ ಮಟ್ಟದಲ್ಲಿವೆ. ಇದರಿಂದಾಗಿ ಮುಸ್ಲಿಮರು ಇತರರೊಂದಿಗೆ ಸಮಾನ ಬದುಕು ನಡೆಸುತ್ತಿಲ್ಲ ಎನ್ನುವ ಸಂಗತಿ ಸ್ಪಷ್ಟಗೊಳ್ಳುತ್ತದೆ.[೩೩]

## ೨.೬. ಉದ್ಯೋಗ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ

ವಿವಿಧ ವಲಯಗಳಲ್ಲಿ ಮುಸ್ಲಿಮರ ಉದ್ಯೋಗದ ಪ್ರಾತಿನಿಧ್ಯ ತೃಪ್ತಿಕರವಾಗಿಲ್ಲದಿರುವ ಅಂಶ ತಿಳಿದುಬರುತ್ತದೆ. ಕೇಂದ್ರ ಸರ್ಕಾರದ ಸೇವೆಗಳಲ್ಲಿ ಮುಸ್ಲಿಮರು ಶೇ.೪.೪೧ರಷ್ಟು ಪ್ರಾತಿನಿಧ್ಯ ಪಡೆದಿದ್ದಾರೆ. ರಾಜ್ಯ ಸರ್ಕಾರಗಳ ಒಟ್ಟು ೮,೨೬,೦೦೦ ನೌಕರರಲ್ಲಿ ಶೇ.೬ರಷ್ಟು ಮುಸ್ಲಿಮರು ಮಾತ್ರ ಪ್ರಾತಿನಿಧ್ಯ ಪಡೆದಿದ್ದಾರೆ. ಅವುಗಳಲ್ಲಿ ಶೇ.೫.೧೨ರಷ್ಟು ನಾಲ್ಕನೇ ದರ್ಜೆಯಲ್ಲಿ, ಶೇ.೪.೪ರಷ್ಟು ಮೂರನೇ ದರ್ಜೆಯಲ್ಲಿ, ಶೇ.೩ರಷ್ಟು ಎರಡನೆಯ ದರ್ಜೆಯಲ್ಲಿ ಮತ್ತು ಕೇವಲ ಶೇ.೧.೬೧ರಷ್ಟು ಮಾತ್ರ ಮೊದಲ ದರ್ಜೆಯ ನೌಕರಿಗಳಲ್ಲಿ ಪ್ರಾತಿನಿಧ್ಯ ಪಡೆದಿದ್ದಾರೆ. ಕುಶಲತೆಯ ಅಗತ್ಯವಿಲ್ಲದ ನಾಲ್ಕನೇ ದರ್ಜೆಯ ನೌಕರಿಗಳಲ್ಲೂ ಇವರ ಪ್ರಾತಿನಿಧ್ಯ ಗಣನೀಯವಾಗಿ ಕುಸಿಯುತ್ತಿರುವುದು

ಆತಂಕಕಾರಿ ಸಂಗತಿಯಾಗಿದೆ. ಸರ್ಕಾರಿ ಸ್ವಾಮ್ಯದ ಉದ್ಯಮಗಳಲ್ಲಿ ತಾಂತ್ರಿಕೇತರ ಮೇಲ್ವಿಚಾರಕ ಹುದ್ದೆಗಳಲ್ಲಿ ಶೇ.೧೨.೧೪ರಷ್ಟು ಪ್ರಾತಿನಿಧ್ಯ ಪಡೆದಿರುವುದು ಸಮಾಧಾನಕರ ಸಂಗತಿಯಾಗಿದೆ. ಆದರೆ ಕಾರ್ಯನಿರ್ವಾಹಕ ಹುದ್ದೆಗಳಲ್ಲಿನ ಮುಸ್ಲಿಮರ ಪ್ರಾತಿನಿಧ್ಯ ಚಿಂತಾಜನಕವಾಗಿದೆ. ರಿಸರ್ವ್‌ಬ್ಯಾಂಕ್‌ನ ೧೯ ಸದಸ್ಯರ ಕೇಂದ್ರ ಮಂಡಳಿಯಲ್ಲಿ ಮುಸ್ಲಿಮರ ಪ್ರಾತಿನಿಧ್ಯ ಶೂನ್ಯವಾಗಿದ್ದು, ಒಟ್ಟು ೬೦ ನಿರ್ದೇಶಕರಲ್ಲಿ ಕೇವಲ ಇಬ್ಬರು ಅಂದರೆ ಶೇ.೩ರಷ್ಟು ಮಾತ್ರ ಮುಸ್ಲಿಮರಿದ್ದರು. ಹಾಗೆಯೇ ೨೦ ರಾಷ್ಟ್ರೀಕೃತ ಬ್ಯಾಂಕ್‌ಗಳ ಒಟ್ಟು ೭೦೦ ನಿರ್ದೇಶಕರಲ್ಲಿ ಕೇವಲ ೧೦ ಮುಸ್ಲಿಂ ನಿರ್ದೇಶಕರಿದ್ದರು. ಇತ್ತೀಚಿನ ಸಾಚಾರ್ ವರದಿ ಕೂಡ ವಿವಿಧ ಸೇವೆ ಮತ್ತು ಇಲಾಖೆಗಳಲ್ಲಿ ಮುಸ್ಲಿಮರ ಕನಿಷ್ಠ ಪ್ರಾತಿನಿಧ್ಯದ ಸ್ಥಿತಿಗಳನ್ನು ಬಹಿರಂಗಪಡಿಸಿದೆ. ಈ ವರದಿಯ ಪ್ರಕಾರ ಮುಸ್ಲಿಮರು ಶೇ.೪ರಷ್ಟು ಐಪಿಎಸ್‌ನಲ್ಲಿ, ಶೇ.೩ರಷ್ಟು ಐ.ಎ.ಎಸ್‌ನಲ್ಲಿ ಪ್ರಾತಿನಿಧ್ಯ ಹೊಂದಿದ್ದಾರೆ. ವಿವಿಧ ಇಲಾಖೆಗಳಲ್ಲೂ ಇವರ ಸ್ಥಿತಿ ಉತ್ತಮವಾಗಿಲ್ಲ. ಪೋಲಿಸ್ ಪೇದೆಗಳಲ್ಲಿ ಶೇ.೬ರಷ್ಟು, ಆರೋಗ್ಯ ಇಲಾಖೆಯಲ್ಲಿ ಶೇ.೪.೪ರಷ್ಟು, ಸಾರಿಗೆ ಇಲಾಖೆಯಲ್ಲಿ ಶೇ.೬.೫ರಷ್ಟು ಮಾತ್ರ ಪ್ರಾತಿನಿಧ್ಯ ಹೊಂದಿದ್ದಾರೆ. ರೈಲ್ವೆ ಇಲಾಖೆಯಲ್ಲಿ ಮುಸ್ಲಿಮರು ಪಡೆದ ಒಟ್ಟು ಉದ್ಯೋಗಗಳಲ್ಲಿ ಶೇ.೯೮.೭ರಷ್ಟು ಕೆಳದರ್ಜೆಯ ನೌಕರಿಗಳು ಎಂಬುದು ವಿಷಾದಕರವಾದ ಸಂಗತಿಯಾಗಿದೆ.[೫೪] ದುರಂತವೆಂದರೆ ಕೈಗಾರಿಕೆಗಳು ಮುಸ್ಲಿಮರ ಒಡೆತನದಲ್ಲಿ ಇಲ್ಲವಾಗಿವೆ.

## ೨.೭. ಕೈಗಾರಿಕ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ

ವಿವಿಧ ಸಮುದಾಯಗಳು ಹೊಂದಿರುವ ಕೈಗಾರಿಕಾ ಒಡೆತನಗಳ ತೌಲನಿಕ ಅಧ್ಯಯನವು ಅಲಿಘಡ ಜಿಲ್ಲೆಯ ಮುಸ್ಲಿಮರು ಕನಿಷ್ಠ ಪ್ರಾತಿನಿಧ್ಯ ಹೊಂದಿರುವುದನ್ನು ಬಹಿರಂಗಪಡಿಸಿದೆ. ಅಧ್ಯಯನ ಹೇಳುವಂತೆ ಒಟ್ಟು ೧೪೮೮ ಕೈಗಾರಿಕಾ ಘಟಕಗಳಲ್ಲಿ ಮುಸ್ಲಿಮರು ಕೇವಲ ೧೫೮ ಘಟಗಳ ಮಾಲೀಕತ್ವ ಹೊಂದಿದ್ದು ಅದರ ಪ್ರಮಾಣ ಶೇ.೧೦.೬ರಷ್ಟು ಮಾತ್ರವಿದೆ. ಅವರ ಮಾಲೀಕತ್ವದ ೧೫೮ ಘಟಕಗಳಲ್ಲಿ ೧೦೦ ಘಟಕಗಳು ಬೀಗ ತಯಾರಿಕೆ ಕೈಗಾರಿಕೆಗಳಾಗಿವೆ. ಇತರೆ ಕೈಗಾರಿಕ ಒಡೆತನದಲ್ಲಿ ಅವರ ಪ್ರಾತಿನಿಧ್ಯ ಅತೀ ಕಡಿಮೆಯಾಗಿದೆ. ಉಳಿದ ೫೮ ಕೈಗಾರಿಕೆಗಳಲ್ಲಿ ೧೨ ಕಟ್ಟಡ ನಿರ್ಮಾಣ ಸಾಮಗ್ರಿ ತಯಾರಿಕೆ ಘಟಕಗಳು, ೨೪ ಕೈ ಮಗ್ಗಗಳು, ೬ ವಿದ್ಯುತ್ ಉಪಕರಣ ಘಟಕಗಳು ಮತ್ತು ಉಳಿದ ೧೬ ಇತರೆ ತಯಾರಿಕೆ ಘಟಕಗಳು ಮಾತ್ರ ಮುಸ್ಲಿಮರ ಒಡೆತನದಲ್ಲಿವೆ. ಆದರೆ ಶೇ.೮೫ರಷ್ಟು ವ್ಯಾಪಾರದ ಮೇಲೆ ಮುಸ್ಲಿಮರು ನಿಯಂತ್ರಣ ಹೊಂದಿದ್ದಾರೆ. ಅಧ್ಯಯನವು ಮುಸ್ಲಿಮರು ಕೈಗಾರಿಕೆಗಳ ಮಾಲೀಕತ್ವವಿಲ್ಲದೆ ಕೇವಲ ವ್ಯಾಪಾರಿಗಳಾಗಿರುವ ಅಂಶವನ್ನು ದೃಢಪಡಿಸಿದೆ. ಜೊತೆಗೆ ಇವರು ಶೇ.೭೨.೬ರಷ್ಟು ಬೀಗ ತಯಾರಿಕೆ ಘಟಕದಲ್ಲಿ ಉದ್ಯೋಗ ಪ್ರಾತಿನಿಧ್ಯ ಹೊಂದಿದ್ದು. ಉಳಿದ ಕೈಗಾರಿಕೆಗಳಲ್ಲಿ ಅವರ ಉದ್ಯೋಗ ಪ್ರಮಾಣ ಕಡಿಮೆಯಾಗಿದೆ.[೫೫]

ಒಂದು ಅಂದಾಜಿನ ಪ್ರಕಾರ ಒಟ್ಟು ೬ ಲಕ್ಷ ಕೈಗಾರಿಕ ಘಟಕಗಳಲ್ಲಿ ಕೇವಲ ೧೪,೦೦೦ ಘಟಕಗಳ ಮಾಲೀಕತ್ವವನ್ನು ಮುಸ್ಲಿಮರು ಹೊಂದಿದ್ದು, ಅವುಗಳಲ್ಲಿ ೨೦೦ ಘಟಕಗಳು ಸರ್ಕಾರಿ ವ್ಯಾಖ್ಯಾನದ ಪ್ರಕಾರ ಸಣ್ಣ ಕೈಗಾರಿಕೆಗಳ ಮಾನ್ಯತೆ ಪಡೆದಿವೆ. ಮುಸ್ಲಿಮರು ಚಿಲ್ಲರೆ ವ್ಯಾಪಾರ ಮತ್ತು ಕಡಿಮೆ ವೇತನದ ಉದ್ಯೋಗಗಳನ್ನು ಅವಲಂಬಿಸಿದ್ದು ಅವುಗಳ ಮೂಲಕ ತಮ್ಮ ಅನ್ನ ಸಂಪಾದಿಸುತ್ತಿರುವುದು ಸ್ಪಷ್ಟಗೊಳ್ಳುತ್ತದೆ.[೬೬] ಹೀಗೆ ಅಧ್ಯಯನಗಳು ಮುಸ್ಲಿಮರು ಆರ್ಥಿಕವಾಗಿ ಹಿಂದುಳಿದಿರುವ ಅಂಶವನ್ನು ತಿಳಿಸುವ ಜೊತೆ ಜೊತೆಗೆ ಹಿಂದುಳಿಯುವಿಕೆಗೆ ವಿವಿಧ ಕಾರಣಗಳನ್ನು ಕೂಡ ಪಟ್ಟಿಮಾಡಿದ್ದು ಅವುಗಳು ಇಂತಿವೆ. ಮುಸ್ಲಿಮರ ಆರ್ಥಿಕ ಹಿಂದುಳಿಯುವಿಕೆಗೆ ಚಾರಿತ್ರಿಕ ಕಾರಣವನ್ನು ಗುರುತಿಸಲಾಗುತ್ತಿದೆ. ಸ್ವತಂತ್ರಪೂರ್ವದಲ್ಲಿ ಮುಸ್ಲಿಂ ಲೀಗ್ ಮಂಡಿಸಿದ ಬೇಡಿಕೆಗಳಲ್ಲಿ ಬಡ ಮುಸ್ಲಿಮರ, ರೈತ-ಕಾರ್ಮಿಕರ ಮತ್ತು ಕುಶಲ ಕರ್ಮಿಗಳ ಒಂದು ಬೇಡಿಕೆಯೂ ಒಳಗೊಂಡಿರಲಿಲ್ಲ ಎಂಬುದು ಚಾರಿತ್ರಿಕ ದುರಂತವಾಗಿದೆ. ಈ ಕಾಲಘಟ್ಟದಲ್ಲಿ ಮುಸ್ಲಿಂ ನಾಯಕತ್ವ ಫ್ಯೂಡಲ್‌ವರ್ಗದ ಕೈಯಲ್ಲಿತ್ತು. ಇಂತಹ ನಾಯಕತ್ವ ನಶಿಸುವ ಬದಲಾಗಿ ಬ್ರಿಟೀಷರ ಸ್ವಹಿತಾಸಕ್ತಿ ಮತ್ತು ಪ್ರೋತ್ಸಾಹದಿಂದಾಗಿ ಮತ್ತಷ್ಟು ಗಟ್ಟಿಗೊಂಡಿತು. ಆದರೆ ಇದೇ ಹೊತ್ತಿನಲ್ಲಿ ಹಿಂದೂ ಸಮುದಾಯದಲ್ಲಿ ಹೊಸ ಬಂಡವಾಳಶಾಹಿ ವರ್ಗ ಪ್ರವರ್ದಮಾನಕ್ಕೆ ಬಂದು ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸಲು ಪ್ರಾರಂಭಿಸಿತು. ಈ ವರ್ಗ ೧೯೪೫ರ ಹೊತ್ತಿಗೆ 'ಬಾಂಬೆ ಪ್ಲಾನ್' ಎಂಬ ಯೋಜನೆಗಳು ರೂಪಿಸಿದ್ದರಿಂದ ಸಮುದಾಯ ಆರ್ಥಿಕವಾಗಿ ಪ್ರಬಲರಾಗಲು ಸಹಾಯವಾಯಿತು. ಇಂತಹ ಆರ್ಥಿಕ ವರ್ಗ ಮತ್ತು ಯೋಜನೆಗಳನ್ನು ರೂಪಿಸಲು ವಿಫಲವಾದದ್ದು ಮುಸ್ಲಿಂ ರಾಜಕಾರಣದ ಮುಖ್ಯ ದೌರ್ಬಲ್ಯವಾಗಿದೆ. ಭಾರತ ಸ್ವಾತಂತ್ರ್ಯ ಪಡೆದ ಮರುಕ್ಷಣದಿಂದಲೇ ಅವರ ಆರ್ಥಿಕ ಸಂಕಷ್ಟಗಳು ಮುಂದುವರೆದವು. ದೇಶವಿಭಜನೆ ಕಾಲದಲ್ಲಿ ಮುಸ್ಲಿಮರ ಕೆನೆಪದರ ಸಮುದಾಯ ಪಾಕಿಸ್ತಾನಕ್ಕೆ ವಲಸೆ ಹೋಯಿತು. ಉಳಿದ ಸಣ್ಣ ಭೂಹಿಡುವಳಿದಾರರು ಮತ್ತು ಕುಶಲಕರ್ಮಿಗಳು ಗ್ರಾಮೀಣ ಭಾಗದಲ್ಲಿ, ಉಳಿದ ಭಾವನಾತ್ಮಕ ಜನ ನಗರ ಪ್ರದೇಶಗಳಲ್ಲಿ ನೆಲೆಸಿದರು. ಉಳಿದವರಲ್ಲಿ ಮಧ್ಯಮವರ್ಗ ಅತ್ಯಂತ ದುರ್ಬಲವಾಗಿತ್ತು. ಇಂತಹವರಿಗೆ ಉಳಿದ ಕೆಲವೇ ಜಾತ್ಯಾತೀತ ಮತ್ತು ಧಾರ್ಮಿಕ ನಾಯಕರಿಗೆ ಉತ್ತಮ ನಾಯಕತ್ವ ಒದಗಿಸುವುದು ಅಸಾಧ್ಯವಾಯಿತು. ಬ್ರಿಟೀಷರ ಸ್ವಹಿತಾಸಕ್ತಿಯಿಂದಾಗಿ ಪೋಷಿಸಲ್ಪಟ್ಟಿದ್ದ ಫ್ಯೂಡಲ್ ವ್ಯವಸ್ಥೆಯನ್ನು ಸ್ವಾತಂತ್ರ್ಯನಂತರದ ಸರ್ಕಾರ ಜಮೀನ್ದಾರರಿಗೆ ನೀಡಿದ್ದ ಆರ್ಥಿಕ ಬೆಂಬಲವನ್ನು ಹಿಂದಕ್ಕೆ ಪಡೆಯಿತು. ಇದರಿಂದಾಗಿ ಜಮೀನ್ದಾರಿಯನ್ನು ಅವಲಂಬಿಸಿದ್ದ ಉಪವೃತ್ತಿಗಳು ಅಳಿಸಿಹೋದವು. ಲಾಭದಾಯಕವಲ್ಲದ ಈ ವೃತ್ತಿಗಳು ಬಹುಸಂಖ್ಯಾತರ ಅನ್ನದ ಆಧಾರಗಳಾಗಿದ್ದವು. ಸರ್ಕಾರದ ಈ ಕ್ರಮದಿಂದಾಗಿ ಜಮೀನ್ದಾರರು ಮತ್ತು ಕೂಲಿಕಾರ್ಮಿಕರ ಆರ್ಥಿಕ ಬದುಕಿನಲ್ಲಿ ಹಿಂಜರಿತ ಉಂಟಾಗಿದ್ದು, ಅವರಿನ್ನೂ ಆರ್ಥಿಕವಾಗಿ ಚೇತರಿಸಿಕೊಳ್ಳುವುದು ಸಾಧ್ಯವಾಗಿಲ್ಲ.[೬೭]

## ೨.೮. ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಮುಸ್ಲಿಮರ ಪ್ರಾತಿನಿಧ್ಯ

ಸರ್ಕಾರಿ, ಅರೆಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ಮುಸ್ಲಿಮರ ಉದ್ಯೋಗಗಳ ಪ್ರಾತಿನಿಧ್ಯ ಕಡಿಮೆಯಾಗಲು ಕಾರಣವನ್ನು ಅಧ್ಯಯನಗಳು ಗುರುತಿಸುವಂತೆ ಮುಸ್ಲಿಮರಿಗೆ ನೌಕರಿಗಳು ಸಿಗಲಾರಂಭಿಸಿದ್ದು ೧೯ನೇ ಶತಮಾನದ ಕೊನೆಯ ಭಾಗದಲ್ಲಿ. ಸ್ವತಂತಪೂರ್ವದಲ್ಲಿ ಜನಪ್ರಿಯವಾಗಿದ್ದ ನೌಕರಿಗಳು ಸ್ವಾತಂತ್ರ್ಯ ನಂತರ ಕುಂಠಿತಗೊಂಡವು. ಆದರೆ ಇಂದು ಭೀಕರ ಸ್ವರೂಪ ಪಡೆದಿದ್ದು ಮುಸ್ಲಿಮರು ಸರ್ಕಾರಿ ನೌಕರಿ ದೊರೆಯದ ನಿಕೃಷ್ಟ ಸ್ಥಿತಿಯನ್ನು ತಲುಪಿದ್ದಾರೆ. ಶಿಕ್ಷಣದ ಕೊರತೆ ಮತ್ತು ಉನ್ನತ ಶಿಕ್ಷಣ ಪಡೆಯಲು ಬೇಕಾದ ಆರ್ಥಿಕ ಸಾಮರ್ಥ್ಯ ಇಲ್ಲದಿರುವುದು ಇದರ ಮುಖ್ಯ ಕಾರಣವಾಗಿದೆ. ಮುಸ್ಲಿಮರು ಉತ್ತಮ ಜೀವನ, ಸಂಸ್ಕೃತಿ, ಅನ್ವೇಷಣಾಶೀಲ ಉಡುಪು, ಕಲೆ ಮತ್ತು ಕುಶಲತೆ ಹಾಗೂ ಉದಾರವಾದಿ ಆತಿಥ್ಯದ ಲಕ್ಷಣ ಹೊಂದಿದ್ದು ಉಳಿತಾಯ, ಹೂಡುವಿಕೆ, ಆರ್ಥಿಕ, ವಾಣಿಜ್ಯ ಮತ್ತು ಹಣಕಾಸು ಸಂಸ್ಥೆಗಳ ಸ್ಥಾಪನೆ ಇವರ ಲಕ್ಷಣವಾಗಿಲ್ಲ[೩೮] ಎನ್ನುವ ಸಂಗತಿಯು ಮುಸ್ಲಿಮರು ಆರ್ಥಿಕವಾಗಿ ಹಿಂದುಳಿಯಲು ಪ್ರಮುಖ ಪಾತ್ರವಹಿಸಿದೆ.

## ೨.೯. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮುಸ್ಲಿಮರು

ಸರ್ಕಾರಗಳು ರೂಪಿಸಿದ ವಿವಿಧ ಅಭಿವೃದ್ಧಿ ಯೋಜನೆಗಳು ಮುಸ್ಲಿಮರನ್ನು ತಲುಪಿಲ್ಲ.[೩೯] ಭಾರತೀಯ ಸಮಾಜದಲ್ಲಿ ಅಸಮಾನತೆ ನಿವಾರಣಾ ಪ್ರಕ್ರಿಯೆಯು ವಿವಾದಾಸ್ಪದ ಸಂಗತಿಯಾಗಿರುವುದು ಅಸಮಾನ ಹಂಚಿಕೆಗೆ ಮುಖ್ಯ ಕಾರಣವಾಗಿದೆ.[೪೦] ಒಂದು ಸಮುದಾಯದ ಒಳಗಿನ ಅಂತರಗಳು ಮತ್ತು ಸೌಕರ್ಯಗಳ ಅಸಮಾನ ಹಂಚಿಕೆಗಳು ಸಮುದಾಯದ ಹಿಂದುಳಿಯುವಿಕೆಗೆ ಮುಖ್ಯ ಕಾರಣವಾಗುತ್ತದೆ. ಆದ್ದರಿಂದ ರಾಷ್ಟ್ರವು ತನ್ನ ಅಭಿವೃದ್ಧಿ ಸಾಧನಾ ಪ್ರಕ್ರಿಯೆಯಲ್ಲಿ ಮತ್ತು ಯೋಜನೆಗಳಲ್ಲಿ ಎಲ್ಲಾ ಧಾರ್ಮಿಕ ಮತ್ತು ಸಾಮಾಜಿಕ ಗುಂಪುಗಳಿಗೆ ಸಮಪಾಲು ಸಿಗುವುದನ್ನು ಖಾತ್ರಿಪಡಿಸಬೇಕು. ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ವಿಶ್ವಾಸಗಳಿಸುವ ಮತ್ತು ಉಳಿಸಿಕೊಳ್ಳುವ ಸರ್ಕಾರಿ ಆಡಳಿತ ನ್ಯಾಯಪರ ಎನಿಸಿಕೊಳ್ಳಲು ಸಾಧ್ಯ.[೪೧] ಆದರೆ ಭಾರತ ವಿಭಜನೆಯ ಕಾಲದಿಂದಲೂ ಕೋಮುವಾದ ಮುಸ್ಲಿಮರನ್ನು ಅಭಿವೃದ್ಧಿ ಪ್ರಕ್ರಿಯೆಯಿಂದ ದೂರವಿರುವಂತೆ ಮಾಡಿದೆ. ವಿಭಜನೆಯ ಕಾಲದಲ್ಲಾದ ಘೋರ ಹತ್ಯಾಕಾಂಡಗಳು ಮುಸ್ಲಿಮರ ಮೇಲೆ ಭೀಕರ ಮಾನಸಿಕ ಪರಿಣಾಮಗಳನ್ನುಂಟು ಮಾಡಿದ್ದು ಆ ಆಘಾತಗಳಿಂದ ಅವರಿಗೆ ಹೊರಬರಲು ಸಾಧ್ಯವಾಗುತ್ತಿಲ್ಲ. ಇಂದಿಗೂ ಕೋಮುವಾದವನ್ನು ಸ್ಪರ್ಧಾತ್ಮಕವಾಗಿ ಜೀವಂತ ಇಡಲಾಗಿದೆ. ಕೋಮು ಸಂಘರ್ಷ ಮತ್ತು ಗಲಭೆಗಳು ಮುಸ್ಲಿಮರ ಅಭಿವೃದ್ಧಿಯ ನಿಯಂತ್ರಕಗಳೆಂದು ಗ್ರಹಿಸಲಾಗಿದೆ. ಒಂದು ಅಂದಾಜಿನ ಪ್ರಕಾರ ದೇಶದಲ್ಲಿ ಸರಾಸರಿ ೩೦೫ ಗಲಭೆಗಳಾಗುತ್ತಿವೆ. ಇವುಗಳು ಮುಸ್ಲಿಮರಲ್ಲಿ ತಮಗೆ ಸಮಾನ ರಾಜಕೀಯ ಮತ್ತು ಆರ್ಥಿಕ

ಅವಕಾಶಗಳು ಲಭಿಸುವುದಿಲ್ಲ ಹಾಗೂ ತಮ್ಮ ಸಾಮಾಜಿಕ ಸಾಂಸ್ಕೃತಿಕ ಅನನ್ಯತೆಗೆ ಮತ್ತು ಆರ್ಥಿಕ ಭದ್ರತೆಗೆ ಆತಂಕವಿದೆ ಎಂದು ಭಾವಿಸುವಂತೆ ಮಾಡಿವೆ. ಈ ಮನಸ್ಥಿತಿಯು ಮುಸ್ಲಿಮರನ್ನು ಪ್ರಜ್ಞಾಪೂರ್ವಕವಾಗಿ ತಟಸ್ಥರನ್ನಾಗಿಸಿ ಅವರನ್ನು ಚಿಪ್ಪಿನೊಳಗೆ ಅವಿತುಕೊಳ್ಳುವಂತೆ ಮಾಡುವಲ್ಲಿ ಮುಖ್ಯ ಪಾತ್ರ ವಹಿಸಿದೆ.[೪೨] ಮುಸ್ಲಿಮರ ಹಿಂದುಳಿಯುವಿಕೆಗೆ ಅವರ ಸಾಮಾಜಿಕ ಸಾಂಸ್ಕೃತಿಕ ಅಂಶಗಳಾದ ಸಂಪ್ರದಾಯ ಬದ್ಧತೆ, ಸಂಪ್ರದಾಯಪಾಲನೆ, ಸೃಜನೇತರ ಅನಭಿವ್ಯಕ್ತತೆ, ಅತೀಯಾದ ದೈವಭಕ್ತಿ ಮುಂತಾದವುಗಳು ಕೂಡ ಪ್ರಮುಖ ಕಾರಣವೆಂದು ಆರೋಪಿಸಲಾಗುತ್ತಿದೆ. ಅವರು ವಾಸ್ತವಿಕ ಸಮಸ್ಯೆಗಳನ್ನು ಸುಧಾರಣೆ ಮಾಡಿಕೊಳ್ಳುವ ಬದಲಾಗಿ ಪುರಾತನ ಸಂಪ್ರದಾಯ ಗಳನ್ನು ರಕ್ಷಿಸಿಕೊಳ್ಳುವ ಒಗ್ಗಟ್ಟಿನ ಸಮುದಾಯವಾಗಿ ಬದುಕುತ್ತಿದೆ ಎಂದು ವಿಶ್ಲೇಷಿಸಲಾಗುತ್ತಿದೆ ಮತ್ತು ಅವರಿಗೆ ನೀಡಿದ 'ಅಲ್ಪಸಂಖ್ಯಾತ' ಸ್ಥಾನವು ಅವರನ್ನು ಮುಖ್ಯವಾಹಿನಿಯಿಂದ ಪ್ರತ್ಯೇಕ ಗೊಳಿಸಿಕೊಳ್ಳುವಂತೆ ಮಾಡಿದೆ ಎಂದು ವಾದಿಸಲಾಗುತ್ತಿದೆ.[೪೩] ಈ ಎಲ್ಲಾ ಕಾರಣಗಳಿಂದಾಗಿ ಮುಸ್ಲಿಮರು ಮೂಲ ಸೌಕರ್ಯಗಳಿಲ್ಲದ, ಆಕರ್ಷಕ ಆದಾಯಗಳಿಲ್ಲದ, ಉಳಿತಾಯ ಸಾಧ್ಯವಾಗದ ಸಮುದಾಯ ವಾಗಿದೆ. ಸರ್ಕಾರದ ಸೌಕರ್ಯಗಳು ದೊರೆಯದಿದ್ದರೂ, ಇವರನ್ನು ಸರ್ಕಾರಗಳು ತುಷ್ಟೀಕರಿಸುತ್ತಿವೆ ಎನ್ನುವ ಹುಸಿ ಆರೋಪಗಳು ಬಲಗೊಳ್ಳುತ್ತಿವೆ. ಮುಸ್ಲಿಮರ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಹಿಂದುಳಿಯುವಿಕೆಯು ಕಾಲ್ಪನಿಕವಲ್ಲ. ಭಾರತ ಸರ್ಕಾರ ಗೋಪಾಲಸಿಂಗ್ ಉನ್ನತಾಧಿಕಾರ ಸಮಿತಿ ನೇಮಕ ಮಾಡುವ ಸಂದರ್ಭದಲ್ಲಿ "ಕೇಂದ್ರ, ರಾಜ್ಯ ಸರ್ಕಾರಗಳ ವಿವಿಧ ಆರ್ಥಿಕ ನೀತಿಗಳು ನಿಜವಾಗಿಯೂ ಅಲ್ಪಸಂಖ್ಯಾತರು, ಪರಿಶಿಷ್ಟಜಾತಿ, ಪಂಗಡ ಮತ್ತು ದುರ್ಬಲ ವರ್ಗಗಳಿಗೆ ಮುಟ್ಟುತ್ತಿಲ್ಲ ಎಂಬ ಭಾವನೆ ದೃಢವಾಗಿದೆ" ಎಂದು ಒಪ್ಪಿಕೊಂಡಿದೆ.[೪೪] ಈ ಸಮಿತಿಯು ದೇಶದ ೮೦ ಜಿಲ್ಲೆಗಳ ಮಾಹಿತಿಯನ್ನು ಆಧರಿಸಿ ಮುಸ್ಲಿಮರನ್ನು ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳೊಂದಿಗೆ ಹೋಲಿಸಿ ಅಧ್ಯಯನ ಕೈಗೊಂಡಿತ್ತು. ೧೪ನೇ ಜೂನ್ ೧೯೮೩ರಲ್ಲಿ ಸಲ್ಲಿಸಿದ ವರದಿಯಲ್ಲಿ "ಈ ಸಮುದಾಯಗಳಲ್ಲಿ ತಮ್ಮನ್ನು ತಾರತಮ್ಯಕ್ಕೆ ಗುರಿಪಡಿಸಲಾಗಿದೆ ಎಂಬ ಭಾವನೆಯು ಬೇರೂರಿದೆ. ಇವರು ದೇಶದ ಮುಖ್ಯವಾಹಿನಿಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂಬುದು ಸಮಿತಿಯ ಉದ್ದೇಶವಾಗಿದ್ದು ಅವರಲ್ಲಿನ ಅಸಹಾಯಕ ಭಾವನೆಯನ್ನು ಅಮೂಲಾಗ್ರವಾಗಿ ಕಿತ್ತುಹಾಕಬೇಕೆಂದು"ಆಗ್ರಹಿಸಿತ್ತು. ಮುಂದುವರೆದು ವರದಿ ಹೇಳಿರುವಂತೆ "ಸಾಮಾನ್ಯ ಗ್ರಹಿಕೆಯ ಪ್ರಕಾರ ಭಾರತದ ಆರ್ಥಿಕಾಭಿವೃದ್ಧಿಯು ಬಹುಸಂಖ್ಯಾತ ಮುಸ್ಲಿಮರನ್ನು ಪ್ರಭಾವಗೊಳಿಸಿಲ್ಲ. ಸತತ ಪಂಚವಾರ್ಷಿಕ ಯೋಜನೆಗಳ ನಂತರವೂ ಅವರ ಸ್ಥಿತಿ ಹಿಂದಿಗಿಂತಲೂ ನಿಕೃಷ್ಟವಾಗಿದೆ. ದುರದೃಷ್ಟಕರ ಸಂಗತಿ ಎಂದರೆ ಈ ಸಮುದಾಯವನ್ನು ಏಕಾಂಗಿಯಾಗಿ ಮಾಡಲಾಗಿದೆ ಅವರ ಕೆಲವೇ ನಾಯಕರು ಮಾತ್ರ ಆರ್ಥಿಕವಾಗಿ ಮುಂದುವರೆಯಲು ಸಹಾಯ ನೀಡಿದ್ದಾರೆ." ಎಂದು ಸರಿಯಾಗಿಯೇ ಗುರುತಿಸಿದೆ.[೪೫]

## ೨.೧೦. ಕರ್ನಾಟಕದ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳು

೧೯೯೪ರಲ್ಲಿ ಅಲ್ಪಸಂಖ್ಯಾತರ ಆಯೋಗದ ಉನ್ನತಾಧಿಕಾರ ಸಮಿತಿಯು ಕರ್ನಾಟಕದ ಮುಸ್ಲಿಮರ ಸಾಮಾಜಿಕ ಆರ್ಥಿಕ, ಶೈಕ್ಷಣಿಕ ಸ್ಥಿತಿಗಳ ಬಗ್ಗೆ ವರದಿ ನೀಡುವ ಮೊದಲು ಮುಸ್ಲಿಮರ ಸ್ಥಿತಿಗಳ ಸಮಗ್ರ ಚಿತ್ರಣ ತಿಳಿದುಬಂದಿರಲಿಲ್ಲ. ಕೆಲವು ಅಧ್ಯಯನಗಳ ಮೂಲಕ ಸ್ಥೂಲ ಚಿತ್ರಣ ಮಾತ್ರ ಕಂಡುಬಂದಿತ್ತು. ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆಯು ಬೆಂಗಳೂರು ನಗರದಲ್ಲಿ ಕೈಗೊಂಡ ಅಧ್ಯಯನದ ಪ್ರಕಾರ ನಗರದಲ್ಲಿ ಮುಸ್ಲಿಮರು ಒಂದು ವಿದ್ಯಾರ್ಥಿ ಕಾಲೇಜ್, ಎರಡು ವಿದ್ಯಾರ್ಥಿನಿಯರ ಕಾಲೇಜ್, ಎರಡು ಇಂಜಿನಿಯರಿಂಗ್, ಆರು ಪ್ರೌಢಶಾಲೆಗಳು ಹಾಗೂ ಸುಮಾರು ನೂರು ನರ್ಸರಿ ಮತ್ತು ಪ್ರಾಥಮಿಕ ಶಾಲೆಗಳನ್ನು ನಡೆಸುತ್ತಿದ್ದು ಮುಸ್ಲಿಮರು ಉತ್ತಮ ಶೈಕ್ಷಣಿಕ ಸೌಲಭ್ಯಗಳನ್ನು ಹೊಂದಿದ್ದಾರೆ. ಆದರೆ ಇತರ ಭಾಗದ ಮುಸ್ಲಿಮರು ಶೈಕ್ಷಣಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.[೬೬] ೧೯೯೪ರ ಅಲ್ಪಸಂಖ್ಯಾತರ ಆಯೋಗದ ಉನ್ನತಾಧಿಕಾರ ಸಮಿತಿಯು ತನ್ನ ವಿಸ್ತೃತ ವರದಿಯಲ್ಲಿ ಮುಸ್ಲಿಮರ ಶೈಕ್ಷಣಿಕ, ಆರ್ಥಿಕ ಸ್ಥಿತಿಗಳನ್ನು ತಿಳಿಸಿದೆ. ಸಮಿತಿಯ ಅಂಕಿ ಅಂಶಗಳ ಪ್ರಕಾರ ಅತೀ ಹೆಚ್ಚು ಶೇ.೩೮.೦೫ರಷ್ಟು ಮುಸ್ಲಿಮರು ಕೇವಲ ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಶೇ.೯.೦೬ ರಷ್ಟು ಎಸ್.ಎಸ್.ಎಲ್.ಸಿ., ಶೇ.೨.೧೯ರಷ್ಟು ಪದವಿಪೂರ್ವ ಶಿಕ್ಷಣವನ್ನು, ಶೇ.೧.೧೨ರಷ್ಟು ಪದವಿ ಶಿಕ್ಷಣವನ್ನು ಮತ್ತು ಕೇವಲ ಶೇ.೦.೧೨ರಷ್ಟು ಮಾತ್ರ ವೃತ್ತಿಪರವಲ್ಲದ ಸ್ನಾತಕೋತ್ತರ ಪದವಿ ಪಡೆದವರು ಕಂಡುಬರುತ್ತಾರೆ. ಶೇ.೦.೮೯ರಷ್ಟು ವೃತ್ತಿಪರ ತಾಂತ್ರಿಕ ಪದವಿಗಳನ್ನು ಪಡೆದವರು ಕಂಡುಬರುತ್ತಾರೆ. ಅವರಲ್ಲಿ ಶೇ.೦.೨೩ರಷ್ಟು ಇಂಜಿನಿಯರಿಂಗ್, ಶೇ.೦.೧೫ರಷ್ಟು ಡೆಂಟಲ್ ಮತ್ತು ಶೇ.೦.೦೩ರಷ್ಟು ಎಂ.ಬಿ.ಬಿ.ಎಸ್ ಪದವಿ ಪಡೆದ ಮುಸ್ಲಿಮರು ಕಂಡುಬರುತ್ತಾರೆ. ಅದೇ ಪ್ರಕಾರ ಕೇವಲ ಶೇ.೦.೦೫ರಷ್ಟು ಮಾತ್ರ ಪಿಎಚ್.ಡಿ ಪದವಿ ಪಡೆದವರು ಕಂಡುಬರುತ್ತಾರೆ. ಈ ಅಂಕಿ ಅಂಶಗಳು ಶೈಕ್ಷಣಿಕವಾಗಿ ಮುಸ್ಲಿಮರು ಹಿಂದುಳಿದಿರುವುದನ್ನು ಸ್ಪಷ್ಟಪಡಿಸುತ್ತದೆ. ಮುಸ್ಲಿಮರಲ್ಲಿ ಅನಕ್ಷರಸ್ಥರು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಪಡೆದವರು ಮಾತ್ರ ಅಧಿಕವಾಗಿದ್ದು, ಪದವಿ ಹಂತದ ಹಾಗೂ ವೃತ್ತಿಪರ ಶಿಕ್ಷಣ ಪಡೆದವರ ಪ್ರಮಾಣ ಅತಿ ಕಡಿಮೆ ಇರುವುದು ಕಂಡುಬರುತ್ತದೆ.[೬೭]

## ೨.೧೧. ಕರ್ನಾಟಕದ ಮುಸ್ಲಿಮರ ಆರ್ಥಿಕ ಸ್ಥಿತಿಗಳು

ಇಡೀ ಭಾರತದ ಮುಸ್ಲಿಮರಂತೆಯೇ ಕರ್ನಾಟಕದ ಮುಸ್ಲಿಮರೂ ಕೂಡ ಆರ್ಥಿಕವಾಗಿ ಹಿಂದುಳಿದಿರುವ ಅಂಶವನ್ನು ಆಯೋಗದ ಉನ್ನತಾಧಿಕಾರ ಸಮಿತಿಯು ತಿಳಿಸಿದೆ. ಈ ವರದಿಯ ಪೂರ್ವದಲ್ಲಿ ಸಲ್ಲಿಸಲಾದ ೧೯೮೫ರ ಅಲ್ಪಸಂಖ್ಯಾತರ ಪ್ರಥಮ ವರದಿಯ ಪ್ರಕಾರ ರಾಜ್ಯದ

ಬಹುತೇಕ ಮುಸ್ಲಿಮರು ಬಡತನ ರೇಖೆಯ ಕೆಳಗೆ ಜೀವಿಸುತ್ತಿದ್ದು, ಅವರ ಆರ್ಥಿಕ ಸ್ಥಿತಿಯು ಪರಿಶಿಷ್ಟ ಜನಾಂಗವನ್ನು ಹೋಲುತ್ತಿದೆ. ಅವರು ಹಳೆಯ ಮಣ್ಣಿನ ಗುಡಿಸಲುಗಳಲ್ಲಿ ವಾಸಿಸುತ್ತಿದ್ದು, ಕರ್ನಾಟಕದ ಬೆಂಗಳೂರು ಸಹಿತ ವಿವಿಧ ಕೊಳಚೆ ಪ್ರದೇಶಗಳಲ್ಲಿ ಮುಸ್ಲಿಮರು ಮತ್ತು ಪರಿಶಿಷ್ಟರೇ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಮುಸ್ಲಿಮರ ಮೊಹಲ್ಲಾಗಳು ನೈರ್ಮಲ್ಯದಿಂದ ವಂಚಿತವಾಗಿವೆ. ಜಿ ತಿಮ್ಮಯ್ಯ ವರದಿ ಮತ್ತು ಓ. ಚಿನ್ನಪ್ಪರೆಡ್ಡಿ ವರದಿಗಳ ಪ್ರಕಾರ ಆರ್ಥಿಕ ಸ್ಥಿತಿಯಲ್ಲಿ ಮುಸ್ಲಿಮರು ಅನುಸೂಚಿತ ಜಾತಿಗಳ ಸ್ಥಾನದಲ್ಲಿದ್ದು ಅವರು ಆರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ರಾಜ್ಯದ ಮುಸ್ಲಿಮರ ಸಮಗ್ರ ಸ್ಥಿತಿಗಳು ಕಂಡುಬಂದದ್ದು ೧೯೯೫ರ ರಹಮಾನ್ ಖಾನ್ ವರದಿಯಲ್ಲಿ. ಈ ವರದಿಯ ಅಂಕಿ ಅಂಶಗಳ ಪ್ರಕಾರ ನಗರಗಳ ಕೊಳಚೆ ಪ್ರದೇಶಗಳಲ್ಲಿ ವಾಸಿಸುವವರಲ್ಲಿ ಶೇ೨೨.೪೨ರಷ್ಟು ಅಲ್ಪಸಂಖ್ಯಾತ ಸಮುದಾಯಗಳಿವೆ. ಅವರಲ್ಲಿ ಶೇ.೧೮.೭೮ರಷ್ಟು ಕುಟುಂಬಗಳು ಮುಸ್ಲಿಮರಾಗಿದ್ದಾರೆ. ಉದ್ಯೋಗಕ್ಕಾಗಿ ಗ್ರಾಮೀಣ ಪ್ರದೇಶಗಳಿಂದ ವಲಸೆ ಬಂದು ಕನಿಷ್ಠ ವೇತನ ಆಧಾರಿತ ಉದ್ಯೋಗಗಳನ್ನು ಅವಲಂಬಿಸಿರುವುದು ಅವರನ್ನು ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆಸುವಂತೆ ಮಾಡಿದೆ.[೪೮] ಆದಾಯವು ವ್ಯಕ್ತಿಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ನಿರ್ಧರಿಸುವ ಮುಖ್ಯ ಸೂಚಿಯಾಗಿದೆ. ಆಯೋಗವು ಮುಸ್ಲಿಮರ ವಿವಿಧ ಆದಾಯ ಮಟ್ಟವನ್ನು ಆಧರಿಸಿ ಗುಂಪುಗಳಾಗಿ ವರ್ಗೀಕರಿಸಿದೆ. ಆಯೋಗದ ಅಂಕಿ-ಅಂಶಗಳಲ್ಲಿ ಗುರುತಿಸುವಂತೆ ಶೇ.೩೧ರಷ್ಟು ಕುಟುಂಬಗಳು ವಾರ್ಷಿಕ ೩,೬೦೦ ರೂ.ಗಳ ಆದಾಯವನ್ನು ಹೊಂದಿದ್ದು, ಕೇವಲ ಶೇ.೨೯ರಷ್ಟು ಕುಟುಂಬಗಳು ಮಾತ್ರ ವಾರ್ಷಿಕ ೧೦,೦೦೧ರೂ. ಗಿಂತ ಅಧಿಕ ಆದಾಯವನ್ನು ಹೊಂದಿದ್ದಾರೆ. ಶೇ.೨೪ರಷ್ಟು ಕುಟುಂಬಗಳು ವಾರ್ಷಿಕ ೩,೬೦೧ ರಿಂದ ೬,೦೦೦ರೂ.ಗಳ ಆದಾಯ ಹೊಂದಿದ್ದಾರೆ. ಉಳಿದ ಶೇ.೧೬ರಷ್ಟು ಕುಟುಂಬಗಳು ೬೦೦೧ ರಿಂದ ೧೦,೦೦೦ ರೂ. ವರೆಗಿನ ಆದಾಯವನ್ನು ಹೊಂದಿದ್ದಾರೆ. ಆದಾಯ ಗುಂಪುಗಳು ಜಿಲ್ಲಾವಾರು ಕಂಡುಬರುವಂತೆ ೬,೦೦೦ ರೂ.ಗಳಿಗಿಂತ ಕಡಿಮೆ ಆದಾಯ ಹೊಂದಿರುವ ಅತಿ ಹೆಚ್ಚು ಮುಸ್ಲಿಂ ಕುಟುಂಬಗಳು ಶೇ.೬೪.೬೭ ರಷ್ಟು ಬೀದರ್ ಜಿಲ್ಲೆಯಲ್ಲಿ ಕಂಡುಬಂದರೆ. ವಾರ್ಷಿಕ ೧೦,೦೦೧ ರೂ.ಗಿಂತ ಹೆಚ್ಚು ಆದಾಯ ಇರುವ ಮುಸ್ಲಿಮ್ ಕುಟುಂಬಗಳು ಶೇ.೪೭.೧೫ರಷ್ಟು ಬೆಂಗಳೂರು ನಗರ ಜಿಲ್ಲೆಯಲ್ಲಿ ಕಂಡುಬಂದಿದ್ದು ಅದು ಮೊದಲ ಸ್ಥಾನದಲ್ಲಿದೆ.[೪೯] ರೆಹಮಾನ್ ಖಾನ್ ವರದಿಯ ಅಂಕಿ-ಅಂಶಗಳ ಪ್ರಕಾರ ಕಂಡುಬರುವಂತೆ ಒಟ್ಟು ಮುಸ್ಲಿಮರಲ್ಲಿ ಶೇ.೧೪.೧೨ರಷ್ಟು ಮುಸ್ಲಿಮರು ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಅದರಲ್ಲಿ ಶೇ.೩.೭೪ರಷ್ಟು ವ್ಯವಸಾಯಗಾರರು, ಶೇ.೮.೨೦ರಷ್ಟು ಕೃಷಿ ಕಾರ್ಮಿಕರು, ಶೇ.೦.೨ರಷ್ಟು ಹೈನುಗಾರಿಕೆ, ಶೇ.೦.೧೧ರಷ್ಟು ಕೋಳಿಸಾಕಾಣಿಕೆ, ಶೇ.೦.೧೬ರಷ್ಟು ಮೀನುಗಾರಿಕೆ ಮತ್ತು ಉಳಿದ ಶೇ.೧.೬೫ರಷ್ಟು ಇತರೆ ಕೆಲಸಗಳಲ್ಲಿ ತೊಡಗಿರುವುದು ತಿಳಿದುಬರುತ್ತದೆ. ಹಾಗೆಯೇ ಶೇ.೪.೮೭ರಷ್ಟು ಮುಸ್ಲಿಮರು ಕೈಗಾರಿಕಾ ಸಂಬಂಧಿ ಚಟುವಟಿಕೆಗಳಲ್ಲಿ

ನಿರತರಾಗಿದ್ದಾರೆ. ಅಂಕಿ ಅಂಶಗಳಿಂದ ಸ್ಪಷ್ಟಗೊಳ್ಳುವ ಸಂಗತಿಯೆಂದರೆ ಮುಸ್ಲಿಮರಲ್ಲಿ ಅತೀ ಕಡಿಮೆ ಭೂಮಾಲೀಕರಿದ್ದು ಬಹುತೇಕರು ಕೃಷಿ ಕಾರ್ಮಿಕರಾಗಿಯೇ ಜೀವನ ನಿರ್ವಹಿಸುತ್ತಿರುವುದು ತಿಳಿದು ಬರುತ್ತದೆ.೫೦ರಾಷ್ಟ್ರೀಯ ಮಟ್ಟದಲ್ಲಿ ಉದ್ಯೋಗ ಪಡೆದಿರುವ ಮುಸ್ಲಿಮರ ಪ್ರಮಾಣ ಅತೀ ಕಡಿಮೆಯಾಗಿರುವುದು ಕಂಡುಬಂದಿದೆ.

ಕರ್ನಾಟಕದಲ್ಲೂ ಇವರ ಸ್ಥಿತಿ ಭಿನ್ನವಾಗಿಲ್ಲ. ಸರ್ಕಾರಿ ನೌಕರಿಗಳಲ್ಲಿ ಒಟ್ಟು ಶೇ.೧.೨೬ರಷ್ಟು ಮುಸ್ಲಿಮರು ಮಾತ್ರ ಪ್ರಾತಿನಿಧ್ಯ ಪಡೆದಿದ್ದಾರೆ. ಅದರಲ್ಲಿ 'ಎ' ಗುಂಪಿನ ಹುದ್ದೆಗಳಲ್ಲಿ ಶೇ.೪.೭ರಷ್ಟು, 'ಬಿ' ಗುಂಪಿನ ಹುದ್ದೆಗಳಲ್ಲಿ ಶೇ.೫.೧ರಷ್ಟು, ಶೇ.೯.೩ರಷ್ಟು 'ಸಿ' ಗುಂಪಿನ ಹುದ್ದೆಗಳಲ್ಲಿ ಮತ್ತು ಶೇ.೬.೦ರಷ್ಟು 'ಡಿ' ಗುಂಪಿನ ಹುದ್ದೆಗಳಲ್ಲಿ ಮುಸ್ಲಿಮರು ಕಾರ್ಯನಿರ್ವಹಿಸುತ್ತಿದ್ದಾರೆ. ಅಂಕಿ-ಅಂಶಗಳು ಸ್ಪಷ್ಟಪಡಿಸುವಂತೆ ಮುಸ್ಲಿಮರು 'ಸಿ' ಗುಂಪಿನ ಹುದ್ದೆಗಳಲ್ಲಿ ಅಧಿಕ ಪ್ರಮಾಣದಲ್ಲಿದ್ದು, 'ಡಿ' ಗುಂಪಿನ ಹುದ್ದೆಗಳಲ್ಲಿ ಇವರ ಪ್ರಾತಿನಿಧ್ಯ ಕಡಿಮೆಯಾಗಿರುವುದು ಆತಂಕಕಾರಿ ಸಂಗತಿಯಾಗಿದೆ. ಉಳಿದಂತೆ ಶೇ.೧.೧೧ರಷ್ಟು ಖಾಸಗೀ ವಲಯದಲ್ಲಿ, ಶೇ.೧.೪೭ರಷ್ಟು ಸಾರಿಗೆ ಸಂಬಂಧಿ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಶೇ.೦.೨೯ರಷ್ಟು ಅಗಸ ಮತ್ತು ಕ್ಷೌರಿಕ ವೃತ್ತಿಗಳಲ್ಲಿ, ಶೇ.೧.೨೮ರಷ್ಟು ಟೇಲರಿಂಗ್, ಬಡಿಗ, ಮೇಸ್ತ್ರಿ ಮತ್ತು ಮೆಕಾನಿಕ್ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಇವರಲ್ಲಿ ಶೇ.೩.೪೮ರಷ್ಟು ಕೂಲಿ ಕಾರ್ಮಿಕರಿದ್ದಾರೆ. ಆಯೋಗದ ಸಮೀಕ್ಷೆಯಿಂದ ಸ್ಪಷ್ಟಗೊಳ್ಳುವ ಸಂಗತಿ ಎಂದರೆ, ಮುಸ್ಲಿಮರು ಭೂರಹಿತ ಕೃಷಿ ಕಾರ್ಮಿಕರಾಗಿ, ಕೈಗಾರಿಕೆ ಮತ್ತು ಖಾಸಗೀ ವಲಯದಲ್ಲಿ ಕನಿಷ್ಠ ವೇತನದ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಸರ್ಕಾರದ 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಲ್ಲಿ ಕನಿಷ್ಠ ಪ್ರಾತಿನಿಧ್ಯ ಪಡೆದಿದ್ದು, ಬಹುತೇಕರು ಕೂಲಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ. ಉದ್ಯೋಗದ ಈ ಸ್ವರೂಪವು ಅವರ ಆರ್ಥಿಕ ಮತ್ತು ಸಾಮಾಜಿಕ ಜೀವನದ ಮೇಲೆ ದುಷ್ಪ ಪರಿಣಾಮ ಬೀರಿದೆ. ವಾರ್ಷಿಕ ೬,೦೦೦ ರೂ. ಗಳಿಗಿಂತ ಕಡಿಮೆ ಆದಾಯ ಹೊಂದಿರುವ ಕುಟುಂಬಗಳು ಮುಸ್ಲಿಮರಲ್ಲಿ ಅತೀ ಹೆಚ್ಚಾಗಿರುವುದು ಇದಕ್ಕೆ ಪ್ರಮುಖ ಸಾಕ್ಷಿಯಾಗಿದೆ.[೫೧]

## ೨.೧೨. ಕರ್ನಾಟಕ ಅಲ್ಪಸಂಖ್ಯಾತ ಆಯೋಗದ ವರದಿ ೧೯೯೪

ಕರ್ನಾಟಕ ಅಲ್ಪಸಂಖ್ಯಾತ ಆಯೋಗವು ೧೯೯೪ರ ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ವರದಿಯಲ್ಲಿ ಮುಸ್ಲಿಮರ ಶೈಕ್ಷಣಿಕ ಸ್ಥಿತಿಯನ್ನು ಬಿಂಬಿಸಲಾಗಿದೆ. ಈ ವರದಿಯ ಪ್ರಕಾರ ಕರ್ನಾಟಕದ ಒಟ್ಟು ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಮುಸ್ಲಿಮರು ಬೌದ್ಧರ ನಂತರ ಅತ್ಯಂತ ಕನಿಷ್ಠ ಪ್ರಮಾಣದ (೫೨%) ಸಾಕ್ಷರತೆಯನ್ನು ಹೊಂದಿದ ಸಮುದಾಯವಾಗಿದೆ. ಹಾಗೆಯೇ ಕೇವಲ ಶೇ.೩೭.೬೭ರಷ್ಟು ಮುಸ್ಲಿಮರು ಪ್ರಾಥಮಿಕ ಶಿಕ್ಷಣವನ್ನು (ಏಳನೇಯ ತರಗತಿಯವರೆಗೆ) ಪಡೆದವರಿದ್ದು, ಶೇ.೧೮.೩೩ರಷ್ಟು ಮುಸ್ಲಿಮರು ನಂತರದ ಶಿಕ್ಷಣ ಪಡೆದವರಾಗಿದ್ದಾರೆ. ಅದರಲ್ಲಿ

ಎಸ್.ಎಸ್.ಎಲ್.ಸಿ ಶಿಕ್ಷಣ ಪಡೆದವರು ಶೇ.೯.೦೬ರಷ್ಟು, ಪದವಿ ಪೂರ್ವ ಶಿಕ್ಷಣ ಪಡೆದವರು ಶೇ.೨.೧೯ ರಷ್ಟು, ಪದವಿ ಮತ್ತು ತಾಂತ್ರಿಕ ವೃತ್ತಿಪರ ಶಿಕ್ಷಣ ಪಡೆದವರು ಶೇ.೦.೨೧, ಪದವಿ ಹಂತದ ಶಿಕ್ಷಣ ಪಡೆದವರು ಶೇ.೧.೨೨, ವೃತ್ತಿಪರ ಪದವಿ ಪಡೆದವರು ಶೇ.೦.೧೯, ಎಂ.ಬಿ.ಬಿ.ಎಸ್ ಶಿಕ್ಷಣ ಪಡೆದವರು ಶೇ.೦.೦೩, ಬಿ.ಡಿ.ಎಸ್ ಪದವಿ ಪಡೆದವರು ಶೇ.೦.೧೫, ಇಂಜಿನೀಯರಿಂಗ್ ಪದವಿಧರರು ಶೇ.೦.೧೩, ವೃತ್ತಿಪರವಲ್ಲದ ಸ್ನಾತಕೋತ್ತರ ಪದವಿ ಪಡೆದವರು ಶೇ.೦.೦೧ ಮತ್ತು ಪಿಎಚ್.ಡಿ ಪದವಿ ಪಡೆದವರು ಶೇ.೦.೦೫ರಷ್ಟು ಕಂಡುಬರುತ್ತಾರೆ. ಉನ್ನತ ಪದವಿಗಳನ್ನು ಪಡೆದವರ ಪ್ರಮಾಣವನ್ನು ಅವಲೋಕಿಸಿದರೆ ಬಹುತೇಕ ಮುಸ್ಲಿಮರು ಪ್ರಾಥಮಿಕ ಹಂತದ ಶಿಕ್ಷಣವನ್ನು ಪೂರೈಸಿದ ನಂತರ ತಮ್ಮ ವ್ಯಾಸಂಗವನ್ನು ಮೊಟಕುಗೊಳಿಸುತ್ತಾರೆ ಎಂಬ ಸತ್ಯಾಂಶ ನಮ್ಮ ಗಮನಕ್ಕೆ ಬರುತ್ತದೆ. ಹಾಗಾದರೆ ಬಾಲ್ಯದಲ್ಲಿಯೇ ಶಾಲೆ ತೊರೆಯುವ ಮಕ್ಕಳು ಎಲ್ಲಿ ತೊಡಗಿಕೊಳ್ಳುತ್ತಾರೆ ಎನ್ನುವ ಪ್ರಶ್ನೆ ಉದ್ಭವವಾಗುತ್ತದೆ. ಆಯೋಗದ ಪ್ರಕಟಣೆಯಂತೆ ಶಾಲೆಯಿಂದ ಕಾಲ್ತೆರೆದ ಮಕ್ಕಳು ವಿವಿಧ ಉದ್ಯೋಗಗಳಲ್ಲಿ ತೊಡಗಿಕೊಳ್ಳುತ್ತಾರೆ. ಹೀಗಾಗಿ ಕರ್ನಾಟಕದ ಮುಸ್ಲಿಂ ಅಲ್ಪಸಂಖ್ಯಾತರಲ್ಲಿ ಶೇ.೬.೬ರಷ್ಟು ಮಕ್ಕಳು ಬಾಲಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಈ ಕಾರಣದಿಂದ ಕೇವಲ ಶೇ.೧೫.೧೦ರಷ್ಟು ಇತರೆ ಕಾರಣಗಳಿಗಾಗಿ ಶಾಲೆ ಬಿಟ್ಟವರು, ಶೇ.೭೦.೯ರಷ್ಟು ಮುಸ್ಲಿಮರು ಕೌಟುಂಬಿಕ ಬಡತನದಿಂದಾಗಿಯೇ ತಮ್ಮ ಶಿಕ್ಷಣವನ್ನು ಪ್ರಾಥಮಿಕ ಹಂತದಲ್ಲಿಯೇ ಮೊಟಕುಗಳಿಸುವ ಅಂಶವನ್ನು ಅಲ್ಪಸಂಖ್ಯಾಂತ ಆಯೋಗವು ಪ್ರಕಟಿಸಿದೆ. ಇಲ್ಲಿ ಸ್ಪಷ್ಟಗೊಳ್ಳುವ ಮುಖ್ಯ ಸಂಗತಿಯೆಂದರೆ ಮುಸ್ಲಿಮರು ತಮ್ಮ ಬಡತನದ ಆರ್ಥಿಕದಿಂದಾಗಿ ಹೆಚ್ಚಿನ ಪ್ರಮಾಣದ ಅನಕ್ಷರತೆಯನ್ನು ಅನುಭವಿಸುವಂತಾಗಿದೆ.

### ೨.೧೩. ಕರ್ನಾಟಕದ ಮುಸ್ಲಿಮರ ಆರೋಗ್ಯದ ಸ್ಥಿತಿ

ಕರ್ನಾಟಕ ಅಲ್ಪಸಂಖ್ಯಾತರ ಆಯೋಗದ ವರದಿಯ ಪ್ರಕಾರ ಕರ್ನಾಟಕದ ಒಟ್ಟು ನಗರವಾಸಿ ಮುಸ್ಲಿಮರಲ್ಲಿ ಶೇ ೧೮.೭೮ರಷ್ಟು ಕುಟುಂಬಗಳು ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಕೊಳಚೆ ಪ್ರದೇಶಗಳು ನಗರದ ಅನಧೀಕೃತ ಸೃಷ್ಟಿಗಳೇ ಆಗಿದ್ದು ಇಂತಹ ಕಡೆ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ನಿರೀಕ್ಷಿಸುವುದು ಕಷ್ಟ ಸಾಧ್ಯ. ಇನ್ನೊಂದು ರೀತಿಯಲ್ಲಿ ಇವುಗಳು ವಿವಿಧ ರೋಗಗಳ ಸೃಷ್ಟಿಯ ಕೇಂದ್ರಗಳಾಗಿ ಮಾರ್ಪಡುತ್ತಿವೆ. ಬಹುತೇಕ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಮುಸ್ಲಿಮರು ಹಲವಾರು ರೋಗಗಳಿಂದ ನರಳುತ್ತಿದ್ದಾರೆ. ಆಯೋಗವು ದೃಢೀಕರಿಸುವಂತೆ ಶೇ.೩.೦೪ ರಷ್ಟು ಅಂಧರು, ಶೇ.೧.೧೩ ರಷ್ಟು ಕಿವುಡರು ಹಾಗೂ ಮೂಗರು, ಶೇ.೨.೬ರಷ್ಟು ಪೋಲಿಯೋ ಪೀಡಿತರು, ಶೇ.೪.೫ರಷ್ಟು ಮಾನಸಿಕ ಅಸ್ವಸ್ಥರು, ಶೇ.೨.೭ರಷ್ಟು ಕ್ಯಾನ್ಸರ್ ರೋಗಿಗಳು, ಶೇ೪.೦ರಷ್ಟು ಕ್ಷಯರೋಗಿಗಳು ಮತ್ತು ಶೇ.೨.೭ರಷ್ಟು ಕುಷ್ಟರೋಗಿಗಳು ಕಂಡುಬರುತ್ತಾರೆ. ಕರ್ನಾಟಕದ ಒಟ್ಟು

ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಶೇ.೨೨.೧೨ರಷ್ಟು ವಿವಿಧ ಅಂಗವಿಕಲರು ಕಂಡುಬಂದರೆ ಅದರಲ್ಲಿ ಶೇ.೨೦.೦೭ರಷ್ಟು ಅಂಗವಿಕರಲು ಮುಸ್ಲಿಮರಾಗಿದ್ದಾರೆ. ಒಟ್ಟಾರೆ ಕರ್ನಾಟಕ ಶೇ.೧೦ರಷ್ಟು ಮುಸ್ಲಿಂ ಕುಟುಂಬಗಳು ಒಂದಲ್ಲಾ ಒಂದು ರೀತಿಯ ಆರೋಗ್ಯ ಸಂಬಂಧಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ಆಯೋಗ ಕಂಡುಕೊಂಡಿದೆ.

### ೨.೧೪. ಕರ್ನಾಟಕದ ಮುಸ್ಲಿಮರ ವಸತಿ ಮತ್ತು ಮೂಲಭೂತ ಸೌಕರ್ಯಗಳ ಸ್ಥಿತಿಗಳು

ಕರ್ನಾಟಕದ ಅಲ್ಪಸಂಖ್ಯಾತ ಆಯೋಗವು ಮುಸ್ಲಿಮರ ಆರ್ಥಿಕ ಸ್ಥಿತಿಗಳನ್ನು ತಿಳಿಯಲು ಕುಟುಂಬದ ಆದಾಯ, ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳ ಪ್ರಮಾಣ, ಮುಸ್ಲಿಮರು ವಾಸಿಸುವ ಮನೆಯ ಪ್ರಕಾರಗಳು, ಅವರು ಹೊಂದಿರುವ ಮೂಲಭೂತ ಸೌಕರ್ಯಗಳು, ಕೃಷಿ ಭೂ ಹಿಡುವಳಿಯ ಸ್ವರೂಪ ಮತ್ತು ಕೃಷಿ ಭೂಮಿ ಪ್ರಕಾರಗಳು, ವಿವಿಧ ಉದ್ಯೋಗವಲಯಗಳಲ್ಲಿ ಮುಸ್ಲಿಮರ ಪಾಲುದಾರಿಕೆ ಇವೇ ಮುಂತಾದ ಸೂಚ್ಯಾಂಕಗಳನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕ ಅಲ್ಪಸಂಖ್ಯಾತ ಆಯೋಗದ ವರದಿಯ ಪ್ರಕಾರ ಕರ್ನಾಟಕದಲ್ಲಿ ಶೇ.೭೧ರಷ್ಟು ಮುಸ್ಲಿಂ ಕುಟುಂಬಗಳು ೧೦,೦೦೦ ರೂ. ಗಿಂತ ಕಡಿಮೆ ವಾರ್ಷಿಕ ಆದಾಯವನ್ನು ಹೊಂದಿವೆ. ಹಾಗೆಯೇ ೬,೦೦೦ ರೂಪಾಯಿಗಳ ವಾರ್ಷಿಕ ವರಮಾವನ್ನು ಮಾನದಂಡವನ್ನಾಗಿರಿಸಿಕೊಂಡು ಆಯೋಗವು ಇಡೀ ರಾಜ್ಯದಲ್ಲಿ ಶೇ.೫೫ರಷ್ಟು ಮುಸ್ಲಿಂ ಕುಟುಂಬಗಳು ಬಡತನ ರೇಖೆಗಿಂತ ಕೆಳಗಿರುವ ಸಂಗತಿಗಳನ್ನು ತಿಳಿಸುತ್ತದೆ. ಮುಸ್ಲಿಮರು ವಾಸಿಸುವ ಮನೆಗಳು ಅವರು ಹೊಂದಿರುವ ಮೂಲಭೂತ ಸೌಕರ್ಯಗಳನ್ನು ಮತ್ತು ಅವರ ಕೃಷಿ ಸಂಬಂಧಿ ಮತ್ತು ಇತರ ಸಾಕುಪ್ರಾಣಿಗಳನ್ನು ಹೊಂದಿರುವ ಪ್ರಮಾಣದಿಂದ ಅವರ ಆರ್ಥಿಕ ಸ್ಥಿತಿ ಇನ್ನೂ ಸ್ಪಷ್ಟವಾಗುತ್ತದೆ. ಕೇವಲ ಶೇ.೧೮ರಷ್ಟು ಆರ್.ಸಿ.ಸಿ ಮನೆಗಳನ್ನು ಹೊರತುಪಡಿಸಿ ಶೇ.೮೨ರಷ್ಟು ಮುಸ್ಲಿಂ ಕುಟುಂಬಗಳು ಸುಸಜ್ಜಿತವಲ್ಲದ ಕಚ್ಚಾ ಮನೆಗಳಲ್ಲಿ ವಾಸಿಸುತ್ತಿದ್ದಾರೆ.

ಮನೆಗಳ ಹಿಂದಿರುವ ಒಂದು ವಾಸ್ತವಿಕತೆಯೆಂದರೆ ಮುಸ್ಲಿಮರಲ್ಲಿ ಕೇವಲ ಶೇ.೬.೮ರಷ್ಟು ಕುಟುಂಬಗಳು ಮಾತ್ರ ಸ್ವಂತ ಮನೆಗಳನ್ನು ಹೊಂದಿದ್ದಾರೆ. ಅದೇ ಪ್ರಕಾರ ಕರ್ನಾಟಕದ ಬಹುಸಂಖ್ಯಾತ ಮುಸ್ಲಿಮರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಕೇವಲ ಶೇ.೬೬.೨೨ರಷ್ಟು ಕುಟುಂಬಗಳು ಶೌಚಾಲಯ, ಶೇ.೩೬.೫೫ರಷ್ಟು ವಿದ್ಯುತ್ ಸೌಲಭ್ಯ, ಶೇ.೩೮.೫೫ರಷ್ಟು ಸ್ನಾನ ಗೃಹ ಸೌಲಭ್ಯ, ಶೇ.೩೮.೯೪ರಷ್ಟು ಶುದ್ಧ ಕುಡಿಯುವ ನೀರಿನ ಸೌಲಭ್ಯ, ಶೇ.೮೭.೧೭ರಷ್ಟು ಚರಂಡಿ ವ್ಯವಸ್ಥೆ ಶೇ.೯೮.೭೩ರಷ್ಟು ಮುಸ್ಲಿಮರು ಮಾತ್ರ ಸೌದೆ ಉರುವಲು ಸೌಲಭ್ಯವನ್ನು ಹೊಂದಿದ್ದಾರೆ. ಕರ್ನಾಟಕ ಅಲ್ಪಸಂಖ್ಯಾತ ಆಯೋಗವು ಪ್ರಕಟಿಸಿರುವ ಭೂಮಿ ಕುರಿತಾದ ಅಂಕಿ-ಅಂಶಗಳು ಮುಸ್ಲಿಮರ ಒಟ್ಟಾರೆ ಆರ್ಥಿಕ ಸ್ಥಿತಿಯನ್ನು ಸ್ಪಷ್ಟಪಡಿಸುತ್ತದೆ. ಕರ್ನಾಟಕದ

ಮುಸ್ಲಿಮರಲ್ಲಿ ಕೇವಲ ಶೇ.೩೨.೭ರಷ್ಟು ಕುಟುಂಬಗಳು ಮಾತ್ರ ಕೃಷಿ ಭೂಮಿಯನ್ನು ಹೊಂದಿವೆ. ಅದರಲ್ಲಿ ಶೇ.೭೯.೨ರಷ್ಟು ಕುಟುಂಬಗಳು ಸಾಧಾರಣಾ ಮತ್ತು ಸಣ್ಣ ಪ್ರಮಾಣದ ಕೃಷಿಭೂಮಿಯನ್ನು ಹೊಂದಿವೆ. ಉಳಿದಂತೆ ಶೇ.೨೦.೮ರಷ್ಟು ಕುಟುಂಬಗಳು ಕಾಲುವೆ, ನದಿ, ಕೆರೆ, ತೆರೆದ ಬಾವಿ, ಕೊಳವೆ ಬಾವಿ ಇವೇ ಮುಂತಾದ ಮೂಲಗಳಿಂದ ತಮ್ಮ ಕೃಷಿಭೂಮಿಗೆ ನೀರಾವರಿ ಸೌಕರ್ಯಗಳನ್ನು ಪಡೆದುಕೊಂಡಿರುತ್ತಾರೆ. ಮಾನವನ ಆರ್ಥಿಕತೆಯನ್ನು ನಿರ್ಧರಿಸುವ ಮತ್ತೊಂದು ಬಹುಮುಖ್ಯ ಅಂಶ ಅವನು ಅವಲಂಬಿಸಿರುವ ಉದ್ಯೋಗ. ಕರ್ನಾಟಕ ಅಲ್ಪಸಂಖ್ಯಾತ ಆಯೋಗದ ವರದಿಯ ಪ್ರಕಾರ ಕರ್ನಾಟಕದಲ್ಲಿ ಅತ್ಯಂತ ಕನಿಷ್ಠ ಪ್ರಮಾಣದ ಅಂದರೆ ಶೇ.೧.೨೬ರಷ್ಟು ಮುಸ್ಲಿಮರು ಮಾತ್ರ ಸರ್ಕಾರಿ ಹುದ್ದೆಗಳನ್ನು ಹೊಂದಿದ್ದಾರೆ.ಬಹುಸಂಖ್ಯಾತರು ಕೂಲಿ ಆಧಾರಿತ ಕುಶಲ ಕೆಲಸಗಳಲ್ಲಿ ಮತ್ತು ಉಳಿದಂತೆ ಕನಿಷ್ಟ ಲಾಭ ತರುವ ಚಿಲ್ಲರೆ ವ್ಯಾಪಾರದಲ್ಲಿ ತೊಡಗಿರುವುದು ಕಂಡುಬರುತ್ತದೆ. ಚಿಲ್ಲರೆ ವ್ಯಾಪಾರಗಳಲ್ಲಿ ತೊಡಗಿರುವ ಮುಸ್ಲಿಂಮರಲ್ಲಿ ಶೇ.೦.೪ರಷ್ಟು ಬೀದಿ ಮಾರಾಟಗಳಲ್ಲಿ ಮತ್ತು ಶೇ.೦.೩ರಷ್ಟು ಸಗಟು ವ್ಯಾಪಾರಗಳಲ್ಲಿ ತೊಡಗಿರುತ್ತಾರೆ.[೫೦] ಒಟ್ಟಾರೆ ಕರ್ನಾಟಕದ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿರುವ, ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಹೊಂದಿರದ ಸರ್ಕಾರ ಕೊಡಮಾಡುವ ಸೌಲಭ್ಯಗಳಿಂದಲೂ ವಂಚಿತವಾದ, ಆರ್ಥಿಕ ಸಂಸ್ಥೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಲು ಸಾಮರ್ಥ್ಯವಿಲ್ಲದ ಸಮುದಾಯವಾಗಿ ಜೀವಿಸುತ್ತಿದ್ದಾರೆ.

### ೨.೧೫. ಬೆಳಗಾವಿ ನಗರದ ಮುಸ್ಲಿಮರ ಸಮಾಜೋ-ಆರ್ಥಿಕ ಸ್ಥಿತಿಗಳು

ಪ್ರಸ್ತಾವನೆ ಅಧ್ಯಾಯದ ಅಧ್ಯಯನದ ವಿಧಾನದಲ್ಲಿ ಬೆಳಗಾವಿ ನಗರದ ಮುಸ್ಲಿಮರ ನಮೂನೆಯ ಆಯ್ಕೆಯ ವಿಧಾನವನ್ನು ವಿವರವಾಗಿ ತಿಳಿಸಲಾಗಿದೆ. ೧೧೭ ಬೆಳಗಾವಿ ನಗರದ ಮುಸ್ಲಿಂ ಪೋಷಕರನ್ನು ಆಯ್ದುಕೊಳ್ಳಲಾಗಿದೆ. ಹೀಗೆ ಆಯ್ದುಕೊಂಡ ಬೆಳಗಾವಿ ನಗರದ ಒಟ್ಟು ಮುಸ್ಲಿಮರಲ್ಲಿ ಗಾಂಧಿನಗರದಲ್ಲಿ ೭೧ (ಶೇ.೬೦.೭ ರಷ್ಟು) ಕುಟುಂಬಗಳು, ಕ್ಯಾಂಪ್ ಪ್ರದೇಶದಲ್ಲಿ ೨೨ (ಶೇ.೧೮.೮ ರಷ್ಟು) ಮತ್ತು ಆಜಂ ನಗರದಲ್ಲಿ ೨೪ (ಶೇ.೨೦.೫ ರಷ್ಟು) ಕುಟುಂಬಗಳು ಕಂಡುಬರುತ್ತವೆ. ಬೆಳಗಾವಿ ನಗರದ ಈ ಮೂರು ಪ್ರದೇಶಗಳಲ್ಲಿ ಕ್ಷೇತ್ರ ಅಧ್ಯಯನವನ್ನು ಕೈಗೊಂಡು, ಪೋಷಕರನ್ನು ಸಂದರ್ಶಿಸಿ ಬೆಳಗಾವಿ ನಗರದ ಮುಸ್ಲಿಮರ ಸಮಾಜೋ-ಆರ್ಥಿಕ ಸ್ಥಿತಿಗಳನ್ನು ಕಂಡುಕೊಳ್ಳಲಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಮಾಪನ ಮಾಡಲು ಒಟ್ಟು ಆರು ಸೂಚಿಗಳನ್ನು ಬಳಸಲಾಗಿದೆ. ಕುಟುಂಬದ ಸ್ವರೂಪ ಮತ್ತು ಶಿಕ್ಷಣವನ್ನು ಸಾಮಾಜಿಕ ಸೂಚಿಗಳಾಗಿ ವಿಶ್ಲೇಷಿಸಲಾಗಿದೆ. ಉದ್ಯೋಗ, ಕುಟುಂಬದ ಒಟ್ಟು ದುಡಿಮೆಗಾರರು, ಕುಟುಂಬದಲ್ಲಿರುವ ನಿರುದ್ಯೋಗಿಗಳು, ಕುಟುಂಬದ ಒಟ್ಟು ಆದಾಯವನ್ನು ಆರ್ಥಿಕ ಸೂಚಿಗಳಾಗಿ ಬಳಸಿ ವಿಶ್ಲೇಷಿಸ

ಲಾಗಿದೆ. ಇದರ ಜೊತೆಗೆ ಬೆಳಗಾವಿ ನಗರದ ಮುಸ್ಲಿಮರು ಎದುರಿಸುತ್ತಿರುವ ಮೂಲಭೂತ ಸೌಕರ್ಯಗಳ ಕೊರತೆಗಳನ್ನು ಕಂಡುಕೊಳ್ಳಲಾಗಿದೆ.

**೧. ಸಾಮಾಜಿಕ ಸ್ಥಿತಿ**

**೧. ಕುಟುಂಬ ಸ್ವರೂಪ:** ಒಂದೇ ಕುಟುಂಬದ ಎರಡು ಮೂರು ತಲೆಮಾರಿಗೆ ಸೇರಿದವರು ತಮ್ಮ ಹೆಂಡತಿ ಮಕ್ಕಳೊಂದಿಂಗೆ ಒಂದೇ ಸೂರಿನ ಅಡಿಯಲ್ಲಿ ಬದುಕುವುದನ್ನು ಅವಿಭಕ್ತ ಕುಟುಂಬ ವ್ಯವಸ್ಥೆ ಎಂದು ವ್ಯಾಖ್ಯಾನಿಸಲಾಗುತ್ತದೆ. ಗಂಡ ಹೆಂಡತಿ ತಮ್ಮ ಮಕ್ಕಳೊಂದಿಗೆ ವಾಸಿಸುವ ಕುಟುಂಬಗಳನ್ನು ವಿಭಕ್ತ ಕುಟುಂಬಗಳೆಂದು ಕರೆಯಲಾಗುತ್ತಿದೆ. ಸಾಮಾನ್ಯವಾಗಿ ವಿಭಕ್ತ ಕುಟುಂಬಗಳ ಸದಸ್ಯರ ಸಂಖ್ಯೆ ಕಡಿಮೆ ಇರುತ್ತದೆ. ಇಸಾಬೆಲ್ ಆ್ಯಂಡ್ ಡೇವಿಡ್ ಕ್ರುಕ್ ಅವರ ಅಧ್ಯಯನದ ಪ್ರಕಾರ  ಅವಿಭಕ್ತ ಕುಟುಂಬಗಳು ಕೃಷಿ ಆಧಾರಿತ ಸಮಾಜದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಕೃಷಿಯಲ್ಲಿ ತೊಡಗಿಕೊಳ್ಳಲು ಇದರಿಂದ ಅನುಕೂಲವಾಗುತ್ತದೆ ಎಂಬ ನಂಬುಗೆಯು ಇನ್ನು ಗ್ರಾಮೀಣ ಭಾಗಗಳಲ್ಲಿ ಜೀವಂತವಾಗಿದೆ.[೫೨] ಅವಿಭಕ್ತ ಕುಟುಂಬಗಳ ಸಂಖ್ಯೆ ಇಳಿಮುಖವಾಗುತ್ತಿದ್ದು ಆರ್ಥಿಕ ಅಭಿವೃದ್ಧಿ ಇದರ ಮುಖ್ಯಕಾರಣವೆನ್ನಲಾಗಿದೆ. ಹೆಚ್ಚಿನ ಆದಾಯಗಳಿಸುವ ಅವಕಾಶಗಳು ಹೆಚ್ಚಾದಂತೆ ಯುವಕರು ಹೆಚ್ಚು ಸ್ವತಂತ್ರರಾಗಲು ಬಯಸುತ್ತಾರೆ. ಕ್ಷೇತ್ರ ಕಾರ್ಯದಿಂದ ಪಡೆದ ಅಂಕಿ ಅಂಶಗಳನ್ನು ಕೋಷ್ಟಕ-೧ರಲ್ಲಿ ತೋರಿಸಲಾಗಿದ್ದುಇದರ ಪ್ರಕಾರ ಬೆಳಗಾವಿ ನಗರದಲ್ಲಿ ಶೇ.೪೩.೫ ರಷ್ಟು ಕುಟುಂಬಗಳು ಅವಿಭಕ್ತ ಕುಟುಂಬಗಳಿವೆ ಮತ್ತು ಶೇ.೫೬.೫ ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳಾಗಿವೆ. ಸ್ವಯಂ ನಿರ್ಧಾರದ ಬಯಕೆ, ಸಂಪ್ರದಾಯವಾದಿ ಹಿರಿಯರು, ಭಿನ್ನಮತ, ಪ್ರತಿಫಲಗಳನ್ನು ನೇರವಾಗಿ ಅನುಭವಿಸುವ ಅಧಿಕಾರ ಮುಂತಾದ ಕಾರಣಗಳಿಗಾಗಿ ವಿಭಕ್ತ ಕುಟುಂಬ ವ್ಯವಸ್ಥೆ ಅಧಿಕವಾಗುತ್ತಿದೆ. ಮ್ಯಾಕ್ಸ್‌ವೆಬರ್ ಗುರುತಿಸಿದ ಮೇಲ್‌ರಚನೆಯ ಅಂಶಗಳನ್ನು ಹಿಡಿದು ಆಧುನಿಕ ಸಮಾಜದ ಗುಣಗಳನ್ನು ಅದರ ಹಿಂದಿನ ಸಮಾಜದ ಗುಣಗಳಿಗೆ ಹೋಲಿಸಿ ಸಾಮಾಜಿಕ ಪರಿವರ್ತನೆಯ ಥಿಯರಿಗಳನ್ನು ಪ್ರಾರಂಭಿಸಿದವರಲ್ಲಿ ಟಾಲ್‌ಕಾಟ್ ಪಾರ್ಸನ್ ಮುಖ್ಯರಾದವರು. ಈತನ ಪ್ರಕಾರ ಸಂಬಂಧ ಆಧಾರಿತ ವ್ಯವಹಾರದ ಬದಲಾಗಿ ಒಪ್ಪಂದ ಆಧಾರಿತ ವ್ಯವಹಾರ, ವ್ಯವಹಾರದಲ್ಲಿ ಹಣದ ಬಳಕೆ, ಅವಿಭಕ್ತ ಕುಟುಂಬಗಳು ಸಡಿಲಗೊಂಡು ವಿಭಕ್ತಕುಟುಂಬಗಳ ರಚನೆ, ಸಹಭಾಳ್ವೆಗಿಂತ ಸ್ಪರ್ಧಾತ್ಮಕ ಬದುಕಿಗೆ ಒತ್ತು. ಸಮುದಾಯಕ್ಕಿಂತ ವ್ಯಕ್ತಿ ಪ್ರಧಾನ ವ್ಯವಸ್ಥೆಗೆ ಪ್ರಾಧಾನ್ಯತೆ ಇವೇ ಮುಂತಾದುವುಗಳು ಆಧುನಿಕ ಸಾಮಾಜದ ಲಕ್ಷಣಗಳಾಗಿವೆ.[೫೩] ಕೋಷ್ಟಕ-೨ರಲ್ಲಿ ಕಂಡುಬರುವಂತೆ ರೆಹಮಾನ್‌ಖಾನ್ ವರದಿ ಗುರುತಿಸುವಂತೆ ಮುಸ್ಲಿಮರಲ್ಲಿ ೬ಕ್ಕಿಂತ ಹೆಚ್ಚು ಜನ ವಾಸಿಸುವ ಕುಟುಂಬಗಳ ಪ್ರಮಾಣ ಶೇ.೪೯.೫೭ರಷ್ಟಿವೆ. ಬೆಳಗಾವಿ ನಗರದಲ್ಲಿ ಶೇ.೪೧ ರಷ್ಟು ಕುಟುಂಬಗಳಲ್ಲಿ ೬ಕ್ಕಿಂತ ಹೆಚ್ಚು ಜನ ವಾಸಿಸುವುದು ಕಂಡು

ಬರುತ್ತದೆ. ರಾಜ್ಯದ ಮುಸ್ಲಿಮರ ಪ್ರಮಾಣಕ್ಕೆ ಹೋಲಿಸಿದರೆ ಬೆಳಗಾವಿ ನಗರದಲ್ಲಿ ಇದರ ಪ್ರಮಾಣ ಕಡಿಮೆ ಕಂಡುಬರುತ್ತದೆ.

**೨. ಸಾಕ್ಷರತೆ:** ಸಾಕ್ಷರತೆಯನ್ನು ಮಾನವ ಅಭಿವೃದ್ಧಿಯ ಪ್ರಮುಖ ನಿರ್ಧಾರಿತ ಅಂಶವೆಂದು ಪರಿಗಣಿಸಲಾಗಿದೆ. ಇದು ಜನರ ಸಾಮರ್ಥ್ಯ, ತನ್ಮೂಲಕ ಅವರ ಆಯ್ಕೆಯನ್ನು ವಿಸ್ತರಿಸುತ್ತದೆ. ಸಾಕ್ಷರತೆ ಜನತೆಗೆ ಓದಲು ಮತ್ತು ಬರೆಯಲು ಸಮರ್ಥರಾಗುವಂತೆ ಮಾಡುವುದರ ಜೊತೆಗೆ ಬದುಕು ಮತ್ತು ಸಾವಿಗೆ ಸಂಬಂಧಿಸಿದ ವಿಷಯಗಳ ಮೇಲೂ ಪರಿಣಾವನ್ನುಂಟು ಮಾಡುತ್ತದೆ.[೫೪] ಅಭಿವೃದ್ಧಿಯನ್ನು ಹಲವಾರು ರೀತಿಗಳಲ್ಲಿ ವ್ಯಾಖ್ಯಾನಿಸಲಾಗುತ್ತಿದೆ ಮತ್ತು ಮಾಪನ ಮಾಡಲಾಗುತ್ತಿದೆ. ಮಾನವಮುಖಿ ಅಭಿವೃದ್ಧಿಯೇ ವರ್ತಮಾನದಲ್ಲಿ ಚಾಲ್ತಿಯಲ್ಲಿರುವ ಅಭಿವೃದ್ಧಿಯ ವ್ಯಾಖ್ಯಾನವಾಗಿದೆ. ಇದರಲ್ಲಿ ಇಡೀ ವ್ಯವಸ್ಥೆಯನ್ನು ಬದಲಾಯಿಸುವ ಪ್ರಯತ್ನವಿಲ್ಲ. ಬದಲಾಗಿ ವ್ಯಕ್ತಿಯ ಪರಿವರ್ತನೆಗೆ ಮಹತ್ವನೀಡಲಾಗುತ್ತದೆ. ಉತ್ತಮ ಆರೋಗ್ಯ, ಶಿಕ್ಷಣ ಮತ್ತು ಯಾವುದಾದರೂ ಒಂದು ಕೆಲಸದಲ್ಲಿ ಪರಿಣಿತಿ ಪಡೆದರೆ ವ್ಯಕ್ತಿಯೊಬ್ಬನ ಬದುಕುವ ಸಾಧ್ಯತೆ ಸಕಾರಾತ್ಮಕವಾಗಿ ಬದಲಾಗಬಹುದೆನ್ನುವ ಗ್ರಹಿಕೆ ಇಲ್ಲಿದೆ.[೫೫] ವಿಶ್ವಸಂಸ್ಥೆಯ ಘೋಷಣೆ (೧೯೪೮)ಯಲ್ಲಿ ಆಹಾರ ಮತ್ತು ನೀರಿನ ಜೊತೆಗೆ ಶಿಕ್ಷಣವನ್ನೂ ಸಹ ಮೂಲಭೂತ ಹಕ್ಕೆಂದು ಗುರುತಿಸಲಾಗಿದೆ. ಇದು ಮೂಲಭೂತವಾದ ಮತ್ತು ವಿಶೇಷವಾದ ಕೌಶಲ್ಯವನ್ನು ಒದಗಿಸುವುದರಿಂದ ಹೆಚ್ಚಿನ ಉತ್ಪಾದಕತೆ ಹಾಗೂ ಹೆಚ್ಚಿನ ತಲಾವಾರು ಆದಾಯವನ್ನು ದೃಢಪಡಿಸಿಕೊಳ್ಳುವ ಮೂಲಕ ಆರ್ಥಿಕ ಬೆಳವಣಿಗೆಯನ್ನು ಸಾಧ್ಯವಾಗಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಾಗರೀಕರಿಗೆ ತಮ್ಮ ಜೀವನದ ಹಾಗೂ ಹಕ್ಕುಗಳ ಬಗ್ಗೆ ಸರಿಯಾದ ಆಯ್ಕೆಮಾಡುವಲ್ಲಿ ಶಕ್ತಿ ನೀಡುತ್ತದೆ. ಶಿಕ್ಷಣವು ಮುಖ್ಯವಾಗಿ ಮಹಿಳೆಯರಿಗೆ ತಿಳುವಳಿಕೆಯನ್ನು ಮತ್ತು ಕೆಲಸಮಾಡುವ ಸಾಮರ್ಥ್ಯವನ್ನು ಅದರೊಂದಿಗೆ ಸ್ವಾತಂತ್ರ್ಯ ಹಾಗೂ ಆತ್ಮಸಮಾನದ ಯೋಗ್ಯತೆಯ ಭಾವನೆಯನ್ನು ಹೆಚ್ಚಿಸುತ್ತದೆ. ಲಿಂಗಸಂಬಂಧಿ ನ್ಯಾಯಕ್ಕೆ ಉತ್ತಮ ಉತ್ತೇಜನ ದೊರಕುತ್ತದೆ ಎಂದು ಗ್ರಹಿಸಲಾಗುತ್ತಿದೆ.[೫೬] ಕುರಿಯನ್ ಎನ್.ಜೆ.[೫೭] ಪ್ರಕಾರ ಶಿಕ್ಷಣ ಪಡೆದವರ ಸಂಖ್ಯೆಯಲ್ಲಿನ ಹೆಚ್ಚಳವು ಆ ಪ್ರದೇಶದ ಅಭಿವೃದ್ಧಿಯನ್ನು ಸೂಚಿಸುತ್ತದೆ. ಇದು ೧೯೯೪ ರ ರೆಹಮಾನ್‌ಖಾನ್ ಸಮಿತಿ ಗುರುತಿಸಿರುವಂತೆ ರಾಜ್ಯದ ಮುಸ್ಲಿಮರ ಸಾಕ್ಷರತೆ ಪ್ರಮಾಣ ಶೇ.೫೩ರಷ್ಟಿದೆ. ೨೦೧೧ರ ಜನಗಣತಿಯ ಪ್ರಕಾರ ಕೋಷ್ಟಕ-೩ರಲ್ಲಿ ಕಂಡುಬರುವಂತೆ ಕರ್ನಾಟಕ ರಾಜ್ಯದ ಸಾಕ್ಷರತೆಯ ಪ್ರಮಾಣ ಶೇ೭೫.೩೬ ರಷ್ಟಿದ್ದು ಅದರಲ್ಲಿ ಪುರುಷರ ಸಾಕ್ಷರತೆ ಶೇ.೮೨.೮೫ರಷ್ಟು, ಶೇ.೬೮.೧೩ರಷ್ಟು ಮಹಿಳೆಯರ ಸಾಕ್ಷರತೆ ಕಂಡುರುತ್ತದೆ ಕೋಷ್ಟಕದಲ್ಲಿ ಕಂಡುಬರುವಂತೆ, ಕರ್ನಾಟಕ ಒಟ್ಟಾರೆ ಸಾಕ್ಷರತೆಯಲ್ಲಿ ೯ನೇ ಸ್ಥಾನದಲ್ಲಿದ್ದು, ಮಹಿಳಾ ಸಾಕ್ಷರತೆಯಲ್ಲಿ ಕೇರಳ, ದೆಹಲಿ, ಮಹಾರಾಷ್ಟ್ರ, ತಮಿಳುನಾಡು, ಪಂಜಾಬ್, ಪಶ್ಚಿಮಬಂಗಾಳ ಮತ್ತು ಗುಜರಾತ್

ನಂತರ ಕರ್ನಾಟಕ ೮ನೇ ಸ್ಥಾನದಲ್ಲಿದೆ.ಬೆಳಗಾವಿ ಜಿಲ್ಲೆಯ ಸಾಕ್ಷರತೆ ಶೇ.೭೩.೪೮ ರಷ್ಟಿದ್ದು ಜಿಲ್ಲೆಯ ಪುರುಷರ ಸಾಕ್ಷರತೆ ಶೇ.೮೨.೨೦ ರಷ್ಟು, ಮಹಿಳೆಯರ ಸಾಕ್ಷರತೆ ಶೇ.೬೪.೫೮ ರಷ್ಟಿದೆ. ಬೆಳಗಾವಿ ಜಿಲ್ಲೆಯು ಸಾಕ್ಷರತೆಯಲ್ಲಿ ರಾಜ್ಯದಲ್ಲಿ ೧೭ನೇ ಸ್ಥಾನವನ್ನು ಪಡೆದುಕೊಂಡು ನಿರಾಶೆ ಮೂಡಿಸುತ್ತದೆ. ಕ್ಷೇತ್ರ ಅಧ್ಯಯನದಲ್ಲಿ ಕಂಡುಬರುವಂತೆಬೆಳಗಾವಿ ನಗರದ ಮುಸ್ಲಿಮರ ಒಟ್ಟು ಸಾಕ್ಷರತೆ ಪ್ರಮಾಣ ಕೇವಲ ಶೇ.೬೮ ರಷ್ಟು ದಾಖಲಾಗಿದೆ. ಬೆಳಗಾವಿ ನಗರದ ಪುರುಷರ ಸಾಕ್ಷರತೆ ಶೇ.೫೮.೧ ರಷ್ಟಿದ್ದು ಮಹಿಳೆಯರ ಸಾಕ್ಷರತೆ ಶೇ.೪೨ ರಷ್ಟು ಕಂಡುಬರುತ್ತದೆ.

**೩. ಸಾಕ್ಷರತೆಯಲ್ಲಿ ಪುರುಷ–ಮಹಿಳೆ ಅಸಮಾನತೆ:** ರಾಜ್ಯದ ಮತ್ತು ಜಿಲ್ಲಾವಾರು ಪುರುಷ–ಮಹಿಳೆಯರ ಸಾಕ್ಷರತೆ ಪ್ರಮಾಣದಲ್ಲಿ ಅಸಮಾನತೆಗಳು ಕಂಡುಬರುತ್ತವೆ. ಪುರುಷರಿಗೆ ಹೋಲಿಸಿದರೆ ಮಹಿಳೆಯರು ಅಸಮಾನತೆ ಅನುಭವಿಸುತ್ತಿರುವ ಕ್ಷೇತ್ರವೆಂದರೆ ಸಾಕ್ಷರತೆ. ಇಂದಿಗೂ ಅಸಮಾನತೆಗಳು ಜಾರಿಯಲ್ಲಿವೆ. ಮಹಿಳಾ ಸಶಕ್ತೀಕರಣ, ಪ್ರಜನನ ಪ್ರಮಾಣ, ಸ್ಥೂಲ ಜನನ ಪ್ರಮಾಣ, ಮಾತೃ ಮರಣ ಇತ್ಯಾದಿಗಳ ಮೇಲೆ ಈ ಅಸಮಾನತೆ ಪರಿಣಾಮ ಬೀರುತ್ತದೆ.[೫೮] ಮಾನವ ಅಭಿವೃದ್ಧಿ ಅಧ್ಯಯನಗಳು ಸಬಲೀಕರಣವನ್ನು ಮೂರು ಸೂಚ್ಯಾಂಕಗಳಿಂದ ಆಳೆಯಲಾಗುತ್ತದೆ.ಅವುಗಳೆಂದರೆ ಪಂಚಾಯತ್ ರಾಜ್ಯ ಸಂಸ್ಥೆಗಳಲ್ಲಿ ಮತ್ತು ನಗರ ಸ್ಥಳಿಯ ಸಂಸ್ಥೆಗಳಲ್ಲಿ ಪುರುಷ ಮತ್ತು ಸ್ತ್ರಿ ಚುನಾಯಿತ ಪ್ರತಿನಿಧಿಗಳ ಪ್ರಮಾಣ, ೦–೬ ವಯಸ್ಸಿನ ಮಕ್ಕಳಲ್ಲಿ ಬಾಲಕರು ಮತ್ತು ಬಾಲಕಿಯರ ಪ್ರಮಾಣ ಹಾಗೂ ಸಾಕ್ಷರತೆಯಲ್ಲಿ ಪುರುಷರು ಮತ್ತು ಮಹಿಳೆಯರ ಪ್ರಮಾಣದ ಮೂಲಕ ಆಳೆಯಲಾಗುತ್ತದೆ. ಮಹಿಳೆಯರ ಸಾಕ್ಷರತೆ ಪ್ರಮಾಣ ಹೆಚ್ಚಾದರೆ ಅಕೆಯ ಸ್ವಾತಂತ್ರ್ಯ ಹೆಚ್ಚಾಗಿ ಪ್ರಶ್ನೆ ಮಾಡುವ ಸಾಮರ್ಥ್ಯ, ಮಾಹಿತಿ ಸಂಗ್ರಹಿಸುವಿಕೆ ಮತ್ತು ಭಾಗವಹಿಸುವಿಕೆ ಅವಕಾಶಗಳು ವಿಸ್ತರಿಸಲ್ಪಡುತ್ತವೆ.[೫೯] ಅದರೇ ಬೆಳಗಾವಿ ನಗರದ ಮುಸ್ಲಿಂ ಸಮುದಾಯದಲ್ಲಿ ಸಾಕ್ಷರತೆ ಪ್ರಮಾಣದಲ್ಲಿ ಪುರುಷ ಮತ್ತು ಮಹಿಳೆಯರ ನಡುವಿನ ಅಸಮಾನತೆಗಳು ತೀವ್ರವಾಗಿರುವುದು ಕಂಡುಬರುತ್ತದೆ.ಕೋಷ್ಟಕ–೩ರ ಪ್ರಕಾರ ೨೦೧೧ ರಲ್ಲಿ ಬೆಳಗಾವಿ ನಗರದಲ್ಲಿ ಒಟ್ಟು ಸಾಕ್ಷರತೆ ಶೇ.೭೩.೪೮ರಷ್ಟಿದ್ದು ಅದರಲ್ಲಿ ಶೇ.೮೨.೨೦ ರಷ್ಟು ಪುರುಷರ ಮತ್ತು ಶೇ.೬೪.೫೮ ರಷ್ಟು ಮಹಿಳಾ ಸಾಕ್ಷರತೆ ಇದೆ. ಕ್ಷೇತ್ರ ಅಧ್ಯಯನದಲ್ಲಿ ಕಂಡುಕೊಂಡಿರುವಂತೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಒಟ್ಟು ಶೇ.೬೮ ರಷ್ಟು ಸಾಕ್ಷರತೆ ಇದ್ದು ಅದರಲ್ಲಿ ಪುರುಷರ ಸಾಕ್ಷರತೆ ಶೇ.೫೮.೧ ರಷ್ಟು ಮತ್ತು ಶೇ.೪೨ ಮುಸ್ಲಿಂ ಮಹಿಳಾ ಸಾಕ್ಷರತೆ ಕಂಡುಬರುತ್ತದೆ.

**೪. ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳ ವಲಯವಾರು ಉದ್ಯೋಗ:** ಇಂದು ಮಾನವ ಅಭಿವೃದ್ಧಿ ವರದಿಗಳು ಪ್ರತಿ ಜಿಲ್ಲೆ ಮತ್ತು ಒಟ್ಟಾರೆ ರಾಜ್ಯದ ಜನತೆಯು ವಿವಿಧ ವಲಯವಾರು ಉದ್ಯೋಗಗಳಲ್ಲಿ ಭಾಗವಹಿಸುವ ಪ್ರಮಾಣವನ್ನು ಅಂದಾಜು ಮಾಡುತ್ತಿವೆ. ಬೆಳಗಾವಿ ನಗರದ ಮುಸ್ಲಿಮರ ಕ್ಷೇತ್ರ

ಅಧ್ಯಯನದಲ್ಲಿ ಮುಸ್ಲಿಮರ ವಿವಿಧ ವೃತ್ತಿಗಳಲ್ಲಿ ತೊಡಗಿರುವುದನ್ನು ಕಂಡುಕೊಳ್ಳಲಾಗಿದೆ.೪ನೇ ಕೋಷ್ಟಕದಲ್ಲಿ ಕಂಡುಬರುವಂತೆ, ಒಟ್ಟು ಮುಸ್ಲಿಮರಲ್ಲಿ ಶೇ.೨೯ ರಷ್ಟು ಕೂಲಿ ಕಾರ್ಮಿಕರು, ಶೇ.೯.೪ ರಷ್ಟು ಸಣ್ಣ ವ್ಯಾಪಾರಿಗಳು, ಶೇ.೧೯ ರಷ್ಟು ಸ್ವಯಂ ಉದ್ಯೋಗದಲ್ಲಿ ನಿರತರಾಗಿರುವವರು, ಶೇ.೩೫ ರಷ್ಟು ಖಾಸಗಿ ಉದ್ಯೋಗದಲ್ಲಿ ನಿರತರಾಗಿರುವವರು ಮತ್ತು ಕೇವಲ ಶೇ.೭.೬ ರಷ್ಟು ಮುಸ್ಲಿಮರು ಸರ್ಕಾರಿ ನೌಕರಿಗಳಲ್ಲಿ ನಿರತರಾಗಿರುವುದು ಕಂಡುಬರುತ್ತದೆ.

**೫. ಮುಸ್ಲಿಂ ಕುಟುಂಬಗಳ ದುಡಿಮೆಗಾರರು ಮತ್ತು ನಿರುದ್ಯೋಗ:** ಬೆಳಗಾವಿ ಜಿಲ್ಲೆಯು ಅತ್ಯುತ್ತಮ ವಾತಾವರಣ, ಉತ್ತಮ ಮಳೆ ಮತ್ತು ಮಣ್ಣನ್ನು ಹೊಂದಿದೆ. ಹಾಗಾಗಿ ಪುರುಷ ಮತ್ತು ಮಹಿಳಾ ಕಾರ್ಮಿಕರಿಗೆ ಅನುಕೂಲಕರ ವಾತಾವರಣವಿದೆ.[೬೦] ಆದರೆ ಈ ಚಿತ್ರಣ ಬೆಳಗಾವಿ ನಗರ ಭಾಗದಲ್ಲಿ ಕಂಡುಬರುವುದಿಲ್ಲ. ಕೋಷ್ಟಕ-೫ ರಲ್ಲಿ ತೋರಿಸಿರುವಂತೆ ಬೆಳಗಾವಿ ನಗರ ಪ್ರದೇಶದಲ್ಲಿ ಶೇ.೫೬.೧೧ ರಷ್ಟು ಪುರುಷರು ಮತ್ತು ಶೇ.೧೫.೦೩ ರಷ್ಟು ಮಹಿಳೆಯರು ಕೆಲಸ ನಿರತರಾಗಿದ್ದಾರೆ. ಆದರೆ ಕ್ಷೇತ್ರ ಅಧ್ಯಯನದಲ್ಲಿ ಕಂಡುಬರುವಂತೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೪೮ ರಷ್ಟು ಪುರುಷರು ಮತ್ತು ಶೇ.೧೪ ರಷ್ಟು ಮಹಿಳೆಯರು ಕೆಲಸ ನಿರತರಾಗಿದ್ದಾರೆ. ಮಹಿಳೆಯರು ಹೆಚ್ಚಾಗಿ ಕುಶಲತೆಯನ್ನು ಬಯಸದ ದಿನಗೂಲಿ, ಕೌಟುಂಬಿಕ ಕೈಗಾರಿಕೆ ಮುಂತಾದವುಗಳಲ್ಲಿ ನಿರತರಾಗಿದ್ದಾರೆ. ಈ ಸಂಗತಿಗಳು ಮಹಿಳೆಯರನ್ನು ಬಡತನದ ಅಧೋಗತಿಗೆ ತಳ್ಳುತ್ತವೆ. ಮುಸ್ಲಿಂ ಮಹಿಳೆಯರ ಸ್ಥಿತಿಯಲ್ಲೂ ಯಾವುದೇ ವ್ಯತ್ಯಾಸಗಳಿಲ್ಲ. ದುಡಿಮೆಯಲ್ಲಿ ಮಹಿಳೆಯರ ಸಹಭಾಗಿತ್ವ ಕಡಿಮೆಯಾಗಿರುವುದರಿಂದ ಒಟ್ಟು ಕುಟುಂಬದ ವರಮಾನವು ಕಡಿಮೆಯಾಗಿರುವ ಸಾಧ್ಯತೆಗಳಿವೆ. ಇದರೊಂದಿಗೆ ಕ್ಷೇತ್ರ ಅಧ್ಯಯನದ ಮೂಲಕ ನಿರುದ್ಯೋಗಿಗಳ ಪ್ರಮಾಣವನ್ನು ಕಂಡುಕೊಳ್ಳಲಾಗಿದೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೯ ರಷ್ಟು ಪುರುಷರು ಮತ್ತು ಶೇ.೩೭ ರಷ್ಟು ಮಹಿಳೆಯರ ನಿರುದ್ಯೋಗಿಗಳಾಗಿದ್ದಾರೆ.ಪ್ರಾದೇಶಿಕ ಅಸಮತೋಲನ ಸಮಿತಿಯು ಜಿಲ್ಲಾವಾರು ನಿರುದ್ಯೋಗ ಅಂಕಿ-ಅಂಶಗಳು ಲಭ್ಯವಿಲ್ಲದಿದ್ದರಿಂದ ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಣಿ ಪ್ರಮಾಣವನ್ನು ನಿರುದ್ಯೋಗದ ಮಾಪನವನ್ನಾಗಿ ಉಪಯೋಗಿಸಿದೆ. ಸ್ವಂತ ಮನೆಗೆಲಸದಲ್ಲಿ ನಿರತರಾದ ಮಹಿಳೆಯರು ವೇತನ ಪಡೆಯುವದಿಲ್ಲ. ಆದ್ದರಿಂದ ಮನೆಗೆಲಸದಲ್ಲಿ ನಿರತರಾದ ಮಹಿಳೆಯರನ್ನು ನಿರುದ್ಯೋಗಿಗಳೆಂದು ಈ ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

**೬. ಕುಟುಂಬದ ಒಟ್ಟು ಆದಾಯ:** ಇಡೀ ಭಾರತದಾದ್ಯಂತ ಮತ್ತು ಕರ್ನಾಟಕದಲ್ಲಿ ಮುಸ್ಲಿಮರು ಆರ್ಥಿಕವಾಗಿ ಅತ್ಯಂತ ಹಿಂದುಳಿದಿರುವುದು ಅಧ್ಯಯನಗಳ ಚರ್ಚೆಯಲ್ಲಿ ಕಂಡುಕೊಳ್ಳಲಾಗಿದೆ. ೧೯೯೫ರ ಕರ್ನಾಟಕದರೆಹಮಾನ್ ಖಾನ್ ವರದಿ ಕಂಡುಕೊಂಡಂತೆ ಕರ್ನಾಟಕದ ಒಟ್ಟು ಶೇ ೩೧ ರಷ್ಟು ಮುಸ್ಲಿಂ ಕುಟುಂಬಗಳು ಕೇವಲ ೩,೬೦೦ ರೂ.ಗಳ ವಾರ್ಷಿಕ ಆದಾಯವನ್ನು, ಶೇ ೨೪ ರಷ್ಟು ಕುಟುಂಬಗಳು ೬೦೦೧ ರೂ.ರಿಂದ ೧೦,೦೦೦ ರೂ. ವರೆಗೆ ಆದಾಯವನ್ನು

ಹೊಂದಿದ್ದಾರೆ ಮತ್ತು ಕೇವಲ ಶೇ ೨೯ ರಷ್ಟು ಮುಸ್ಲಿಂ ಕುಟುಂಬಗಳು ಮಾತ್ರ ೧೦,೦೦೦ ರೂ. ಗಳಿಗಿಂತ ಹೆಚ್ಚು ವಾರ್ಷಿಕ ಆದಾಯವನ್ನು ಹೊಂದಿದ್ದಾರೆ.

ಪ್ರಾಥಮಿಕ ಮಾಹಿತಿಯಲ್ಲಿ ಕಂಡುಬರುವಂತೆ ಕೋಷ್ಟಕ–೬ರಲ್ಲಿತೋರಿಸಿರುವಂತೆ ಪ್ರಾಥಮಿಕ ಮಾಹಿತಿಯ ಪ್ರಕಾರ ಬೆಳಗಾವಿ ನಗರ ಪ್ರದೇಶದಲ್ಲಿ ಮುಸ್ಲಿಮರಲ್ಲಿ ಮೂರು ವರ್ಗದ ಆದಾಯಗಳನ್ನು ಹೊಂದಿರುವವರು ಕಂಡುಬರುತ್ತಾರೆ. ಅಧ್ಯಯನದಲ್ಲಿ ೧೧,೦೦೦ ರೂ ದಿಂದ ೭೦,೦೦೦ ರೂ ವರೆಗೆ ಆದಾಯ ಹೊಂದಿರುವ ಶೇ.೭೭ರಷ್ಟು ಕುಟುಂಬಗಳು ಕಂಡುಬರುತ್ತವೆ. ಈ ಆದಾಯ ಗುಂಪಿನ ಮುಸ್ಲಿಮರನ್ನು ಬಡವರೆಂದು ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.ಬೆಳಗಾವಿ ನಗರದಲ್ಲಿ ೭೦,೦೦೦ ರೂ ಗಳಿದಿಂದ ೧,೩೦,೦೦೦ ರೂ ಆದಾಯ ಹೊಂದಿರುವ ಶೇ.೧೯.೬ ರಷ್ಟು ಕುಟುಂಬಗಳು ಕಂಡುಬರುತ್ತವೆ. ಇವರನ್ನು ಅಧ್ಯಯನದಲ್ಲಿ ಮಧ್ಯಮ ವರ್ಗದವರೆಂದು ಪರಿಭಾವಿಸಿಕೊಳ್ಳಲಾಗಿದೆ.ಅದೇ ಪ್ರಕಾರ ೧,೩೦,೦೦೦ ರೂ ಗಳಿಂದ ೨,೫೦,೦೦೦ ರೂ ಆದಾಯಹೊಂದಿರುವ ಶೇ.೩.೪ ರಷ್ಟು ಕುಟುಂಬಗಳು ಕಂಡುಬಂದಿದ್ದು ಇವರನ್ನು ಶ್ರೀಮಂತರೆಂದು ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.ಒಟ್ಟಾರೆ ಕ್ಷೇತ್ರ ಅಧ್ಯಯನದ ಫಲಿತಗಳು ಹೇಳುವಂತೆ ಬೆಳಗಾವಿ ನಗರದ ಬಹುಸಂಖ್ಯಾತ ಕುಟುಂಬಗಳು ಬಡತನದಲ್ಲಿಯೇ ಜೀವಿಸುತ್ತಿದ್ದಾರೆ.

**೨.೧೬. ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ಕೊರತೆ**

ನಗರಾಭಿವೃದ್ಧಿ ಸೂಚ್ಯಾಂಕವನ್ನು ಮಾನವ ಅಭಿವೃದ್ಧಿ ವರದಿಯಲ್ಲಿ ಪರಿಗಣಿಸಲಾಗುತ್ತಿದೆ. ಭಾರತವು ಅತೀ ನಗರೀಕೃತ ದೇಶವಲ್ಲದಿದ್ದರೂ ೨೦೧೧ ರ ಜನಗಣತಿಯ ಪ್ರಕಾರ ೩೮೧ ಮಿಲಿಯನ್ ಬೃಹತ್ ಜನಸಂಖ್ಯೆಯನ್ನು ಹೊಂದಿರುವುದರಿಂದ ಮೂಲಭೂತ ನಗರ ಸೇವೆಗಳ ಸಮಸ್ಯೆಗಳು ಸೃಷ್ಟಿಯಾಗುತ್ತಿವೆ. ನಗರ ಸಮಸ್ಯೆಗಳಾದ ವಸತಿ ಕೊರತೆ, ಕೊಳಚೆ ಪ್ರದೇಶ, ನೀರಿನ ಕೊರತೆ ಮತ್ತು ಒಳ ಚರಂಡಿಯಂತಹ ಮೂಲಭೂತ ಸಮಸ್ಯೆಗಳು ಎದುರಾಗುತ್ತಿವೆ.[೮೧] ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರವು ವಿವಿಧ ಮೂಲಭೂತ ಸೌಕರ್ಯಗಳ ಸಮಸ್ಯೆಗಳನ್ನು ಎದುರಿಸುತ್ತಿದೆ. ಇದರ ಜೊತೆಗೆ ಬೆಳಗಾವಿ ನಗರದ ಮುಸ್ಲಿಮರು ವಿವಿಧ ಮೂಲಭೂತ ಸೌಕರ್ಯಗಳ ಕೊರತೆಯನ್ನು ಎದುರಿಸುತ್ತಿದ್ದಾರೆ. ಇವುಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.ಮುಸ್ಲಿಮರು ಎದುರಿಸುತ್ತಿರುವ ವಿವಿಧ ಮೂಲಭೂತ ಸೌಕರ್ಯಗಳ ಕೊರತೆಗಳನ್ನು ಕೋಷ್ಟಕ–೭ ರಲ್ಲಿ ತೋರಿಸಲಾಗಿದೆ.

**೧. ವಸತಿ:** ವಸತಿ ಸಮಸ್ಯೆಯು ಎಲ್ಲಾ ನಗರಗಳಲ್ಲಿ ಕಂಡುಬರುವ ಸಾಮಾನ್ಯ ಸಮಸ್ಯೆಯಾಗಿದೆ. ಏಕೆಂದರೆ ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ಜನರ ಬೃಹತ್ ಪ್ರಮಾಣದ ಒಳ ಹರಿವಿನಿಂದಾಗಿ ಈ ಸಮಸ್ಯೆಯು ಗಂಭೀರವಾಗುತ್ತದೆ. ವಸತಿಯ ಕೊರತೆಯಿಂದಾಗಿ ಗಣನೀಯ

ಪ್ರಮಾಣದ ಜನಸಂಖ್ಯೆಯು ಕೊಳಗೇರಿಗಳಲ್ಲಿ ವಾಸಿಸುತ್ತಿದ್ದಾರೆ.[೬೨] ಮನೆಯು ಮಾನವನ ಮೂಲಭೂತ ಅಗತ್ಯವಾಗಿದೆ ಮಳೆ, ಗಾಳಿ, ಬಿಸಿಲು ಇತ್ಯಾದಿ ಬಾಹ್ಯ ಪ್ರಭಾವಗಳಿಂದ ರಕ್ಷಿಸಿಕೊಳ್ಳಲು ಮತ್ತು ಸ್ವಕುಟುಂಬದ ಮುಂದುವರಿಕೆಗೆ ಮನೆ ಅಗತ್ಯವಾಗಿದೆ. ಆದರೆ ಬೆಳಗಾವಿ ನಗರದಲ್ಲಿ ಶೇ.೧೭.೭ ರಷ್ಟು ಕುಟುಂಬಗಳಿಗೆ ಸ್ವಂತ ಮನೆಗಳಿಲ್ಲ. ಆದರೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೧೪.೫ ರಷ್ಟು ಕುಟುಂಬಗಳಿಗೆ ಸ್ವಂತ ಮನೆಗಳಿಲ್ಲ.

೨. **ಕೊಳಚೆ ಪ್ರದೇಶ:** ಇಂದು ನಗರೀಕರಣದ ಜೊತೆಗೆ ಕೊಳೆಗೇರಿಗಳ ಸಂಖ್ಯೆ ಮತ್ತು ಕೊಳೆಗೇರಿ ಜನಸಂಖ್ಯೆಯು ಹೆಚ್ಚಾಗುತ್ತಿದೆ. ೨೦೧೩ ರಲ್ಲಿ ಬೆಳಗಾವಿ ಜಿಲ್ಲೆಯಲ್ಲಿನ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ೧೯೯ ಕೊಳೆಗೇರಿಗಳಿವೆ. ೫೩೬.೦೯ ಎಕರೆ ಪ್ರದೇಶವು ಕೊಳೆಗೇರಿಗಳಿಂದ ಆವರಿಸಲ್ಪಟ್ಟಿದೆ. ಒಟ್ಟು ೧೭,೪೭೩ ಕುಟುಂಬಗಳು ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದಾರೆ.[೬೩] ಬೆಳಗಾವಿ ನಗರದಲ್ಲಿ ಒಟ್ಟು ಶೇ.೧೧.೬೮ ರಷ್ಟು ಜನಸಂಖ್ಯೆ ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದು, ಬೆಳಗಾವಿ ನಗರದ ಮುಸ್ಲಿಮರ ಶೇ.೧೮.೮ ರಷ್ಟು ಜನಸಂಖ್ಯೆ ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದಾರೆ. ಬೆಳಗಾವಿ ನಗರದ ಸರಾಸರಿಗೆ ಹೋಲಿಸಿದರೆ ಅಧಿಕ ಪ್ರಮಾಣದ ಮುಸ್ಲಿಮರು ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದಾರೆ.

೩. **ನೀರಿನ ಪೂರೈಕೆ:** ವಾಸ್ತವಿಕವಾಗಿ ಜಿಲ್ಲೆಯಲ್ಲಿ ಉತ್ತಮ ಮಳೆಯಾಗುತ್ತದೆ. ಇದರಿಂದಾಗಿ ಮೂರು ಮುಖ್ಯ ನದಿಗಳು ಹರಿಯುತ್ತಿದ್ದು, ಅವುಗಳಿಗೆ ಆಣೆಕಟ್ಟನ್ನು ಕಟ್ಟಲಾಗಿದೆ ಆದರೂ ನಗರ ಸ್ಥಳೀಯ ಸಂಸ್ಥೆ ವ್ಯಾಪ್ತಿಯಲ್ಲಿ ವಾಸಿಸುವ ಅರ್ಧಕ್ಕಿಂತ ಹೆಚ್ಚು ಜನರು ನಲ್ಲಿ ನೀರಿನ ಸಂಪರ್ಕವನ್ನು ಹೊಂದಿಲ್ಲ. ಬೆಳಗಾವಿ ನಗರದಲ್ಲಿ ಒಟ್ಟು ಶೇ. ೫೧.೦೯ ರಷ್ಟು ಕುಟುಂಬಗಳು ನಲ್ಲಿ ನೀರಿನ ಸಂಪರ್ಕವನ್ನು ಹೊಂದಿಲ್ಲ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೫೨.೧ ರಷ್ಟು ಕುಟುಂಬಗಳು ನಲ್ಲಿ ನೀರಿನ ಸಂಪರ್ಕವನ್ನು ಹೊಂದಿಲ್ಲ. ನಗರ ಪ್ರದೇಶದ ಸರಾಸರಿಗೆ ಹೋಲಿಸಿದರೆ ಬಹುತೇಕ ಮುಸ್ಲಿಂ ಕುಟುಂಬಗಳು ನಲ್ಲಿ ನೀರಿನ ಸಂಪರ್ಕದ ಕೊರತೆಯನ್ನು ಎದುರಿಸುತ್ತಿದ್ದಾರೆ.[೬೪]

೪. **ಚರಂಡಿ/ಒಳ ಚರಂಡಿ ವ್ಯವಸ್ಥೆ:** ಜಿಲ್ಲೆಯಾದ್ಯಾಂತ ಇರುವ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೇ.೭೫ ರಷ್ಟು ಕುಟುಂಬಗಳು ಚರಂಡಿ ಮತ್ತು ಒಳ ಚರಂಡಿ ವ್ಯವಸ್ಥೆಯನ್ನು ಹೊಂದಿವೆ. ಇದರ ಅರ್ಥ ಪ್ರತಿ ನಾಲ್ಕು ಕುಟುಂಬಗಳಲ್ಲಿ ಒಂದು ಕುಟುಂಬ ಚರಂಡಿ ವ್ಯವಸ್ಥೆಯನ್ನು ಹೊಂದಿಲ್ಲ. ಬೆಳಗಾವಿ ನಗರದ ಶೇ.೧೧.೧೮ ರಷ್ಟು ಕುಟುಂಬಗಳು ಒಳ ಚರಂಡಿ ವ್ಯವಸ್ಥೆಯನ್ನು ಹೊಂದಿಲ್ಲ.[೬೫] ಕ್ಷೇತ್ರ ಅಧ್ಯಯನದ ಪ್ರಕಾರ ಬೆಳಗವಿ ನಗರದ ಒಟ್ಟು ಮುಸ್ಲಿರಲ್ಲಿ ಶೇ.೧೨.೮ ರಷ್ಟು ಮುಸ್ಲಿಂ ಕುಟುಂಬಗಳು ಒಳ ಚರಂಡಿ ವ್ಯವಸ್ಥೆಯನ್ನು ಹೊಂದಿಲ್ಲದಿರುವುದು ಕಂಡುಬರುತ್ತದೆ. ಅಂದರೆ ನಗರದ ಒಟ್ಟು ಸರಾಸರಿಯಲ್ಲಿ ಅಧಿಕ ಸಂಖ್ಯೆಯ ಮುಸ್ಲಿಂ ಕುಟುಂಬಗಳು ಒಳ ಚರಂಡಿಯಂತಹ ಮೂಲಭೂತ ಸೌಕರ್ಯಗಳ ಕೊರತೆಯನ್ನು ಎದುರಿಸುತ್ತಿವೆ.

ಒಟ್ಟಾರೆ ಭಾರತದ ಮತ್ತು ಕರ್ನಾಟಕದ ಮುಸ್ಲಿಮರು ಏಕರೂಪಿ ಸಮುದಾಯವಾಗಿ ಉಳಿದಿಲ್ಲ. ಉತ್ತರ ಭಾರತದ ಮುಸ್ಲಿಮರಲ್ಲಿ ಕಂಡುಬರುವಂತೆ ಅಸ್ಪೃಶ್ಯತೆ ಇಲ್ಲವಾದರೂ ಕರ್ನಾಟಕದಲ್ಲಿ ವಿವಿಧ ಜಾತಿಗಳು ಮತ್ತು ಧಾರ್ಮಿಕ ಗುಂಪುಗಳು ಕಂಡುಬರುತ್ತವೆ. ಮುಸ್ಲಿಮರು ಅತಿಯಾದ ಓಲೈಕೆ ಮತ್ತು ಅತಿಯಾದ ದ್ವೇಷದ ನಡುವೆ ಬದುಕುತ್ತಿರುವಂತೆ ಕಂಡುಬರುತ್ತಾರೆ. ರಾಜಕೀಯ ಕಾರಣಕ್ಕಾಗಿ ಮುಸ್ಲಿಮರ ಭಾವಾನಾತ್ಮಕ ಸಂಗತಿಗಳು ಚರ್ಚೆಯಾಗುತ್ತವೆ. ವಾಸ್ತವಿಕವಾದ ಮುಸ್ಲಿಮರ ಸಮಾಜೋ-ಆರ್ಥಿಕ ಸಂಗತಿಗಳು ಚರ್ಚೆಗೆ ಬರುವುದಿಲ್ಲ. ಭಾರತದ ಸಂವಿಧಾನ ಮುಸ್ಲಿಮರ ಅಭಿವೃದ್ಧಿಗಾಗಿ ವಿಶೇಷ ಅವಕಾಶಗಳನ್ನು ರೂಪಿಸಿದ್ದರೂ ಅವರ ಸ್ಥಿತಿಗಳಲ್ಲಿ ಬದಲಾವಣೆ ಕಂಡುಬಂದಿಲ್ಲ. ಇಂದಿಗೂ ಮುಸ್ಲಿಮರಲ್ಲಿ ಗಣ್ಯರ ಕೊರತೆ, ಕೈಗಾರಿಕ ಮಾಲೀಕರ ಕೊರತೆ, ಭೂ ಮಾಲೀಕರ ಕೊರತೆ, ಸಗಟು ವ್ಯಾಪಾರಿಗಳ ಸಂಖ್ಯೆ ಅತ್ಯಂತ ಕಡಿಮೆ ಕಂಡುಬರುತ್ತದೆ. ರಾಷ್ಟ್ರೀಯ ಮಟ್ಟದಲ್ಲಿ ಉನ್ನತ ಸರ್ಕಾರಿ ನೌಕರಿಗಳಲ್ಲಿ ಅವರ ಪ್ರಾತಿನಿಧ್ಯ ಕಡಿಮೆ ಇದೆ. ಕರ್ನಾಟಕದಲ್ಲಿ ರೆಹಮಾನ್‌ಖಾನ್ ರವರ ವರದಿ ಹೇಳುವಂತೆ ಕರ್ನಾಟಕ ಮುಸ್ಲಿಮರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ಕರ್ನಾಟಕದಲ್ಲೂ ಕೃಷಿ ಭೂಮಿ, ವ್ಯಾಪಾರ, ಕೈಗಾರಿಕೆ ಮತ್ತು ನೌಕರಿಗಳಲ್ಲೂ ಇವರ ಪ್ರಾತಿನಿಧ್ಯ ಕಡಿಮೆ ಇದೆ. ಸಾಮಾಜಿಕವಾಗಿ ಇಂದಿಗೂ ಅವಿಭಕ್ತ ಕುಟುಂಬಗಳಲ್ಲಿ ಹೆಚ್ಚಾಗಿ ಜೀವಿಸುತ್ತಿದ್ದು, ಸಾಕ್ಷರತೆ ಪ್ರಮಾಣವೂ ಕಡಿಮೆ ಇದೆ. ಕರ್ನಾಟಕದ ಮುಸ್ಲಿಮರಲ್ಲಿ ದುಡಿಮೆಗಾರರ ಸಂಖ್ಯೆ ಕಡಿಮೆ ಇದ್ದು, ಇವರ ಒಟ್ಟಾರೆ ಆದಾಯ ಕಡಿಮೆಯಾಗಿದೆ. ಬೆಳಗಾವಿ ನಗರದ ಮುಸ್ಲಿಮರ ಸ್ಥಿತಿ ಇದಕ್ಕಿಂತ ಭಿನ್ನವಾಗಿದೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರ ಕುಟುಂಬ ಸ್ವರೂಪ, ದುಡಿಮೆಗಾರರ ಸಂಖ್ಯೆ ಮತ್ತು ಒಟ್ಟು ಆದಾಯ ಗುಂಪುಗಳ ಸಂಖ್ಯೆ ಅತ್ಯಂತ ಕಡಿಮೆ ಇದೆ. ಬೆಳಗಾವಿ ನಗರದ ಮುಸ್ಲಿಮರು ಮನುಷ್ಯನಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳ ಕೊರತೆಯನ್ನು ಎದುರಿಸುತ್ತಿದ್ದಾರೆ. ಮುಸ್ಲಿಮರಲ್ಲಿ ಬಹಳಷ್ಟು ಕುಟುಂಬಗಳು ಕೊಳೆಗೇರಿ ನಿವಾಸಿಗಳಾಗಿದ್ದು, ಚರಂಡಿ ಮತ್ತು ಒಳ ಚರಂಡಿ ವ್ಯವಸ್ಥೆಯ ಸೌಲಭ್ಯವನ್ನು ಹೊಂದಿಲ್ಲ. ಬೆಳಗಾವಿ ನಗರದ ಬಹಳಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿಲ್ಲದ ಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆ. ಒಟ್ಟಾರೆ ಬೆಳಗಾವಿ ನಗರದ ಮುಸ್ಲಿಮರು ಸಾಮಾಜಿಕವಾಗಿ, ಆರ್ಥಿಕವಾಗಿ ಅತ್ಯಂತ ಹಿಂದುಳಿದವ ರಾಗಿದ್ದು, ಕನಿಷ್ಠ ಮೂಲಭೂತ ಸೌಕರ್ಯಗಳಿಲ್ಲದ ಸಮುದಾಯವಾಗಿ ಜೀವಿಸುತ್ತಿದ್ದಾರೆ.ಬೆಳಗಾವಿ ನಗರದ ಮುಸ್ಲಿಮರ ಶೈಕ್ಷಣಿಕ ಸ್ಥಿತಿ ಉತ್ತಮವಾಗಿಲ್ಲ. ಒಂದು ಸಮುದಾಯ ತಾನು ಬದುಕುತ್ತಿರುವ ಪರಿಸರದಿಂದ ಪ್ರಭಾವಿತ ವಾಗುತ್ತದೆ ಎಂದು ಗ್ರಹಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಮುಂದಿನ ಅಧ್ಯಾಯದಲ್ಲಿ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

## ಕೋಷ್ಟಕ–೧

### ಮುಸ್ಲಿಮರ ಕುಟುಂಬಗಳ ಸ್ವರೂಪ

| ಕ್ರ.ಸಂ | ಕುಟುಂಬಗಳ ಸ್ವರೂಪ | ಬೆಳಗಾವಿ ನಗರ ಕುಟುಂಬಗಳು |
|---|---|---|
| ೧ | ಅವಿಭಕ್ತ ಕುಟುಂಬಗಳು | ೫೧ (೪೩.೫%) |
| ೨ | ವಿಭಕ್ತ ಕುಟುಂಬಗಳು | ೬೬ (೫೬.೫%) |
| | ಒಟ್ಟು | ೧೧೭ (೧೦೦%) |

ಮೂಲ: ೧. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು ೨. ಆವರಣದಲ್ಲಿ ಶೇಕಡವಾರು ಸಂಖ್ಯೆಯನ್ನು ತೋರಿಸಲಾಗಿದೆ.

## ಕೋಷ್ಟಕ–೨

### ಮುಸ್ಲಿಂ ಕುಟುಂಬಗಳಲ್ಲಿ ಸಾಂದ್ರತೆ

| ಕ್ರ.ಸಂ | ರಾಜ್ಯ/ಜಿಲ್ಲೆ/ನಗರ | ಒಂದೇ ಕೊಠಡಿಯಲ್ಲಿ ಆರು ಜನ ವಾಸಿಸುತ್ತಿರುವ ಮುಸ್ಲಿಂ ಕುಟುಂಬಗಳ ಪ್ರಮಾಣ |
|---|---|---|
| ೧ | ಕರ್ನಾಟಕ ರಾಜ್ಯ | ೨೪% |
| ೨ | ಕರ್ನಾಟಕದ ಮುಸ್ಲಿಮರು | ೪೯.೫೭% |
| ೩ | ಬೆಳಗಾವಿ ನಗರದ ಮುಸ್ಲಿಮರು | ೪೧% |

ಮೂಲ: ರಾಜ್ಯದ ಮಾಹಿತಿ : ೧. ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರ ಸಮಿತಿ ಅಂತಿಮ ವರದಿ, ಬೆಂಗಳೂರು, ಕರ್ನಾಟಕಸರ್ಕಾರ ಜೂನ್–೨೦೦೨, ಪು.ಸಂ ೭೧೬ ೨. ರಾಜ್ಯದ ಮಾಹಿತಿ: ರೆಹಮಾನ್‌ಖಾನ್ ವರದಿ, ೧೯೯೫, ಪು.ಸಂ ೫೭ ೩. ಬೆಳಗಾವಿ ನಗರದ ಮಾಹಿತಿ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಲಾಗಿದೆ.

## ಕೋಷ್ಟಕ–೩

### ರಾಜ್ಯ, ಬೆಳಗಾವಿ ಜಿಲ್ಲೆ ಮತ್ತು ನಗರದ ಸಾಕ್ಷರತೆ ವಿವರ

| ಕ್ರ.ಸಂ | ರಾಜ್ಯ/ ಜಿಲ್ಲೆ/ ನಗರ | ಒಟ್ಟು | ಪುರುಷ | ಮಹಿಳೆ |
|---|---|---|---|---|
| ೧ | ಕರ್ನಾಟಕ | ೭೫.೩೫% | ೮೨.೮೨% | ೬೮.೧೩% |
| ೨ | ಬೆಳಗಾವಿ ಜಿಲ್ಲೆ | ೭೩.೪೮% | ೮೨.೨೦% | ೬೪.೫೮% |
| ೩ | ಬೆಳಗಾವಿ ನಗರ ಮುಸ್ಲಿಮರು | ೬೮% | ೫೮.೧% | ೪೨% |

ಮೂಲ: ೧. ಬೆಳಗಾವಿ ತಾಲೂಕು ಮಾಹಿತಿ, ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ೨. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು

ಕೋಷ್ಟಕ ೪

ಬೆಳಗಾವಿ ನಗರದ ವಿವಿಧ ವೃತ್ತಿಯಲ್ಲಿ ತೊಡಗಿರುವ ಕುಟುಂಬಗಳ ವಿವರ

| ಕ್ರ.ಸಂ | ಕುಟುಂಬಗಳ ಮುಖ್ಯಸ್ಥರ ವಿವಿಧ ವೃತ್ತಿಗಳು | ವೃತ್ತಿವಾರು ಸಂಖ್ಯೆ ಒಟ್ಟು |
|---|---|---|
| ೧ | ಕೂಲಿ ಕಾರ್ಮಿಕರು | ೩೪ (೨೯%) |
| ೨ | ಸಣ್ಣ ವ್ಯಾಪಾರಿಗಳು | ೧೧ (೯.೪) |
| ೩ | ಸ್ವಯಂ ಉದ್ಯೋಗ | ೨೨ (೧೯%) |
| ೪ | ಖಾಸಗಿ ಉದ್ಯೋಗ | ೪೧ (೩೫%) |
| ೫ | ಸರ್ಕಾರಿ ಉದ್ಯೋಗ | ೦೯ (೭.೬%) |
| ಒಟ್ಟು | | ೧೧೭ (೧೦೦%) |

ಮೂಲ: ೧. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. ೨. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

ಕೋಷ್ಟಕ–೫

ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳ ದುಡಿಮೆಗಾರರ ವಿವರ

| ಕ್ರ.ಸಂ | ಪ್ರದೇಶ | ಪುರುಷ | ಮಹಿಳೆ |
|---|---|---|---|
| ೧ | ಬೆಳಗಾವಿ ತಾಲೂಕು | ೫೬.೧೧% | ೧೫.೦೩% |
| ೨ | ಬೆಳಗಾವಿ ನಗರ ಮುಸ್ಲಿಮರು | ೪೮% | ೧೪% |

ಮೂಲ: ೧. ಬೆಳಗಾವಿ ತಾಲೂಕು ಮಾಹಿತಿ, ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ ಪು.ಸಂ ೧೯೧, ೨. ಬೆಳಗಾವಿ ನಗರ ಮುಸ್ಲಿಮರ ಮಾಹಿತಿ, ಕ್ಷೇತ್ರ ಅಧ್ಯಯನದಿಂದ

ಕೋಷ್ಟಕ–೬

ಮುಸ್ಲಿಂ ಬಾಲಕಿಯರ ಪೋಷಕರ ಕುಟುಂಬಗಳ ಆದಾಯಗಳು

| ಕ್ರ.ಸಂ | ಬೆಳಗಾವಿ ನಗರದ ಮುಸ್ಲಿಮರ ಆದಾಯ ಗುಂಪುಗಳು | ಒಟ್ಟು |
|---|---|---|
| ೧ | ಬಡವರು | ೯೦ (೭೭%) |
| ೨ | ಮಧ್ಯಮ ವರ್ಗದವರು | ೨೩ (೧೯.೬%) |
| ೩ | ಶ್ರೀಮಂತರು | ೦೪ (೩.೪%) |
| ಒಟ್ಟು | | ೧೧೭ (೧೦೦%) |

ಮೂಲ: ೧. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. ೨. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ-೭

### ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ವಿವರ

| ಕ್ರ.ಸಂ | ಮೂಲಭೂತ ಸೌಕರ್ಯಗಳು | ಬೆಳಗಾವಿ ನಗರದ ಒಟ್ಟು ಜನರ ಮೂಲಭೂತ ಸೌಕರ್ಯಗಳ ಕೊರತೆ ಪ್ರಮಾಣ | ಬೆಳಗಾವಿ ನಗರದ ಒಟ್ಟು ಮುಸ್ಲಿಂ ಕುಟುಂಬಗಳ ಮೂಲಭೂತ ಸೌಕರ್ಯಗಳ ಕೊರತೆ ಪ್ರಮಾಣ |
|---|---|---|---|
| ೧ | ಸ್ವಂತ ಮನೆ ಇಲ್ಲದ ಕುಟುಂಬಗಳು | ೧೭.೦೭% | ೧೪.೫% |
| ೨ | ಕೊಳಗೇರಿ ನಿವಾಸಿಗಳು | ೧೧.೬೮% | ೧೮.೮% |
| ೩ | ನೀರು ಪುರೈಕೆ ನಳ ಹೊಂದಿಲ್ಲದ ಕುಟುಂಬಗಳು | ೫೧.೦೯% | ೫೨.೧% |
| ೪ | ಚರಂಡಿ/ ಒಳಚರಂಡಿ ವ್ಯವಸ್ಥೆ ಹೊಂದಿರುವ ಕುಟುಂಬಗಳು | ೧೧.೧೮% | ೧೨.೮% |

ಮೂಲ: ೧. ಬೆಳಗಾವಿ ತಾಲೂಕು ಮಾಹಿತಿ, ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ ಪು.ಸಂ ೨೬೨, ೨. ಬೆಳಗಾವಿ ನಗರ ಮುಸ್ಲಿಮರ ಮಾಹಿತಿ, ಕ್ಷೇತ್ರ ಅಧ್ಯಯನದಿಂದ

## ಪರಾಮರ್ಶನ ಗ್ರಂಥಗಳು


೧. ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪,ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೩೨–೩೪

೨. ಬಿ.ಎಸ್. ಗವಿಮಠ, "ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಇತಿಹಾಸ", ಡಾ.ಎಸ್.ಎಂ. ಹರದಗಟ್ಟಿ(ಸಂ), *ಬೆಳಗಾವಿ ಸಿರಿ*, ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ ೨೦೦೩ ನೇ ಮಾರ್ಚ್ ೭, ೮ ಮತ್ತು ೯ ಪು–೧೦೧–೧೦೮

೩. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨–೧೩*, ಬೆಳಗಾವಿ, ಜಿಲ್ಲಾ ಸಂಖ್ಯಾ ಸಂಗ್ರಹಣಾ ಅಧಿಕಾರಿಗಳ ಕಛೇರಿ, ೨೦೧೪, ಪು–೩–೪ ಮತ್ತು ೫೧–೫೮.

೪. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨/೧೩*, ಪುರ್ವೋಕ್ತ, ಪು–೩–೪

೫. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨/೧೩*, ಪುರ್ವೋಕ್ತ, ಪು–೫–೬

೬. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨/೧೩*, ಪುರ್ವೋಕ್ತ, ಪು–೫–೬

೭. ಅಧ್ಯಾಯ–೨, "ಜಿಲ್ಲೆಯ ಅವಲೋಕನ", *ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ*, ಬೆಳಗಾವಿ, ಬೆಳಗಾವಿ ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೨೫–೨೭

೮. *ಮುಸ್ಲಿಂ ಪಾಪುಲೇಶನ್ ಇನ್ ಕರ್ನಾಟಕ ಎನ್ ಎನಾಲಿಸಿಸ್–೧*, ೨೦೦೧, ಅಂತರ್ಜಾಲ ತಾಣ www.karnatakmuslim.com

೯. ಬೆಳಗಾವಿ ಜಿಲ್ಲೆಯ ಜನಗಣತಿ ೨೦೧೧, ಅಂತರ್ಜಾಲ ತಾಣ www.karnatakmuslim.com

೧೦. ಔಸಾಫ್ ಅಹಮದ್, *ಇಂಡಿಯನ್ ಮುಸ್ಲಿಮ್ಸ್: ಇಶ್ಯೂಸ್ ಇನ್ ಸೋಶಿಯಲ್ ಆ್ಯಂಡ್ ಇಕನಾಮಿಕ್ ಡೆವೆಲಪ್‌ಮೆಂಟ್*, ನ್ಯೂಡೆಲ್ಲಿ: ಖಾಮಾ ಪಬ್ಲಿಷರ್ಸ್, ೧೯೯೩, ಪು.೧

೧೧. ಇಮ್ತಿಯಾಜ್ ಅಹಮದ್, *ಕಾಸ್ಟ್ ಆ್ಯಂಡ್ ಸೋಶಿಯಲ್ ಸ್ಟ್ರಾಟಿಫಿಕೇಷನ್ ಅಮಾಂಗ್ ಮುಸ್ಲಿಮ್ಸ್ ಇನ್ ಇಂಡಿಯಾ*, ನ್ಯೂಡೆಲ್ಲಿ: ಮನೋಹರ ಪಬ್ಲಿಕೇಷನ್, ೧೯೭೩, ಮತ್ತು ಗೌಸ್ ಅನ್ಸಾರಿ, "ಮುಸ್ಲಿಂ ಕಾಸ್ಟ್ ಇನ್ ಉತ್ತರ್‌ಪ್ರದೇಶ್; ಎ ಸ್ಟಡಿ", ಲಕ್ನೊ: ೧೯೬೦

ಮತ್ತು ಎಂ.ವಿ. ಸಿದ್ದೀಕಿ, "ಮುಸ್ಲಿಮ್ಸ್ ಆಫ್ ಕಲ್ಕತ್ತ, ಎ ಸ್ಟಡಿ ಇನ್ ಆಸ್ಪೆಕ್ಟ್ಸ್ ಆಫ್ ದೇರ್ ಸೋಶಿಯಲ್ ಆರ್ಗನೈಜೇಷನ್," *ಎಂಥ್ರೋಪಲಾಜಿಕಲ್ ಸರ್ವೆ ಆಫ್ ಇಂಡಿಯಾ*, ೧೯೭೪ ಮತ್ತು ಎಸ್.ರಹೀಂ ಮೊಂಡಲ್, ಸೋಶಿಯಲ್ ಆರ್ಗನೈಜೇಷನ್ ಅಮಾಂಗ್ ರೂರಲ್ ಮುಸ್ಲಿಮ್ಸ್ ಆಫ್ ವೆಸ್ಟ್ ಬೆಂಗಾಲ್, ಡಿಪಾರ್ಟ್‌ಮೆಂಟ್ ಆಫ್ ಸೋಶಿಯಾಲಜಿ ಆಂಥ್ರೋಪಾಲಜಿ, ನಾರ್ಥ್ ಬೆಂಗಾಲ್ ಯೂನಿವರ್ಸಿಟಿ, ೧೯೯೮, ಉಲ್ಲೇಖ: ಡಾ.ಷೇಖ್‌ರಹೀಂ ಮೊಂಡಲ್,"ಇಕನಾಮಿ ಆ್ಯಂಡ್ ಸೋಶಿಯಲ್ ಸಿಚ್ಯೂಎಷನ್ ಅಮಾಂಗ್ ಮುಸ್ಲಿಮ್ಸ್ ಆಫ್ ವೆಸ್ಟ್ ಬೆಂಗಾಲ್ ಸಮ್ ಎಂಫಿರಿಕಲ್ ಅಬ್‌ಸರ್ವೇಷನ್",*ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್*, ಸಂ.೨, ಸಂಖ್ಯೆ.೧, ಜನವರಿ ೧೯೯೯, ಪು.೧೪೦೯-೧೪೨೫

೧೨. ರಾಜೇಂದರ್ ಸಾಚಾರ್, *ಹೈಲೆವೆಲ್ ಕಮಿಟಿ ರಿಪೋರ್ಟ್ ಆನ್ ಸೋಷಿಯಲ್*, ಇಕನಾಮಿಕ್ ಆ್ಯಂಡ್ ಎಜುಕೇಷನಲ್ ಸ್ಟೇಟಸ್ ಆಫ್ ದ ಮುಸ್ಲಿಮ್ ಕಮ್ಯೂನಿಟಿ ಆಫ್ ಇಂಡಿಯಾ, ನವಂಬರ್-೨೦೦೬,ಡೆಲ್ಲಿ: ಅಕಲಂಕ್ ಪಬ್ಲಿಕೇಷನ್ಸ್, ಜನವರಿ ೨೦೦೭, ಪು.೧೯೨-೧೯೩.

೧೩. ವೆಂಕಟಸ್ವಾಮಿ.ಟಿ, *ರಿಪೋರ್ಟ್ ಆಫ್ ದ ಸೆಕೆಂಡ್ ಬ್ಯಾಕ್‌ವರ್ಡ್ ಕ್ಲಾಸೆಸ್ ಕಮಿಷನ್*, ಬೆಂಗಳೂರು: ಪಬ್ಲಿಷ್ಡ್ ಬೈ ಗವರ್ನಮೆಂಟ್ ಆಫ್ ಕರ್ನಾಟಕ, ೧೯೮೬, ಸಂ.೧, ಪು.೫೦.

೧೪. ಡಾ. ಬದರಿನಾಥ್.ಕೆ. ರಾವ್, *ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು*, ಬೆಂಗಳೂರು: ನವಕರ್ನಾಟಕ ಪ್ರಕಾಶನ, ೨೦೦೨, ಪು.೦೭.

೧೫. ರೆಸಲ್ಯೂಷನ್ ನಂ ೩.೪. ಎಂ. ೮೦-ಸಿಎಚ್‌ಸಿ, ದಿ. ೧೦.೫.೧೯೮೦, ಪಬ್ಲಿಷ್ಡ್ ಇನ್ ಗವರ್ನಮೆಂಟ್ ಆಫ್ ಇಂಡಿಯಾ ಗೆಜೆಟ್, ಉಲ್ಲೇಖ: ಔಸಾಫ್‌ಅಹಮದ್, ಪೋರ್ವೋಕ್ತ, ಪು.೩೬ ಮತ್ತು ರಾಜೇಂದರ್ ಸಾಚಾರ್ ಹೈಲೆವೆಲ್ ರಿಪೋರ್ಟ್, ಪೂರ್ವೋಕ್ತ, ಪು.೧೯೨-೧೯೩ ಮತ್ತು ಗೂಡ್ವಾಲ, *ಹೆಚ್.ಆರ್. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಪ್ರಥಮ ವರದಿ*, ಬೆಂಗಳೂರು: ಕರ್ನಾಟಕ ಸರ್ಕಾರ, ೧೯೮೫, ಪು.೨೪ ಮತ್ತು ರೆಹಮಾನ್‌ಖಾನ್, *ರಿಪೋರ್ಟ್ ಆಫ್ ಹೈಪವರ್ ಕಮಿಟಿ ಆನ್ ಸೋಶಿಯೋ-ಇಕನಾಮಿಕ್ ಆ್ಯಂಡ್ ಎಜುಕೇಷನಲ್ ಸರ್ವೆ ೧೯೯೪ ಆಫ್ ರೀಜನಲ್ ಮೈನಾರಿಟೀಸ್ ಇನ್ ಕರ್ನಾಟಕ*, ಬೆಂಗಳೂರು: ಕರ್ನಾಟಕ ಮೈನಾರಿಟಿ ಕಮಿಷನ್, ೧೯೯೫.

೧೬. ರಾಜೇಂದರ್ ಸಾಚಾರ್, *ಹೈಲೆವೆಲ್ ಕಮಿಟಿ ರಿಪೋರ್ಟ್*, ಪೂರ್ವೋಕ್ತ, ಪು.೧೬೫-೧೬೭.

೧೭. ಜೇಮ್ಸ್‌ಮ್ಯಾನರ್. *ಪೊಲಿಟಿಕಲ್ ಛೇಂಜ್ ಇನ್ ಎನ್ ಇಂಡಿಯನ್ ಸ್ಟೇಟ್ ಮೈಸೂರ್*, ಡೆಲ್ಲಿ: ಮನೋಹರ ಬುಕ್ ಸರ್ವೀಸ್, ೧೯೭೭, ಪು.೬೩. ಉಲ್ಲೇಖ:ಹೊನ್ನೂರಾಲಿ.ಐ,

"ರಾಜಕೀಯ ಸಹಭಾಗಿತ್ವ ಮತ್ತು ಅಭಿವೃದ್ಧಿ", ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ, ೨೦೦೯, ಪು.ಸಂ ೫೫

೧೮. ಗೂಡ್ವಾಲ.ಹೆಚ್.ಆರ್, ಪು.೨೪, ಮತ್ತು ರೆಹಮಾನ್‌ಖಾನ್, ೧೯೯೫, ಪೂರ್ವೋಕ್ತ.

೧೯. ಅಸ್ಗರ್ ಅಲಿ ಇಂಜಿನಿಯರ್, *ಇಸ್ಲಾಂ ಆ್ಯಂಡ್ ಮುಸ್ಲಿಂ; ಎ ಕ್ರಿಟಿಕಲ್ ರಿ ಅಸೆಸ್‌ಮೆಂಟ್*, ಜೈಪುರ್: ಪ್ರಿಂಟ್‌ವೆಲ್ ಪಬ್ಲಿಷರ್ಸ್, ೧೯೮೫, ಪು.೧೬೮-೧೬೯

೨೦. ರಾಜೇಂದರ್ ಸಾಚಾರ್ ಪೂರ್ವೋಕ್ತ, ಪು.೫೨.

೨೧. ಗೋಪಾಲ ಕೃಷ್ಣ, ರಿಪೋರ್ಟ್ ಆನ್ ನ್ಯಾಷನಲ್ ಸರ್ವೆ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ, ನ್ಯೂಡೆಲ್ಲಿ; ಐಸಿಎಸ್ಆರ್, ೧೯೮೨, ಉಲ್ಲೇಖ:ಆರೀಫ್‌ಹಸನ್, "ಎಜ್ಯುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ",*ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್*, ಸಂ.೫, ಸಂಖ್ಯೆ೧, ೧೯೯೩, ಪು.೧೪೨-೧೫೪

೨೨. ಸಕ್ಸೇನ.ಎನ್.ಪಿ."ಪಬ್ಲಿಕ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಅಮಾಂಗ್ ಮುಸ್ಲಿಮ್ಸ್ ಇನ್ ಇಂಡಿಯಾ", *ಮ್ಯಾನ್ ಆ್ಯಂಡ್ ಡೆವಲಪ್‌ಮೆಂಟ್*, ಸಂ.೪, ಸಂಖ್ಯೆ.೪, ೧೯೮೩. ಪು.೫೫-೬೩

೨೩. ಮೊಹಮ್ಮದ್ ಅಖ್ತರ್ ಸಿದ್ದಿಖಿ, *ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್ ಇನ್ ಮುಸ್ಲಿಂ ಇನ್‌ಸ್ಟಿಟ್ಯೂಷನ್ಸ್*, ನ್ಯೂಡೆಲ್ಲಿ: ಆಶಿಶ್ ಪಬ್ಲಿಷಿಂಗ್ ಹೌಸ್, ೧೯೯೫ ಉಲ್ಲೇಖ: ಇಸ್ಮಾಯಿಲ್ ಎಂ. ಮಕಾಂದಾರ್, "ಎ ಸೊಶಿಯಾಲಾಜಿಕಲ್ ಸ್ಟಡಿ ಆಫ್ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್ ಇನ್ ಕರ್ನಾಟಕ; ಎ ಕೇಸ್‌ಸ್ಟಡಿ ಆಫ್ ಮುಸ್ಲಿಂ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್", ಸಮಾಜಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ೨೦೦೨, ಪು.೯೪

೨೪. ಔಸಾಫ್ ಅಹಮದ್, ಪೂರ್ವೋಕ್ತ, ಪು. ೪೦ ಮತ್ತು ಡಾ. ಷೇಖ್ ರಹೀಂ ಮೊಂಡಲ್, ಪೂರ್ವೋಕ್ತ, ಪು.೧೪೨-೧೫೪

೨೫. ಬುಚ್.ಎಂ.ಬಿ. ಆ್ಯಂಡ್ ಸುದಾನೆ.ಜಿ.ಆರ್, *ಎಸ್ಟಾಬ್ಲಿಷಿಂಗ್ ಎನ್ ಎಜುಕೇಷನಲ್ ರಿಸೋರ್ಸಸ್ ಸೆಂಟರ್ ಫಾರ್ ಮುಸ್ಲಿಂ ಮ್ಯಾನೇಜ್ಡ್ ಸ್ಕೂಲ್ಸ್ ಇನ್ ಇಂಡಿಯಾ*, ವಡೊದ್ರಾ; ೧೯೮೯, ಪು.೩೬.ಆ್ಯಂಡ್ ಷೇಖ್‌ಅಹಮದ್, *ಮುಸ್ಲಿಂ ಮೈನಾರಿಟಿ ಎಜುಕೇಷನ್ ಇನ್ ಗುಜರಾತ್*,

*ಉಲ್ಲೇಖ:* ಮೊಹಮದ್ ಅಖ್ತರ್ ಸಿದ್ದಿಕಿ, *ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್ ಇನ್ ಮುಸ್ಲಿಮ್ ಇನ್‌ಸ್ಟಿಟ್ಯೂಷನ್ಸ್*, ನ್ಯೂಡೆಲ್ಲಿ: ಆಶಿಶ್ ಪಬ್ಲಿಷಿಂಗ್ ಹೌಸ್, ೧೯೯೩, ಪು.೭೯, ಉಲ್ಲೇಖ: ಇಸ್ಮಾಯಿಲ್.ಎಂ. ಮುಕಾಂದಾರ್, ಪೂರ್ವೋಕ್ತ, ಪು.೯೪

೨೬. ರಾಜೇಂದರ್ ಸಾಚಾರ್ ಪೂರ್ವೋಕ್ತ, ಪು.೫೭-೫೯

೨೭. ಔಸಾಫ್ ಅಹಮದ್, ಪೂರ್ವೋಕ್ತ, ಪು.೪೦, ಮತ್ತು ಡಾ.ಷೇಖ್‌ರಹೀಂ ಮೊಂಡಲ್, ಪೂರ್ವೋಕ್ತ, ಪು.೧೪೨-೧೫೪

೨೮. ಮಹಮದ್ ಪೀರ್, *ಮುಸ್ಲಿಮ್ ಎಜುಕೇಷನ್ ಇನ್ ಇಂಡಿಯಾ*, ಮಂಗಳೂರು: ಮುಸ್ಲಿಂ ಪ್ರಗತಿ ಪ್ರಕಾಶನ, ೧೯೯೧, ಪು.೧೦

೨೯. ಇಮ್ತಿಯಾಜ್ ಅಹಮದ್, "ಎಜುಕೇಷನಲ್ ಡೆವಲಪ್‌ಮೆಂಟ್ ಆಫ್ ಮೈನಾರಿಟೀಸ್ ಇನ್ ಇಂಡಿಯಾ", *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆ್ಯಂಡ್ ಅಡ್ಮಿನಿಸ್ಟ್ರೇಷನ್* ಸಂ.೧, ಸಂಖ್ಯೆ ೨, ಪು.೧೯೧-೨೧೯ ಮತ್ತು ಗೋಪಾಲಕೃಷ್ಣ ರಿಪೋರ್ಟ್ ಮತ್ತು ರಾಧಾಕೃಷ್ಣಆರ್, "ಎಂಪ್ಲಾಯಿಮೆಂಟ್ ಪ್ರೋಫಾಯಿಲ್ ಆಫ್ ಅರ್ಬನ್ ಡಿಪ್ರೈವ್ಡ್ ಕ್ಲಾಸೆಸ್; ಎ ಕೇಸ್ ಸ್ಟಡಿ ಆಫ್ ಅಹಮದಬಾದ್ ಸ್ಲಮ್", ಪೇಪರ್ ಪ್ರೆಸೆಂಟೆಡ್ ಆಟ್ ದ ಥರ್ಟಿನ್ತ್ ಇಂಟರ್ ಡಿಸಿಪ್ಲಿನರಿ ರಿಸರ್ಚ್ ಮಥಡಾಲಜಿ ವರ್ಕ್‌ಷಾಪ್ ಅಟ್ ವಾಲ್ಟೇರ್, ಜೂನ್ ೧ ರಿಂದ ೦೪, ಮತ್ತು ಪ್ರಕಾಶ್ ರಾವ್ ಆ್ಯಂಡ್ ತಿವಾರಿ. ಎನ್, *ಸೋಶಿಯಲ್ ಸ್ಟ್ರಕ್ಚರ್ ಆಫ್ ಎನ್ ಮೆಟ್ರೋಪೋಲೀಸ್; ಎ ಸ್ಟಡಿ ಆಫ್ ಬೆಂಗಳೂರ್*, ನ್ಯೂಡೆಲ್ಲಿ:ಅಲೈಡ್ ಪಬ್ಲಿಷರ್ಸ್ ಉಲ್ಲೇಖ: ಆರೀಫ್ ಹುಸೇನ್, ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಂ, ಪೂರ್ವೋಕ್ತ ಪು.೧೪೨-೧೫೪

೩೦. ರಾಜೇಂದರ್ ಸಾಚಾರ್ ಪೂರ್ವೋಕ್ತ, ಪು.೮೫ ಮತ್ತು ಶರ್ಮಾ.ಕೆ.ಡಿ, *ಎಜುಕೇಷನ್ ಆಫ್ ನ್ಯಾಷನಲ್ ಮೈನಾರಿಟೀಸ್*, ನ್ಯೂಡೆಲ್ಲಿ: ಕಲಮ್‌ಕರ್ ಪ್ರಕಾಶನ್, ಪ್ರೈಲಿ, ೧೯೭೮, ಪು.೧೫-೧೬

೩೧. ಆರೀಫ್ ಹುಸೇನ್, ಪೂರ್ವೋಕ್ತ, ಪು.೧೪೨-೧೫೪

೩೨. ಲಾಲಿವಾಲ ಎ.ಜಿ. "ಸೋಶಿಯೊ-ಇಕನಾಮಿಕ್ ಸರ್ವೆ ಆಫ್ ಮುಸ್ಲಿಮ್ಸ್ ಇನ್ ಇಂಡಿಯನ್ ಸಿಟಿ", *ಜರ್ನಲ್ ಆಫ್ ಮುಸ್ಲಿಮ್ ಮೈನಾರಿಟಿ ಆಫೇರ್ಸ್, ಕಂಬೈನ್ಡ್ ಇಶ್ಯೂ*, ಸಂ.೧, ಸಂಖ್ಯೆ.೨, ಮತ್ತು ಸಂ.೨, ಸಂಖ್ಯೆ.೧, ಸಮ್ಮರ್, ೧೯೮೦, ಪು.೧೬೯-೧೮೨

೩೩. ಔಸಾಫ್ ಅಹಮದ್, *ಸೇವಿಂಗ್ ಬಿಹೇವಿಯರ್ ಇನ್ ಎ ಮೆಟ್ರೊಪಾಲಿಟಯನ್ ಇಕಾನಮಿ*, ನ್ಯೂಡೆಲ್ಲಿ: ಅಟ್ಲಾಂಟ ಪಬ್ಲಿಷರ್ಸ್, ೧೯೮೨, ಪು.೧೧೫

೩೪. ಅಸ್ಲಂ ವಾಹಿದ್, "ಮುಸ್ಲಿಂ ರೆಪ್ರೆಸೆಂಟೇಷನ್ ಇನ್ ಗವರ್ನ್‌ಮೆಂಟ್", *ಮುಸ್ಲಿಂ ಇಂಡಿಯಾ*, ಸಂ.೧, ಸಂಖ್ಯೆ.೧೨, ೧೯೮೩, ಪು.೫೫೨–೫೫೩ ಮತ್ತು ರಾಜೀಂದರ್ ಸಾಚಾರ್, ಪೂರ್ವೋಕ್ತ, ಪು.೧೬೮–೧೭೪

೩೫. ಇಜಾರ್ ಅಹಮದ್, "ಮುಸ್ಲಿಮ್ ಪಾಟಿಸಿಪೇಷನ್ ಇನ್ ಸ್ಮಾಲ್‌ಸ್ಕೇಲ್ ಇಂಡಸ್ಟ್ರಿ ಸೆಕ್ಟರ್ ಇನ್ ಅಲಿಘಡ್ ಡಿಸ್ಟ್ರಿಕ್ಟ್", *ಮುಸ್ಲಿಂ ಇಂಡಿಯಾ*, ಸಂ.೧, ಸಂಖ್ಯೆ.೯, ೧೯೮೩, ಪು.೪೬೩–೪೬೭

೩೬. ಔಸಾಫ್ ಅಹಮದ್, ಪೂರ್ವೋಕ್ತ, ಪು.೪೦

೩೭. ಅಸ್ಗರ್‌ಅಲಿ ಇಂಜಿನಿಯರ್, *ಇಸ್ಲಾಂ ಆ್ಯಂಡ್ ಮುಸ್ಲಿಂ; ಎ ಕ್ರಿಟಿಕಲ್ ರಿ ಅಸೆಸ್‌ಮೆಂಟ್ ಜೈಪುರ್*: ಪ್ರಿಂಟ್‌ವೆಲ್ ಪಬ್ಲಿಷರ್ಸ್, ೧೯೮೫, ಪುಟ.೧೬೮–೧೮೯ ಮತ್ತು ಜೆ.ಎಸ್. ಬಂದೂಕ್‌ವಾಲ," ಎ ಗಾಂಧಿಯನ್ ಸ್ಟ್ರಗಲ್ ಬೈ ವಿಕ್ಟಿಮ್ಸ್ ಆಫ್ ಬರೋಡ ರೈಯ್ಟ್ಸ್," ರಿ ಪ್ರಿಂಟೆಡ್ ಇನ್ ಮುಸ್ಲಿಮ್ *ಇಂಡಿಯಾ*, ಸಂ.೧, ಸಂಖ್ಯೆ.೪, ೧೯೮೯, ಪು.೧೭೨–೧೭೫ ಮತ್ತು ಎ.ಎಂ. ಖುಸ್ರೋ, "ಇಕನಾಮಿಕ್ ಎಫೆಕ್ಟ್ ಆಫ್ ಜಮೀಂದಾರಿ ಅಬಾಲಿಷನ್ ಇನ್ ಹೈದರಾಬಾದ್", ಉಲ್ಲೇಖ: ಔಸಾಫ್ ಅಹಮದ್, ಪೂರ್ವೋಕ್ತ, ಪು.೩೮

೩೮. ಖುಸ್ರೋ.ಎ.ಎಂ, "ಇಂಡಿಯನ್ ಮುಸ್ಲೀಮ್ಸ್ ಟುವರ್ಡ್ಸ್ ದಿ ಟ್ವೆಂಟಿಫಸ್ಟ್ ಸೆಂಚ್ಯೂರಿ", *ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್*, ಸಂ.೮, ಸಂಖ್ಯೆ.೧, ೧೯೯೬, ಪು.೧೧೦–೧೧೫

೩೯. ಮುಷಿರುಲ್ ಹಸನ್, "ಇನ್ ಸರ್ಚ್ ಆಫ್ ಇಂಟಿಗ್ರೇಷನ್ ಆ್ಯಂಡ್ ಐಡೆಂಟಿಟಿ; ಇಂಡಿಯನ್ ಮುಸ್ಲಿಮ್ಸ್ ಸಿನ್ಸ್ ಇಂಡಿಪೆಂಡೆನ್ಸ್", *ಇಸ್ಲಾಂ ಆ್ಯಂಡ್ ಮೊಡರ್ನ್ ಏಜ್*, ಸಂ.೧೯, ಸಂಖ್ಯೆ.೪, ಪು.೨೮–೨೩೬

೪೦. ಪ್ರೊ.ಜಾವೀದ್ ಆಲಂ, "ಹೊಣೆಗಾರಿಕೆ ಇರುವ ನಾಯಕತ್ವ ಬೇಕು." ಪೂರ್ವೋಕ್ತ, ಮಂಗ್ಳೂರ ವಿಜಯ (ಸಂ), ಪೂರ್ವೋಕ್ತ, ಪು.೧೧–೧೩

೪೧. ಅಬುಸಾಲೇಹ್ ಷರೀಫ್, "ಮುಸ್ಲಿಮರನ್ನು ಸಬಲರನ್ನಾಗಿಸುವ ದಿಕ್ಕಿನಲ್ಲಿ....." ಅದೇ ಪೂರ್ವೋಕ್ತ, ಪು.೧೪

೪೨. ಔಸಾಫ್ ಅಹಮದ್, ಪೂರ್ವೋಕ್ತ, ಪು.೩೫

೪೩. ಡಾ. ಷೇಖ್ ರಹೀಂ ಮೊಂಡಲ್, ಪೂರ್ವೋಕ್ತ ಪು. ೧೨೧ ಮತ್ತು ೧೨೩

೪೪. ರೆಸಲ್ಯೂಷನ್ ನಂ ೩/-೪/,ಎ-೮೦-ಸಿಹೆಚ್‌ಸಿ ದಿ.೧೦ ಮೇ ೧೯೮೦ ಪಬ್ಲಿಷ್ಡ್ ಇನ್ ಗವರ್ನಮೆಂಟ್ ಆಫ್ ಇಂಡಿಯಾಗೆ ಜೆಟ್, ಉಲ್ಲೇಖ: ಔಸಾಫ್ ಅಹಮದ್, ಪೂರ್ವೋಕ್ತ, ಪು.೫೬

೪೫. ಮೈಸೂರು ಸ್ಟೇಟ್ ಹ್ಯಾಂಡ್ ಬುಕ್ ಆ್ಯಂಡ್ ಡೈರೆಕ್ಟರಿ, ಬೆಂಗಳೂರು: ಟ್ಯಾಗೂರ್ ಅಂಡ್ ಕಂಪನಿ, ೧೯೫೧, ಉಲ್ಲೇಖ: ಹೆಚ್.ಎಸ್.ರಾಜೇಂದ್ರಸಿಂಗ್, ಪೂರ್ವೋಕ್ತ, ಪು.೩೭

೪೬. “ಸರ್ವೆ ರಿಪೋರ್ಟ್ ಆಫ್ ಮೈನಾರಿಟಿ ಕಮಿಷನ್ ಕರ್ನಾಟಕ”, *ಡೆಕ್ಕನ್ ಹೆರಾಲ್ಡ್*, ಜನವರಿ ೧೯೯೮, ಪು.೨೦

೪೭. ರೆಹಮಾನ್‌ಖಾನ್, ರಿಪೋರ್ಟ್ ಆಫ್ ಹೈ ಪವರ್ ಕಮಿಟಿ ಆನ್ ಸೊಶಿಯೋ-ಇಕನಾಮಿಕ್ ಆ್ಯಂಡ್ ಎಜುಕೇಷನಲ್ ಸರ್ವೆ ೧೯೯೪, ಆಫ್ ರಿಲೀಜಿಯಸ್ ಮೈನಾರಿಟೀಸ್ ಇನ್ ಕರ್ನಾಟಕ, ಬೆಂಗಳೂರು: ಕರ್ನಾಟಕ ಮೈನಾರಿಟಿ ಕಮಿಷನ್, ೧೯೯೫

೪೮. ಅದೇ ಪೂರ್ವೋಕ್ತ

೪೯. ಪೂರ್ವೋಕ್ತ

೫೦. ಪೂರ್ವೋಕ್ತ

೫೧. ಪೂರ್ವೋಕ್ತ

೫೨. ಇಸಾಬೆಲ್ ಆ್ಯಂಡ್ ಡೇವಿಡ್ ಕ್ರೂಕ್, *ರೆವಲ್ಯೂಷನ್ ಇನ್ ಎ ಜೈನೀಸ್ ವಿಲೇಜ್ ಟೆನ್‌ಮೈಲ್* ಇನ್, ಲಂಡನ್: ರೂಲ್‌ಲೆಡ್ಜ್ ಪಬ್ಲಿಷರ್ಸ್, ೧೯೯೮, ಪು.೦೭

೫೩. ಡಾ. ಚಂದ್ರಪೂಜಾರಿ, *ಪರಿಸರ ಮತ್ತು ಅಭಿವೃದ್ಧಿ*, ವಿದ್ಯಾರಣ್ಯ:ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೮. ಪು.೦೯

೫೪. ಪ್ರಾದೇಶಿಕ ಅಸಮತೋಲನ ನಿವಾರಣಾ ವರದಿ, ಪೂರ್ವೋಕ್ತ, ಪು.೫೬೪.

೫೫. ಚಂದ್ರಪೂಜಾರಿ.ಎಂ,*ದೇಶಿಯ ನೆರಳಲ್ಲಿ ವಿಕೇಂದ್ರೀಕರಣ*, ವಿದ್ಯಾರಣ್ಯ:ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧, ಪು.೧೪.

೫೬. ಮಾನವಾಭಿವೃದ್ಧಿ ವರದಿ ೨೦೦೫, ಪೂರ್ವೋಕ್ತ. ಪು.೧೦೭

೫೭. ಕುರಿಯನ್ ಎನ್.ಜೆ., “ವೈಡೆನಿಂಗ್ ರೀಜನಲ್ ಡಿಸ್‌ಪ್ಯಾರಿಟೀಸ್ ಇನ್ ಇಂಡಿಯಾ, ಸಮ್ ಇಂಡಿಕೇಟರ್ಸ್”*ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂ.೩೫, ಸಂ.೭, ಫೆಬ್ರವರಿ ೨೦೦, ಪು. ೫೩೬-೫೪೨.

೫೮. ಪ್ರಾದೇಶಿಕ ಅಸಮತೋಲನ, ಪೂರ್ವೋಕ್ತ.ಪು.೫೬೪-೫೭

೫೯. *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ-೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೪೧-೪೨

೬೦. "ಲಿಂಗ ಮತ್ತು ಅಭಿವೃದ್ಧಿ", *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ-೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೧೯೦-೧೯೧

೬೧. *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ-೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೫೫

೬೨. "ಮಾನವ ಅಭಿವೃದ್ಧಿಯಲ್ಲಿ ನಗರದ ಸಮಸ್ಯೆಗಳು",*ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ-೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪, ಪು.ಸಂ ೨೬೭

೬೩. "ಮಾನವ ಅಭಿವೃದ್ಧಿಯಲ್ಲಿ ನಗರದ ಸಮಸ್ಯೆಗಳು" ಪೂರ್ವೋಕ್ತ, ಪು.ಸಂ ೨೬೯

೬೪. "ಮಾನವ ಅಭಿವೃದ್ಧಿಯಲ್ಲಿ ನಗರದ ಸಮಸ್ಯೆಗಳು" ಪೂರ್ವೋಕ್ತ, ಪು.ಸಂ ೨೬೩-೬೪

೬೫. "ಮಾನವ ಅಭಿವೃದ್ಧಿಯಲ್ಲಿ ನಗರದ ಸಮಸ್ಯೆಗಳು" ಪೂರ್ವೋಕ್ತ, ಪು.ಸಂ ೨೬೫

## ಅಧ್ಯಾಯ: ಮೂರು

# ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರ

ಹಿಂದಿನ ಅಧ್ಯಾಯದಲ್ಲಿ ಭಾರತ, ಕರ್ನಾಟಕ ಮತ್ತು ಅಧ್ಯಾಯನ ಕ್ಷೇತ್ರವಾದ ಬೆಳಗಾವಿ ನಗರದ ಮುಸ್ಲಿಮರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಕಂಡುಕೊಳ್ಳಲಾಗಿದೆ. ಒಟ್ಟಾರೆ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿದ್ದು, ಆರ್ಥಿಕವಾಗಿ ಬಡವರಾಗಿದ್ದಾರೆ. ಮನುಷ್ಯನಿಗೆ ಅಗತ್ಯವಾಗಿರುವ ಮೂಲಭೂತ ಸೌಕರ್ಯಗಳ ಕೊರತೆಯನ್ನು ಇಂದಿಗೂ ಎದುರಿಸುತ್ತಿರುವುದು ದುರಂತವೇ ಸರಿ. ಒಂದು ಸಮುದಾಯ ತಾನು ಬದುಕುವ ಪರಿಸರದಿಂದ ಪ್ರಭಾವಿತವಾಗುತ್ತದೆ ಎಂದು ಗ್ರಹಿಸಲಾಗಿದೆ. ಆಯಾ ಪ್ರದೇಶದ ರಾಜಕಾರಣ, ಆಡಳಿತ ವ್ಯವಸ್ಥೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳು ಒಂದು ಸಮುದಾಯದ ಬದುಕನ್ನು ಪ್ರಭಾವಿಸುತ್ತವೆ. ಹಿಂದಿನ ಅಧ್ಯಾಯಗಳಲ್ಲಿ ಗುರುತಿಸಿಕೊಂಡಿರುವಂತೆ ಸ್ವಾತಂತ್ರ್ಯ ನಂತರ ಅಸ್ತಿತ್ವಕ್ಕೆ ಬಂದ ಸರ್ಕಾರಗಳು ಜಾರಿಗೊಳಿಸಿದ ಯೋಜನೆಗಳು ಮತ್ತು ಕಾರ್ಯಕ್ರಮಗಳು ಸಾಕ್ಷರತೆ ಮತ್ತು ಶೈಕ್ಷಣಿಕ ಸ್ಥಿತಿಗಳ ಮೇಲೆ ಉಂಟುಮಾಡಿದ ಪ್ರಭಾವಗಳನ್ನು ಬಹುತೇಕ ಅಧ್ಯಯನಗಳು ಗುರುತಿಸಿಲ್ಲ. ಹಾಗೆಯೇ ಸಾಕ್ಷರತೆ ಮತ್ತು ಶೈಕ್ಷಣಿಕ ಸಂಗತಿಯಲ್ಲಿ ಉತ್ತರ–ದಕ್ಷಿಣ ರಾಜ್ಯಗಳ ತೌಲನಿಕ ವ್ಯತ್ಯಾಸಗಳಿಗೆ ಸರ್ಕಾರ ಹಾಗೂ ನಾಗರೀಕ ಸಮಾಜಗಳ ಕೊಡುಗೆ ಏನು ಎಂಬುದರ ಬಗ್ಗೆ ಬಹುತೇಕ ಅಧ್ಯಯನಗಳು ಮಾತನಾಡುವುದಿಲ್ಲ.

ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ಸಂಕೀರ್ಣ ಮತ್ತು ವೈವಿಧ್ಯಮಯವಾದ ಕಾರಣಗಳನ್ನು ಗುರುತಿಸಲಾಗುತ್ತಿದೆ. ಇಲ್ಲಿಯವರೆಗೆ ನಡೆದ ಅಧ್ಯಯನಗಳು ಕಾರಣಗಳನ್ನು ಸ್ಥೂಲವಾಗಿ ಗುರುತಿಸುತ್ತವೆ. ವಿಶಿಷ್ಟ ಅನನ್ಯತೆಯನ್ನು ಹೊಂದಿರುವ ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಪ್ರದೇಶದ ಪರಿಸರದ ಪ್ರಭಾವವೆಷ್ಟು ಎಂಬುದನ್ನು ಕಂಡುಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗಿದೆ. ಉತ್ತರ ಕರ್ನಾಟಕದಲ್ಲಿ ಮಧ್ಯದಲ್ಲಿ ಶಾಲೆ ಬಿಡುವ

ಪ್ರಮಾಣ ಹೆಚ್ಚಾಗಿದೆ. ಈ ಸಂಗತಿಯಲ್ಲಿ ಗುಲ್ಬರ್ಗಾದಲ್ಲಿ ಶೇ.೫೭.೧೫ ರಷ್ಟು ಮಕ್ಕಳು ಮಧ್ಯದಲ್ಲಿ ಶಾಲೆ ಬಿಡುತ್ತಿದ್ದು ಇದು ಮೊದಲ ಸ್ಥಾನದಲ್ಲಿದ್ದರೆ, ಬೆಳಗಾವಿಯಲ್ಲಿ ಶೇ.೨೦.೭೩ ರಷ್ಟು ದಾಖಲಾಗಿದ್ದು ಎರಡನೆಯ ಸ್ಥಾನದಲ್ಲಿದೆ. ಈಗಾಗಲೆ ಹೈದ್ರಾಬಾದ್-ಕರ್ನಾಟಕ ಮತ್ತು ಗುಲ್ಬರ್ಗಾ ಜಿಲ್ಲೆಯನ್ನು ಕೇಂದ್ರೀಕರಿಸಿಕೊಂಡು ಹಲವಾರು ಅಧ್ಯಯನಗಳನ್ನು ಕೈಗೊಳ್ಳಲಾಗಿದೆ. ಇಂತಹ ಅಧ್ಯಯನಗಳು ಮುಂಬೈ-ಕರ್ನಾಟಕ ಭಾಗದ ಬೆಳಗಾವಿಯಲ್ಲಿ ಕಂಡುಬರುವುದಿಲ್ಲ. ಮುಸ್ಲಿಮರು ನಗರ ಕೇಂದ್ರೀತ ಸಮುದಾಯವಾಗಿರುವುದರಿಂದ ಬೆಳಗಾವಿ ನಗರವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.ಬೆಳಗಾವಿ ಜಿಲ್ಲೆಯು ವಿಶಿಷ್ಟವಾದ ಚಾರಿತ್ರಿಕ, ಭೌಗೋಳಿಕ, ಹವಾಮಾನ ಮತ್ತು ನೈಸರ್ಗಿಕ ಸಂಪನ್ಮೂಲಗಳು, ಆರ್ಥಿಕ ಸ್ಥಿತಿ, ಆಡಳಿತ ವ್ಯವಸ್ಥೆ, ಭಾಷೆ ಮತ್ತು ಶಿಕ್ಷಣದ ಪರಿಸರವನ್ನು ಒಳಗೊಂಡಿದೆ. ಇವುಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳುವುದು ಮುಸ್ಲಿಮರ ವಿಶೇಷವಾಗಿ ಮುಸ್ಲಿಂ ಮಹಿಳೆಯರ ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗಿದೆ. ಕರ್ನಾಟಕದ ಏಕೀಕರಣದ ಪೂರ್ವದಿಂದಲೂ ಬೆಳಗಾವಿ ಭಾಗದಲ್ಲಿ ಮರಾಠಿ ಭಾಷೆಯ ಪ್ರಾಭಲ್ಯ ಹೆಚ್ಚಾಗಿದೆ. ಈ ಕಾರಣದಿಂದಾಗಿ ಭಾಷೆ ಮತ್ತು ಗಡಿಗೆ ಸಂಬಂಧಿಸಿದ ಸಂಘರ್ಷಗಳು ಇಂದಿಗೂ ಜೀವಂತವಾಗಿವೆ. ಮರಾಠಿ ಭಾಷೆ ಪ್ರಾಭಲ್ಯದಿಂದಾಗಿ ಬೆಳಗಾವಿ ಭಾಗವು ಶೈಕ್ಷಣಿಕವಾಗಿ ಹಿಂದುಳಿದಿದೆ ಎಂದು ಗ್ರಹಿಸಲಾಗುತ್ತಿದೆ.

### ೩.೧. ಬೆಳಗಾವಿ ಜಿಲ್ಲೆಯಲ್ಲಿ ಮರಾಠಿ ಪ್ರಾಬಲ್ಯ

ಈ ನೆಲವನ್ನು ಆಳಲು ಬಂದ ಮುಸಲ್ಮಾನ, ಪೇಶ್ವೆ ಮತ್ತು ಆಂಗ್ಲ ಅರಸರುಗಳು ತಮ್ಮ ತಮ್ಮ ಆಡಳಿತದ ಅನುಕೂಲಕ್ಕಾಗಿ ಅವರವರ ಭಾಷೆ, ಸಂಸ್ಕೃತಿಗಳನ್ನು ಹೇರಿ ಕನ್ನಡಿಗರನ್ನು, ಕನ್ನಡ ಭಾಷೆಯನ್ನು ಶಕ್ತಿಹೀನಗೊಳಿಸಿದ್ದು ಚಾರಿತ್ರಿಕ ಸತ್ಯವಾಗಿದೆ. ಮುಂಬಯಿಯು ಭಾರತದ ಹೆಬ್ಬಾಗಿಲಾದ್ದರಿಂದ ಬ್ರಿಟಿಷರು ಮೊದಲು ಅಲ್ಲಿಯೇ ತಳವೂರಿದರು. ಸಮೀಪದಲ್ಲಿರುವ ಪುಣೆಯು ಆಡಳಿತ ಕೇಂದ್ರ ಸ್ಥಳವಾಯಿತು. ಇದರ ಪರಿಣಾಮವಾಗಿ, ಅಲ್ಲಿಂದ ಬಹು ದೂರದಲ್ಲಿದ್ದ ಮುಂಬಯಿ-ಕರ್ನಾಟಕದ ಜನ ಎಲ್ಲ ಸೌಲಭ್ಯಗಳಿಂದಲೂ ವಂಚಿತರಾಗಿ, ಸರಕಾರಿ ಯಂತ್ರದ ಅನಾದರಕ್ಕೆ ಒಳಗಾದರು. ಮೊದಲೇ ಮರಾಠಿ ಭಾಷೆ, ಸಂಸ್ಕೃತಿಗಳಿಂದ ಉಸಿರು ಕಟ್ಟಿದಂತಾಗಿದ್ದ ಕನ್ನಡದ ಜನ ಇನ್ನಷ್ಟು ವಿವಂಚನೆಗೊಳಗಾಗುವಂತಾಯಿತು. ಬ್ರಿಟಿಷ್ ಸರಕಾರದ ಕೇಂದ್ರ ಸ್ಥಳವಾದ ಪುಣೆ ಸಹಜವಾಗಿಯೇ ವಿದ್ಯಾ ಕೇಂದ್ರವಾಗಿ ಬೆಳೆಯಿತು. ಅಂದ ಮೇಲೆ ಹೆಚ್ಚಿನ ವಿದ್ಯೆಯನ್ನು ಸಂಪಾದಿಸಬೇಕೆನ್ನುವ ಕನ್ನಡಿಗರು ವಾಹನ ಸೌಕರ್ಯಗಳಿಲ್ಲದಿದ್ದ ಆ ಕಾಲದಲ್ಲಿ ಕಾಲ್ನಡಿಗೆಯಿಂದಲೇ ಅಲ್ಲಿಗೆ ಹೋಗಿ ಶಿಕ್ಷಣದ ಪ್ರಯೋಜನ ಪಡೆಯುವುದು ಅನಿವಾರ್ಯವಾಗಿತ್ತು. ೧೮೬೦ರಲ್ಲಿ ಪುಣೆಯ ಡೆಕ್ಕನ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ರಸೆಲ್ ರವರು ಅಂದಿನ ಕನ್ನಡ ಸ್ಥಿತಿಯ ಮೇಲೆ ಹೀಗೆ ಬೆಳಕು ಚೆಲ್ಲಿದ್ದಾರೆ. ಗುಜರಾತಿ ಮತ್ತು ಮರಾಠಿ ಭಾಷೆಗಳು ಅವರವರ ಪ್ರಾಂತಗಳಲ್ಲಿ

ಬೋಧಿಸಲ್ಪಡುತ್ತಿವೆ, ಹದಗೊಳ್ಳುತ್ತಿವೆ. ಈ ಪರಿಸ್ಥಿತಿಯಿಂದ ಕನ್ನಡ ಭಾಷೆ ವಂಚಿತವಾಗಿದೆ. ಬೇರೆ ಬೇರೆ ವಿಭಾಗಗಳಲ್ಲಿ ಶಿಕ್ಷಣ ಸಾಧನಗಳು ವಿಪುಲವಾಗಿರುವಾಗ, ಕನ್ನಡ ಪುಸ್ತಕಗಳು ಮತ್ತು ಉಪಾಧ್ಯಾಯರುಗಳು ಅವುಗಳನ್ನು ಇನ್ನೂ ತಯಾರಿಸುವ ಹಂತದಲ್ಲಿದ್ದಾರೆ. ಬಹುಜನ ಉಪಧ್ಯಾಯರ ಭಾಷೆ ಕನ್ನಡವಾಗಿದೆ. ಮರಾಠಿ ದೇಶ ಭಾಷಿಕರು ಸಾಮಾನ್ಯವಾಗಿ, ಕನ್ನಡ ಮಾತನಾಡಬಲ್ಲವರಾಗಿದ್ದಾರೆ. ದುರಾದೃಷ್ಟವೆಂದರೆ, ಸ್ಥಳೀಯ ಕನ್ನಡಿಗರಾದ ಕೇವಲ ಕೆಲವರು ಮಾತ್ರ ಅವರು ತಮ್ಮ ಮಾತೃಭಾಷೆಯನ್ನು ಪಾಂಡಿತ್ಯಪೂರ್ಣವಾಗಿ ಕಲಿಸಬಲ್ಲವರಾಗಿದ್ದಾರೆ. ಮಿಕ್ಕವರೆಲ್ಲ ಕನ್ನಡ ಮಾತೃಭಾಷಿಕರಾಗಿದ್ದರೂ, ಉಕ್ತಲೇಖನವನ್ನು ಲಕ್ಷಣವಾಗಿ ಬರೆಯಲು ಕೂಡಾ ಅಶಕ್ತರಾಗಿದ್ದಾರೆ. ಅವರಲ್ಲಿ ಅನೇಕರು ಶಾಲೆಯ ಮಟ್ಟಿಗಾದರೂ, ಕನ್ನಡಕ್ಕಿಂತ ಚೆನ್ನಾಗಿ ಮರಾಠಿಯನ್ನೇ ತಿಳಿದವರು. ಈ ಎರಡು ಭಾಷೆಗಳ ಗೊಂದಲ ಮತ್ತು ಇವೆರಡು ಭಾಷೆಗಳಲ್ಲಿ ಯಾವುದರಲ್ಲೂ ಪ್ರಾವಿಣ್ಯವಿಲ್ಲದಿರುವುದು, ದಕ್ಷಿಣ ಭಾಗದ ಪಂಡಿತರನ್ನು ಉಳಿದೆರಡು ವಿಭಾಗದವರಿಗಿಂತ ಸಾಕಷ್ಟು ಕಾಲ ಹಿಂದುಳಿಯುವಂತೆ ಮಾಡಿದೆ ಎಂಬ ಅಭಿಮತ ನನ್ನದು ಎಂದಿದ್ದಾರೆ. ಈ ವಿಭಾಗದ 'ಡೆಪ್ಯುಟಿ ಇನ್ಸ್‌ಪೆಕ್ಟರು'ಗಳು ಮತ್ತು ಇಂಗ್ಲೀಷ್ ಉಪಾಧ್ಯಾಯರುಗಳಲ್ಲಿ ಯಾರೂ ಕ್ಯಾನರಿಸ್(ಕನ್ನಡ)ಭಾಷಿಕರಲ್ಲ ಹಾಗೂ ಜಿಲ್ಲೆಗಳ ದೇಶೀಯ ಶಾಲಾ ಉಪಾಧ್ಯಾಯರುಗಳಲ್ಲಿ ಕೂಡಾ ಕೆಲವೇ ಕೆಲವರು ಕನ್ನಡ ಭಾಷಿಕರಾಗಿದ್ದಾರೆ. ಹೆಚ್ಚಾಗಿ ಮರಾಠಿ ಪುಸ್ತಕಗಳು ಮತ್ತು ಉಪಾಧ್ಯಾಯರು ಗಳಿಂದಲೇ ತುಂಬಿದ ಈ ಶಾಲೆಗಳ ವಿಷಯವಾಗಿ ಕನ್ನಡದ ಜನರು ಉದಾಸೀನ ಭಾವನೆ ಹೊಂದಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.[೧] ಇಂತಹ ಇನ್ನೂ ಹತ್ತು ಹಲವು ಅಭಿಪ್ರಾಯಗಳು, ಕನ್ನಡಿಗರು ಪರಿಸ್ಥಿತಿಯ ಬಿಕ್ಕಟ್ಟಿನಿಂದಾಗಿ ಮರಾಠಿ ಭಾಷೆಗೆ ಶರಣುಹೋದ ಸಂಗತಿಯನ್ನು ಬಹಳ ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ.

ಇದಲ್ಲದೇ ಪುಣೆ, ಮುಂಬಯಿಗಳಿಗೆ ಹೋಗಿ ಶಿಕ್ಷಣ ಪಡೆದು ಮರಳಿದ ಕನ್ನಡಿಗರೆಲ್ಲ ತಮ್ಮ ಮಾತೃಭಾಷೆಯನ್ನು ಮರೆತು ಮರಾಠಿಯನ್ನೇ ಪ್ರಜ್ಞಾಪೂರ್ವಕವಾಗಿ ಮಾತನಾಡುವುದನ್ನು ರೂಢಿಸಿಕೊಳ್ಳುತ್ತಿದ್ದರು. ತಾವು ಮದುವೆ ಮಾಡಿಕೊಂಡು ಮನೆ ತುಂಬಿಸಿಕೊಂಡಿದ್ದ ಮೈಸೂರಿನ ಕಡೆಯ ಹೆಣ್ಣು ಮಕ್ಕಳಿಗೂ ಸಹ ಬಲವಂತವಾಗಿ ಮರಾಠಿ ಭಾಷೆಯನ್ನು ಕಲಿಯುವಂತೆ ಮಾಡಿ ಇಡೀ ಕುಟುಂಬವನ್ನೇ ಆ ಭಾಷೆಯ ಪ್ರಭಾವದಿಂದ ಸಮ್ಮೋಹನಗೊಳಿಸಿ ಬಿಡುತ್ತಿದ್ದರು. ಈ ಮರಾಠಿ ಮೋಹಕ್ಕೆ ಬಲಿಯಾದ ಅನೇಕರು ಪುಸ್ತಕ, ವರ್ತಮಾನ ಪತ್ರಿಕೆ, ನಾಟಕ, ಸಂಗೀತ ಇವೆಲ್ಲವನ್ನು ಆ ಭಾಷೆಯಲ್ಲೇ ಅಪೇಕ್ಷಿಸುತ್ತಿದ್ದರು.

ಕನ್ನಡವನ್ನು, ಕನ್ನಡಿಗರನ್ನು ಕೇಳುವವರೇ ದಿಕ್ಕಿಲ್ಲವೆಂಬಂತೆ ಆಗಿತ್ತು. ಅಂದು ಧಾರವಾಡ, ಹುಬ್ಬಳ್ಳಿಗಳಲ್ಲಿ ಆರಂಭವಾದ ಮೊಟ್ಟ ಮೊದಲ ಶಾಲೆಗಳೂ ಕೂಡಾ ಮರಾಠಿ ಮಯವಾಗಿದ್ದವು.

೧೮೨೬ರ ಸುಮಾರಿಗೆ ಎರಡು ಮರಾಠಿ ಶಾಲೆಗಳು ಆರಂಭಗೊಂಡವು. ಒಂದು ಹುಬ್ಬಳಿಯಲ್ಲಿ ಇನ್ನೊಂದು ಧಾರವಾಡದಲ್ಲಿ ಎಂಬ ಸಂಗತಿ ಗಮನಾರ್ಹ. ಈ ವಿಧವಾದ ಅವಸ್ಥೆಗೆ ಕಾರಣಗಳು ಅತ್ಯಂತ ಸ್ಪಷ್ಟವಾಗಿವೆ. ಮೊದಲನೆಯದಾಗಿ ರಾಜಸತ್ತೆಯ ಕೊನೆಗಾಲದಲ್ಲಿ ಕನ್ನಡನಾಡು ಪೇಶ್ವೆಯರ ಅಧಿಪತ್ಯದಲ್ಲಿ ನರಳುವಂತಾದುದು, ಎರಡನೆಯದಾಗಿ ಇಲ್ಲಿಯ ಮುಖಂಡರೂ, ಅಧಿಕಾರಸ್ಥರೂ ಮರಾಠಿ ಭಾಷಿಕರಾಗಿದ್ದುದು, ಮೂರನೆಯದಾಗಿ ಕನ್ನಡಿಗರು ಅಭಿಮಾನ ಶೂನ್ಯರಾಗಿದ್ದುದು. ಹೀಗೆ ಮೂರು ಸಂಗತಿಗಳು ಒಟ್ಟು ಗೂಡಿ ಸೃಷ್ಟಿಸಿದ ದುರವಸ್ಥೆ ಅವರ್ಣನೀಯವಾದುದು. ಪರಿಸ್ಥಿತಿ ಎಷ್ಟು ಭೀಕರವಾಯಿತೆಂದರೆ, ಕನ್ನಡಿಗರೇ ಇಲ್ಲಿ ತಮ್ಮ ಆತ್ಮಬಲವನ್ನು ಕಳೆದುಕೊಂಡು ಪರಕೀಯ ಪ್ರಜ್ಞೆಯಿಂದ ಚಡಪಡಿಸುವಂತಾಯಿತು.[೨] ಇಂತಹ ಸಂದರ್ಭದಲ್ಲಿ ಕನ್ನಡಿಗರಿಗೆ ನೆರವಾದದ್ದು ವೀರಶೈವ ಮಠಗಳು.

### ೩.೨. ಬೆಳಗಾವಿ ಪ್ರಾಂತದ ಕನ್ನಡ ಶಿಕ್ಷಣಕ್ಕೆ ವೀರಶೈವ ಮಠಗಳ ಕೂಡುಗೆ

ಬೆಳಗಾವಿ ಭಾಗದ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಬಂದರೆ ವೀರಶೈವ ಮಠಗಳು ಈ ಕಡೆಗೆ ಹೆಚ್ಚು ಗಮನಕೊಟ್ಟಿದ್ದು ಕಂಡುಬರುತ್ತದೆ ಕರ್ನಾಟಕದಲ್ಲಿ ಅದೂ ಧಾರವಾಡ ಹಾಗೂ ಹಾವೇರಿ ಜಿಲ್ಲೆಯ ಕುಂದಗೋಳ, ಸಂಶಿ, ಗುಡಗೇರಿ, ಸವಣೂರು, ಹತ್ತಿಮತ್ತೂರ ಮುಂತಾದ ಊರುಗಳಲ್ಲಿ ಇಂತಹ ವಿದ್ಯಾಲಯಗಳಿದ್ದ ಬಗ್ಗೆ ಮಾಹಿತಿ ಸಿಗುತ್ತದೆ. ಯಥಾಶಕ್ತಿ ಶಿಕ್ಷಣ ನೀಡುವ ಕಾರ್ಯವನ್ನು ಇವು ಮಾಡುತ್ತಲೇ ಇದ್ದವು. ಅವುಗಳಿಗೆ ಅಯ್ಯನವರ ಶಾಲೆಗಳೆಂದು ಕರೆಯುತ್ತಿದ್ದರು. ಅವು ವಿಶೇಷವಾಗಿ ಮಠಗಳಲ್ಲಿ ನಡೆಯುತ್ತಿದ್ದರಿಂದ, ಅವುಗಳಿಗೆ 'ಸಾಲಿಮಠ'ಗಳೆಂದು ಕರೆಯುತ್ತಿದ್ದರು. ಇಂತದರಲ್ಲಿ ವಿದ್ಯಾಬೋಧನೆ ಮಾಡುತ್ತಿದ್ದವರನ್ನು 'ಗುರು', 'ಅಯ್ಯ'ನವರು ಎಂದು ಕರೆಯುವ ರೂಢಿ ಇತ್ತು. ಶಾಲೆಗಳನ್ನು ನಡೆಸುತ್ತಿದ್ದವರಿಗೆ 'ಸಾಲಿ' ಎಂದು ಅಡ್ಡ ಹೆಸರುಬರುತ್ತಿತ್ತು.

ಈ ಮಠಗಳು ನಮ್ಮ ನಾಡಿನ ಶಿಕ್ಷಣ ಸಂಸ್ಕೃತಿಗಳ ಬೆನ್ನೆಲುಬುಗಳಾಗಿದ್ದವು. ಇಲ್ಲಿಯ ಬೋಧಕರು ಅಷ್ಟೊಂದು ವಿದ್ವಾಂಸರಾಗಿರದಿದ್ದರೂ ಅಗತ್ಯಕ್ಕೆ ತಕ್ಕಷ್ಟು ಓದಿಕೊಂಡವರಾಗಿದ್ದರು. ಜನರನ್ನು ತಮ್ಮೆಡೆಗೆ ಸೆಳೆಯಲು ಇದರಿಂದ ಅಯ್ಯನವರಿಗೆ ತುಂಬಾ ಅನುಕೂಲವಾಗಿತ್ತೆಂಬುದೂ ಅಷ್ಟೇ ನಿಜ. ಇಂತಹ ಶಾಲೆಗಳಲ್ಲಿ ಓದು, ಬರಹ, ಗಣಿತ ವಿಷಯಗಳನ್ನು ಕಲಿಸುತ್ತಾ ಹೆಚ್ಚಿನ ಗಮನವನ್ನು ಸುಂದರ ಹಾಗೂ ಸ್ಪಷ್ಟ ಅಕ್ಷರಗಳನ್ನು ಬರೆಯಲು ಕೊಡುತ್ತಿದ್ದರು. ಹೀಗೆ ಶಿಕ್ಷಣ ಪದ್ಧತಿ ಸಾಗಿ ಬರುವಾಗ ಮರಾಠಿ ಪ್ರಭಾವದಿಂದಾಗಿ ಆ ಭಾಷೆಯ ಬೋಧೆ ಇಲ್ಲಿ ಪ್ರಾರಂಭವಾಯಿತು. ಶಿಕ್ಷಕರಿಗೆ 'ಪಂತೋಜಿ'ಗಳೆನ್ನುತ್ತಿದ್ದರು. ಮುಂದೆ ಕನ್ನಡ ಬೋಧಕರಿಗೂ 'ಪಂತೋಜಿ'ಗಳೆಂದು ಕರೆಯುವುದು ರೂಢಿಯಾಯಿತು. ಮಠದ ಅಯ್ಯನವರ ಶಾಲೆಗಳಲ್ಲದೇ ಅಕ್ಷರ ಜೀವಿಗಳಾಗಿ

ಕೆಲವರು ಸಾರ್ವಜನಿಕ ರೂಪದ ಶಾಲೆಗಳನ್ನು ನಡೆಸುತ್ತಿದರು. ಇವುಗಳಿಗೆ ಗಾಂವಟಿ ಶಾಲೆಗಳೆನ್ನು ತ್ತಿದ್ದರು. ಈ ಶಿಕ್ಷಣ ಕ್ರಮದಲ್ಲಿ ಧೂಳಾಕ್ಷರ, ಬಿಡಿ ಅಕ್ಷರ, ದೊಡ್ಡ ಅಕ್ಷರಗಳನ್ನು ಕಲಿಸುವುದರ ಜೊತೆಗೆ ಧಾರ್ಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಸಾರ್ವಜನಿಕವಾಗಿ ಕನ್ನಡ ಮಾಧ್ಯಮದಲ್ಲಿ ಪುರಾಣ, ಶಿವಕೀರ್ತನ ಪ್ರವಚನಗಳನ್ನು ಹಮ್ಮಿಕೊಳ್ಳುವುದರ ಮೂಲಕ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ 'ಸಾಲಿಮಠ'ಗಳನ್ನು ನಡೆಸುವ ಮೂಲಕ ಕನ್ನಡ ಭಾಷೆಯನ್ನು ರಕ್ಷಿಸಿಕೊಂಡು ಬಂದ ಶ್ರೇಯಸ್ಸು ಈ ಭಾಗದ ವೀರಶೈವ ಸಮಾಜಕ್ಕೆ ಸಲ್ಲುತ್ತದೆ.

ಅಂತಹ ವಿಷಮ ಪರಿಸ್ಥಿತಿಯಲ್ಲಿ ಕನ್ನಡ ಭಾಷೆಯನ್ನು ಕಾಪಾಡಿಕೊಂಡು ಬಂದ ಸ್ಮರಣೀಯ ಕಾರ್ಯವನ್ನು ವೀರಶೈವ ಸಮಾಜ ಮಾಡಿತೆಂಬುದು ಎದ್ದು ಕಾಣುತ್ತದೆ. ಈ ನಿಷ್ಠೆ 'ಕನ್ನಡಭಾಷೆ' ಜೀವ ಹಿಡಿದುಕೊಂಡಿರಲು ಆಶ್ರಯವಾಗಿತ್ತೇ ವಿನಃ ಅನ್ಯ ಭಾಷಾ ದಬ್ಬಾಳಿಕೆಯನ್ನು ಮುರಿದು ಮೇಲೇಳುವಷ್ಟು ಸಶಕ್ತವಾಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಬ್ರಿಟೀಷರು ಸಾಕಷ್ಟು ದೂರಾನ್ವಯ ದೃಷ್ಟಿಯಿಂದ ಶಿಕ್ಷಣ ಪ್ರಸಾರಕ್ಕೆ ಕೈ ಹಾಕಿದರು.

### ೩.೩. ಬೆಳಗಾವಿ ಪ್ರಾಂತದ ಶಿಕ್ಷಣದಲ್ಲಿ ಬ್ರಿಟೀಶರ ಪ್ರವೇಶ

ಬ್ರಿಟೀಷರ ಶೈಕ್ಷಣಿಕ ಉದ್ದೇಶವು ಮತಪ್ರಚಾರ ಮತ್ತು ಭಾರತೀಯರನ್ನು ಮತಾಂತರಗೊಳಿಸುವ ಒಳಸಂಚಿನಿಂದ ಕೂಡಿದ್ದಿತು. ಹೀಗಾಗಿ, ಈ ಶಾಲೆಗಳಲ್ಲಿ ಬೋಧಿಸುತ್ತಿದ್ದ ಹೆಚ್ಚಿನ ವಿಷಯಗಳು ಪಾಶ್ಚಾತ್ಯ ಸಂಸ್ಕೃತಿಗೆ ಸಂಬಂಧಪಟ್ಟವುಗಳಾಗಿದ್ದವು. ಬ್ರಿಟೀಷರ ಶಿಕ್ಷಣ ನೀತಿಯ ಹಿಂದೆ, ದೇಶದ ಜನರ ದೊಂಬಿ ಮನೋಭಾವವನ್ನು ಕಡಿಮೆ ಮಾಡುವ ರಾಜಕೀಯ ಪ್ರೇರಿತ ದೃಷ್ಟಿ ಅಡಕವಾಗಿದ್ದಂತೆ ತೋರುತ್ತದೆ. ಆದರೆ ಇವೆಲ್ಲಕ್ಕಿಂತ ಗಂಭೀರವಾದ ಸಮಸ್ಯೆಗಳು ಬೇರೆಯೇ ಆಗಿದ್ದವು. ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೆಲವರಿಗೆ ಮಾತ್ರ ಪ್ರಯೋಜನ ಲಭಿಸುವಂತಾಗಿತ್ತು.೧೮೮೫ ರಲ್ಲಿ ಬ್ರಿಟೀಷರ ಆಡಳಿತದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾವಿಯಲ್ಲಿ ಕಾರ್ಯರಂಭ ಮಾಡಿದ್ದು ತಿಳಿದುಬರುತ್ತದೆ. ಆದರೆ ಇದಕ್ಕೆ ಮೊದಲು ಶಾಲೆಗಳು ಶ್ರೀಮಂತರಿಗೆ ಸೀಮಿತವಾಗಿದ್ದವು. ೧೮೩೦ ರಲ್ಲಿ ಮೊಟ್ಟಮೊದಲ ಶಾಲೆ ಆರಂಭವಾದರೆ, ೧೮೩೮ ರಲ್ಲಿ ಕನ್ನಡ ಶಾಲೆ ಆರಂಭವಾಯಿತು. ೧೮೫೬ ರಲ್ಲಿ ಸೇಂಟ್ ಪಾಲ್ಸ್ ಹೈಸ್ಕೂಲ್ ಆರಂಭವಾದರೆ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಮರಾಠಿ ಶಾಲೆ ಆರಂಭವಾದದ್ದು ೧೮೮೭ ರಲ್ಲಿ. ಮುಂದೆ ೧೮೪೦ ರಲ್ಲಿ ಮುಂಬೈ ಎಜುಕೇಷನ್ ಬೋರ್ಡ್ ಆರಂಭವಾಗಿ, ನಂತರ ಅದು ೧೮೮೫ ರಲ್ಲಿ ಪುಣೆಯ ಸಾರ್ವಜನಿಕ ಶಿಕ್ಷಣ ಇಲಾಖೆಯಾಗಿ ಮಾರ್ಪಟ್ಟಿತು.೩ ಬೆಳಗಾವಿ ಭಾಗದಲ್ಲಿ ಆಳ್ವಿಕೆ ಮಾರ್ಪಟ್ಟರೂ ಕನ್ನಡ ಭಾಷೆ ಮತ್ತು ಶಾಲೆಗಳಿಗೆ ಪ್ರೋತ್ಸಾಹ ದೊರೆಯಲಿಲ್ಲ. ಮರಾಠಿ ಭಾಷೆ ಮತ್ತು ಮರಾಠಿ ಶಾಲೆಗಳ ಪ್ರಾಭಲ್ಯ ಹಾಗೆಯೇ ಮುಂದುವರೆಯಿತು.

## ೩.೪. ಬೆಳಗಾವಿ ಪ್ರಾಂತದಲ್ಲಿ ಮರಾಠಿ ಶಾಲೆಗಳು ಮತ್ತು ಮರಾಠಿ ಭಾಷೆ

ಕೆಲವು ಅಧಿಕಾರಿಗಳ ಕಾರ್ಯಾಸಕ್ತಿಗಳೂ ಒಂದು ನಿರ್ದಿಷ್ಟ ಸ್ವರೂಪ ಪಡೆಯಲು ಹಾತೊರೆಯುತ್ತಿದ್ದರೂ, ಧಾರವಾಡದಂತಹ ಸಂಪೂರ್ಣ ಕನ್ನಡ ಭಾಷಾ ಪ್ರದೇಶದಲ್ಲಿ ಸರ್ಕಾರವು ೧೮೨೬ ರಲ್ಲಿ ಮೊದಲಿಗೆ ಒಂದು ಮರಾಠಿ ಶಾಲೆಯನ್ನು ಪ್ರಾರಂಭಿಸಿತು. ಕ್ರಿ.ಶ.೧೮೫೪-೫೫ ರಿಂದ ಇಡೀ ದೇಶದಲ್ಲಿ ಸಮಾನವಾಗಿ ಅನ್ವಯಿಸುವಂತಹ ಏಕರೂಪದ ಶಿಕ್ಷಣ ಯೋಜನೆ ಸಿದ್ದವಾಯಿಗಿತ್ತು. ಶಿಕ್ಷಣದ ಆಗು ಹೋಗುಗಳನ್ನು ನೋಡಿಕೊಳ್ಳಲು "Department of public Instruction" ಇಲಾಖೆಯು ಪ್ರತಿಯೊಂದು ಪ್ರಾಂತದಲ್ಲಿಯೂ ಹುಟ್ಟಿಕೊಂಡವು. ಇಲ್ಲಿಂದ ಮುಂದೆ ಪ್ರಾಥಮಿಕ, ಮಾಧ್ಯಮಿಕ ಮತ್ತು ಉನ್ನತ ಎಂಬ ಶಿಕ್ಷಣದ ಹಂತಗಳು ಸ್ಪಷ್ಟವಾಗಿ ಗೋಚರಿಸಿದವು. ಡೆಕ್ಕನಿನ ಭಾಗದಿಂದ ಧಾರವಾಡ ಬೆಳಗಾವಿ ಜಿಲ್ಲೆಗಳನ್ನು ಪತ್ಯೇಕಿಸಿ ದಕ್ಷಿಣ ಭಾಗವೆಂಬ ವಿಭಾಗವನ್ನು ಸೃಷ್ಟಿಸಲಾಯಿತು. ಹೀಗೆ ಧಾರವಾಡ, ಬೆಳಗಾವಿ, ಕಾರವಾರ ಮತ್ತು ಬಿಜಾಪುರ ಜಿಲ್ಲೆಗಳನ್ನೊಳಗೊಂಡ ಮುಂಬಾಯಿ ಕರ್ನಾಟಕವು ರಚನೆಗೊಂಡಿತು. ಇದು ಕನ್ನಡಿಗರ ಪಾಲಿಗೆ ಒಂದು ಅತ್ಯಂತ ಅನುಕೂಲಕರ ಬೆಳವಣಿಗೆಯಾಯಿತು. ಈ ನೆಲದ ಭಾಷೆ ಮರಾಠಿ ಅಲ್ಲ, ಕನ್ನಡವೆಂದು ಬ್ರಿಟೀಷ್ ಅಧಿಕಾರಿಗಳಿಗೆ ಮನವರಿಕೆಯಾಗಿತ್ತು. ಭಾಷೆಯ ವಿಷಯದಲ್ಲಿ ದಮನಕಾರಿ ಪ್ರವೃತ್ತಿಯನ್ನು ಅನುಸರಿಸಿಕೊಂಡು ಮುಂದುವರಿದು ಆಳುವುದು ಅವರಿಗೆ ಸಾಧುವಾದುದೆನಿಸಲಿಲ್ಲ. ಹೀಗಾಗಿ ಕನ್ನಡದ ಪುನರುಜ್ಜೀವನದ ನಿಟ್ಟಿನಲ್ಲಿ ಅವರ ಹಲವು ಆಲೋಚನೆಗಳು ಪ್ರವೃತ್ತವಾದವು.ಮುಂಬಾಯಿ ಕರ್ನಾಟಕದಲ್ಲಿನ ಶೈಕ್ಷಣಿಕ ಪರಿಸರ ಮೊದಲೇ ಉತ್ತಮ ಸ್ಥಿತಿಯಲ್ಲಿರಲಿಲ್ಲ. ಇದ್ದ ಸೀಮಿತ ವ್ಯವಸ್ಥೆಯಲ್ಲಿ ಮರಾಠಿಗೆ ಮೊದಲ ಸ್ಥಾನ ದೊರೆತಿತ್ತು. ಹೀಗಾಗಿ ಕನ್ನಡಿಗರಿಗೆ ತಮ್ಮ ಭಾಷಿಕ ನೆಲೆಯ ಎಚ್ಚರ ಬಂದದ್ದು ಬಹಳ ತಡವಾಗಿ. ಮುಂಬಾಯಿ ನಗರದಲ್ಲಿ ಶಿಕ್ಷಣ ಇಲಾಖೆ ಎಂಬುದು ಆರಂಭಗೊಂಡದ್ದೆ ಕ್ರಿ.ಶ.೧೮೫೬ ರಲ್ಲಿ. ಇನ್ನು ಕನ್ನಡದ ಈ ಜಿಲ್ಲೆಗಳಿಗೆ ಅದು ವಿಸ್ತಾರ ಪಡೆದದ್ದು ಕ್ರಿ.ಶ.೧೮೬೩ ರಲ್ಲಿ. ಸಾರ್ವಜನಿಕವಾಗಿ ಮರಾಠಿ ಭಾಷೆಗೆ ಇಲ್ಲಿ ಹೆಚ್ಚಿನ ಗೌರವ-ಅದರಗಳು ದೊರೆತ್ತಿದ್ದವು. ಶಾಲೆಗಳಲ್ಲೂ ಮರಾಠಿಗೆ ಮಾತ್ರ ಮೊದಲ ಪ್ರಾಶಸ್ತ್ಯ. ಇಂಥ ಸನ್ನಿವೇಶಗಳಲ್ಲಿ ಕನ್ನಡಿಗರು ಮರಾಠಿಯಲ್ಲೇ ವ್ಯವಹರಿಸುವುದು ಅನಿವಾರ್ಯವಾಗಿತ್ತು. ಅಲ್ಲದೆ ಕನ್ನಡದಲ್ಲಿ ಮಾತನಾಡುವುದೇ ಅವಮಾನದ ಸಂಗತಿ ಎಂಬ ಧೋರಣೆಗಳು ಸಹ ಹುಟ್ಟಿಕೊಂಡಿದ್ದವು.

ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿರುವ ಬೆಳಗಾವಿ, ಬಿಜಾಪೂರ, ಗುಲ್ಬರ್ಗಾ, ಬೀದರ ಜಿಲ್ಲೆಗಳು ಮಹಾರಾಷ್ಟ್ರದ ಗಡಿಗೆ ಹೊಂದಿಕೊಂಡಿವೆ. ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿರುವ ಪ್ರದೇಶಗಳಲ್ಲಿ ಮರಾಠಿ ಆಡಳಿತ ಭಾಷೆಯಾಗಿರುವಂತೆ, ಕರ್ನಾಟಕದ ಉತ್ತರ ಭಾಗದ ಪ್ರದೇಶಗಳಲ್ಲಿ ಕನ್ನಡ ಆಡಳಿತ ಭಾಷೆಯಾಗಿರುತ್ತದೆ. ಇದರಿಂದ ಒಂದು ಬಗೆಯ ಕನ್ನಡವೂ, ಇನ್ನೊಂದು

ಬಗೆಯ ಮರಾಠಿಯೂ ಕಾಣಿಸಿಕೊಳ್ಳಲು ಕಾರಣವಾಗಿರುತ್ತದೆ. ಇವುಗಳಲ್ಲಿ ಒಂದನ್ನು ಮರಾಠಿ ಪ್ರಭಾವಿತ ಕನ್ನಡ ಎಂದು, ಇನ್ನೊಂದನ್ನು ಕನ್ನಡ ಪ್ರಭಾವಿತ ಮರಾಠಿ ಎಂದು ಕರೆಯಲಾಗುತ್ತದೆ.

### ೩.೫. ಏಕೀಕರಣೋತ್ತರ ಬೆಳಗಾವಿಯಲ್ಲಿ ಕನ್ನಡದ ಸ್ಥಿತಿ

ಪ್ರಾಥಮಿಕ ಶಿಕ್ಷಣ ಮಕ್ಕಳ ಮಾತೃಭಾಷೆಯಲ್ಲಿ ನಡೆಯಬೇಕೆಂಬ ಉಚ್ಚ ನ್ಯಾಯಾಲಯ ೧೯೯೪ ರಲ್ಲಿ ತೀರ್ಪು ನೀಡಿದ್ದರೂ. ಶಿಕ್ಷಣ ತಜ್ಞರು ಅದನ್ನು ಮತ್ತೆ ಮತ್ತೆ ಪ್ರತಿಪಾದಿಸುತ್ತಿದ್ದರೂ ಸರಕಾರಗಳು ಆ ಬಗೆಗೆ ಯಾವುದೇ ಯಾವುದೇ ಖಚಿತವಾದ ಕ್ರಮಕೈಗೊಂಡಿಲ್ಲ. ಕನ್ನಡದಲ್ಲಿ ಶಿಕ್ಷಣವು ಶಿಕ್ಷಣದಲ್ಲಿ ಕನ್ನಡವು ಎಂಬ ಗೊಂದಲಕಾರಿ ಸ್ಥಿತಿಯು ಸೃಷ್ಟಿಯಾಗುತ್ತಿರುವ ಸಂದರ್ಭದಲ್ಲಿ ಹೊಸ ಹೊಸದಾಗಿ ಖಾಸಗಿ ಇಂಗ್ಲೀಷ್ ಶಾಲೆಗಳು ಆರಂಭವಾಗುತ್ತಿವೆ. ಶಿಕ್ಷಣದಲ್ಲಿ ಕನ್ನಡದ ಸ್ಥಾನದ ಬಗೆಗೆ ಗೋಕಾಕ ಚಳವಳಿ ನಡೆದದ್ದರ ನೆನಪು ಇನ್ನೂ ಹಸಿ ಹಸಿಯಾಗಿದೆ. ಉದ್ಯೋಗ ಕ್ಷೇತ್ರದಲ್ಲಿ ಕನ್ನಡಿಗರ ಸ್ಥಾನದ ಬಗೆಗೆ ಮಹಿಷಿ ವರದಿಯನ್ನು ಜಾರಿಗೆ ತರಲು ಹಿಂದೆ ಮುಂದೆ ನೋಡಲಾಗುತ್ತಿದೆ. ಆಳುವ ಜನರಿಗೆ ಕನ್ನಡ ಮತ್ತು ಕನ್ನಡಿಗರ ಬಗೆಗೆ ಇರುವ ತಾತ್ಸಾರ ಮನೋಭಾವಕ್ಕೆ ಇದಕ್ಕಿಂತ ಬೇರೊಂದು ಒಳ್ಳೆಯ ಉದಾಹರಣೆ ಸಿಗಲಾರದು. ಇದೇ ತಾತ್ಸಾರವನ್ನು ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡುವುದರಲ್ಲಿಯೂ ಗಮನಿಸಬಹುದು. ಕನ್ನಡವೇ ಸರಕಾರದ ಅಧಿಕೃತ ಭಾಷೆಯೆಂದು ಸಾಮಾನ್ಯವಾಗಿ ಇಂಗ್ಲೀಷ್‌ನಲ್ಲಿ ಅಪರೂಪಕ್ಕೆ ಕನ್ನಡದಲ್ಲಿ ಆಗಾಗ್ಗೆ ಆದೇಶ ನೀಡುವ, ನೆನಪಿನ ಪತ್ರ ರವಾನಿಸುವ ನಮ್ಮ ಆಡಳಿತ ಯಂತ್ರ ತನ್ನ ವ್ಯವಹಾರಗಳನ್ನೇ ಅಧಿಕೃತವಾಗಿ ಕನ್ನಡದಲ್ಲಿ ಮಾಡುವುದಿಲ್ಲ.[೪] ಇಂದಿಗೂ ಮರಾಠಿ ಭಾಷೆಯ ಪ್ರಾಭಲ್ಯ ಮುಂದುವರೆದಿದ್ದು ಈ ಕಾರಣಕ್ಕಾಗಿಯೇ ಬೆಳಗಾವಿ ಜಿಲ್ಲೆಯು ಮಹಾರಾಷ್ಟ್ರಕ್ಕೆ ಸೇರಬೇಕೆನ್ನುವ ಸಂಘರ್ಷಗಳು ಅಗಾಗ ಕಂಡುಬರುತ್ತವೆ.ಸರ್ಕಾರಗಳು ಕರ್ನಾಟಕದ ಗಡಿ ಭಾಗಗಳ ಭಾಷೆ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಸುಧಾರಣೆಗಾಗಿ ಸರ್ಕಾರ ವಿವಿಧ ಆಯೋಗಗಳು ಮತ್ತು ಸಮಿತಿಗಳನ್ನು ನೇಮಿಸಿದೆ. ಈ ಸಮಿತಿಗಳು ಹಲವಾರು ಶಿಫಾರಸ್ಸುಗಳನ್ನು ನೀಡಿವೆ. ಅವುಗಳನ್ನು ಕೆಳಗಿನಂತೆ ಚರ್ಚಿಸಿದೆ.

### ೩.೬. ಗಡಿನಾಡ ಕನ್ನಡಿಗರ ಶಿಕ್ಷಣ ಮತ್ತು ಭಾಷಾಭಿವೃದ್ಧಿಗೆ ಆಯೋಗ/ಸಮಿತಿಗಳ ಶಿಫಾರಸ್ಸುಗಳು

#### ಗೋಕಾಕ ವರದಿ

ಇದರ ಶಿಫಾರಸ್ಸಿನ ಪ್ರಕಾರ ಮೊದಲನೆಯದಾಗಿ, ಪ್ರೌಢ ಶಿಕ್ಷಣ ಹಂತದಲ್ಲಿ ಕನ್ನಡವೇ ಏಕೈಕ ಪ್ರಥಮ ಭಾಷೆಯಾಗಿದ್ದು, ಅದಕ್ಕೆ ೧೫೦ ಅಂಕಗಳಿರಬೇಕು. ಎರಡನೆಯದಾಗಿ, ಇಂಗ್ಲೀಷ್,

ಸಂಸ್ಕೃತ, ಉರ್ದು ಅಥವಾ ಇನ್ನಿತರ ಯಾವುದೇ ಆಧುನಿಕ ಭಾರತೀಯ ಭಾಷೆ ಅಥವಾ ಲ್ಯಾಟಿನ್, ಪರ್ಶಿಯನ್, ಅರೇಬಿಕ್ ಇತ್ಯಾದಿ ಪ್ರಾಚೀನ ಭಾಷೆಗಳಲ್ಲೊಂದು ದ್ವಿತೀಯ ಭಾಷೆಯಾಗಿರಬೇಕು. ಮತ್ತು ಅದಕ್ಕೆ ೧೦೦ ಅಂಕಗಳಿರಬೇಕು. ಮೂರನೆಯದಾಗಿ, ದ್ವಿತೀಯ ಭಾಷೆ ಪಟ್ಟಿಯಲ್ಲಿ ಆಯ್ಕೆಯಾದ ಭಾಷೆ ಬಿಟ್ಟು ಮಿಕ್ಕ ಯಾವುದಾದರೊಂದು ಭಾಷೆ ೫೦ ಅಂಕಗಳನ್ನೊಳಗೊಂಡ ಕಡ್ಡಾಯ ತೃತೀಯ ಭಾಷೆಯಾಗಿರಬೇಕು. ನಾಲ್ಕನೆಯದಾಗಿ, ಭಾಷಾ ಶಾಸ್ತ್ರದಲ್ಲಿ ವಿಶೇಷ ಆಸಕ್ತಿಯುಳ್ಳ ಪ್ರತಿಭಾವಂತ ವಿದ್ಯಾರ್ಥಿಗಳಿಗೋಸ್ಕರ ನಾಲ್ಕನೇ ಭಾಷೆ ಆರಿಸಿಕೊಂಡು ಓದಿ ಹತ್ತನೆಯ ತರಗತಿಯಲ್ಲಿ ಪರೀಕ್ಷೆಗೆ ಕೂಡಲು ಅವಕಾಶ ಕಲ್ಪಿಸಬೇಕು, ಆದರೆ ಈ ನಾಲ್ಕನೆಯ ಭಾಷೆಯಲ್ಲಿ ಪಡೆದ ಅಂಕಗಳನ್ನು ಆ ವಿದ್ಯಾರ್ಥಿಗಳ ಫಲಿತಾಂಶ ನಿರ್ಧರಿಸುವಲ್ಲಿ ಪರಿಗಣಿಸಕೂಡದು ಎಂದು ಶಿಫಾರಸ್ಸು ಮಾಡಿತು. ಆದರೆ ಈ ವರದಿಯನ್ನು ಪೂರ್ತಿ ಅಂಗೀಕರಿಸದ ಸರ್ಕಾರ ಅದನ್ನು ವಿಕೃತ ಮಾರ್ಪಾಡಿನೊಂದಿಗೆ ೧೯೮೨ ರ ಎಪ್ರಿಲ್ ೧೯ ರಂದು ಪ್ರಕಟಿಸಿತು. ತತ್‌ಕ್ಷಣದಲ್ಲೇ ಸರ್ಕಾರದ ತೀರ್ಮಾನದ ಪರ ಹಾಗೂ ವಿರೋಧಿ ಚಳವಳಿ ಕರ್ನಾಟಕದಾದ್ಯಂತ ತಲೆ ದೋರಿತು. ಗೋಕಾಕ ವರದಿಯನ್ನು ತಪ್ಪಾಗಿ ಗ್ರಹಿಸಿದ ಕೆಲವು ಭಾಷಾ ಅಲ್ಪಸಂಖ್ಯಾತರು ರಾಜಕೀಯ ವ್ಯಕ್ತಿಗಳ ಮುಷ್ಠಿಯಲ್ಲಿ ಸಿಲುಕಿ ಈ ಪೂರ್ಣ ವರದಿಯನ್ನೇ ವಿರೋಧಿಸತೊಡಗಿದರು. ಆದರೆ ಕ್ರಮೇಣ ಅದರ ಸತ್ಯಾಸತ್ಯತೆಗಳನ್ನು ಅರಿತಂತೆ ಗೋಕಾಕ ವರದಿ ವಿರೋಧಿಗಳು ತಣ್ಣಗಾಗತೊಡಗಿದರು. ಎರಡನೆಯ ಸಮಿತಿ

**ಡಾ.ಎಚ್.ನರಸಿಂಹಯ್ಯ ಸಮಿತಿ ವರದಿ**

ಇದರ ಪ್ರಕಾರ ಮೊದಲನೆಯದಾಗಿ, ಒಂದನೆಯ ತರಗತಿಯಿಂದ ನಾಲ್ಕನೆಯ ತರಗತಿಯವರೆಗೆ ಶೈಕ್ಷಣಿಕವಾಗಿ ಬೋಧನಾ ಮಾಧ್ಯಮ ಅವರವರ ಮಾತೃಭಾಷೆಯಲ್ಲೇ ಇರಬೇಕು. ಎರಡನೆಯದಾಗಿ, ಸರಕಾರಿ ಉದ್ಯೋಗ ಬಯಸುವವರು ಹತ್ತನೇಯ ತರಗತಿಯಲ್ಲಿ ಕನ್ನಡ ಕಡ್ಡಾಯವಾಗಿ ಕಲಿತಿರಬೇಕು.(ಕನಿಷ್ಟ ಎರಡನೇಯ ಅಥವಾ ಮೂರನೇಯ ಭಾಷೆಯಾಗಿ) ಅಥವಾ ಇತರೆ ಭಾಷೆಗಳಲ್ಲಿ ಹತ್ತನೇ ತರಗತಿ ತೇರ್ಗಡೆಯಾದವರು ಪ್ರತ್ಯೇಕವಾಗಿ ಏಳನೇಯ ತರಗತಿಯ ಕನ್ನಡ ಪಠ್ಯದಲ್ಲಿ ತೇರ್ಗಡೆ ಹೊಂದಿರಬೇಕಾಗಿದೆ. ಮೂರನೆಯದಾಗಿ, ಪ್ರಾದೇಶಿಕ ಭಾಷೆ ಕನ್ನಡವಾದ ಮೇಲೆ ಉಳಿದೆರಡು ಭಾಷೆಗಳಿಗೆ ನಿಗದಿಗೊಳಿಸಿರುವ ೧೦೦ ಅಂಕಗಳಲ್ಲಿ ಶೇಕಡಾ ೩೦ ಅಂಕ ಗಳಿಸಲೇಬೇಕು.[3]

**ಡಾ.ಸರೋಜಿನಿ ಮಹಿಷಿ ವರದಿ**

ಈ ವರದಿಯು "ಕನ್ನಡಿಗರು" ಎಂದರೆ ಕರ್ನಾಟಕದಲ್ಲಿ ಕೊನೆಯ ಪಕ್ಷ ಹದಿನೈದು ವರ್ಷ ನೆಲಸಿ, ಕನ್ನಡವನ್ನು ಮಾತನಾಡಬಲ್ಲ, ಓದಿ ಬರೆಯಬಲ್ಲ ಎಲ್ಲ ವ್ಯಕ್ತಿಗಳು. ಕೇಂದ್ರ

ಸರ್ಕಾರದ ಆದೇಶಕ್ಕನುಗುಣವಾಗಿ ಕೇಂದ್ರ ಕಾರ್ಖಾನೆ ಮತ್ತು ಕಛೇರಿಗಳಲ್ಲಿ ಕನ್ನಡಿಗರಿಗೆ ಸಲ್ಲತಕ್ಕ ಉದ್ಯೋಗದ ಪ್ರಮಾಣಗಳು ಈ ಕೆಳಕಂಡಂತಿರಬೇಕು (ಅ)ನಾಲ್ಕನೇಯ ವರ್ಗದ (ಗ್ರೂಪ್ 'ಡಿ') ಹುದ್ದೆಗಳಲ್ಲಿ ೧೦೦% (ಆ)ವೇತನ ಶ್ರೇಣಿ ರೂ.೧೨೫೦(ಈಗ ರೂ.೩೫೦೦)ತನಕ ಇರುವ ಹುದ್ದೆಗಳಲ್ಲಿ ಕನಿಷ್ಠ ೮೦% (ಇ) ಉಳಿದ ಮೇಲ್ಮಟ್ಟದ, ನೇರ ನೇಮಕಾತಿ ಆಧಾರದ ಮೇಲೆ ಭರ್ತಿ ಮಾಡುವ ಹುದ್ದೆಗಳಲ್ಲಿ ಕನಿಷ್ಠ ೬೫% ಈ ಪ್ರಮಾಣದಲ್ಲಿ ಕನ್ನಡಿಗರು ಎಲ್ಲೆಲ್ಲಿ ಇಲ್ಲವೋ ಅಲ್ಲಿ ಆ ಪ್ರಮಾಣದ ತಲುಪುವವರೆಗೆ ಎಲ್ಲ ಖಾಲಿ ಹುದ್ದೆಗಳಿಗೆ ಕನ್ನಡಿಗರೇ ನೇಮಕವಾಗಬೇಕು. ಇದು ಬ್ಯಾಂಕುಗಳಿಗೂ, ರೈಲ್ವೆಗೂ ಅನ್ವಯವಾಗುತ್ತದೆಯೆಂದು ಹೇಳಬೇಕಾಗಿಲ್ಲ. ರಾಜ್ಯ ಸರಕಾರ ಕಾರ್ಖಾನೆ, ಕಛೇರಿಗಳಲ್ಲಿ ಉನ್ನತ ಮಟ್ಟದ ತಾಂತ್ರಿಕ ಪರಿಣತಿಯ ಹುದ್ದೆಗಳನ್ನು ಹೊರತುಪಡಿಸಿ, ಎಲ್ಲ ಕಡೆಗೂ ಕನ್ನಡಿಗರನ್ನೇ ಆರಿಸಬೇಕು. ಖಾಸಗಿ ಉದ್ಯಮಗಳಲ್ಲೂ ಇದೇ ರೀತಿ ನಡೆಯುಂತೆ ನೆಲ, ನೀರು, ವಿದ್ಯುತ್ತುಗಳನ್ನು ಒದಗಿಸಿರುವ ರಾಜ್ಯ ಸರಕಾರವು ಒತ್ತಡವನ್ನು ತರಲು ಅದಕ್ಕೆ ಹಕ್ಕಿದೆ, ಎಲ್ಲ ಹುದ್ದೆಗಳನ್ನು ರಾಜ್ಯದ ಎಲ್ಲ ಉದ್ಯೋಗ ವಿನಿಮಯ ಕೇಂದ್ರಗಳಿಂದ ಹೆಸರುಗಳನ್ನು ಪಡೆದು ಅವುಗಳಿಂದ ಮಾತ್ರ ಆಯ್ಕೆ ಮಾಡಿಕೊಳ್ಳಬೇಕು. ಉದ್ಯೋಗ ವಿನಿಮಯ ಕೇಂದ್ರಗಳಿಗೆ ಪತ್ರ ಬರೆಯುವಾಗ, ಕನ್ನಡ ಭಾಷಾ ಜ್ಞಾನವಿರುವವರ ಹೆಸರನ್ನು ಮಾತ್ರ ಕಳಿಸಬೇಕೆಂದು ತಿಳಿಸಬೇಕು. ಕೇಂದ್ರೋದ್ಯಮ, ಕಛೇರಿ, ಬ್ಯಾಂಕು, ರೈಲ್ವೆ ಇತ್ಯಾದಿ ಕಡೆ ನೇಮಕಾತಿ ಮಾಡುವ ಮಂಡಳಿಗಳಲ್ಲಿ ರಾಜ್ಯ ಸರಕಾರದ ಪ್ರತಿನಿಧಿಯೊಬ್ಬರು ಇರಬೇಕು. ಆ ಪ್ರತಿನಿಧಿಗಳು ಆಗಾಗ್ಗೆ ಕನ್ನಡಿಗರು ನೇಮಕಗೊಂಡ ಪ್ರಮಾಣವನ್ನು ಸರಕಾರಕ್ಕೆ ತಿಳಿಸಬೇಕು. ಎಲ್ಲ ಉದ್ಯಮಗಳು ಆಯಾ ವರ್ಷ ನೇಮಕಗೊಂಡ ಕನ್ನಡಿಗರ ಮತ್ತು ಕನ್ನಡೇತರರ ಪಟ್ಟಿಯನ್ನು ರಾಜ್ಯ ಸರಕಾರಕ್ಕೆ ಒದಗಿಸಬೇಕು. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟಿನ ಮೀಸಲಾತಿಗಳು ಕನ್ನಡಿಗ ದಲಿತರಿಗೇ ದೊರಕಬೇಕು. ನೀರಾವರಿ ಪ್ರದೇಶದ ಜಮೀನುಗಳನ್ನು ಅನ್ಯ ಪ್ರಾಂತೀಯರು ಕೊಳ್ಳದಂತೆ ಮಾಡಲು, ಮಹಾರಾಷ್ಟ್ರ ಸರಕಾರ ಕೈಗೊಂಡಿರುವ ಕಾನೂನನ್ನು ಇಲ್ಲಿಯೂ ಮಾಡಬೇಕು.[೬]

**ಚಂದರಗಿ ಸಮಿತಿ ವರದಿ–೧೯೯೯**

ಕರ್ನಾಟಕದ ಗಡಿ ಭಾಗವಾದ ಬೆಳಗಾವಿ ನಗರ ಹಾಗೂ ಬೆಳಗಾವಿ ತಾಲೂಕಿನ ಕನ್ನಡ ಸರಕಾರಿ ಕನ್ನಡ ಪ್ರಾಥಮಿಕ ಶಾಲೆಗಳ ದುಸ್ಥಿತಿಯ ಬಗ್ಗೆ ಹಾಗೂ ಗಡಿ ಭಾಗದ ಶಾಲೆಗಳ ಸುಧಾರಣೆಗಾಗಿ ಕನ್ನಡ ಸಂಘಟನೆಗಳ ಕ್ರಿಯಾ ಸಮಿತಿ ಬೆಳಗಾವಿಯ ಅಧ್ಯಕ್ಷರಾದ ಶ್ರೀ ಅಶೋಕ ಚಂದರಗಿ ನೇತೃತ್ವದಲ್ಲಿ ಸಮಿತಿ ರಚಿತವಾಯಿತು. ಅದು ನೀಡಿದ ಶಿಫಾರಸ್ಸುಗಳೆಂದರೆ ಮಹಾನಗರ ಪಾಲಿಕೆಯು ಶಾಲೆಗಳ ಕಟ್ಟಡಗಳ ದುರಸ್ಥಿಯ ಬಗ್ಗೆ ಶೀಘ್ರ ಕ್ರಮ ಕೈಗೊಳ್ಳಬೇಕು. ಪಾಲಿಕೆಯ ಕನ್ನಡಿಗ ಸದಸ್ಯರು ಶಾಲೆಗಳ ಬಗ್ಗೆ ಕಾಳಜಿಯಿಂದ ಮಾತನಾಡಬೇಕು. ಆಕ್ರಮಣಕಾರಿ ಮರಾಠಿ

ರಾಜಕೀಯ ನಾಯಕರಿಗೆ ಅಧಿಕಾರಿಗಳು ಮಣೆಹಾಕುವುದನ್ನು ಬಿಡಬೇಕು ಮತ್ತು ಶಾಲೆಗಳ ದುರಸ್ಥಿಗೆ ನೀಡುವ ಹಣವನ್ನು ಹೆಚ್ಚಿಸಬೇಕೆಂದು. ಮುಂತಾದ ಸಲಹೆಗಳನ್ನು ನೀಡಿದೆ.[೭]

**ಡಾ.ರಾಜಾರಾಮಣ್ಣ ವರದಿ: ೨೦೦೦-೦೧**

ಕರ್ನಾಟಕ ಸರಕಾರವು ಪ್ರಾಥಮಿಕ ಶಿಕ್ಷಣದ ಸುಧಾರಣೆಯ ಬಗೆಗೆ ಅಧ್ಯಯನ ನಡೆಸಲು ಖ್ಯಾತ ಶಿಕ್ಷಣ ತಜ್ಞರಾದ ಡಾ.ರಾಜಾರಾಮಣ್ಣ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿತು. ಅದು ನೀಡಿದ ಪ್ರಮುಖ ಶಿಫಾರಸ್ಸುಗಳೆಂದರೆ, ೧ ರಿಂದ ೧೪ ವರ್ಷದವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕು, ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ೧ ರಿಂದ ೫ ರವರೆಗೆ ಮತ್ತು ೬ ರಿಂದ ೮ರ ವರೆಗೆ ವರ್ಗಗಳಿರಬೇಕು ಮತ್ತು ಅದಕ್ಕಾಗಿ ಹೆಚ್ಚುವರಿ ಶಿಕ್ಷಕರು ಹಾಗೂ ಕಟ್ಟಡಗಳ ವ್ಯವಸ್ಥೆಯಾಗಬೇಕು. ಪ್ರಾಥಮಿಕ ಶಾಲೆಗಳಲ್ಲಿ ಕಂಪ್ಯೂಟರ್ ಶಿಕ್ಷಣಕ್ಕೆ ಒತ್ತು ನೀಡಿ, ಡಿ,ಎಸ್,ಇ,ಆರ್.ಟಿ,ಗೆ ಸ್ವಾಯತ್ತತೆ ನೀಡಬೇಕು. ಪದವಿಯಲ್ಲಿ ಪ್ರಾಥಮಿಕ ಶಿಕ್ಷಣದ ವಿಷಯಗಳನ್ನು ಐಚ್ಛಿಕವಾಗಿ ತೆಗೆದುಕೊಂಡವರನ್ನೆ ಕಿರಿಯ ಪ್ರಾಥಮಿಕ ಶಾಲೆಗಳಿಗೆ ಶಿಕ್ಷರನ್ನಾಗಿ ನೇಮಕ ಮಾಡಬೇಕೆಂದು ಶಿಫಾರಸ್ಸು ಮಾಡಿದೆ. ಆದರೆ ಈ ವರದಿ ಗಡಿನಾಡಿನ ಶೈಕ್ಷಣಿಕ ಸ್ಥಿತಿಗಳ ಬಗ್ಗೆ ಯಾವುದೇ ಪ್ರಸ್ತಾಪ ಮಾಡದಿರುವುದು ಶೋಚನೀಯವಾಗಿದೆ.[೮]

**ಬರಗೂರು ರಾಮಚಂದ್ರಪ್ಪ ವರದಿ: ೨೦೦೧**

ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕರ್ನಾಟಕ ಸರಕಾರಕ್ಕೆ ಸಲ್ಲಿಸಿರುವ ಈ ವರದಿಯ ವಿಶೇಷವೇನೆಂದರೆ ಭಾಷಾ ಸಂಬಂಧಿಯಾದ ನ್ಯಾಯಾಲಯದ ತೀರ್ಪುಗಳು ಮತ್ತು ಸರಕಾರದ ಆದೇಶಗಳನ್ನು ಗಮನದಲ್ಲಿಟ್ಟುಕೊಂಡು ಒಟ್ಟು ಶಿಕ್ಷಣ ಕ್ರಮದಲ್ಲಿ ಕನ್ನಡವನ್ನು ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅಳವಡಿಸಿ ಕೊಳ್ಳುವ ಕಾರ್ಯ ಸಾಧ್ಯ ಕ್ರಮಗಳನ್ನು ಅಗತ್ಯ ಚರ್ಚೆಯೊಂದಿಗೆ ಸೂಚಿಸಲಾಗಿದೆ. ಅದರ ಪ್ರಮುಖ ಶಿಫಾರಸ್ಸುಗಳೆಂದರೆ

ಮೊದಲನೆಯದಾಗಿ, ಗಡಿಭಾಗದ ಕನ್ನಡ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ಹಿತರಕ್ಷಣೆಗಾಗಿ ಗಡಿ ಕನ್ನಡ ಶಾಲಾ ಸುಧಾರಣೆ ಸಮಿತಿಯನ್ನು ರಚಿಸಿ ಅದಕ್ಕೆ ಕಾನೂನು ಬದ್ಧ ಅಧಿಕಾರಗಳನ್ನು ಕೊಡಬೇಕು. ಗಡಿ ಕನ್ನಡ ಭಾಷೆಯ ಸುಧಾರಣಾ ಸಮಿತಿಯಲ್ಲಿ ಕನ್ನಡ ಸಂಘಟನೆಗಳಿಗೆ ಪ್ರಾತಿನಿಧ್ಯ ಒದಗಿಸಬೇಕು. ಅಲ್ಲದೇ ಜಿಲ್ಲಾ ಪಂಚಾಯಿತಿಯ, ತಾಲೂಕು ಪಂಚಾಯಿತಿಯ, ಮಹಾನಗರ ಸಭೆಯ, ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳು, ವಲಯ ಶಿಕ್ಷಣ ಅಧಿಕಾರಿಗಳು ಸಮಿತಿಯ ಸದ್ಯಸರಾಗಿರಬೇಕು. ಅಧಿಕಾರೇತರರೇ ಸಮಿತಿಗೆ ಅಧ್ಯಕ್ಷರಾಗಿರಬೇಕು. ಎರಡನೆಯದಾಗಿ, ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಗೆ ಗಡಿ ಭಾಗದ ಶಿಕ್ಷಣ ಸುಧಾರಣಾ ಸಮಿತಿಯ ಅಧ್ಯಕ್ಷರನ್ನು

ಆಮಂತ್ರಿತ ಸದ್ಯಸರನ್ನಾಗಿ ನೇಮಿಸಬೇಕು. ಈ ಮಂಡಳಿಯಲ್ಲಿ ಪ್ರಾತಿನಿಧ್ಯ ಸಿಗುವಂತಾದರೆ, ಕನ್ನಡ ಶಿಕ್ಷಣದ ಕಟ್ಟಡಗಳಿಗೆ ಹಣ ಮಂಜೂರು ಪಡೆಯುವಲ್ಲಿ ಯಾವುದೇ ತೊಂದರೆಯಾಗದು. ಮೂರನೆಯದಾಗಿ, ಸಕಾರದ ಎಲ್ಲ ಇಲಾಖೆಗಳ ಕಾರ್ಯಾಲಯಗಳ ದುರಸ್ಥಿ, ಸುಣ್ಣ-ಬಣ್ಣ ಬಳೆಯುವ ಕೆಲಸವನ್ನು ಲೋಕೋಪಯೋಗಿ ಇಲಾಖೆಗೆ ವಹಿಸಿರುವಂತೆ ಶಿಕ್ಷಣದ ಕಟ್ಟಡಗಳ ದುರಸ್ಥಿ, ಸುಣ್ಣ-ಬಣ್ಣಗಳ ವ್ಯವಸ್ಥೆಯನ್ನು ಲೋಕೋಪಯೋಗಿ ಇಲಾಖೆಗೆ ವಹಿಸಬೇಕು. ಅಂದರೆ, ಪ್ರತಿ ವರ್ಷ ಲೋಕೋಪಯೋಗಿ ಇಲಾಖೆಯವರು ಶಾಲೆಗಳ ರಜೆಯ ಕಾಲದಲ್ಲಿ ದುರಸ್ಥಿ ಕೆಲಸ ಹಾಗೂ ಸುಣ್ಣ-ಬಣ್ಣ ಬಳೆಯುವ ಕೆಲಸವನ್ನು ಕೈಕೊಳ್ಳಬಹುದಾಗಿದೆ. ಪ್ರತಿ ಶಾಲೆಗೆ ಶೌಚಾಲಯ, ಮೂತ್ರಾಲಯಗಳ ವ್ಯವಸ್ಥೆ, ನಳದ ನೀರಿನ ವ್ಯವಸ್ಥೆ ಮಾಡಿ ಅದರ ಜವಾಬ್ದಾರಿಯನ್ನು ಮಹಾನಗರ ಪಾಲಿಕೆ/ಪಂಚಾಯಿತಿಗೆ ವಹಿಸಬೇಕು. ನಾಲ್ಕನೆಯದಾಗಿ, ಗಡಿ ಕನ್ನಡ ಶಾಲಾ ಸುಧಾರಣೆ ಸಮಿತಿಯ ಅಧ್ಯಕ್ಷರನ್ನು ಜಿಲ್ಲಾ ಪಂಚಾಯಿತಿಯ ಶಿಕ್ಷಣ ಸ್ಥಾಯಿ ಸಮಿತಿಯ ಸಭೆಗೆ, ತಾಲೂಕು ಪಂಚಾಯಿತಿ ಸಭೆಗೆ ಆಮಂತ್ರಿಕ ಸದಸ್ಯರನ್ನಾಗಿ ಆಹ್ವಾನಿಸಬೇಕು. ಐದನೆಯದಾಗಿ, ಗಡಿ ಕನ್ನಡ ಸುಧಾರಣೆ ಸಮಿತಿಯ ಕೈಕೊಂಡ ನಿರ್ಣಯಗಳು ಜಿಲ್ಲಾ ಹಾಗೂ ತಾಲೂಕು ಪಂಚಾಯಿತಿ ಅಧಿಕಾರಿಗಳಿಗೆ ಬಂಧನಕಾರಿಯಾಗಿರಬೇಕು.

ಈ ಮೇಲಿನ ಕ್ರಮಗಳನ್ನು ಕೈಗೊಂಡರೆ ಮಾತ್ರ ಗಡಿ ಭಾಗದ ಕನ್ನಡ ಶಾಲೆಗಳ ಸ್ಥಿತಿ ಸುಧಾರಿಸುತ್ತದೆ. ಯಾವ ಪ್ರದೇಶದಲ್ಲಿ ಕನ್ನಡಿಗರ ಚುನಾಯಿತ ಪ್ರತಿನಿಧಿಗಳಿಲ್ಲವೋ ಅಲ್ಲಿ ರಾಜ್ಯ ಸರಕಾರ ಕನ್ನಡ ಶಾಲೆಗಳ ಸ್ಥಿತಿ ಕಾಪಾಡಲು ವಿಶೇಷ ಕ್ರಮಗಳನ್ನು ಕೈಗೊಳ್ಳುವದು ಅನಿವಾರ್ಯ ವಾಗುತ್ತದೆ.[೯] ಇಷ್ಟೆಲ್ಲಾ ಶಿಫಾರಸ್ಸುಗಳ ನಡುವೆಯೂ ಬೆಳಗಾವಿ ಜಿಲ್ಲೆಯ ಸಾಕ್ಷರತೆ ಮತ್ತು ಶಿಕ್ಷಣದ ಅಭಿವೃದ್ಧಿಯ ವೇಗ ತೀವ್ರತೆಯನ್ನು ಪಡೆದುಕೊಂಡಂತೆ ಕಂಡುಬರುವುದಿಲ್ಲ. ಇದುವರೆಗೂ ಕರ್ನಾಟಕ ಸರ್ಕಾರ ರಚಿಸಿರುವ ಗಡಿ ಕನ್ನಡ ಶಾಲೆಗಳು ಮತ್ತು ಕನ್ನಡದ ಸ್ಥಿತಿಯನ್ನು ಉತ್ತಮ ಪಡಿಸಲು ಸಲಹೆ ಮತ್ತು ಸೂಚನೆಗಳನ್ನು ನೀಡಿವೆ. ಆದರೆ ಆ ಭಾಗದಲ್ಲಿರುವ ಮುಸ್ಲಿಮರ ವಿಶೇಷವಾಗಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿಗಳನ್ನು ಸುಧಾರಿಸಲು ಸರ್ಕಾರಗಳು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಯಾವುದೇ ಶಿಫಾರಸ್ಸು ನೀಡದಿರುವುದು ಶೋಚನೀಯ ಸಂಗತಿಯಾಗಿದೆ. ೧೯೮೬ ರಲ್ಲಿ ರೆಹಮಾನ್‌ಖಾನ್ ರವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಮುಸ್ಲಿಮರ ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ಕೈಗೊಂಡಿದ್ದು ಹೊರತುಪಡಿಸಿದರೆ ಇಲ್ಲಿಯವರೆಗೂ ಅಧಿಕೃತವಾಗಿ ಸರ್ಕಾರದಿಂದ ಯಾವುದೇ ಸಮೀಕ್ಷೆಗಳನ್ನು ಕೈಗೊಳ್ಳಲಾಗಿಲ್ಲ. ಹಾಗಾಗಿ ಮುಸ್ಲಿಮರಿಗೆ ಸಂಬಂಧಿಸಿದ ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದ ಇತೀಚಿನ ದತ್ತಾಂಶಗಳು ಲಭ್ಯವಾಗುವುದಿಲ್ಲ.

## ೩.೭. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸೂಚಿಗಳು

### ೧. ಸಾಕ್ಷರತೆ

ಕರ್ನಾಟಕದಲ್ಲಿ ಭೌಗೋಳಿಕವಾಗಿ ಅತೀ ದೊಡ್ಡ ಜಿಲ್ಲೆಯಾದ ಬೆಳಗಾವಿಯು ಸಾಕ್ಷರತೆಯಲ್ಲಿ ದಕ್ಷಿಣ ಕನ್ನಡದಷ್ಟು ಉತ್ತಮ ಸ್ಥಾನವನ್ನು ಹೊಂದಿಲ್ಲ ಹಾಗೂ ಯಾದಗಿರಿ ಜಿಲ್ಲೆಯಷ್ಟು ತಳಮಟ್ಟದ ಸ್ಥಾನದಲ್ಲಿಯೂ ಇಲ್ಲ. ಬೆಳಗಾವಿ ಜಿಲ್ಲೆಯನ್ನು ಶೈಕ್ಷಣಿಕವಾಗಿ ಚಿಕ್ಕೊಡಿ ಹಾಗೂ ಬೆಳಗಾವಿ ಎಂಬ ಎರಡು ಶೈಕ್ಷಣಿಕ ವಲಯಗಳಾಗಿ ವಿಂಗಡಿಸಲಾಗಿದೆ. ಸಾಕ್ಷರತೆಯು ಒಂದು ಪ್ರದೇಶದ ಶೈಕ್ಷಣಿಕ ಸ್ಥಿತಿಯನ್ನು ನಿರ್ಧರಿಸುವ ಪ್ರಮುಖ ಸೂಚಕವಾಗಿದೆ. ಸಾಕ್ಷರತೆಯು ಉಪಕರಣವಾದಿ ಗುಣದ ಜೊತೆಯಲ್ಲಿ ಅಂತಸ್ಥವಾದಿ ಗುಣವನ್ನು ಕೂಡ ಹೊಂದಿರುತ್ತದೆ. ಅಂತೆಯೇ ಸಾಮಾಜೋ-ಆರ್ಥಿಕ ಅಭಿವೃದ್ಧಿಗೆ ಶಿಕ್ಷಣ ಅಗತ್ಯವಾಗಿದೆ.ಹಿಂದಿನ ಅಧ್ಯಾಯದಲ್ಲಿ ಕಂಡುಕೊಂಡಿರುವಂತೆ ೨೦೧೧ರ ಜನಗಣತಿಯ ಪ್ರಕಾರ ಕೋಷ್ಟಕ-೮ ರಲ್ಲಿ ಕಂಡುಬರುವಂತೆ ಕರ್ನಾಟಕ ರಾಜ್ಯದ ಸಾಕ್ಷರತೆಯ ಪ್ರಮಾಣ ಶೇ೭೫.೩೬ರಷ್ಟಿದ್ದು ಅದರಲ್ಲಿ ಪುರುಷರ ಸಾಕ್ಷರತೆ ಶೇ.೮೨.೮೨ ರಷ್ಟು, ಶೇ.೬೮.೦೮ ರಷ್ಟು ಮಹಿಳೆಯರ ಸಾಕ್ಷರತೆ ಕಂಡುರುತ್ತದೆ. ರಾಜ್ಯದಲ್ಲಿ ಗ್ರಾಮೀಣ ಸಾಕ್ಷರತೆ ಒಟ್ಟು ಶೇ.೬೮.೭೩ ರಷ್ಟಿದ್ದು, ಗ್ರಾಮೀಣ ಪುರುಷರ ಸಾಕ್ಷರತೆ ಶೇ.೭೭.೬೧ ರಷ್ಟು ಮತ್ತು ಶೇ.೫೯.೭೧ ರಷ್ಟು ಮಹಿಳೆಯರ ಸಾಕ್ಷರತೆ ಕಂಡುಬರುತ್ತದೆ. ಕರ್ನಾಟಕದ ನಗರ ಭಾಗದಲ್ಲಿ ಪುರುಷರ ಸಾಕ್ಷರತೆ ಶೇ.೮೫.೭೮ ರಷ್ಟಿದ್ದು ಅದರಲ್ಲಿ ನಗರ ಪುರುಷರ ಶೇ.೯೦.೦೪ ರಷ್ಟು ಮತ್ತು ಮಹಿಳೆಯರ ಸಾಕ್ಷರತೆ ಶೇ.೮೧.೩೬ ರಷ್ಟಿದೆ ರಾಜ್ಯದಲ್ಲಿ ನಗರ ಮಹಿಳೆಯರ ಸಾಕ್ಷರತೆಗಿಂತ, ನಗರ ಪುರುಷರ ಸಾಕ್ಷರತೆ ಅಧಿಕವಾಗಿದೆ. ಕರ್ನಾಟಕ ಒಟ್ಟಾರೆ ಸಾಕ್ಷರತೆಯಲ್ಲಿ ೯ನೇ ಸ್ಥಾನದಲ್ಲಿದ್ದು, ಮಹಿಳಾ ಸಾಕ್ಷರತೆಯಲ್ಲಿ ಕೇರಳ, ದೆಹಲಿ, ಮಹಾರಾಷ್ಟ್ರ, ತಮಿಳುನಾಡು, ಪಂಜಾಬ್, ಪಶ್ಚಿಮಬಂಗಾಳ ಮತ್ತು ಗುಜರಾತ್ ನಂತರ ಕರ್ನಾಟಕ ೮ನೇ ಸ್ಥಾನದಲ್ಲಿದೆ.

ಕೋಷ್ಟಕ-೯ರಲ್ಲಿ ಕಂಡು ಬರುವಂತೆ ಬೆಳಗಾವಿ ಜಿಲ್ಲೆಯ ಸಾಕ್ಷರತೆ ಶೇ.೭೩.೪೮ ರಷ್ಟಿದ್ದು ಜಿಲ್ಲೆಯ ಪುರುಷರ ಸಾಕ್ಷರತೆ ಶೇ.೮೨.೨೦ ರಷ್ಟು, ಮಹಿಳೆಯರ ಸಾಕ್ಷರತೆ ಶೇ.೬೪.೫೮ ರಷ್ಟಿದೆ. ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ಒಟ್ಟು ಶೇ.೬೯.೨೮ ಸಾಕ್ಷರತೆ ಇದ್ದು. ಪುರುಷರ ಸಾಕ್ಷರತೆ ಶೇ.೭೯.೧೨ ಮತ್ತು ಮಹಿಳೆಯರ ಸಾಕ್ಷರತೆ ಶೇ.೫೯.೨೦ ರಷ್ಟಿದೆ. ಜಿಲ್ಲೆಯ ನಗರ ಭಾಗದಲ್ಲಿ ಶೇ.೮೫.೫೬ ರಷ್ಟು ಸಾಕ್ಷರತೆ ಇದ್ದು, ಅದರಲ್ಲಿ ಪುರುಷರ ಸಾಕ್ಷರತೆ ಶೇ.೯೧.೧೦ ರಷ್ಟು ಮತ್ತು ಮಹಿಳೆಯರ ಸಾಕ್ಷರತೆ ಶೇ.೭೯.೯೫ ರಷ್ಟು ಕಂಡುಬರುತ್ತದೆ. ಬೆಳಗಾವಿ ಜಿಲ್ಲೆಯು ಸಾಕ್ಷರತೆಯಲ್ಲಿ ರಾಜ್ಯದಲ್ಲಿ ೧೭ನೇ ಸ್ಥಾನವನ್ನು ಪಡೆದುಕೊಂಡು ನಿರಾಶೆ ಮೂಡಿಸುತ್ತದೆ. ೨೦೦೧ ರ ಜನಗಣತಿಯ ಪ್ರಕಾರ ರಾಷ್ಟ್ರೀಯ ಸಾಕ್ಷರತೆ ಸರಾಸರಿ ಶೇ.೬೪.೮ ರಷ್ಟಿದ್ದರೆ, ಮುಸ್ಲಿಮರ ಸಾಕ್ಷರತೆ ಪ್ರಮಾಣ

ಕೇವಲ ಶೇ.೬೮ ರಷ್ಟು ದಾಖಲಾಗಿದೆ. ಕ್ಷೇತ್ರ ಅಧ್ಯಯನದಲ್ಲಿ ಕಂಡುಬರುವಂತೆ ಬೆಳಗಾವಿ ನಗರದ ಪುರುಷರ ಸಾಕ್ಷರತೆ ಶೇ.೫೮.೧ ರಷ್ಟಿದ್ದು ಅನಕ್ಷರಸ್ಥರು ಶೇ.೪೨ ರಷ್ಟು ಕಂಡುಬರುತ್ತಾರೆ. ಮಹಿಳೆಯರ ಸಾಕ್ಷರತೆ ಶೇ.೪೨ ರಷ್ಟಿದ್ದು ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರಲ್ಲಿ ಶೇ.೫೮ ರಷ್ಟು ಅನಕ್ಷರಸ್ಥರು ಕಂಡುಬರುತ್ತಾರೆ.

### ೨. ಬೆಳಗಾವಿಯ ಜಿಲ್ಲೆಯ ವಲಯವಾರು ಸಾಕ್ಷರತೆ

೨೦೦೧ ರ ಜನಗಣತಿಯ ಅಂಕಿ-ಅಂಶಗಳಿಗೆ ಹೋಲಿಸಿದರೆ, ಪುರುಷರ ಸಾಕ್ಷರತೆಯು ಜಿಲ್ಲಾ ಸರಾಸರಿಗಿಂತ ಅಧಿಕವಾಗಿದ್ದರೂ, ಮಹಿಳಾ ಸಾಕ್ಷರತೆಯು ಜಿಲ್ಲಾ ಸರಾಸರಿಗಿಂತ ಅತೀ ಕಡಿಮೆ ಕಂಡುಬರುತ್ತದೆ. ಇಲ್ಲಿಯೂ ಮಹಿಳೆಯರ ಸಾಕ್ಷರತೆಯಲ್ಲಿ ಹಿಂದುಳಿದಿದ್ದಾರೆ. ಕೋಷ್ಟಕ-೧೦ ಸ್ಪಷ್ಟಪಡಿಸುವಂತೆ, ಬೆಳಗಾವಿ ಜಿಲ್ಲೆಯನ್ನು ಶೈಕ್ಷಣಿಕ ಆಡಳಿತದ ದೃಷ್ಟಿಯಿಂದ ಆರು ವಲಯಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಬೈಲಹೊಂಗಲ, ಬೆಳಗಾವಿ, ಖಾನಪುರ, ರಾಮದುರ್ಗ ಮತ್ತು ಸೌದತ್ತಿಗಳು. ಆರೂ ವಲಯಗಳಲ್ಲಿ ಪ್ರತಿ ಜನಗಣತಿಯಲ್ಲೂ ಪುರುಷರ ಸಾಕ್ಷರತೆಯ ವೇಗಕ್ಕೆ ಹೋಲಿಸಿದರೆ, ಮಹಿಳೆಯರ ಸಾಕ್ಷರತೆಯ ವೇಗ ಮಂದಗತಿಯಲ್ಲಿದೆ. ಎಲ್ಲಾ ವಲಯಗಳಲ್ಲೂ ಸಾಕ್ಷರತೆಯ ಪ್ರಮಾಣ ಏರಿಕೆ ಕಂಡುಬಂದರೂ, ಒಟ್ಟು ಆರು ವಲಯಗಳಲ್ಲಿ ಕೇವಲ ನಾಲ್ಕು ವಲಯಗಳಲ್ಲಿ ಮಾತ್ರ(ಬೈಲಹೊಂಗಲ, ಬೆಳಗಾವಿ, ಖಾನಪುರ ಮತ್ತು ಸೌದತ್ತಿಗಳಲ್ಲಿ) ಸಾಕ್ಷರತೆಯು ಜಿಲ್ಲಾ ಸರಾಸರಿಗಿಂತ ಅತಿಹೆಚ್ಚು ಕಂಡುಬರುತ್ತದೆ, ಉಳಿದ ವಲಯಗಳು ಜಿಲ್ಲಾ ಸರಾಸರಿಗಿಂತ ಹಿಂದುಳಿದಿವೆ. ಅತಿಹೆಚ್ಚು ಸಾಕ್ಷರತೆ ಬೆಳಗಾವಿಯಲ್ಲಿ (ಪುರುಷರು ಶೇ.೯೪.೪೫ ಮತ್ತು ಮಹಿಳೆಯರು ಶೇ.೭೬.೧೫) ದಾಖಲಾದರೆ, ಕನಿಷ್ಠ ಸಾಕ್ಷರತೆ (ಶೇ.೭೫.೮೩ ರಷ್ಟು ಪುರುಷರು ಮತ್ತು ಶೇ.೪೪.೦೯ ರಷ್ಟು ಮಹಿಳೆಯರು) ರಾಮದುರ್ಗ ವಲಯದಲ್ಲಿ ದಾಖಲಾಗಿದೆ.ಅಂದರೆ ೨೦೦೧ ರ ಸಾಕ್ಷರತೆಯ ಪ್ರಮಾಣದೊಂದಿಗೆಹೋಲಿಸಿದರೆ, ೨೦೧೧ ರ ಸಾಕ್ಷರತೆಯಲ್ಲಿ ಪ್ರಗತಿ ಕಂಡುಬಂದರೂ ಆಶಾದಾಯಕವಾಗಿಲ್ಲ. ಇದರ ಜೊತೆಗೆ ಶೈಕ್ಷಣಿಕ ಸಂಗತಿಯಲ್ಲಿ ಬೆಳಗಾವಿ ಜಿಲ್ಲೆಯು ಪ್ರಾದೇಶಿಕ ಅಸಮಾನತೆಯನ್ನು ಎದುರಿಸುತ್ತಿವೆ. ಸಾಕ್ಷರತೆಯ ಜೊತೆಗೆ ಒಂದು ಪ್ರದೇಶದಲ್ಲಿರುವ ಶಾಲೆಗಳ ಪ್ರಮಾಣ ಸಾಕ್ಷರತೆಯನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗಿರುತ್ತವೆ ಎಂದು ಗ್ರಹಿಸಲಾಗಿದೆ. ಇದರ ಚರ್ಚೆಯನ್ನು ಮುಂದೆ ಮಂಡಿಸಲಾಗಿದೆ.

### ೩. ಕರ್ನಾಟಕ ಮತ್ತು ಬೆಳಗಾವಿಯ ಶಾಲೆಗಳು

ಒಂದು ಪ್ರದೇಶದ ಸಾಕ್ಷರತೆಯು ಆ ಪ್ರದೇಶದಲ್ಲಿ ಲಭ್ಯವಿರುವ ಶೈಕ್ಷಣಿಕ ಸೌಲಭ್ಯಗಳನ್ನು ಅವಲಂಬಿಸಿರುತ್ತದೆ. ಒಂದು ಪ್ರದೇಶದಲ್ಲಿ ಲಭ್ಯವಿರುವ ಪ್ರಾಥಮಿಕ ಮತ್ತು ಪ್ರೌಢಶಾಲೆಗಳು ಅ ಪ್ರದೇಶದ ಸಾಕ್ಷರತೆಯ ಕೊರತೆಯನ್ನು ನೀಗಿಸುವಲ್ಲಿ ಸಹಕಾರಿಯಾಗುತ್ತವೆ ಎಂದು ನಂಬಲಾಗಿದೆ.

ಕೋಷ್ಟಕ-೧೧ರಲ್ಲಿ ಕಂಡುಬರುವಂತೆ ಕರ್ನಾಟಕ ರಾಜ್ಯದಲ್ಲಿ ೨೬,೧೨೫ ಕಿರಿಯ ಪ್ರಾಥಮಿಕ ಶಾಲೆಗಳು, ೩೪,೮೦೩ ಹಿರಿಯ ಪ್ರಾಥಮಿಕ ಶಾಲೆಗಳು ಸೇರಿ ಒಟ್ಟು ರಾಜ್ಯದಲ್ಲಿ ೬೦,೯೨೮ ಪ್ರಾಥಮಿಕ ಶಾಲೆಗಳು ಮತ್ತು ೧೫,೧೪೧ ಪ್ರೌಢಶಾಲೆಗಳು ಕಂಡುಬರುತ್ತವೆ.ಒಟ್ಟು ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಇಲಾಖೆಯ ೪೪,೧೦೧ ಪ್ರಾಥಮಿಕ ಶಾಲೆಗಳು, ಸಮಾಜ ಕಲ್ಯಾಣ ಇಲಾಖೆಯ ೭೦೨ ಶಾಲೆಗಳು, ಸ್ಥಳೀಯ ಸಂಸ್ಥೆಯ ೩,೦೯೯ ಶಾಲೆಗಳು, ಅನುದಾನ ರಹಿತ ೧೨,೮೯೧ ಶಾಲೆಗಳು, ಇತರೆ ೯ ಶಾಲೆಗಳು, ಕೇಂದ್ರೀಯ ೮೫ ಶಾಲೆಗಳು ಮತ್ತು ೧೫ ಮಾನ್ಯತೆ ಪಡೆದಿಲ್ಲದ ಪ್ರಾಥಮಿಕ ಶಾಲೆಗಳಿವೆ. ಅದೇ ಪ್ರಕಾರ ಒಟ್ಟು ಪ್ರೌಢ ಶಾಲೆಗಳಲ್ಲಿ ೪,೬೫೯ ಸರ್ಕಾರಿ ಪ್ರೌಢಶಾಲೆಗಳು, ೫೨೩ ಸಮಾಜ ಕಲ್ಯಾಣ ಇಲಾಖೆಯ ಶಾಲೆಗಳು ೪೩ ಸ್ಥಳೀಯ ಸಂಸ್ಥೆಯ ಶಾಲೆಗಳು, ೩,೮೧೮ ಅನುದಾನಿತ ಶಾಲೆಗಳು, ೬,೦೧೩ ಅನುದಾನ ರಹಿತ ಶಾಲೆಗಳು, ೬ ಇತರೆ ಶಾಲೆಗಳು, ೭೮ ಕೇಂದ್ರೀಯ ಶಾಲೆಗಳು ಮತ್ತು ೧ ಮಾನ್ಯತೆ ಪಡೆದಿಲ್ಲದ ಪ್ರೌಢ ಶಾಲೆಗಳಿವೆ. ಅದೇ ಪ್ರಕಾರ ಕೋಷ್ಟಕ-೧೨ ರಲ್ಲಿ ಕಂಡುಬರುವಂತೆ ಅಧ್ಯಯನ ಕ್ಷೇತ್ರವಾದ ಬೆಳಗಾವಿ ಜಿಲ್ಲೆಯ ಆರು ವಲಯಗಳಲ್ಲಿ ಒಟ್ಟು ೧,೮೧೯ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿವೆ, ಅವುಗಳಲ್ಲಿ ಶಿಕ್ಷಣ ಇಲಾಖೆಯ ೧,೪೦೮ ಶಾಲೆಗಳು, ಸಮಾಜಕಲ್ಯಾಣ ಇಲಾಖೆಯ ೧೬ ಶಾಲೆಗಳು, ಸ್ಥಳೀಯ ಸಂಸ್ಥೆಯ ಒಂದು, ೭೨ ಅನುದಾನಿತ, ೩೧೫ ಅನುದಾನರಹಿತ ಮತ್ತು ೭ ಕೇಂದ್ರ ಸರ್ಕಾರದ ಶಾಲೆಗಳು ಒಳಗೂಂಡಿವೆ. ಆರು ವಲಯಗಳಲ್ಲಿ ಅತಿಹೆಚ್ಚು(೩೫೮) ಶಾಲೆಗಳು ಖಾನಾಪುರದಲ್ಲಿ ಕಂಡುಬಂದರೆ ಅತಿಕಡಿಮೆ (೨೬೧) ಶಾಲೆಗಳು ರಾಮದುರ್ಗ ವಲಯದಲ್ಲಿ ಕಂಡುಬರುತ್ತವೆ. ಬೆಳಗಾವಿ ನಗರದಲ್ಲಿ ಶಾಲೆಗಳ ಸಂಖ್ಯೆ ಉತ್ತಮ ಸ್ಥಿತಿಯಲ್ಲಿದ್ದರೂ ಶಾಲೆಗಳ ವಿತರಣೆಯಲ್ಲಿ ತಾಲೂಕುವಾರು ಅಸಮಾನತೆಗಳು ಕಂಡುಬರುತ್ತವೆ.

### ೪. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಮಾಧ್ಯಾಮವಾರು ಶಾಲೆಗಳು

ಮಾತೃ ಭಾಷೆಯ ಕಲಿಕೆ ಮಗುವಿನ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ ಎನ್ನುವ ವಾದವಿದೆ.ಭಾರತದ ಸಂವಿಧಾನವು ಮಗುವಿಗೆ ಮಾತೃ ಭಾಷೆಯಲ್ಲೇ ಶಿಕ್ಷಣ ನೀಡಬೇಕೆಂದು ಪ್ರತಿಪಾದಿಸುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ವಿವಿಧ ಮಾಧ್ಯಮ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ಮಾಹಿತಿಯನ್ನು ನೀಡುವಕೋಷ್ಟಕ-೧೩ ರ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಒಟ್ಟು ೫೧,೨೬೭ ಕನ್ನಡ ಮಾಧ್ಯಮ ಶಾಲೆಗಳಿವೆ. ಅವುಗಳಲ್ಲಿ ೩೯,೭೯೩ ಸರ್ಕಾರಿ ಶಾಲೆಗಳು, ೨,೭೭೫ ಅನುದಾನಿತ ಶಾಲೆಗಳು ಮತ್ತು ೮,೬೯೯ ಅನುದಾನ ರಹಿತ ಶಾಲೆಗಳು ಕಂಡುಬರುತ್ತವೆ. ಅದೇ ಪ್ರಕಾರ ರಾಜ್ಯದಲ್ಲಿ ಒಟ್ಟು ೭,೩೧೯ ಇಂಗ್ಲೀಷ್ ಮಾಧ್ಯಮ ಶಾಲೆಗಳಿವೆ. ಅವುಗಳಲ್ಲಿ ೧,೦೯೨ ಸರ್ಕಾರಿ ಶಾಲೆಗಳು, ೨೦೫ ಅನುದಾನಿತ ಶಾಲೆಗಳು ಮತ್ತು ೬,೦೨೨ ಅನುದಾನ

ರಹಿತ ಶಾಲೆಗಳಿವೆ. ಅದೆ ಪ್ರಕಾರ ರಾಜ್ಯದಲ್ಲಿ ಒಟ್ಟು ೪,೬೭೫ ಉರ್ದು ಶಾಲೆಗಳಿದ್ದು ಅವುಗಳಲ್ಲಿ ೩,೯೫೩ ಸರ್ಕಾರಿ ಉರ್ದು ಶಾಲೆಗಳು, ೧೮೭ ಅನುದಾನಿತ ಉರ್ದು ಶಾಲೆಗಳು ಮತ್ತು ೫೩೫ ಅನುದಾನ ರಹಿತ ಉರ್ದು ಶಾಲೆಗಳು ಕಂಡುಬರುತ್ತವೆ.ಅಧ್ಯಯನ ಕ್ಷೇತ್ರವಾದ ಬೆಳಗಾವಿ ನಗರದಲ್ಲಿ ಒಟ್ಟು ೨೫೬ ಕನ್ನಡ ಮಾಧ್ಯಮ ಶಾಲೆಗಳಿದ್ದು ಅವುಗಳಲ್ಲಿ ೨೧೬ ಸರ್ಕಾರಿ ಶಾಲೆಗಳು, ೧೪ ಅನುದಾನಿತ ಶಾಲೆಗಳು ಮತ್ತು ೨೬ ಅನುದಾನ ರಹಿತ ಶಾಲೆಗಳಿವೆ. ಬೆಳಗಾವಿ ನಗರದಲ್ಲಿ ಒಟ್ಟು ೩೫ ಇಂಗ್ಲೀಷ್ ಮಾಧ್ಯಮ ಶಾಲೆಗಳಿದ್ದು ಅವುಗಳಲ್ಲಿ ೦೫ ಸರ್ಕಾರಿ ಶಾಲೆ, ೦೫ ಅನುದಾನಿತ ಶಾಲೆಗಳು ಮತ್ತು ೨೫ ಅನುದಾನ ರಹಿತ ಶಾಲೆಗಳು ಕಂಡುಬರುತ್ತವೆ. ಅದೇ ಪ್ರಕಾರ ಬೆಳಗಾವಿ ನಗರದಲ್ಲಿ ಒಟ್ಟು ೫೬ ಉರ್ದು ಮಾಧ್ಯಮ ಶಾಲೆಗಳಿದ್ದು ಅವುಗಳಲ್ಲಿ ೫೨ ಸರ್ಕಾರಿ ಶಾಲೆಗಳು, ೦೧ ಅನುದಾನಿತ ಶಾಲೆ ಮತ್ತು ೦೩ ಅನುದಾನ ರಹಿತ ಶಾಲೆಗಳು ಕಂಡುಬರುತ್ತವೆ. ಬೆಳಗಾವಿ ನಗರದಲ್ಲಿ ಮುಸ್ಲಿಂ ಬಾಲಕ ಮತ್ತು ಬಾಲಕಿಯರು ಮರಾಠಿ ಶಾಲೆಗಳಿಗೆ ಪ್ರವೇಶ ಪಡೆಯುತ್ತಿಲ್ಲವಾದ್ದರಿಂದ ಅವುಗಳ ಮಾಹಿತಿಯನ್ನು ಅಧ್ಯಾಯದಲ್ಲಿ ವಿವರಿಸಲಾಗಿಲ್ಲ. ಅಧಿಕ ಸಂಖ್ಯೆಯ ದಾಖಲಾತಿಯು ಒಂದು ಪ್ರದೇಶ ಮತ್ತು ಸಮುದಾಯದ ಸಾಕ್ಷರತೆಯ ಪ್ರಮಾಣವನ್ನು ಉತ್ತಮಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಮುಂದಿನ ಭಾಗದಲ್ಲಿ ದಾಖಲಾತಿ ಪ್ರಮಾಣವನ್ನು ವಿವರವಾಗಿ ಮಂಡಿಸಲಾಗಿದೆ

**೫. ವಿದ್ಯಾರ್ಥಿಗಳ ದಾಖಲಾತಿ ಪ್ರಮಾಣ**

ಒಂದು ಸಮಾಜದ ಉತ್ತಮ ಶೈಕ್ಷಣಿಕ ಪರಿಸರವನ್ನು ಶಾಲಾ ದಾಖಲಾತಿಯ ಪ್ರಮಾಣದ ಮೂಲಕ ಅಳೆಯಲಾಗುತ್ತದೆ. ದಾಖಲಾತಿಯ ಪ್ರಮಾಣ ಅಧಿಕವಾದಂತೆ, ಆ ಪ್ರದೇಶದ ಸಾಕ್ಷರತೆ ಪ್ರಮಾಣವೂ ಹೆಚ್ಚಾಗುತ್ತದೆ ಎಂದು ನಂಬಲಾಗಿದೆ. ಕೋಷ್ಟಕ ೧೪ ಸ್ಪಷ್ಟಪಡಿಸುವಂತೆ ಕರ್ನಾಟಕ ರಾಜ್ಯದಲ್ಲಿ ೧ ನೇ ತರಗತಿಯಿಂದ ೫ ನೇ ತರಗತಿಯ ವರೆಗೆ ಒಟ್ಟು ೧೦,೪೫,೪೩೨ ವಿದ್ಯಾರ್ಥಿಗಳು ದಾಖಲಾಗಿದ್ದಾರೆ. ೬ ನೇ ತರಗತಿಯಿಂದ ೮ ನೇ ತರಗತಿಯ ವರೆಗೆ ಒಟ್ಟು ೫,೯೯,೧೮೬ ವಿದ್ಯಾರ್ಥಿಗಳು ದಾಖಲಾಗಿದ್ದಾರೆ. ಒಟ್ಟಾರೆ ೧ ನೇ ತರಗತಿಯಿಂದ ೧೦ ನೇ ತರಗತಿಯ ವರೆಗೆ ೧೯,೨೪,೬೯೯ ವಿದ್ಯಾರ್ಥಿಗಳು ರಾಜ್ಯದಲ್ಲಿ ದಾಖಲಾಗಿದ್ದಾರೆ.ಅದೇ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಒಟ್ಟು ೧,೯೫,೮೯೦ ವಿದ್ಯಾರ್ಥಿಗಳು, ೬ನೇ ತರಗತಿಯಿಂದ ೮ನೇ ತರಗತಿಯವರಗೆ ಒಟ್ಟು ೧,೧೩,೮೨೪ ವಿದ್ಯಾರ್ಥಿಗಳು, ಅಂದರೆ ಒಟ್ಟಾರೆ ೧ನೇ ತರಗತಿಯಿಂದ ೮ನೇ ತರಗತಿಯವರೆಗೆ ಒಟ್ಟು ೩,೦೮,೯೧೪ ವಿದ್ಯಾರ್ಥಿಗಳು ಶಾಲೆಗೆ ದಾಖಲಾಗಿದ್ದಾರೆ. ಒಟ್ಟಾರೆ ೧ನೇ ತರಗತಿಯಿಂದ ೧೦ನೇ ತರಗತಿಯವರಗೆ ಒಟ್ಟು ೩,೭೬,೪೨೧ ವಿದ್ಯಾರ್ಥಿಗಳು ಶಾಲೆಗಳಿಗೆ ದಾಖಲಾತಿಯನ್ನು ಹೊಂದಿದ್ದಾರೆ. ಅದೇ ಪ್ರಕಾರ ಅಧ್ಯಯನ

ಕ್ಷೇತ್ರವಾದ ಬೆಳಗಾವಿ ನಗರದಲ್ಲಿ ೧ ನೇ ತರಗತಿಯಿಂದ ೫ ನೇ ತರಗತಿಯ ವರೆಗೆ ಒಟ್ಟು ೪೫,೫೫೦ ವಿದ್ಯಾರ್ಥಿಗಳು ೬ ರಿಂದ ೮ ನೇ ತರಗತಿಯ ವರೆಗೆ ೨೮,೧೧೫ ವಿದ್ಯಾರ್ಥಿಗಳು ದಾಖಲಾಗಿದ್ದು ೧ ರಿಂದ ೮ ನೇ ತರಗತಿಯ ವರೆಗೆ ೭೩,೬೬೫ ವಿದ್ಯಾರ್ಥಿಗಳು, ೯ ರಿಂದ ೧೦ ನೇ ತರಗತಿಯ ವರೆಗೆ ೧೮,೮೫೭ ವಿದ್ಯಾರ್ಥಿಗಳು, ಒಟ್ಟಾರೆ ೧ ನೇ ತರಗತಿಯಿಂದ ೧೦ ನೇ ತರಗತಿಯ ವರೆಗೆ ಒಟ್ಟು ೯೨,೫೨೨ ವಿದ್ಯಾರ್ಥಿಗಳು ಶಾಲೆಗೆ ದಾಖಲಾಗಿದ್ದಾರೆ.ಬೆಳಗಾವಿ ಜಿಲ್ಲೆಯಲ್ಲಿ ಶಾಲೆಗೆ ದಾಖಲಾದವರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಅಧಿಕವಾಗಿದ್ದು, ವಿದ್ಯಾರ್ಥಿನಿಯರ ಸಂಖ್ಯೆಯೇ ಕಡಿಮೆಯಾಗಿದೆ. ಆದರೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ಸಂಖ್ಯೆಯ ನಡುವೆ ಗಂಭೀರವಾದ ಅಂತರಗಳಿಲ್ಲ ಎನ್ನುವುದು ಸಮಾಧಾನಕರವಾದ ಅಂಶವಾಗಿದೆ. ಅದರೂ, ಮಹಿಳಾ ಸಾಕ್ಷರತೆಯಲ್ಲಿ ಸಕಾರಾತ್ಮಕ ಬೆಳವಣಿಗೆ ಕಂಡುಬರುತ್ತದೆ. ವರ್ಷದಿಂದ ವರ್ಷಕ್ಕೆ ಬಾಲಕಿಯರು ಮಧ್ಯದಲ್ಲಿ ಶಾಲೆಬಿಡುವವರ ಸಂಖ್ಯೆ ಗಣನೀಯವಾಗಿ ಇಳಿಮುಖವಾಗುತ್ತಿರುವುದು ಸಕಾರಾತ್ಮಕ ಬೆಳವಣಿಗೆ ಯಾಗಿದೆ.

**೬. ಸಾಮಾಜಿಕ ವರ್ಗವಾರು ದಾಖಲಾತಿ**

ಸಾಕ್ಷರತೆ ಸಾಮಾಜಿಕ ಅಭಿವೃದ್ಧಿಯ ಸೂಚಿ. ಇದನ್ನು ಸಮಾಜದ ಚೌಕಟ್ಟಿನಿಂದ ಪ್ರತ್ಯೇಕಿಸಿ ನೋಡುವುದು ಸಾಧ್ಯವಾಗುವುದಿಲ್ಲ. ಭಾರತೀಯ ಸಮಾಜದಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಜಾತಿ ಪದ್ಧತಿ, ವರ್ಗಬೇಧ, ಮತ/ಲಿಂಗ ಬೇಧಗಳು ತೀವ್ರವಾಗಿರುವುದನ್ನು ನೋಡಬಹುದಾಗಿದೆ.[೧೦] ಕೋಷ್ಟಕ–೧೫ರಲ್ಲಿ ಕಂಡುಬರುವಂತೆ ಕರ್ನಾಟಕ ರಾಜ್ಯದಲ್ಲಿ ೧ ನೇ ತರಗತಿಯಿಂದ ೧೦ನೇ ತರಗತಿಯ ವರೆಗೆ ೧೧,೦೫,೮೦೧ಸಾಮಾನ್ಯ ವಿದ್ಯಾರ್ಥಿಗಳು, ೧೯,೨೪,೬೬೯ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು, ೭,೮೦,೨೨೩ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು, ೬೩,೦೩,೪೯೩ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಮತ್ತು ೧೪,೭೩,೯೧೭ ಮುಸ್ಲಿಂ ಸಮುದಾಯದ ವಿದ್ಯಾರ್ಥಿಗಳು ದಾಖಲಾತಿ ಪಡೆದುಕೊಂಡಿದ್ದಾರೆ. ಬೆಳಗಾವಿ ಜಿಲ್ಲೆಯಲ್ಲಿ ಇಂತಹ ಬೇಧಗಳು ತೀವ್ರವಾಗಿ ಕಂಡುಬರುತ್ತವೆ. ಶಾಲೆಗೆ ದಾಖಲಾದ ವಿವಿಧ ಸಮುದಾಯಗಳ ವಿಧ್ಯಾರ್ಥಿಗಳ ಸಂಖ್ಯೆಗಳು ವಿವಿಧ ಸಮುದಾಯಗಳಲ್ಲಿರುವ ಅಸಮಾನ ದಾಖಲಾತಿಯನ್ನು ಸ್ಪಷ್ಟಪಡಿಸುತ್ತದೆ. ಕೋಷ್ಠಕ–೧೭ ಹೇಳುವಂತೆ, ಬೆಳಗಾವಿ ಜಿಲ್ಲೆಯಲ್ಲಿ ದಾಖಲಾತಿಯನ್ನು ಹೊಂದಿದ ಒಟ್ಟು ವಿದ್ಯಾರ್ಥಿಗಳಲ್ಲಿ ಸಾಮಾನ್ಯ ವಿದ್ಯಾರ್ಥಿಗಳ ಸಂಖ್ಯೆ, ೧,೪೯,೮೮೮ ಆಗಿದ್ದು, ಪರಿಶಿಷ್ಟ ಜಾತಿ ೩೦,೮೦೪, ಪರಿಶಿಷ್ಟ ಪಂಗಡ ೨೫,೯೩೯, ಇತರೆ ಹಿಂದುಳಿದ ಜಾತಿಗಳ ೧,೦೨,೪೦೩ ವಿದ್ಯಾರ್ಥಿಗಳು ಶಾಲೆಯಲ್ಲಿ ದಾಖಲಾತಿಯನ್ನು ಪಡೆದುಕೂಂಡಿದ್ದಾರೆ. ಸಾಮಾನ್ಯ ಸಮುದಾಯಗಳು ಹಾಗೂ ಇತರೆ ಹಿಂದುಳಿದ ಸಮುದಾಯಗಳಿಗೆ ಹೋಲಿಸಿದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ

ಪ್ರವೇಶಾತಿ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದು ಕಂಡುಬರುತ್ತದೆ. ಎಲ್ಲಾ ಸಮುದಾಯ ಗಳಲ್ಲೂ ವಿದ್ಯಾರ್ಥಿನಿಯರ ದಾಖಲೆಗಿಂತ ವಿದ್ಯಾರ್ಥಿಗಳ ದಾಖಲಾತಿ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆ. ಕೋಷ್ಟಕ ೧೭ತಿಳಿಸುವಂತೆ ಕರ್ನಾಟಕ ರಾಜ್ಯದಲ್ಲಿ ೧ ನೇ ತರಗತಿಯಿಂದ ೧೦ ನೇ ತರಗತಿಯ ವರೆಗೆ ಒಟ್ಟು ೬೩,೦೩,೫೯೩ಮುಸ್ಲಿಂ ವಿದ್ಯಾರ್ಥಿಗಳು ಶಾಲೆಗಳಲ್ಲಿ ದಾಖಲಾತಿ ಪಡೆದುಕೊಂಡಿದ್ದಾರೆ ಅವರಲ್ಲಿ ೩೨,೪೪,೩೬೮ಮುಸ್ಲಿಂ ಬಾಲಕರು, ೩೦,೫೯,೨೨೫ಮುಸ್ಲಿಂ ಬಾಲಕಿಯರು ಶಾಲೆಗಳಿಗೆ ದಾಖಲಾಗಿದ್ದಾರೆ. ಆಡಳಿತವಾರು ಮುಸ್ಲಿಂ ವಿದ್ಯಾರ್ಥಿಗಳ ದಾಖಲಾತಿ ಯನ್ನು ಗಮನಿಸುವುದಾದರೆ ಸರ್ಕಾರಿ ಶಾಲೆಗಳಲ್ಲಿ ೧೩,೬೨,೪೯೩ ಮುಸ್ಲಿಂ ಬಾಲಕರು, ೧೪,೮೯,೨೩೦ ಮುಸ್ಲಿಂ ಬಾಲಕಿಯರು ದಾಖಲಾಗಿದ್ದಾರೆ. ಸಮಾಜ ಕಲ್ಯಾಣ ಇಲಾಖೆಯ ಶಾಲೆಗಳಲ್ಲಿ ೩೧,೫೦೮ ಮುಸ್ಲಿಂ ಬಾಲಕರು ಮತ್ತು ೩೨,೧೫೯ ಮುಸ್ಲಿಂ ಬಾಲಕಿಯರು ದಾಖಲಾಗಿದ್ದಾರೆ. ಸ್ಥಳಿಯ ಸಂಸ್ಥೆಯ ಶಾಲೆಗಳಲ್ಲಿ ೧,೭೬೯ ಮುಸ್ಲಿಂ ಬಾಲಕರು ಮತ್ತು ೨,೦೬೪ ಮುಸ್ಲಿಂ ಬಾಲಕಿಯರು ದಾಖಲಾಗಿದ್ದಾರೆ. ಅದೇ ಪ್ರಕಾರ ಅನುದಾನಿತ ಶಾಲೆಗಳಲ್ಲಿ ೪,೭೫,೮೨೨ ಮುಸ್ಲಿಂ ಬಾಲಕರು ಮತ್ತು ೪,೫೧,೬೮೩ ಮುಸ್ಲಿಂ ಬಾಲಕಿಯರು ದಾಖಲಾಗಿದ್ದಾರೆ ಅನುದಾನ ರಹಿತ ಶಾಲೆಗಳಲ್ಲಿ ೧೩,೬೧,೩೯೮ ಮುಸ್ಲಿಂ ಬಾಲಕರು ಮತ್ತು ೧೦,೭೫,೩೦೫ ಮುಸ್ಲಿಂ ಬಾಲಕಿಯರು ದಾಖಲಾಗಿದ್ದಾರೆ. ಇತರೆ ಶಾಲೆಗಳಲ್ಲಿ ೪೬೭ ಮುಸ್ಲಿಂ ಬಾಲಕರು ಮತ್ತು ೨೦೨ ಮುಸ್ಲಿಂ ಬಾಲಕಿಯರು ದಾಖಲಾತಿ ಹೊಂದಿದ್ದಾರೆ. ಅದೇ ಪ್ರಕಾರ ಕೇಂದ್ರಿಯ ಶಾಲೆಗಳಲ್ಲಿ ೧೦,೪೮೫ ಮುಸ್ಲಿಂ ಬಾಲಕರು ಮತ್ತು ೮,೨೩೩ ಮುಸ್ಲಿಂ ಬಾಲಕಿಯರು ದಾಖಲಾತಿ ಪಡೆದಿದ್ದಾರೆ. ಮಾನ್ಯತೆ ಪಡೆದಿಲ್ಲದ ಶಾಲೆಗಳಲ್ಲಿ ೪೨೬ ಮುಸ್ಲಿಂ ಬಾಲಕರು ಮತ್ತು ೩೪೯ ಮುಸ್ಲಿಂ ಬಾಲಕಿಯರು ಪ್ರವೇಶಾತಿ ಪಡೆದಿದ್ದಾರೆ. ಒಂದು ಅಂದಾಜಿನ ಪ್ರಕಾರ ಪರಿಶಿಷ್ಟ ಸಮುದಾಯಗಳ ಮತ್ತು ಅಲ್ಪಸಂಖ್ಯಾತ ಸಮುದಾಯದ ಮಕ್ಕಳು ಪ್ರೌಢಶಾಲೆಗಳ ನಂತರ ಶಾಲೆಬಿಡುವ ಪ್ರಮಾಣ ಅಧಿಕವಾಗುತ್ತದೆ. ಹಾಗಾಗಿ ಮೇಲ್‌ಜಾತಿ ಸಮುದಾಯಗಳಲ್ಲಿ ಮಾತ್ರ ಉನ್ನತ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಪರಿಶಿಷ್ಟರು ಮತ್ತು ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಉನ್ನತ ಶಿಕ್ಷಣ ಪಡೆಯುವವರ ಪ್ರಮಾಣ ಕನಿಷ್ಟ ಪ್ರಮಾಣದಲ್ಲಿರುತ್ತದೆ.

**೭. ಮಾನವ ಸಂಪನ್ಮೂಲ ಶಿಕ್ಷಕರ ಅನುಪಾತ**

ಒಂದು ಪ್ರದೇಶದ ಸಾಕ್ಷರತೆಯನ್ನು ಉತ್ತಮಪಡಿಸುವಲ್ಲಿ ಶಾಲೆಗಳು ಮುಖ್ಯವಾಗುತ್ತವೆ. ಅಷ್ಟೇ ಅಲ್ಲ, ಆ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ಶಿಕ್ಷಕರೂ ಕೂಡ ಸಾಕ್ಷರತೆಯನ್ನು ಎತ್ತರಿಸುವಲ್ಲಿ ನಿರ್ಣಾಯಕ ಪಾತ್ರವಹಿಸುತ್ತಾರೆ ಎಂದು ನಂಬಲಾಗಿದೆ. ೧೮ ಮತ್ತು ೧೯ ಕೋಷ್ಟಕಗಳು ಸ್ಪಷ್ಟಪಡಿಸು ವಂತೆ ರಾಜ್ಯದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು ಶೇ.೫೫.೪೨ ರಷ್ಟು ಶಿಕ್ಷಕರು ಮತ್ತು ಶೇ.೪೪.೮೦

ರಷ್ಟು ಮಾಧ್ಯಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ರಾಜ್ಯದಲ್ಲಿ ಒಟ್ಟು ಶೇ.೫೨.೪೬ರಷ್ಟು ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದು ರಾಜ್ಯದಲ್ಲಿ ಮಹಿಳಾ ಶಿಕ್ಷಕಿಯರ ಸಂಖ್ಯೆ ಉತ್ತಮ ಸ್ಥಿತಿಯಲ್ಲಿದೆ.[೧೧] ರಾಷ್ಟ್ರೀಯ ನಿಯಮಾವಳಿಯ ಪ್ರಕಾರ ಶೇ.೪೦ ಶಿಕ್ಷಕಿಯರಿರುವುದು ಕಡ್ಡಾಯವಾಗಿದೆ. ಕೋಷ್ಟಕ ೨೦ ಸ್ಪಷ್ಟಪಡಿಸುವ ಪ್ರಕಾರ, ಬೆಳಗಾವಿ ಜಿಲ್ಲೆಯಲ್ಲಿ ಕಿರಿಯ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳನ್ನು ಒಳಗೊಂಡು ಒಟ್ಟು ೭,೧೩೨ ಶಿಕ್ಷಕರು ಮತ್ತು ಪ್ರೌಢಶಾಲೆಗಳಲ್ಲಿ ಒಟ್ಟು ೧,೦೯೪ ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದಾರೆ. ಮಂಜೂರಾದ ಒಟ್ಟು ಹುದ್ದೆಗಳಿಗೆ ಹೋಲಿಸಿದರೆ, ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಒಟ್ಟು ೧,೦೨೮ ಶಿಕ್ಷಕರ ಕೊರತೆ(ಪ್ರಾಥಮಿಕ ೯೪೪ ಮತ್ತು ಪ್ರೌಢಶಾಲೆಗಳಲ್ಲಿ ೮೪) ಕಂಡುಬರುತ್ತದೆ. ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಪುರುಷ ಶಿಕ್ಷಕರಿಗೆ ಮಹಿಳಾ ಶಿಕ್ಷಕಿಯರ ಅನುಪಾತ ಶೇ.೦.೯೪ ಇದ್ದು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಅದರ ಅನುಪಾತವು ಶೇ.೧.೩೪ ರಷ್ಟಿದೆ. ಆದರೇ ಬೆಳಗಾವಿ ನಗರದಲ್ಲಿ ಒಟ್ಟು ೧,೧೧೩ ಮಂಜೂರಾದ ಶಿಕ್ಷಕರ ಹುದ್ದೆ ಇದ್ದು ಕೇವಲ ೧,೦೧೩ ಶಿಕ್ಷಕರು ಮಾತ್ರ ಕಾರ್ಯನಿರ್ವಹಿಸುತ್ತಿದ್ದಾರೆ. ಅವರಲ್ಲಿ ೮೫೪ ಸರ್ಕಾರಿ ಶಾಲೆಗಳಲ್ಲಿ ಮತ್ತು ೧೫೯ ಶಿಕ್ಷಕರು ಅನುದಾನಿತ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಒಟ್ಟು ೧,೦೦೦ ಶಿಕ್ಷಕರ ಕೊರತೆಯನ್ನು ಬೆಳಗಾವಿ ನಗರ ಎದುರಿಸುತ್ತಿದೆ. ಬೆಳಗಾವಿ ನಗರದ ಅನುದಾನಿತ ಉರ್ದು ಶಾಲೆಗಳಲ್ಲಿ ೧,೦೦೪ ಮಂಜೂರಾದ ಹುದ್ದೆಗಳಲ್ಲಿ ಕೇವಲ ೯೫೭ ಶಿಕ್ಷಕರು ಮಾತ್ರ ಕಾರ್ಯನಿರ್ವಹಿಸುತ್ತಿದ್ದಾರೆ. ಉರ್ದು ಶಾಲೆಗಳಲ್ಲಿ ಒಟ್ಟು ೧೭ ಶಿಕ್ಷಕರ ಕೊರತೆ ಇರುವುದು ಕಂಡುಬರುತ್ತದೆ. ಕರ್ನಾಟಕ ರಾಜ್ಯ ಮತ್ತು ಬೆಳಗಾವಿ ಜಿಲ್ಲೆಗಳ ಶಾಲೆಗಳನ್ನು ಗಮನಿಸಿದರೆ, ವಿದ್ಯಾರ್ಥಿಗಳ ಸಂಖ್ಯೆಗೆ ಹೋಲಿಸಿದರೆ ಶಿಕ್ಷಕರ ಅನುಪಾತ ಕಡಿಮೆಯಾಗಿದೆ. ಶಾಲೆಗಳ ಕೊರತೆ, ಶಿಕ್ಷಕರ ಕೊರತೆಗಳನ್ನು ಎದುರಿಸುತ್ತಿರುವ ಪ್ರದೇಶಗಳಲ್ಲಿ ಉತ್ತಮ ಸಾಕ್ಷರತೆಯನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಶಾಲಾ ದಾಖಲಾತಿ ಮತ್ತು ಶಿಕ್ಷಣದ ಬೆಳವಣಿಗೆಗಾಗಿ ಮೂಲಭೂತ ಸೌಕರ್ಯಗಳು ಅಗತ್ಯ. ಆದರೆ ಸರ್ಕಾರಗಳು ಒದಗಿಸುತ್ತಿರುವ ಮೂಲಭೂತ ಸೌಕರ್ಯಗಳು ಪ್ರದೇಶವಾರು ಅಸಮತೋಲನವಾಗಿವೆ. ಇದು ಶಿಕ್ಷಣದ ಗುಣಮಟ್ಟ ಕುಸಿಯಲು ಕಾರಣವಾಗುತ್ತದೆ ಎಂದು ಗ್ರಹಿಸಲಾಗಿದೆ.

### ೮. ಕರ್ನಾಟಕ ಮತ್ತು ಬೆಳಗಾವಿಯ ಪ್ರಾಥಮಿಕ ಶಾಲೆಗಳ ಮೂಲಭೂತ ಸೌಕರ್ಯಗಳು

ಆದರೆ ಇಂದಿಗೂ ರಾಜ್ಯ ಮತ್ತು ಜಿಲ್ಲೆಗಳಲ್ಲಿ ವಿವಿಧ ಶಾಲೆಗಳು ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿವೆ. ಕೋಷ್ಟಕ-೨೧ ರಾಜ್ಯದಲ್ಲಿ ಒಟ್ಟು ೬೦,೯೨೮ ಶಾಲೆಗಳಿವೆ. ಅವುಗಳಲ್ಲಿ ವಿವಿಧ ಶಾಲೆಗಳು ಹಲವಾರು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿವೆ. ರಾಜ್ಯದ ೩೩೫ ಶಾಲೆಗಳಲ್ಲಿ ಸಾಮಾನ್ಯ ಶೌಚಾಲಯಗಳಿಲ್ಲ, ೧೨೫ ಶಾಲೆಗಳಲ್ಲಿ ಬಾಲಕಿಯರಿಗೆ

ಪ್ರತ್ಯೇಕವಾದ ಶೌಚಾಲಯಗಳಿಲ್ಲ. ರಾಜ್ಯದ ಒಟ್ಟು ಶಾಲೆಗಳಲ್ಲಿ ೧,೧೮೪ ಶಾಲೆಗಳಿಗೆ ವಿದ್ಯುತ್ ಸೌಲಭ್ಯವಿಲ್ಲ, ೨೧,೭೪೯ ಶಾಲೆಗಳಿಗೆ ಆಟದ ಮೈದಾನವಿಲ್ಲ. ಅದೇ ಪ್ರಕಾರ ೧೮,೨೨೦ ಶಾಲೆಗಳು ರ್‍ಯಾಂಪ್ ಸೌಲಭ್ಯದಿಂದ, ೧,೭೬೬ ಶಾಲೆಗಳು ಗ್ರಂಥಾಲಯ ಸೌಲಭ್ಯಗಳಿಂದ ಮತ್ತು ೧೨,೫೯೬ ಶಾಲೆಗಳು ಶಾಲಾ ಅವರಣ ಗೋಡೆಗಳಿಂದ ವಂಚಿತವಾಗಿರುವುದು ತಿಳಿದುಬರುತ್ತದೆ. ಸಮಾದಾನಕರ ಸಂಗತಿಯೆಂದರೆ ಯಾವುದೇ ಶಾಲೆಗಳು ಕುಡಿಯುವ ನೀರಿನ ಸೌಲಭ್ಯದಿಂದ ವಂಚಿತವಾಗಿಲ್ಲ. ಅಧ್ಯಯನ ಕ್ಷೇತ್ರವಾದ ಬೆಳಗಾವಿ ಜಿಲ್ಲೆಯ ಅನೇಕ ಶಾಲೆಗಳು ಇದೇ ರೀತಿಯ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವುದು ಕಂಡುಬರುತ್ತದೆ. ಜಿಲ್ಲೆಯ ೧೮ ಶಾಲೆಗಳಲ್ಲಿ ಗಂಡು ಮಕ್ಕಳ ಶೌಚಾಲಯವಿಲ್ಲ, ೧೭ ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಶೌಚಾಲಯಗಳಿಲ್ಲ. ಅದೇ ಪ್ರಕಾರ ೧೧೬ ಶಾಲೆಗಳಲ್ಲಿ ವಿದ್ಯುತ್ ಸೌಲಭ್ಯವಿಲ್ಲ, ೪೯೮ ಶಾಲೆಗಳಿಗೆ ಆಟದ ಮೈದಾನವಿಲ್ಲ. ೫೯೩ ಶಾಲೆಗಳಿಗೆ ಶಾಲಾ ಆವರಣ ಗೋಡೆಯ ಕೊರತೆ ಇದೆ. ಲಭ್ಯವಿರುವ ಮಾಹಿತಿಯ ಪ್ರಕಾರ ಎಲ್ಲಾ ಶಾಲೆಗಳಲ್ಲಿ ರ್‍ಯಾಂಪ್ಸ್, ಗ್ರಂಥಾಲಯ ಮತ್ತು ಕುಡಿಯುವ ನೀರಿನ ಸೌಲಭ್ಯವಿದೆ.ನಾವು ಇಂದು ದೇಶದಲ್ಲಿ ಮಿಷನ್ ೨೦೨೦, ಸ್ಮಾರ್ಟ್ ಸಿಟಿಗಳು, ಬುಲೆಟ್ ರೈಲು ಮತ್ತು ಸೂಪರ್ ಕಂಪ್ಯೂಟರ್‌ಗಳ ಬಗ್ಗೆ ಮಾತನಾಡುತ್ತಿದ್ದೇವೆ. ಮತ್ತೊಂದೆಡೆಗೆ ಶಾಲೆಗಳಲ್ಲಿ ಶಿಕ್ಷಕರ ಕೊರತೆ, ಶೌಚಾಲಯಗಳ ಕೊರತೆ, ಮತ್ತು ಶಾಲಾ ಮಕ್ಕಳ ಅಪೌಷ್ಟಿಕತೆಯ ಬಗ್ಗೆ ಕೊರಗುತ್ತಿದ್ದೇವೆ. ಅಭಿವೃದ್ಧಿ ಆಶಯಗಳು ಮತ್ತು ಕನಿಷ್ಟ ಕಲಿಕೆಗೆ ಬೇಕಾಗುವ ಸೌಲಭ್ಯಗಳ ಕೊರತೆಗಳು ಒಟ್ಟಿಗೆ ಸಾಗಲು ಸಾಧ್ಯವಿಲ್ಲ. ಅಮರ್ತ್ಯಸೇನ್ ವಾದದಂತೆ ದೇಶದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಗಟ್ಟಿಗೊಳಿಸಬೇಕಾದರೆ, ಸರ್ಕಾರಗಳು ಪ್ರಾಥಮಿಕ ಶಾಲೆಗಳಲ್ಲಿರುವ ಮೂಲಭೂತ ಸೌಕರ್ಯಗಳ ಕೊರತೆಗಳನ್ನು ನೀಗಿಸುವ ಅಗತ್ಯಕ್ರಮ ಕೈಗೊಳ್ಳುವುದು ಸರ್ಕಾರಗಳ ಆದ್ಯ ಕರ್ತವ್ಯವಾಗಿದೆ. ಅಲ್ಪಸಂಖ್ಯಾತರ ಸಾಕ್ಷರತೆಯನ್ನು ಉತ್ತಮ ಪಡಿಸಲು ವಸತಿ ನಿಲಯಗಳು ಅಗತ್ಯವಾಗಿವೆ.

### ೯. ಅಲ್ಪಸಂಖ್ಯಾತರ ವಸತಿ ನಿಲಯಗಳು

ಕೋಷ್ಟಕ-೨೨ಸ್ಪಷ್ಟಪಡಿಸುವಂತೆ ಕರ್ನಾಟಕ ರಾಜ್ಯದಲ್ಲಿ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ವಸತಿ ನಿಲಯಗಳ ಒಟ್ಟು ಸಂಖ್ಯೆ ೫೩. ಅವುಗಳಲ್ಲಿ ೨,೬೫೦ ಅಲ್ಪಸಂಖ್ಯಾತ ಸಮುದಾಯಗಳ ವಿದ್ಯಾರ್ಥಿಗಳು ವಾಸವಾಗಿದ್ದಾರೆ. ಅವುಗಳಲ್ಲಿ ೨೬ ನಿಲಯಗಳು ಬಾಲಕರದಾಗಿದ್ದು, ಅವುಗಳಲ್ಲಿ ೧,೩೦೦ ಬಾಲಕರು ವಾಸವಾಗಿದ್ದಾರೆ. ೨೭ ನಿಲಯಗಳು ಬಾಲಕಿಯರದಾಗಿದ್ದು, ಅವುಗಳಲ್ಲಿ ೧,೩೫೦ ಬಾಲಕಿಯರು ವಾಸವಾಗಿದ್ದಾರೆ. ಅದೆ ಪ್ರಕಾರ ರಾಜ್ಯದಲ್ಲಿ ಅಲ್ಪಸಂಖ್ಯಾತರ ಮೆಟ್ರಿಕ್ ನಂತರದ ವಸತಿ ನಿಲಯಗಳ ಸಂಖ್ಯೆ ಒಟ್ಟು ೭೧ ಇದ್ದು, ಅವುಗಳಲ್ಲಿ ೪,೪೮೦ ವಿದ್ಯಾರ್ಥಿಗಳು ವಾಸವಾಗಿದ್ದಾರೆ. ಒಟ್ಟು ನಿಲಯಗಳಲ್ಲಿ ೩೮ ಬಾಲಕರ ನಿಲಯಗಳು ಅವುಗಳಲ್ಲಿ ೨,೧೫೦

ವಿದ್ಯಾರ್ಥಿಗಳು ಹಾಗೂ ೩೩ ಬಾಲಕಿಯರ ನಿಲಯಗಳು ಅವುಗಳಲ್ಲಿ ೨,೩೩೦ ಬಾಲಕಿಯರು ವಾಸವಾಗಿದ್ದಾರೆ. ಅದೇ ರೀತಿಯಲ್ಲಿ ರಾಜ್ಯದಲ್ಲಿ ಒಟ್ಟು ೬೧ ಅನುದಾನಿತ ಅಲ್ಪಸಂಖ್ಯಾತರ ವಿದ್ಯಾರ್ಥಿ ನಿಲಯಗಳಿದ್ದು, ಅವುಗಳಲ್ಲಿ ಒಟ್ಟು ೩,೦೫೦ ವಿದ್ಯಾರ್ಥಿಗಳು ವಾಸವಾಗಿದ್ದಾರೆ. ಒಟ್ಟು ಅನುದಾನಿತ ವಿದ್ಯಾರ್ಥಿ ನಿಲಯಗಳಲ್ಲಿ ೪೯ ನಿಲಯಗಳು ಬಾಲಕರದಾಗಿದ್ದು, ಅವುಗಳಲ್ಲಿ ೨,೪೫೦ ವಿದ್ಯಾರ್ಥಿಗಳು ಹಾಗೂ ೧೨ ನಿಲಯಗಳು ಬಾಲಕಿಯರದಾಗಿದ್ದು ಅವುಗಳಲ್ಲಿ ೬೦೦ ವಿದ್ಯಾರ್ಥಿನಿಯರು ವಾಸವಾಗಿದ್ದಾರೆ.

ಕೋಷ್ಟಕ-೨೩ ಸ್ಪಷ್ಟಪಡಿಸುವಂತೆ ಬೆಳಗಾವಿ ಜಿಲ್ಲೆಯಲ್ಲಿ ಮೆಟ್ರಿಕ್ ಪೂರ್ವ ಅಲ್ಪಸಂಖ್ಯಾತ ವಿದ್ಯಾರ್ಥಿ ನಿಲಯಗಳು ಬಾಲಕ ಬಾಲಕಿಯರಿಗೆ ತಲಾ ಒಂದೊಂದು ಇವೆ. ಅವುಗಳಲ್ಲಿ ತಲಾ ೫೦/೫೦ ಬಾಲಕ ಬಾಲಕಿಯರು ವಾಸವಾಗಿದ್ದಾರೆ. ಅದೇ ಪ್ರಕಾರ ಜಿಲ್ಲೆಯಲ್ಲಿ ಮೂರು ಮೆಟ್ರಿಕ್ ನಂತರದ ನಿಲಯಗಳಿದ್ದು ಅವುಗಳಲ್ಲಿ ಎರೆಡು ಬಾಲಕರದಾಗಿದ್ದು, ಒಂದು ಬಾಲಕಿಯರದಾಗಿದೆ. ಅವುಗಳಲ್ಲಿ ನೂರು ಬಾಲಕರು ಮತ್ತು ಎಪ್ಪತ್ತೈದು ಬಾಲಕಿಯರು ವಾಸವಾಗಿದ್ದಾರೆ. ಒಟ್ಟಾರೆ ಬೆಳಗಾವಿ ಜಿಲ್ಲೆಯಲ್ಲಿ ಏಳು ಅನುದಾನಿತ ವಿದ್ಯಾರ್ಥಿ ನಿಲಯಗಳು ಬಾಲಕರದ್ದೇ ಅಗಿವೆ. ಅವುಗಳಲ್ಲಿ ೫೩೦ ಬಾಲಕರು ವಾಸವಾಗಿದ್ದಾರೆ. ಆಶ್ಚರ್ಯಕರ ಸಂಗತಿಯಂದರೆ ಬಾಲಕಿಯರಿಗೆ ಯಾವುದೇ ಅನುದಾನಿತ ವಸತಿ ನಿಲಯಗಳಿಲ್ಲ.

## ೩.೮. ಕರ್ನಾಟಕ ಮತ್ತು ಬೆಳಗಾವಿ ಜಿಲ್ಲೆಯ ಮುಸ್ಲಿಮರ ಶೈಕ್ಷಣಿಕ ಪರಿಸರ

ಭಾರತದ ಸಂವಿಧಾನವು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಮತ್ತು ಧಾರ್ಮಿಕ ಅಲ್ಪಸಂಖ್ಯಾತರಿಗೆ ಶೈಕ್ಷಣಿಕ ಹಕ್ಕು ನೀಡಿದೆ. ಸಾಚಾರ್ ವರದಿ ಮಂಡನೆಯಾಗುವವರೆಗೂ ಮುಸ್ಲಿಮರ ನೈಜ ಸ್ಥಿತಿ-ಗತಿಗಳ ಬಗ್ಗೆ ಯಾವುದೇ ಅಧಿಕೃತ ಅಂಕಿ-ಅಂಶಗಳು ಲಭ್ಯವಾಗಿರಲಿಲ್ಲ. ಮುಸ್ಲಿಂ ಸಮುದಾಯದಲ್ಲಿ ಮಹಿಳಾ ಸಾಕ್ಷರತೆ ಕಡಿಮೆಯಾಗಿದೆ. ಇದರ ಜೊತೆಗೆ ಮುಸ್ಲಿಂ ಪುರುಷರ ಉನ್ನತ ಶಿಕ್ಷಣದ ಕೊರತೆಯೂ ಕಂಡುಬರುತ್ತದೆ.೧೨ ಶಿಕ್ಷಣವು ಅಭಿವೃದ್ಧಿ ಅವಕಾಶಗಳನ್ನು ತೆರೆಯುವ ಸಾಧನವಾಗಿದೆ. ಸಮಾನತೆಯನ್ನು ಸೃಷ್ಟಿಸುವ ಹಾಗೂ ಸಮಾನ ಅವಕಾಶಗಳನ್ನು ನೀಡುವ ಮಾಧ್ಯಮವೂ ಆಗಿದೆ. ಸಮಾಜ ವಿಜ್ಞಾನಗಳ ಸಾಹಿತ್ಯಗಳು ಒಪ್ಪುವ ಪ್ರಕಾರ ಶಿಕ್ಷಣವು ಅಸಮಾನತೆಯನ್ನು ಹೋಗಲಾಡಿಸಿ ಆಸ್ತಿ ಒಡೆತನ, ಸಾಮರ್ಥ್ಯ ಹೆಚ್ಚಳ ಮತ್ತು ಅವಕಾಶಗಳಲ್ಲಿ ಸಮಾನತೆಯನ್ನು ತರುತ್ತದೆ.೧೩ ಆದರೆ, ಭಾರತದಲ್ಲಿನ ಶೈಕ್ಷಣಿಕ ವ್ಯವಸ್ಥೆಯ ಸ್ವರೂಪವೇ ಶೈಕ್ಷಣಿಕ ಹಿಂದುಳಿಯುವಿಕೆಗೆ ಪ್ರಮುಖ ಕಾರಣವೆಂದು ಗ್ರಹಿಸಲಾಗಿದೆ. ಶಿಕ್ಷಣವನ್ನು ಪಡೆದುಕೊಂಡಿರುವ ಮಟ್ಟವನ್ನು ಆಧರಿಸಿ ಮಾತ್ರವಲ್ಲ, ನಗರ, ಗ್ರಾಮೀಣ ಪ್ರದೇಶಗಳಲ್ಲಿನ ಅಸಮಾನ ಹಂಚಿಕೆಯೂ ಕಾರಣವಾಗಿದೆ. ಸಾಮಾಜಿಕ ಅಸಮಾನತೆ ಶಿಕ್ಷಣ ಪಡೆಯುವ ಅವಕಾಶಗಳನ್ನು ಕ್ಷೀಣಿಸುತ್ತದೆ.

ಶೈಕ್ಷಣಿಕ ಅವಕಾಶಗಳ ವಿಸ್ತರಣೆ, ಪ್ರಜ್ಞಾಪೂರ್ವಕ ಪ್ರಯತ್ನಗಳು ಮತ್ತು ನಾಗರೀಕ ಸಮುದಾಯಗಳ ಸಕ್ರೀಯ ಭಾಗವಹಿಸುವಿಕೆ ಶೈಕ್ಷಣಿಕ ಅಸಮಾನತೆಯನ್ನು ದೂರಮಾಡುತ್ತದೆ.[೧೪]

ಸ್ವಾತಂತ್ರ್ಯದ ಅರವತ್ತು ದಶಕಗಳ ನಂತರವೂ ಮುಸ್ಲಿಮರು ಶೈಕ್ಷಣಿವಾಗಿ ಹಿಂದುಳಿದ್ದಾರೆ. ಕರ್ನಾಟಕ ಸರ್ಕಾರ ನೇಮಿಸಿದ್ದ ರೆಹಮಾನ್‌ಖಾನ್ ಸಮಿತಿ ಹೇಳುವ ಪ್ರಕಾರ ಅಖಿಲ ಭಾರತಿಯ ಸೇವೆಗಳಾದ ಐ.ಎ.ಎಸ್ ನಲ್ಲಿ ಕೇವಲ ಶೇ.೩ ರಷ್ಟು, ಐ,ಎಫ್.ಎಸ್ ಶೇ,೧.೮ ರಷ್ಟು, ಮತ್ತು ಐ.ಪಿ.ಎಸ್ ನಲ್ಲಿ ಕೇವಲ ಶೇ,೪ ರಷ್ಟು ಮುಸ್ಲಿಮರು ಪ್ರಾತಿನಿಧ್ಯ ಪಡೆದಿದ್ದಾರೆ. ವರದಿಯು ಹೇಳುವ ಪ್ರಕಾರ ಮುಸ್ಲಿಮರಲ್ಲಿ ಶೇ.೩೭.೬೭ ರಷ್ಟು ಪ್ರಾಥಮಿಕ ಶಿಕ್ಷಣವನ್ನು(೭ನೇ ತರಗತಿಯವರೆಗೆ) ಮತ್ತು ಶೇ.೧೮.೩೩ ರಷ್ಟು ನಂತರದ ಶಿಕ್ಷಣ ಪಡೆದುಕೊಂಡಿದ್ದಾರೆ. ಅದರಲ್ಲಿ ಎಸ್.ಎಸ್.ಎಲ್.ಸಿ ವರೆಗೆ ಶಿಕ್ಷಣ ಪಡೆದವರು ಶೇ.೨.೧೯ ರಷ್ಟು, ಪದವಿ ಮತ್ತು ತಾಂತ್ರಿಕ ಅಥವಾ ವೃತ್ತಿಪರ ಶಿಕ್ಷಣ ಪಡೆದವರು ಶೇ.೦.೨೧ ರಷ್ಟು, ಪದವಿ ಶೇ.೧.೨೨ ರಷ್ಟು, ವೃತ್ತಿಪರ ಪದವಿ ಶೇ.೦.೧೯ ಎಂ.ಬಿ.ಬಿ.ಎಸ್ ಶೇ.೦.೦೩ ರಷ್ಟು, ಬಿ,ಎಡ್ ಪದವಿ ಶೇ.೦.೧೫ ಇಂಜನಿಯರಿಂಗ್ ಪದವಿಧರರು ಶೇ.೦.೧೩ ರಷ್ಟು ವೃತ್ತಿಪರವಲ್ಲದ ಸ್ನಾತಕೋತ್ತರ ಪದವಿ  ಪಡೆದವರು ಶೇ.೦.೦೧ ಮತ್ತು ಪಿ.ಎಚ್.ಡಿ ಪದವಿ ಪಡೆದವರು ಶೇ.೦.೦೫ ರಷ್ಟು ಮುಸ್ಲಿಮರು ಕಂಡುಬರುತ್ತಾರೆ. ಉನ್ನತ ಪದವಿಗಳನ್ನು ಪಡೆದವರ ಪ್ರಮಾಣವನ್ನು ಅವಲೋಕಿಸಿದರೆ, ಬಹುತೇಕ ಮುಸ್ಲಿಮರು ಪ್ರಾಥಮಿಕ ಹಂತದ ಶಿಕ್ಷಣವನ್ನು ಪೂರೈಸಿದ ನಂತರ ತಮ್ಮ ವ್ಯಾಸಾಂಗವನ್ನು ಮೊಟಕುಗೊಳಿಸುತ್ತಾರೆ ಎಂಬ ಸತ್ಯಾಂಶ ನಮ್ಮ ಗಮನಕ್ಕೆ ಬರುತ್ತದೆ. ಹಾಗಾದರೆ ಬಾಲ್ಯದಲ್ಲೇ ಶಾಲೆ ತೊರೆಯುವ ಮಕ್ಕಳು ಎಲ್ಲಿ ತೊಡಗಿಕೊಳ್ಳುತ್ತಾರೆ ಎಂಬುದಕ್ಕೆ ಉತ್ತರವು ಕಂಡುಬರುತ್ತದೆ. ವರದಿಯ ಪ್ರಕಾರ ಕರ್ನಾಟಕದ ಮುಸ್ಲಿಮರಲ್ಲಿ ಶೇ.೬.೬ ರಷ್ಟು ಮಕ್ಕಳು ಬಾಲಕಾರ್ಮಿಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಈ ಕಾರಣದಿಂದಾಗಿ ಕೇವಲ ಶೇ.೧೫.೧೦ ರಷ್ಟು ಇತರೆ ಕಾರಣಗಳಿಗಾಗಿ  ಶಾಲೆ ಬಿಟ್ಟವರು ಮತ್ತು ಶೇ.೭೦.೯ ರಷ್ಟು ಮುಸ್ಲಿಮರು ಕೌಟುಂಬಿಕ ಬಡತನದಿಂದಾಗಿಯೇ ತಮ್ಮ ಶಿಕ್ಷಣವನ್ನು ಪ್ರಾಥಮಿಕ ಹಂತದಲ್ಲಿಯೇ ಮೊಟಕುಗೊಳಿಸು ತ್ತಾರೆ. ಇಲ್ಲಿ ಸ್ಪಷ್ಟಗೊಳ್ಳುವ ಸಂಗತಿ ಎಂದರೆ ಮುಸ್ಲಿಮರು ತಮ್ಮ ಬಡತನದ ಕಾರಣಕ್ಕಾಗಿಯೇ ಹೆಚ್ಚಿನ ಅನಕ್ಷರತೆಯನ್ನು ಅನುಭವಿಸುವಂತಾಗಿದೆ.[೧೫]

ಕೋಷ್ಟಕ-೨೪ ತಿಳಿಸುವಂತೆ, ೨೦೧೧ರ ಜನಗಣತಿ ವರದಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೧ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಶಾಲೆಯಲ್ಲಿ ದಾಖಲಾತಿ ಪಡೆದ ಮುಸ್ಲಿಮರು, ಕ್ರಿಶ್ಚಿಯನ್ನರು ಮತ್ತು ಜೈನ ಸಮುದಾಯದ ಮಕ್ಕಳಲ್ಲಿ ಮುಸ್ಲಿಮರ ಒಟ್ಟು ೪೪,೫೮೨ (೧ನೇ ತರಗತಿಯಿಂದ ೮ನೇ ತರಗತಿಯ ವರೆಗೆ ೩೭,೭೧೨ ವಿದ್ಯಾರ್ಥಿಗಳು ಮತ್ತು ೯ರಿಂದ ೧೦ನೇ ತರಗತಿಯ ವರೆಗೆ ೬,೮೭೦ವಿದ್ಯಾರ್ಥಿಗಳು) ಅದೇ ಪ್ರಕಾರ ಕ್ರೈಸ್ತರ ಒಟ್ಟು ೨೭೩೮

ವಿದ್ಯಾರ್ಥಿಗಳು ಮತ್ತು ಜೈನ ಸಮುದಾಯದ ಒಟ್ಟು ೫,೮೭೪ ವಿದ್ಯಾರ್ಥಿಗಳು ಶಾಲೆಯಲ್ಲಿ ದಾಖಲಾತಿ ಪಡೆದುಕೊಂಡಿದ್ದಾರೆ. ಕೋಷ್ಟಕ-೨೫ ರಲ್ಲಿರುವಂತೆ ಬೆಳಗಾವಿ ಜಿಲ್ಲೆಯಲ್ಲಿ ೧ ರಿಂದ ೧೦ ನೇ ತರಗತಿಯ ವರೆಗೆ ಒಟ್ಟು ೪೪,೫೮೨ ಮುಸ್ಲಿಂ ವಿದ್ಯಾರ್ಥಿಗಳು ದಾಖಲಾತಿ ಪಡೆದಿದ್ದು, ಅದರಲ್ಲಿ ೨೨,೩೨೧ಮುಸ್ಲಿಂ ಬಾಲಕರು ಮತ್ತು ೨೨,೨೬೧ ಮುಸ್ಲಿಂ ಬಾಲಕಿಯರಾಗಿದ್ದಾರೆ. ಎಲ್ಲಾ ಅಲ್ಪಸಂಖ್ಯಾತ ಸಮುದಾಯಗಳಲ್ಲಿ ವಿದ್ಯಾರ್ಥಿಗಳಿಗಿಂತ ವಿದ್ಯಾರ್ಥಿನಿಯರ ಸಂಖ್ಯೆ ಕಡಿಮೆಯಾಗಿದೆ. ಇದಕ್ಕೆ ವಿರುದ್ಧವಾಗಿ ಮುಸ್ಲಿಂ ಸಮುದಾಯದಲ್ಲಿ ವಿದ್ಯಾರ್ಥಿಗಳಿಗಿಂತ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಾಗಿದೆ. ಸಂವಿಧಾನದ ೩೫೦(ಎ) ವಿಧಿಯು ಪ್ರತಿಯೊಂದು ಮಗುವಿಗೂ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವಂತೆ ನಿರ್ದೇಶಿಸುತ್ತದೆ. ಉರ್ದುಭಾಷೆಯು ಬಹುತೇಕ ಮುಸ್ಲಿಮರ ಮಾತೃಭಾಷೆ ಯಾಗಿರುವುದರಿಂದ, ಉರ್ದು ಮಾತನಾಡುವ ಮಗು ಭಾಷಾ ಅಲ್ಪಸಂಖ್ಯಾತ ಮತ್ತು ಧಾರ್ಮಿಕ ಅಲ್ಪಸಂಖ್ಯಾತ ಗುಂಪಿಗೆ ಸೇರುತ್ತದೆ.[೧೬] ಕರ್ನಾಟಕ ಸರ್ಕಾರ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರಾದ ಮುಸ್ಲಿಮರ ಶಿಕ್ಷಣಕ್ಕಾಗಿ ಉರ್ದು ಶಾಲೆಗಳನ್ನು ಸ್ಥಾಪಿಸಿದೆ.

## ೩.೯. ಬೆಳಗಾವಿ ಜಿಲ್ಲೆಯ ಉರ್ದು ಶಾಲೆಗಳು

ಅಲ್ಪಸಂಖ್ಯಾತ ಸಮುದಾಯಗಳಿಗೆ ಮಾತ್ರಭಾಷೆಯಲ್ಲೇ ಶಿಕ್ಷಣ ದೊರೆಯಬೇಕು ಎಂಬ ಸಂವಿಧಾನದ ಆಶಯದ ಹಿನ್ನಲೆಯಲ್ಲಿ ಕರ್ನಾಟಕದ ರಾಜ್ಯದಾದ್ಯಂತ ಉರ್ದು ಮಾಧ್ಯಮ ಶಾಲೆಗಳನ್ನು ಸ್ಥಾಪಿಸಿರುವಂತೆ, ಬೆಳಗಾವಿ ಜಿಲ್ಲೆಯಲ್ಲೂ ಉರ್ದು ಮಾಧ್ಯಮ ಶಾಲೆಗಳನ್ನು ಸ್ಥಾಪಿಸಲಾಗಿದೆ. ಈ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ದಾಖಲಾತಿಯ ಅಂಕಿ-ಅಂಶಗಳನ್ನು ೨೦೧೧ರ ಜನಗಣತಿಯು ಕಂಡುಕೊಂಡಿದೆ. ಕೋಷ್ಟಕ ೨೬ ಸ್ಪಷ್ಟಪಡಿಸುವಂತೆ, ಕರ್ನಾಟಕದಲ್ಲಿ ಸರ್ಕಾರಿ ಉರ್ದುಮಾಧ್ಯಮ ಶಾಲೆಗಳಲ್ಲಿ ಒಟ್ಟು ೪,೬೧,೭೨೪ ವಿದ್ಯಾರ್ಥಿಗಳು ವ್ಯಾಸಾಂಗ ಮಾಡುತ್ತಿದ್ದು ಅದರಲ್ಲಿ ೧,೭೬,೩೪೪ ವಿದ್ಯಾರ್ಥಿಗಳು ಮತ್ತು ೨,೮೫,೩೮೦ ವಿದ್ಯಾರ್ಥಿನಿಯರಿದ್ದಾರೆ. ಕೋಷ್ಟಕ ೨೭ ರಲ್ಲಿರುವಂತೆ ಬೆಳಗಾವಿ ಜಿಲ್ಲೆಯ ಸರ್ಕಾರಿ ಉರ್ದು ಮಾದ್ಯಮ ಶಾಲೆಗಳಲ್ಲಿ ಒಟ್ಟು ೧೨,೪೩೭ ವಿದ್ಯಾರ್ಥಿಗಳು ವ್ಯಾಸಾಂಗ ಮಾಡುತ್ತಿದ್ದು ಅದರಲ್ಲಿ ೩,೯೫೧ ವಿದ್ಯಾರ್ಥಿಗಳು ಮತ್ತು ೮,೪೮೬ ವಿದ್ಯಾರ್ಥಿನಿಯರಿದ್ದಾರೆ.ಕೋಷ್ಟಕ-೨೮ ರಲ್ಲಿ ತಿಳಿಸಿರುವಂತೆ ಅನುದಾನಿತ ಶಾಲೆಗಳಲ್ಲಿ ಒಟ್ಟು ೩,೪೬೫ ವಿದ್ಯಾರ್ಥಿಗಳು ವ್ಯಾಸಾಂಗ ಮಾಡುತ್ತಿದ್ದು, ಅದರಲ್ಲಿ ೯೮೯ ವಿದ್ಯಾರ್ಥಿಗಳು ಮತ್ತು ೨,೪೭೬ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದಾರೆ. ಕೋಷ್ಟಕ-೨೯ ತಿಳಿಸಿರುವಂತೆ ಉರ್ದು ಮಾಧ್ಯಮ ಅನುದಾನರಹಿತ ಶಾಲೆಗಳಲ್ಲಿ ಒಟ್ಟು ೨,೯೫೬ ವಿದ್ಯಾರ್ಥಿಗಳು ವ್ಯಾಸಾಂಗ ಮಾಡುತ್ತಿದ್ದು ಅದರಲ್ಲಿ ೧,೦೭೫ ವಿದ್ಯಾರ್ಥಿಗಳು ಹಾಗೂ ೧,೮೮೧ ವಿದ್ಯಾರ್ಥಿನಿಯರು ವ್ಯಾಸಾಂಗ

ಮಾಡುತ್ತಿದ್ದಾರೆ. ಈ ಕೋಷ್ಟಕವು ಸ್ಪಷ್ಟಪಡಿಸುವ ಕುತೂಹಲಕಾರಿ ಸಂಗತಿ ಎಂದರೆ ಜಿಲ್ಲೆಯ ಸರ್ಕಾರಿ ಅನುದಾನಿತ ಮತ್ತು ಅನುದಾನರಹಿತ ಎಲ್ಲಾ ಶಾಲೆಗಳಲ್ಲಿ ಬಾಲಕರಿಗಿಂತ ಬಾಲಕಿಯರ ಸಂಖ್ಯೆಯೇ ಹೆಚ್ಚಾಗಿದೆ. ಮತ್ತೊಂದು ಆಸಕ್ತಿಕರ ಸಂಗತಿ ಎಂದರೆ, ಅನುದಾನಿತ ಶಾಲೆಗಳನ್ನು ಹೊರತುಪಡಿಸಿ ಸರ್ಕಾರಿ ಮತ್ತು ಅನುದಾನರಹಿತ ಶಾಲೆಗಳಲ್ಲಿ ಉನ್ನತ ತರಗತಿಗಳಿಗೆ ಹೋದಂತೆಲ್ಲ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತದೆ. ಮಳವಳ್ಳಿ ತಾಲೂಕು ಉರ್ದು ಶಾಲೆಗಳ ಅಧ್ಯಯನದ ಫಲಿತಗಳು ಗುರುತಿಸುವ ಪ್ರಕಾರ ಶೇ.೪೩ ರಷ್ಟು ಮುಸ್ಲಿಂ ಮಕ್ಕಳು ಶಾಲೆಯಿಂದ ಹೊರಗೆ ಉಳಿದಿದ್ದಾರೆ ಇದಕ್ಕೆ ಬಡತನ, ಮಾಧ್ಯಮದ ಸಮಸ್ಯೆ, ಶಾಲೆಗಳ ಭೌತಿಕ ಸ್ಥಿತಿ, ಮುಸ್ಲಿಮರು ಅಧಿಕವಿರುವ ಗ್ರಾಮಗಳಲ್ಲಿ ಸರ್ಕಾರಿ ಉರ್ದು ಶಾಲೆಯನ್ನು ಸ್ಥಾಪಿಸದೇ ಇಲ್ಲದಿರುವುದು, ೭ನೇ ತರಗತಿಯ ನಂತರ ಉರ್ದು ಮಾಧ್ಯಮ ಇಲ್ಲದಿರುವುದರಿಂದ ೮ ಅಥವಾ ೯ನೇ ತರಗತಿಗೆ ಶಾಲೆ ಬಿಡುವುದು ಅನಿವಾರ್ಯವಾಗುತ್ತಿದೆ. ಪಠ್ಯ ಮತ್ತು ಬೋಧನಾ ವಿಧಾನಗಳು ಸಂಪೂರ್ಣವಾಗಿ ಭಿನ್ನವಾಗಿದ್ದು, ಉರ್ದು ಶಿಕ್ಷಕರಿಗೆ ಕನ್ನಡ ಕೈಪಿಡಿಗಳನ್ನು ಒದಗಿಸುತ್ತಿರುವುದು ಉರ್ದು ಶಾಲಾ ಗುಣಮಟ್ಟ ಕಡಿಮೆಯಾಗಲು ಕಾರಣವಾಗಿದೆ.[೧೭] ಬೆಂಗಳೂರು ನಗರದ ಉರ್ದು ಶಾಲೆಗಳ ಸ್ಥಿತಿಗಳ ಅಧ್ಯಯನ ಹೇಳುವ ಪ್ರಕಾರ ೫ ರಿಂದ ೧೪ನೇ ವಯೋಮಾನದ ಮಕ್ಕಳಲ್ಲಿ ಕೇವಲ ಶೇ.೧೭ ರಷ್ಟು ಮಕ್ಕಳು ಮಾತ್ರ ಶಾಲೆಗೆ ಹೋಗುತ್ತಾರೆ. ಇದಕ್ಕೆ ಬೋಧನಾ ಭಾಷೆಯ ತೊಂದರೆ ಹಾಗೂ ಉತ್ತಮ ಸೌಕರ್ಯಗಳ ಕೊರತೆ ಕಾರಣವಾಗಿದೆ.[೧೮] ಉರ್ದು ಶಾಲೆಗಳ ಸ್ಥಾಪನೆ ಮತ್ತು ಶಿಕ್ಷಕರ ನೇಮಕಾತಿ ಮಾಡಿದರೆ ಮಾತ್ರ ಮುಸ್ಲಿಂ ಮಕ್ಕಳ ಸಾಕ್ಷರತೆ ಮತ್ತು ಉರ್ದು ಭಾಷೆಯ ಬೆಳವಣಿಗೆ ಸಾಧ್ಯವಾಗುವುದಿಲ್ಲ. ಉರ್ದು ಶಾಲೆಗಳಲ್ಲಿ ಬೋಧನಾ ವ್ಯವಸ್ಥೆಯ ಸುಧಾರಣೆ, ಮೂಲಭೂತ ಸೌಕರ್ಯಗಳ ಪೂರೈಕೆ, ಸೂಕ್ತ ಸಮಯದಲ್ಲಿ ಪಠ್ಯ ಪುಸ್ತಕಗಳ ಪೂರೈಕೆ ಮತ್ತು ಕನ್ನಡ ಬಲ್ಲ ಉರ್ದು ಶಿಕ್ಷಕರ ನೇಮಕಾತಿ ಮುಂತಾದ ಕ್ರಮಗಳನ್ನು ಕೈಗೊಳ್ಳದಿದ್ದಲ್ಲಿ ಭಾರತ ಸಂವಿಧಾನದಲ್ಲಿ ಮುಸ್ಲಿಮರ ಶಿಕ್ಷಣದ ಬಗ್ಗೆ ಇರುವ ಆಶಯ ಮತ್ತು ಕರ್ನಾಟಕ ಸರ್ಕಾರದ ಕ್ರಮಗಳು ಸಾಕಾರಗೊಳ್ಳುವುದಿಲ್ಲ. ಉರ್ದು ಭಾಷೆಯಲ್ಲಿ ಶಿಕ್ಷಣ ಪಡೆದ ಮುಸ್ಲಿಂ ಸಮುದಾಯದ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಭಾಷೆಯ ಕೊರತೆಯಿಂದಾಗಿ ಉತ್ತಮ ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ದೊರೆಯುತ್ತಿಲ್ಲವೆಂಬ ಮಾತುಗಳು ಕೇಳಿಬರುತ್ತಿವೆ.

ಉರ್ದು ಪ್ರಾಥಮಿಕ ಶಾಲೆಗಳಲ್ಲಿ ಪರಿಣಾಮಕಾರಿ ಬೋಧನೆ ಇಲ್ಲದಿರುವುದೇ ಇದಕ್ಕೆ ಕಾರಣ ಎನ್ನಲಾಗುತ್ತಿದೆ. ಇಂತಹ ಪರಿಸ್ಥಿತಿ ಮುಂದುವರಿದರೆ ಪರೋಕ್ಷವಾಗಿ ಸರ್ಕಾರಗಳೇ ಮುಸ್ಲಿಂ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣದ ಅವಕಾಶಗಳನ್ನು ನಿರಾಕರಿಸಿದಂತಾಗುತ್ತದೆ. ಮುಸ್ಲಿಂ

ಸಮುದಾಯ ಹೆಚ್ಚಾಗಿ ವಾಸವಿರುವ ಪ್ರದೇಶಗಳಲ್ಲಿ ಹೆಚ್ಚು ಉರ್ದು ಶಾಲೆಗಳನ್ನು ಸ್ಥಾಪಿಸುವುದರ ಜೊತೆಗೆ ಎಲ್ಲಾ ಉರ್ದು ಶಾಲೆಗಳನ್ನು ಇಂಗ್ಲೀಷ್ ಭಾಷೆ ಮತ್ತು ಕಂಪ್ಯೂಟರ್ ತಂತ್ರಜ್ಞಾನಗಳಿಂದ ಸಬಲೀಕರಣಗೊಳಿಸುವ ಅಗತ್ಯ ಇಂದು ಹೆಚ್ಚಾಗಿದೆ. ಮುಸ್ಲಿಂ ಮಹಿಳೆಯರ ಸಾಮಾಜಿಕ ಪರಿಸರವನ್ನು ಅರ್ಥ ಮಾಡಿಕೊಳ್ಳುವುದು ಈ ಅಧ್ಯಾಯದ ಅಗತ್ಯವಾಗಿದೆ. ಶಿಕ್ಷಣ, ಉನ್ನತ ಶಿಕ್ಷಣ, ಉದ್ಯೋಗ ಮತ್ತು ಹೊರಗಿನ ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ಅಭಿಪ್ರಾಯಗಳನ್ನು ಮತ್ತು ಮಹಿಳಾ ಶಿಕ್ಷಣದ ಬಗ್ಗೆ ಪೋಷಕರ ಅಭಿಪ್ರಾಯಗಳನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿ ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

## ೩.೧೦. ಮುಸ್ಲಿಂ ಮಹಿಳೆಯರ ಶಿಕ್ಷಣ ಮತ್ತು ತಪ್ಪು ಗ್ರಹಿಕೆಗಳು

ಧರ್ಮ ತನ್ನ ಅನುಯಾಯಿಗಳ ಸಮಾಜೋ-ಆರ್ಥಿಕ ಜೀವನವನ್ನು ಪ್ರಭಾವಿಸುವ, ನಿರ್ದೇಶಿಸುವ ಮತ್ತು ಸೀಮಿತಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದು ಗ್ರಹಿಸಲಾಗುತ್ತಿದೆ.[೧೯] ಹಂಟರ್ ಹೇಳುವ ಪ್ರಕಾರ ಇದು ಭಾರತದಲ್ಲಿ ಮುಸ್ಲಿಮರಿಗೆ ಹೆಚ್ಚಾಗಿ ಅನ್ವಯವಾಗುತ್ತದೆ. ಇವನ ಪ್ರಕಾರ ಮುಸ್ಲಿಮರ ಶಿಕ್ಷಣವು ಧರ್ಮದೊಂದಿಗೆ ಅಂತರ್ಗತಗೊಂಡಿದೆ. ಹಾಗಾಗಿ ಮುಸ್ಲಿಮರಲ್ಲಿ ಅಂತರ್ಗತಗೊಂಡ ಸಂಪ್ರದಾಯಗಳು ಮತ್ತು ಅಲೌಕಿಕ ಆಚರಣೆಗಳು ಸುಧಾರಣೆಯಾಗುವವರೆಗೂ ಮುಸ್ಲಿಂ ಸಮುದಾಯ ವೈಜ್ಞಾನಿಕ ಶಿಕ್ಷಣಕ್ಕೆ ವಿರೋಧಿಗಳಾಗಿದ್ದರು.[೨೦] ಮುಸ್ಲಿಂ ಮಹಿಳೆಯರ ಶಿಕ್ಷಣ ಮತ್ತು ಇಸ್ಲಾಂ ಧರ್ಮದ ಬಗೆಗಿನ ಹಂಟರ್‌ನ ಗ್ರಹಿಕೆಗಳು ಇಂದು ಅಪ್ರಸ್ತುತವಾಗಿವೆ. ಇಸ್ಲಾಂ ಎಲ್ಲರಿಗೂ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ.[೨೧] ಇಸ್ಲಾಂ ತನ್ನ ಅನುಯಾಯಿಗಳಿಗೆ ವಿವಿಧ ಶಾಖೆಗಳಿಂದ ಜ್ಞಾನ ಪಡೆದು ಸಬಲೀಕರಣಗೊಳ್ಳಲು ಪ್ರೇರೆಪಿಸುತ್ತವೆ.[೨೨] ಮಹಮದ್ ಪೈಗಂಬರರು ಜ್ಞಾನ ಪಡೆಯಲು ಮತ್ತು ಜ್ಞಾನಕ್ಕಾಗಿ ದೂರದ ಪಯಣಕ್ಕೂ ಸಿದ್ಧರಾಗುವಂತೆ ಅನುಯಾಯಿಗಳಿಗೆ ಉಪದೇಶ ನೀಡಿದ್ದಾರೆ.[೨೩] ಹಾಗಾಗಿ ಕುರಾನ್ ಮತ್ತು ಅದಿಸ್ ಮುಸ್ಲಿಮರ ಶಿಕ್ಷಣಕ್ಕೆ ಅಡ್ಡಿಪಡಿಸುವುದಿಲ್ಲ.[೨೪] ಇಸ್ಲಾಂ ಧರ್ಮದ ಪ್ರಕಾರ ಮಹಿಳೆಯು ಶಿಕ್ಷಣ ಪಡೆದು ತನ್ನ ನೈತಿಕ ಮಟ್ಟವನ್ನು ಹೆಚ್ಚಿಸಿಕೊಂಡು ಅದನ್ನು ಉತ್ತಮ ಸಮಾಜ ನಿರ್ಮಾಣಕ್ಕೆ ವಿನಿಯೋಗಿಸಬೇಕೆಂದು ಹೇಳುತ್ತದೆ.[೨೫] ಹಾಗಾಗಿ ಇಸ್ಲಾಂ ದೃಷ್ಟಿಯಲ್ಲಿ ಪುರುಷರು ಮತ್ತು ಮಹಿಳೆಯರು ಸಮಾನರಗಿದ್ದಾರೆ. ಕುರಾನ್ ಲಿಂಗಾಧಾರಿತ ಶ್ರೇಣಿ ವ್ಯವಸ್ಥೆಯನ್ನು ಬೆಂಬಲಿಸುವುದಿಲ್ಲ.[೨೬] ಪುರುಷ ಮತ್ತು ಮಹಿಳೆಯರ ಅಸಮಾನತೆ, ಮಹಿಳೆಯರಿಗೆ ಶಿಕ್ಷಣದ ನಿರ್ಬಂಧ ಇವುಗಳು ಆಯಾ ಕಾಲಘಟ್ಟದಲ್ಲಿ ಪುರೋಹಿತಶಾಹಿಗಳು ಮತ್ತು ಪುರುಷಶಾಹಿಗಳು ಮುಸ್ಲಿಂ ಮಹಿಳೆಯರ ಶೋಷಣೆಗಾಗಿ ರೂಪಿಸಿದ ಹುನ್ನಾರಗಳಂತೆ ಕಂಡುಬರುತ್ತವೆ. ಏಕೆಂದರೆ ಆರಂಭಿಕ ಇಸ್ಲಾಮಿಕ್ ದಿನಗಳಲ್ಲಿ ಪುರುಷರೊಂದಿಗೆ ಮಹಿಳೆಯರಿಗೂ ಸಮಾನವಾಗಿ ಶಿಕ್ಷಣದ

ಹಕ್ಕನ್ನು ನೀಡಲಾಗಿತ್ತು. ನಂತರ ಅವರ ಹಕ್ಕನ್ನು ನಿರಾಕರಿಸಲಾಯಿತು. ಅಂತಿಮವಾಗಿ ಮುಸ್ಲಿಂ ಮಹಿಳೆಯರನ್ನು ಧಾರ್ಮಿಕ ಶಿಕ್ಷಣಕ್ಕೆ ಸೀಮಿತಗೊಳಿಸಿ ಇಸ್ಲಾಂ ವಿರೋಧಿಯಾದ ಕೃತಕ ಸಂಪ್ರದಾಯಗಳಿಗೆ ಈಡು ಮಾಡಲಾಯಿತು.[೨೭] ಹಾಗಾಗಿ ಇಂದು ಮುಸ್ಲಿಂ ಮಹಿಳೆ ಎದುರಿಸುತ್ತಿರುವ ಶೈಕ್ಷಣಿಕ ಹಿಂದುಳಿಯುವಿಕೆ, ಆಧುನಿಕ ಮನೋಭಾವದ ಕೊರತೆ ಮತ್ತು ಧಾರ್ಮಿಕ ಕಂದಾಚಾರಗಳು ಉಳಿಗಮಾನ್ಯವ್ಯವಸ್ಥೆಯ ಕೊಡುಗೆಗಳೇ ಹೊರತು ಇವುಗಳಲ್ಲಿ ಇಸ್ಲಾಂ ಧರ್ಮದ ಪಾತ್ರವಿಲ್ಲ. ಇಸ್ಲಾಂ ಮಹಿಳೆಯರಿಗೆ ಉನ್ನತವಾದ ಸ್ಥಾನವನ್ನು ನೀಡಿದೆ ಆದರೆ ಇಂದಿನ ಮುಸ್ಲಿಂ ಮಹಿಳೆ ವಾಸ್ತವಿಕವಾಗಿ ಈ ಸ್ಥಾನವನ್ನು ಅನುಭವಿಸುತ್ತಿಲ್ಲ.[೨೮] ಇಸ್ಲಾಂ, ಮಹಿಳೆ ಮತ್ತು ಅವಳ ಶಿಕ್ಷಣದ ಬಗೆಗಿನ ಪೂರ್ವಗ್ರಹ ಅಭಿಪ್ರಾಯಗಳು ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣ ವಿರೋಧಿ ಎನ್ನುವ ಭಾವನೆಗಳನ್ನು ರೂಪಿಸುವ ಹುನ್ನಾರಗಳಾಗಿವೆ.[೨೯] ಇಂತಹ ಪೂರ್ವಗ್ರಹಪೀಡಿತ ಅಭಿಪ್ರಾಯಗಳಿಂದಾಗಿ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ್ದಾರೆ. ಈ ಚರ್ಚೆಗಳ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಶಿಕ್ಷಣ, ಉನ್ನತ ಶಿಕ್ಷಣ ಮತ್ತು ಉದ್ಯೋಗ ಹಾಗೂ ಹೊರಗಿನ ದುಡಿಮೆಯ ಕುರಿತು ಕ್ಷೇತ್ರಕಾರ್ಯದ ಮೂಲಕ ಮುಸ್ಲಿಂ ಬಾಲಕಿಯರ ಮತ್ತು ಪೋಷಕರ ಅಭಿಪ್ರಾಯಗಳನ್ನು ಸಂಗ್ರಹಿಸಿ ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

## ೩.೧೧. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಆಯ್ಕೆ

ಕೋಷ್ಟಕ-೩೦ ರಲ್ಲಿ ಕಂಡು ಬರುವಂತೆ ಅಧ್ಯಯನ ಕ್ಷೇತ್ರದ ಮುಸ್ಲಿಂ ಬಾಲಕಿಯರ ೧೧೭ ಕುಟುಂಬಗಳನ್ನು ಆಯ್ದುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗೆ ಆಯ್ದುಕೊಂಡ ಒಟ್ಟು ಕುಟುಂಬಗಳಲ್ಲಿ ೬೮ ಮುಸ್ಲಿಂ ಬಾಲಕಿಯರು ಪ್ರಾಥಮಿಕ ಶಿಕ್ಷಣದ ನಂತರ ವಿವಿಧ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿರುವುದು ಕಂಡುಬಂದಿದೆ. ಈ ಬಾಲಕಿಯರನ್ನು ಆಧಾರವಾಗಿಟ್ಟುಕೊಂಡು ಶಿಕ್ಷಣ, ಉನ್ನತ ಶಿಕ್ಷಣ ಮತ್ತು ಉದ್ಯೋಗ ಹಾಗೂ ಹೊರಗಿನ ದುಡಿಮೆಯ ಬಗ್ಗೆ ಅವರ ನಿಲುವುಗಳನ್ನು ಕಂಡುಕೊಳ್ಳಲಾಗಿದೆ. ಆಯ್ಕೆಯಾದ ಬಾಲಕಿಯರು ವಿವಿಧ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಪ್ರೌಢ ಮತ್ತು ಪಿಯುಸಿ ತರಗತಿಗಳಲ್ಲಿ ಶೇ.೪೪.೧ ರಷ್ಟು ಬಾಲಕಿಯರು ವ್ಯಾಸಾಂಗ ಮಾಡುತ್ತಿದ್ದಾರೆ. ಶೇ.೨೯.೪ ರಷ್ಟು ಬಾಲಕಿಯರು ಪದವಿ ತರಗತಿಗಳಲ್ಲಿ, ಶೇ.೧೭.೬ ರಷ್ಟು ಬಾಲಕಿಯರು ತಾಂತ್ರಿಕ ಶಿಕ್ಷಣದಲ್ಲಿ ಮತ್ತು ಶೇ.೮.೯ ರಷ್ಟು ಬಾಲಕಿಯರು ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವುದು ಕಂಡುಬಂದಿದೆ. ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಇವರ ನಿಲುವುಗಳು ಮತ್ತು ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ, ಉನ್ನತ ಶಿಕ್ಷಣ, ಉದ್ಯೋಗ ಮತ್ತು ಹೊರಗಿನ ದುಡಿಮೆಯ ಬಗ್ಗೆ ಬದಲಾಗುವ ಅವರ ನಿಲುವುಗಳನ್ನು ಮುಂದಿನ ಭಾಗದಲ್ಲಿ ವಿವರವಾಗಿ ಮಂಡಿಸಲಾಗಿದೆ.

## ೩.೧೨. ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ನಿಲುವುಗಳು

ಶಿಕ್ಷಣ, ಉನ್ನತ ಶಿಕ್ಷಣ, ಉದ್ಯೋಗ ಮತ್ತು ಹೊರಗಿನ ದುಡಿಮೆಯ ಬಗ್ಗೆ ಇಂದು ಆಧುನಿಕ ಮುಸ್ಲಿಂ ಬಾಲಕಿಯರ ನಿಲುವುಗಳಲ್ಲಿ ಸಕಾರಾತ್ಮಕ ಬದಲಾವಣೆ ಕಂಡುಬರುತ್ತಿದೆ. ಕೋಷ್ಟಕ–೩೦ ರಲ್ಲಿ ಕಂಡುಬರುವಂತೆಬೆಳಗಾವಿ ನಗರದ ಒಟ್ಟು ಮುಸ್ಲಿಂ ಬಾಲಕಿಯರಲ್ಲಿ ಶೇ.೯೧.೨ ರಷ್ಟು ಬಾಲಕಿಯರು ಈಗ ವ್ಯಾಸಾಂಗ ಮಾಡುತ್ತಿರುವ ಹಂತವನ್ನು ಪೂರೈಸಿ ಮುಂದಿನ ಹಂತದ ಶಿಕ್ಷಣವನ್ನು ಪಡೆಯುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಾರೆ. ಶೇ.೯೦ ರಷ್ಟು ಬಾಲಕಿಯರು ಪದವಿ ಮತ್ತು ಸ್ನಾತಕೋತ್ತರ ಪದವಿಯನ್ನು ಪಡೆಯುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಾರೆ. ಒಟ್ಟು ಬಾಲಕಿಯಲ್ಲಿ ಶೇ.೮೫.೨ ರಷ್ಟು ಬಾಲಕಿಯರು ವಿದ್ಯಾಭ್ಯಾಸದ ನಂತರ ಉದ್ಯೋಗ ಪಡೆಯಲು ಮತ್ತು ಹೊರಗಡೆ ದುಡಿಮೆಯಲ್ಲಿ ಪಾಲ್ಗೊಳ್ಳುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಾರೆ. ಅಂದರೆ ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಬಾಲಕಿಯರು ಶಿಕ್ಷಣ, ಉನ್ನತ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಸಕಾರಾತ್ಮಕ ಭಾವನೆಯನ್ನು ಹೊಂದಿರುವುದು ಕಂಡುಬರುತ್ತದೆ. ಮುಸ್ಲಿಂ ಮಹಿಳೆಯರು ಮನೆಯಿಂದ ಈಚೆಗೆ ಹೊರಬರುವುದಿಲ್ಲ, ಉನ್ನತ ಶಿಕ್ಷಣ ಪಡೆಯುವುದಿಲ್ಲ ಮತ್ತು ಮುಖ್ಯವಾಹಿನಿಗೆ ಸೇರ್ಪಡೆಗೊಳ್ಳುವುದಿಲ್ಲ ಎನ್ನುವ ವಾದಕ್ಕೆ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಬೆಂಬಲವಿಲ್ಲ. ಅಧ್ಯಯನಗಳು ಹೇಳುವ ಪ್ರಕಾರ ಹೈದ್ರಾಬಾದ್– ಕರ್ನಾಟಕ ಪ್ರದೇಶದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಲಿಂಗಾನುಪಾತ, ವೃತ್ತಿ ಶಿಕ್ಷಣದಲ್ಲಿ ಲಿಂಗ ತಾರತಮ್ಯ ಹೆಚ್ಚಾಗಿ ಕಂಡುಬರುತ್ತಿದೆ. ಅದ್ದರಿಂದ ಮಹಿಳೆಯರಿಗೆ ವೃತ್ತಿ ಶಿಕ್ಷಣದಲ್ಲಿ ವಿಶೇಷ ಮೀಸಲಾತಿ ನೀಡಬೇಕು, ಗಾಮೀಣ ಭಾಗಗಳಲ್ಲಿ ಮಹಿಳೆಯರಿಗೆ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಪಡೆದುಕೊಳ್ಳುವ ಅವಕಾಶಗಳನ್ನು ಗಟ್ಟಿಗೊಳಿಸ ಬೇಕಾಗಿದೆ.[೨೦] ಇಂದು ಮುಸ್ಲಿಂ ಮಹಿಳೆಯರು ಉನ್ನತ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಸಕಾರಾತ್ಮಕ ಮನೋಭಾವನೆ ಪಡೆದುಕೊಂಡಿದ್ದರೂ ಉನ್ನತ ಶಿಕ್ಷಣದಲ್ಲಿ ಅವರ ಅನುಪಾತ ಕಡಿಮೆಯಾಗಲು ಕಾರಣಗಳನ್ನು ಬಾಲ್ಯವಿವಾಹ ಮತ್ತು ಕುಟುಂಬಗಳ ಸಮಾಜೋ–ಆರ್ಥಿಕ ನೆಲೆಗಳಲ್ಲಿ ಗುರುತಿಸ ಲಾಗುತ್ತಿದೆ.

## ೩.೧೩. ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ನಿಲುವುಗಳು

ಕ್ಷೇತ್ರ ಅಧ್ಯಯನದ ಮೂಲಕ ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಬೆಳಗವಿ ನಗರದ ಮುಸ್ಲಿಂ ಬಾಲಕಿಯರ ನಿಲುವುಗಳನ್ನು ಕಂಡುಕೊಳ್ಳಲಾಗಿದೆ. ಕೋಷ್ಟಕ–೩೦ ರಲ್ಲಿ ಕಂಡುಬರುವಂತೆ ಪ್ರೌಢ ಮತ್ತು ಪಿಯುಸಿ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಒಟ್ಟು ಶೇ.೪೪.೧ ರಷ್ಟು ಮುಸ್ಲಿಂ ಬಾಲಕಿಯರಲ್ಲಿ ಶೇ.೯೦ ರಷ್ಟು ಬಾಲಕಿಯರು ಮುಂದಿನ ವಿದ್ಯಾಭ್ಯಾಸ ಪಡೆಯುವ ಅಪೇಕ್ಷೆ ಹೊಂದಿದ್ದಾರೆ. ಅವರಲ್ಲಿ ಶೇ.೮೩.೩ ರಷ್ಟು ಬಾಲಕಿಯರು ಉನ್ನತ ಶಿಕ್ಷಣವನ್ನು

ಪಡೆಯು ಅಪೇಕ್ಷೆ ಹೊಂದಿದ್ದಾರೆ. ಮತ್ತು ಅವರಲ್ಲಿ ಶೇ.೭೦ ರಷ್ಟು ಬಾಲಕಿಯರು ವಿದ್ಯಾಭ್ಯಾಸದ ನಂತರ ಉದ್ಯೋಗವನ್ನು ಪಡೆಯುವ ಮತ್ತು ಮನೆಯ ಹೊರಗಡೆ ದುಡಿಯುವ ಅಪೇಕ್ಷೆ ಹೊಂದಿದ್ದಾರೆ. ಬೆಳಗಾವಿ ನಗರದ ಒಟ್ಟು ಬಾಲಕಿಯರಲ್ಲಿ ಶೇ.೨೯.೪ ರಷ್ಟು ಬಾಲಕಿಯರು ಪದವಿ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು, ಅವರಲ್ಲಿ ಶೇ.೯೦ ರಷ್ಟು ಬಾಲಕಿಯರು ಮುಂದಿನ ಹಂತಗಳ ಶಿಕ್ಷಣವನ್ನು ಪಡೆಯುವ ಬಗ್ಗೆ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ಅದೇ ಪ್ರಕಾರ ಶೇ.೯೫ ರಷ್ಟು ಬಾಲಕಿಯರು ಕ್ರಮವಾಗಿ ಉನ್ನತ ಶಿಕ್ಷಣ ಪಡೆಯುವುದರ ಬಗ್ಗೆ ಮತ್ತು ಶಿಕ್ಷಣದ ನಂತರ ಉದ್ಯೋಗ ಪಡೆಯುವ ಮತ್ತು ಹೊರಗಡೆ ದುಡಿಮೆಗೆ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ಒಟ್ಟು ಬಾಲಕಿಯರಲ್ಲಿ ಶೇ.೧೭.೬ ರಷ್ಟು ಬಾಲಕಿಯರು ತಾಂತ್ರಿಕ ಶಿಕ್ಷಣವನ್ನು ಪಡೆಯುತ್ತಿದ್ದು ಅವರಲ್ಲಿ ಕ್ರಮವಾಗಿ ಶೇ.೯೧.೬ ರಷ್ಟು ಬಾಲಕಿಯರು ಶಿಕ್ಷಣದ ಅಪೇಕ್ಷೆ ಮತ್ತು ಉನ್ನತ ಶಿಕ್ಷಣದ ಬಗ್ಗೆ ಅಪೇಕ್ಷೆ ಹೊಂದಿದ್ದು, ಅವರಲ್ಲಿ ಶೇ.೧೦೦ ರಷ್ಟು ಬಾಲಕಿಯರು ಉದ್ಯೋಗ ಪಡೆದು ಮನೆಯ ಹೊರಗಡೆ ದುಡಿಯುವುದನ್ನು ಅಪೇಕ್ಷಿಸುತ್ತಾರೆ. ಒಟ್ಟು ಬಾಲಕಿಯರಲ್ಲಿ ಶೇ.೮೯ ರಷ್ಟು ಬಾಲಕಿಯರಲ್ಲಿ ಶೇ.೧೦೦ ರಷ್ಟು ಬಾಲಕಿಯರು ಶಿಕ್ಷಣದ ಅಪೇಕ್ಷೆ, ಉನ್ನತ ಶಿಕ್ಷಣ ಪಡೆಯುವ ಬಗ್ಗೆ ಮತ್ತು ಉದ್ಯೋಗ ಪಡೆದು ಮನೆಯ ಹೊರಗಡೆಯ ದುಡಿಮೆಯಲ್ಲಿ ಅಪೇಕ್ಷಿಸುತ್ತಿದ್ದಾರೆ. ಕ್ಷೇತ್ರ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಲ್ಲಿ ಶಿಕ್ಷಣ, ಉನ್ನತ ಶಿಕ್ಷಣ ಮತ್ತು ಉದ್ಯೋಗ ಹಾಗೂ ಹೊರಗಡೆ ದುಡಿಮೆಯ ಬಗ್ಗೆ ಸಕಾರಾತ್ಮಕ ಮನೋಭಾವನೆ ಕಂಡುಬರುತ್ತಿದೆ. ಶಿಕ್ಷಣದ ನೆಲೆಯಲ್ಲಿ ಮುಸ್ಲಿಂ ಬಾಲಕಿಯರ ಮನೋಭಾವನೆಗಳಲ್ಲಿ ತೀಕ್ಷ್ಣತರವಾದ ಫಲಿತಗಳು ಕಂಡುಬರುತ್ತವೆ. ಬೆಳಗವಿ ನಗರದ ಮುಸ್ಲಿಂ ಬಾಲಕಿಯರಲ್ಲಿ ಶಿಕ್ಷಣದ ಮಟ್ಟ ಹೆಚ್ಚಾದಂತೆ ಅವರಲ್ಲಿ ಶಿಕ್ಷಣ, ಉನ್ನತ ಶಿಕ್ಷಣ ಪಡೆಯುವ ಮತ್ತು ಉದ್ಯೋಗ ಪಡೆದು ಮನೆಯ ಹೊರಗಡೆ ದುಡಿಮೆಯಲ್ಲಿ ಪಾಲ್ಗೊಳ್ಳುವ ಅಪೇಕ್ಷೆ ಹೆಚ್ಚಾಗುತ್ತಿದೆ. ಪ್ರೌಢ ಮತ್ತು ಪಿಯುಸಿ ಹಂತಗಳ ಶಿಕ್ಷಣ ಪಡೆಯುತ್ತಿರುವವರಿಗಿಂತ ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣ, ಉನ್ನತ ಶಿಕ್ಷಣ, ಉದ್ಯೋಗ ಮತ್ತು ಹೊರಗಡೆ ದುಡಿಮೆಯ ಬಗ್ಗೆ ಹೆಚ್ಚು ಸಕಾರಾತ್ಮಕ ಮನೋಭಾವನೆಗಳು ವ್ಯಕ್ತವಾಗುತ್ತಿವೆ.

ಅಧ್ಯಯನಗಳು ಹೇಳುವ ಪ್ರಕಾರ ಗಂಡು ಮಕ್ಕಳನ್ನು ಪಡೆಯುವ ಸಂಗತಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಮಹಿಳೆಯರಿಗಿಂತ ಉನ್ನತ ಶಿಕ್ಷಣ ಪಡೆದ ಮಹಿಳೆಯರಲ್ಲಿ ಹೆಚ್ಚು ಸಕಾರಾತ್ಮಕ ಬೆಳವಣಿಗೆ ಕಂಡುಬಂದಿದೆ.[೩೧] ಹೈದ್ರಾಬಾದಿನ ಅಧ್ಯಯನ ಕಂಡುಕೊಂಡಿರುವಂತೆ ಬಹುಸಂಖ್ಯಾತ ನವ ಯುವತಿಯರು ಉನ್ನತ ಶಿಕ್ಷಣ ಪಡೆಯುವುದರ ಬಗ್ಗೆ ಮತ್ತು ಮನೆಯ ಹೊರಗಡೆ ಕೆಲಸ ಮಾಡುವುದನ್ನು ಇಷ್ಟಪಡುತ್ತಾರೆ.[೩೨] ಅಂದರೆ ಉನ್ನತ ಶಿಕ್ಷಣವು ಮುಸ್ಲಿಂ ಮಹಿಳೆಯರಲ್ಲಿ ಸಕಾರಾತ್ಮಕ

ಮನೋಭಾವನ ತರುವಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ. ಇಂತಹ ಮನೋಭಾವನೆಗಳು ಪ್ರಾಥಮಿಕ ಶಾಲಾ ಮಟ್ಟದಲ್ಲೇ ರೂಢಿಸಿಕೊಳ್ಳಲು ಸಹಕಾರಿಯಾಗುವಂತೆ ಪ್ರಾಥಮಿಕ ಶಾಲೆಗಳನ್ನು ಗಟ್ಟಿಗೊಳಿಸ ಬೇಕಾಗಿದೆ ಎನ್ನುವುದು ಅಮರ್ತ್ಯಸೇನ್ ಅವರ ವಾದವಾಗಿದೆ. ಮುಸ್ಲಿಂ ಬಾಲಕಿಯರ ಶಿಕ್ಷಣ ಮತ್ತು ಉದ್ಯೋಗ ಪಡೆಯುವ ಅಪೇಕ್ಷೆಗೆ ಪೂರಕವಾಗಿ ಪೋಷಕರು ಕೂಡ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವ ಮನೋಭಾವನೆಯನ್ನು ರೂಢಿಸಿಕೊಳ್ಳುವುದು ಅಗತ್ಯವಾಗುತ್ತದೆ. ಕ್ಷೇತ್ರ ಅಧ್ಯಯನದ ಮೂಲಕ ಬೆಳಗಾವಿ ನಗರದ ಮುಸ್ಲಿಂ ಪೋಷಕರಲ್ಲಿ ಮಹಿಳಾ ಶಿಕ್ಷಣದ ಬಗ್ಗೆ ಇರುವ ಅಭಿಪ್ರಾಯಗಳನ್ನು ಕಂಡುಕೊಳ್ಳಲಾಗಿದೆ. ಕ್ಷೇತ್ರ ಅಧ್ಯಯನದ ಫಲಿತಗಳನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

## ೩.೧೪. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ನಿಲುವುಗಳು

ಹಿಂದು ಸಮುದಾಯದಂತೆ ಮುಸ್ಲಿಂ ಸಮುದಾಯದಲ್ಲೂ ಪುರುಷ ಪ್ರಧಾನ ಶ್ರೇಣೀಕೃತ ವ್ಯವಸ್ಥೆ ನೆಲೆಗೊಂಡಿದೆ. ಈ ವ್ಯವಸ್ಥೆಯಿಂದಾಗಿ ಮಹಿಳೆಯರು ಎರಡನೆಯ ದರ್ಜೆಯ ನಾಗರೀಕರಂತೆ ಬದುಕುತ್ತಿದ್ದಾರೆ. ಇಸ್ಲಾಂ ಧರ್ಮ ಪುರುಷ ಮತ್ತು ಮಹಿಳೆಯರಿಗೆ ಸಮಾನತೆಯನ್ನು ನೀಡಿದೆ. ಮಹಿಳೆಯರು ಶಿಕ್ಷಣದ ಮೂಲಕ ನೈತಿಕತೆಯನ್ನು ಪಡೆದು ಅದನ್ನು ಸಮಾಜದ ಸುಧಾರಣೆಗೆ ವಿನಿಯೋಗ ಮಾಡಬೇಕೆಂದು ಒತ್ತಾಯಿಸುತ್ತದೆ. ಆದರೆ ಸಮುದಾಯದಲ್ಲಿ ಮಡುವುಗಟ್ಟಿದ ಪುರುಷ ಪ್ರಧಾನ ವ್ಯವಸ್ಥೆಯಿಂದಾಗಿ ಮಹಿಳೆಯರನ್ನು ಮನೆಗೆ ಮತ್ತು ಧಾರ್ಮಿಕ ಶಿಕ್ಷಣಕ್ಕೆ ಸೀಮಿತಗೊಳಿಸ ಲಾಗಿದೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಪೋಷಕರಲ್ಲಿ ಎಷ್ಟು ಕುಟುಂಬಗಳು ಮಹಿಳೆಯರ ಶಿಕ್ಷಣಕ್ಕೆ ಬೆಂಬಲ ನೀಡುತ್ತಾರೆ ಎಂಬುದನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಕೋಷ್ಟಕ-೩೧ರ ಪ್ರಕಾರ ಅಧ್ಯಯನದ ನಮೂನೆಯ ಒಟ್ಟು ೧೧೭ ಕುಟುಂಬಗಳ ಪೋಷಕರಲ್ಲಿ ಶೇ.೭೭.೮ ರಷ್ಟು ಪೋಷಕರು ಮಹಿಳೆಯರಿಗೆ ಶಿಕ್ಷಣ ನೀಡುವುದು ಅಗತ್ಯವೆಂದು ಭಾವಿಸುತ್ತಾರೆ. ಆದರೆ ಶೇ.೨೨.೨ ರಷ್ಟು ಪೋಷಕರು ಮಹಿಳೆಯರಿಗೆ ಶಿಕ್ಷಣ ನೀಡುವುದು ಅಗತ್ಯವೆಂದು ಭಾವಿಸುವುದಿಲ್ಲ. ಅಧ್ಯಯನಗಳು ಗುರುತಿಸುವಂತೆ ಶೇ.೭೫ರಷ್ಟು ಪೋಷಕರು ಅಭಿಪ್ರಾಯ ಪಡುವ ಪ್ರಕಾರ ಹೆಣ್ಣು ಮಕ್ಕಳಿಗೆ ಉತ್ತಮ ತಾಯಿಯಾಗುವ ಶಿಕ್ಷಣ ನೀಡುವುದು ಅಗತ್ಯವೆಂದು ಭಾವಿಸುತ್ತಾರೆ.೩೩ ಹೈದ್ರಾಬಾದ್ ನಗರ ಆಧರಿಸಿದ ಅಧ್ಯಯನ ಹೇಳುವಂತೆ ಉತ್ತಮ ಕೌಟುಂಬಿಕ ಹಿನ್ನೆಲೆಯುಳ್ಳ ಪೋಷಕರು ಯುವತಿಯರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಮಹಿಳೆಯರ ಶಿಕ್ಷಣದ ಬಗ್ಗೆ ಯಾವ ನಿಲುವುಗಳನ್ನು ಹೊಂದಿದ್ದಾರೆ ಎಂಬುದನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಂಡು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೩.೧೫. ಮುಸ್ಲಿಂ ಪೋಷಕರ ಶೈಕ್ಷಣಿಕ ನೆಲೆಗಳು ಮತ್ತು ಮಹಿಳೆಯರ ಶಿಕ್ಷಣದ ಬಗೆಗಿನ ನಿಲುವುಗಳು

ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಮಹಿಳಾ ಶಿಕ್ಷಣದ ಬಗೆಗಿನ ನಿಲುವುಗಳು ಸಕಾರಾತ್ಮಕ ವಾಗಿ ಪರಿವರ್ತನೆಯಾಗಿರುವುದನ್ನು ವಿವಿಧ ಅಧ್ಯಯನಗಳು ಗ್ರಹಿಸಿಕೊಂಡಿವೆ. ಹಿಂದಿನ ಭಾಗದಲ್ಲಿ ಚರ್ಚಿಸಿರುವಂತೆ ಬಹುಸಂಖ್ಯಾತ ಮುಸ್ಲಿಂ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಆದರೆ ಪೋಷಕರ ನಿಲುವುಗಳು ಶೈಕ್ಷಣಿಕ ನೆಲೆಯಲ್ಲಿ ಭಿನ್ನವಾಗಿವೆ. ಕೋಷ್ಟಕ-೩೧ದಲ್ಲಿ ಕಂಡುಬರುವಂತೆ ಕ್ಷೇತ್ರ ಅಧ್ಯಯನದ ಪ್ರಕಾರ ಒಟ್ಟು ಕುಟುಂಬಗಳಲ್ಲಿ ಶೇ.೪೧.೯ ರಷ್ಟು ಅನಕ್ಷರಸ್ಥರು, ಶೇ,೨೧.೪ ರಷ್ಟು ಪೋಷಕರು ಪ್ರಾಥಮಿಕ ಶಾಲಾ ಶಿಕ್ಷಣ ಪಡೆದವರು, ಶೇ.೧೮ ರಷ್ಟು ಪ್ರಾಥ ಶಿಕ್ಷಣ ಪಡೆದವರು, ಶೇ.೧೪.೫ರಷ್ಟು ಪದವಿ ಶಿಕ್ಷಣ ಪಡೆದವರು ಮತ್ತು ಶೇ.೪.೨ ರಷ್ಟು ಪೋಷಕರು ಸ್ನಾತಕೋತ್ತರ ಶಿಕ್ಷಣ ಪಡೆದವರಾಗಿದ್ದಾರೆ. ಒಟ್ಟು ಅನಕ್ಷರಸ್ಥ ಕುಟುಂಬದಲ್ಲಿ ಶೇ.೬೫.೩ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಆದರೆ ಶೇ.೩೪.೭ ರಷ್ಟು ಅನಕ್ಷರಸ್ಥ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಬೆಳಗಾವಿ ನಗರದ ಪ್ರಾಥಮಿಕ ಶಿಕ್ಷಣವನ್ನು ಪಡೆದ ಒಟ್ಟು ಮುಸ್ಲಿಂ ಪೋಷಕರಲ್ಲಿ ಶೇ.೮೦ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಆದರೆ ಶೇ.೨೦ ರಷ್ಟು ಕುಟುಂಬದ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಪ್ರೌಢ ಶಿಕ್ಷಣವನ್ನು ಪಡೆದ ಒಟ್ಟು ಕುಟುಂಬಗಳಲ್ಲಿ ಶೇ.೮೫.೭ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸಿದರೆ ಶೇ.೧೪.೩ ರಷ್ಟು ಪೋಷಕರು ಬೆಂಬಲಿಸುವುದಿಲ್ಲ. ಬೆಳಗಾವಿ ನಗರದ ಪದವಿ ಪಡೆದ ಒಟ್ಟು ಮುಸ್ಲಿಂ ಪೋಷಕರಲ್ಲಿ ಶೇ.೯೪.೧ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸಿದರೆ ಕೇವಲ ಶೇ.೫.೯ ರಷ್ಟು ಪೋಷಕರು ಮಾತ್ರ ಮಹಿಳಾ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಆದರೆ ಸ್ನಾತಕೋತ್ತರ ಶಿಕ್ಷಣ ಪಡೆದ ಪೋಷಕರಲ್ಲಿ ಶೇ.೧೦೦ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಕ್ಷೇತ್ರ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಬೆಳಗಾವಿ ನಗರದ ಅತ್ಯಧಿಕ ಮುಸ್ಲಿಂ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಿದ್ದಾರೆ. ಶೈಕ್ಷಣಿಕ ನೆಲೆಯಲ್ಲಿ ಕಂಡುಬರುವ ಅತ್ಯಂತ ಕುತೂಹಲಕಾರಿ ಸಂಗತಿಯಂದರೆ ಕಡಿಮೆ ಶೈಕ್ಷಣಿಕ ಮಟ್ಟ ಹೊಂದಿರುವ ಪೋಷಕರು ಮಹಿಳಾ ಶಿಕ್ಷಣವನ್ನು ಕಡಿಮೆ ಬೆಂಬಲಿಸುತ್ತಾರೆ. ಅತೀ ಹೆಚ್ಚು ಶೈಕ್ಷಣಿಕ ಮಟ್ಟ ಹೊಂದಿರುವ ಪೋಷಕರು ಮಹಿಳಾ ಶಿಕ್ಷಣವನ್ನು ಹೆಚ್ಚಾಗಿ ಬೆಂಬಲಿಸುವುದು ಕಂಡುಬಂದಿದೆ. ಅಂದರೆ ಬೆಳಗಾವಿ ನಗರದ ಮುಸ್ಲಿಂ ಕುಟುಂಬದ ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಮಹಿಳಾ ಶಿಕ್ಷಣವನ್ನು ಬೆಂಬಲಿಸುವವರ ಪ್ರಮಾಣವೂ ಹೆಚ್ಚಾಗುತ್ತದೆ. ಪೋಷಕರ ಶೈಕ್ಷಣಿಕ ನೆಲೆಗಳು ಮಹಿಳಾ ಶಿಕ್ಷಣಕ್ಕೆ ಸಕಾರಾತ್ಮಕವಾಗಿ

ಪರಿವರ್ತನೆಯಾಗುತ್ತಿವೆ. ಪೂನಾ ನಗರದ ಅಧ್ಯಯನ ಕಂಡುಕೊಂಡಿರುವ ಪ್ರಕಾರ ಶಿಕ್ಷಣ ಪಡೆದ ಶೇ.೯೪ ರಷ್ಟು ಪೋಷಕರು ಮಗಳ ಉನ್ನತ ಶಿಕ್ಷಣಕ್ಕಾಗಿ ಬೆಂಬಲ ನೀಡುತ್ತಾರೆ. ಶೇ.೬೮ ರಷ್ಟು ಶಿಕ್ಷಣ ಪಡೆದ ಪೋಷಕರು ಮಗಳ ಸ್ವಾತಂತ್ರ್ಯಕ್ಕೆ ಬೆಂಬಲ ನೀಡುತ್ತಾರೆ.[೫೪] ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಡಾ. ಶಕೀಲ್ ಅಹಮದ್ ರವರ ಅಧ್ಯಯನವನ್ನು ಬೆಂಬಲಿಸುತ್ತದೆ.

ಪ್ರಸ್ತುತ ಅಧ್ಯಾಯವನ್ನು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥ ಮಾಡಿಕೊಳ್ಳುವ ಉದ್ದೇಶದಿಂದ ಆರಂಭಿಸಲಾಗಿತ್ತು. ಉತ್ತರ ಕರ್ನಾಟಕದಲ್ಲಿ ಶಾಲೆಯನ್ನು ಮಧ್ಯದಲ್ಲಿ ಬಿಡುವ ಪ್ರಮಾಣ ಗುಲ್ಬರ್ಗಾದಲ್ಲಿ ಹೆಚ್ಚಾಗಿ ದಾಖಲಾಗಿದ್ದು ಅದು ಮೊದಲ ಸ್ಥಾನದಲ್ಲಿದೆ. ಇದರ ನಂತರದ ಸ್ಥಾನವನ್ನು ಬೆಳಗಾವಿ ಪಡೆದುಕೊಂಡಿದೆ. ಈಗಾಗಲೆ ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಶೈಕ್ಷಣಿಕ ಹಿಂದುಳಿಯುವಿಕೆಗೆ ಸಂಬಂಧಿಸಿದ ಅಧ್ಯಯನಗಳು ಕಂಡುಬರುತ್ತವೆ. ಆದರೆ ಬೆಳಗಾವಿ ಭಾಗದಲ್ಲಿ ಇಂತಹ ಅಧ್ಯಯನಗಳು ಕಂಡುಬಂದಿರಲಿಲ್ಲ. ಮುಸ್ಲಿಂ ಸಮುದಾಯ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸವಿರುವುದರಿಂದ ಬೆಳಗಾವಿ ನಗರವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥಮಾಡಿಕೊಳ್ಳಲಾಗಿದೆ. ಬೆಳಗಾವಿ ಪ್ರದೇಶ ಭಾಷೆ ಮತ್ತು ಗಡಿಗೆ ಸಂಬಂಧಿಸಿದ ಸಂಘರ್ಷಕ್ಕೆ ಕಾರಣವಾಗಿದೆ. ಏಕೀಕರಣ ಪೂರ್ವದಿಂದ ಇಂದಿನವರೆಗೂ ಸಂಘರ್ಷಗಳು ಜಾರಿಯಲ್ಲಿವೆ. ಮಹಾರಾಷ್ಟ್ರದ ಪ್ರಭಾವದಿಂದ ಈ ಪ್ರದೇಶದಲ್ಲಿ ಮರಾಠಿ ಶಾಲೆಗಳು ಆರಂಭವಾದವು. ಈ ಭಾಗದಲ್ಲಿ ಕನ್ನಡ ಶಾಲೆಗಳ ಸ್ಥಾಪನೆಗೆ ವೀರಶೈವ ಮಠಗಳು ಕಾರಣವಾದವು. ಗಡಿಭಾಗದ ಶಿಕ್ಷಣಕ್ಕೆ ಸಂಬಂಧಿಸಿದ ವಿವಿಧ ಆಯೋಗಗಳು ರಚನೆಯಾದರೂ ಮುಸ್ಲಿಮರ ಶಿಕ್ಷಣಕ್ಕೆ ಸಂಬಂಧಿಸಿದಂತೆ ರೆಹಮಾನ್‌ಖಾನ್‌ಸಮಿತಿಯ ನಂತರ ಯಾವುದೇ ಸಮಿತಿಗಳು ರಚನೆಯಾಗದಿರುವುದು ನಿಜವಾಗಿಯು ವಿಷಾದಕರ ಸಂಗತಿಯಾಗಿದೆ. ಬೆಳಗಾವಿ ನಗರದಲ್ಲಿ ವಿವಿಧ ಸಮುದಾಯವರು ಮತ್ತು ಮುಸ್ಲಿಮರ ದಾಖಲಾತಿ ಪ್ರಮಾಣ ಹೆಚ್ಚಾದಂತೆ ಕಂಡುಬಂದರೂ ಉನ್ನತ ಶಿಕ್ಷಣದಲ್ಲಿ ಇವರ ಪ್ರಾತಿನಿಧ್ಯ ಕಡಿಮೆಯಾಗುತ್ತಿದೆ. ಇಂದಿಗೂ ಮುಸ್ಲಿಂ ಬಾಲಕಿಯರ ವಸತಿ ಶಾಲೆಗಳ ಕೊರತೆ ಇದೆ. ಈ ಎಲ್ಲಾ ಕೊರತೆಗಳ ನಡುವೆಯು ಮುಸ್ಲಿಂ ಬಾಲಕಿಯರು ಶಿಕ್ಷಣ, ಉದ್ಯೋಗ ಮತ್ತು ಹೊರಗಡೆ ದುಡಿಮೆಯ ಬಗ್ಗೆ ಸಕಾರಾತ್ಮಕ ಮನೋಭಾವನೆ ಹೊಂದಿದ್ದಾರೆ. ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಪೋಷಕರು ಕೂಡ ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಿದ್ದಾರೆ. ಆದರೂ ಇಂದಿಗೂ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆಗೆ ಯಾವ ಅಂಶಗಳು ಪ್ರಭಾವ ಬೀರುತ್ತಿವೆ ಮತ್ತು ಯಾವ ಸಂಗತಿಗಳು ಅವರ ಶಿಕ್ಷಣವನ್ನು ತಡೆಯುತ್ತಿವೆ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಕೋಷ್ಟಕ-8

### ಕರ್ನಾಟಕದ ನಗರ-ಗ್ರಾಮೀಣ ಭಾಗದ ಪುರುಷ ಮತ್ತು ಮಹಿಳೆಯರ ಸಾಕ್ಷರತೆ

| ಕ್ರಸಂ | ರಾಜ್ಯ | ಸಾಕ್ಷರತೆ | | | | | | | | |
|---|---|---|---|---|---|---|---|---|---|---|
| | | ಒಟ್ಟು | ಪುರುಷರು | ಮಹಿಳೆಯರು | ಗ್ರಾಮೀಣ ಪ್ರದೇಶ | | | ನಗರ ಪ್ರದೇಶ | | |
| | | | | | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| 1 | ಕರ್ನಾಟಕ | **75.35** | 82.82 | 68.08 | **68.13** | 77.61 | 59.71 | **85.78** | 90.04 | 81.36 |

ಮೂಲ: 2011ರ ಜನಗಣತಿ, ಕರ್ನಾಟಕ ಸರ್ಕಾರ, ಕರ್ನಾಟಕ

## ಕೋಷ್ಟಕ-9

### ಬೆಳಗಾವಿ ಜಿಲ್ಲೆಯ ಸಾಕ್ಷರತೆ

| ಕ್ರಸಂ | ರಾಜ್ಯ | ಸಾಕ್ಷರತೆ | | | | | | | | |
|---|---|---|---|---|---|---|---|---|---|---|
| | | ಒಟ್ಟು | ಪುರುಷರು | ಮಹಿಳೆಯರು | ಗ್ರಾಮೀಣ ಪ್ರದೇಶ | | | ನಗರ ಪ್ರದೇಶ | | |
| | | | | | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| 1 | ಬೆಳಗಾವಿ | **73.48** | 82.20 | 64.58 | **69.28** | 79.12 | 59.20 | **85.56** | 91.10 | 79.95 |

ಮೂಲ: ಬೆಳಗಾವಿ ಜಿಲ್ಲೆ ಮಾಹಿತಿ, ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ, 2014

## ಕೋಷ್ಟಕ-10

### 1991 ರಿಂದ 2011 ವರೆಗಿನ ವಲಯವಾರು ಸಾಕ್ಷರತೆಯ ಪ್ರಮಾಣ

| ತಾಲೂಕುಗಳು | ಸಾಕ್ಷರತೆಯ ಪ್ರಮಾಣ | | | | | | | | |
|---|---|---|---|---|---|---|---|---|---|
| | 1991 | | | 2001 | | | 2011 | | |
| | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ಬೈಲಹೊಂಗಲ | 64.62 | 34.48 | 49.41 | 75.44 | 50.99 | 63.37 | 82.41 | 55.70 | 69.22 |
| ಬೆಳಗಾವಿ | 65.9 | 36.83 | 51.67 | 86.46 | 69.71 | 78.31 | 94.45 | 76.15 | 85.54 |
| ಖಾನಪುರ | 67.02 | 37.32 | 52.18 | 78.06 | 53.89 | 65.99 | 85.27 | 58.87 | 72.09 |
| ರಾಮದುರ್ಗ | 59.13 | 24.97 | 49.29 | 69.42 | 40.36 | 55.05 | 75.83 | 44.09 | 60.13 |
| ಸೌದತ್ತಿ | 59.44 | 27.88 | 43.99 | 70.65 | 42.29 | 56.68 | 77.18 | 46.20 | 61.92 |
| **ಒಟ್ಟು** | **63.22** | **32.3** | **49.31** | **76.01** | **51.45** | **63.88** | **83.03** | **56.20** | **69.78** |

**ಮಾಹಿತಿ ಮೂಲ:** ಬೆಳಗಾವಿ ಜಿಲ್ಲೆ ಮಾಹಿತಿ, ಬೆಳಗಾವಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ, 2014

## ಕೋಷ್ಟಕ–11

### ರಾಜ್ಯದಲ್ಲಿರುವ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ವಿವರ

| ಕ್ರ. ಸಂ | ಆಡಳಿತವಾರು | ಶಾಲಾ ವಿಧಗಳು | |
|---|---|---|---|
| | | ಪ್ರಾಥಮಿಕ ಶಾಲೆಗಳು | ಪ್ರೌಢ ಶಾಲೆಗಳು |
| 1 | ಶಿಕ್ಷಣ ಇಲಾಖೆ | 44,10 | 14,659 |
| 2 | ಸಮಾಜ ಕಲ್ಯಾಣ ಇಲಾಖೆ | 702 | 523 |
| 3 | ಸ್ಥಳಿಯ ಸಂಸ್ಥೆ | 26 | 43 |
| 4 | ಅನುದಾನಿತ | 3,099 | 3,818 |
| 5 | ಅನುದಾನ ರಹಿತ | 12,89 | 16,013 |
| 6 | ಇತರೆ ಶಾಲೆಗಳು | 09 | 06 |
| 7 | ಕೇಂದ್ರಿಯ ಶಾಲೆಗಳು | 85 | 78 |
| 8 | ಮಾನ್ಯತೆ ಪಡೆದಿಲ್ಲದ ಶಾಲೆಗಳು | 15 | 01 |
| | **ಒಟ್ಟು** | **60,928** | **15,141** |

**ಮಾಹಿತಿ ಮೂಲ:** ಸರ್ವಶಿಕ್ಷಣ ಅಭಿಯಾನ ಮತ್ತು ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ, 2010, ಕರ್ನಾಟಕ ಪು.ಸಂ 1

## ಕೋಷ್ಟಕ–12

### ವ್ಯವಸ್ಥಾಪನವಾರು ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ಹಿರಿಯ ಪ್ರಾಥಮಿಕ ಶಾಲೆಗಳ ವಿವರ

| ಕ್ರ ಸಂ. | ತಾಲೂಕುಗಳು | ಪ್ರಾಥಮಿಕ ಶಾಲೆಗಳ ನಿರ್ವಹಣ ಸಂಸ್ಥೆಗಳು | | | | | | |
|---|---|---|---|---|---|---|---|---|
| | | ಶಿಕ್ಷಣ ಇಲಾಖೆ | ಸಮಾಜ ಕಲ್ಯಾಣ ಇಲಾಖೆ | ಸ್ಥಳಿಯ ಸಂಸ್ಥೆ | ಅನುದಾನಿತ | ಅನುದಾನ ರಹಿತ | ಕೇಂದ್ರಿಯ ಶಾಲೆಗಳು | ಒಟ್ಟು |
| 1 | ಬೈಲಹೊಂಗಲ | 226 | 6 | 1 | 10 | 63 | 0 | 306 |
| 2 | ಬೆಳಗಾವಿ (ನ) | 137 | 2 | 0 | 27 | 93 | 6 | 265 |
| 3 | ಬೆಳಗಾವಿ(ಗ್ರಾ) | 288 | 3 | 0 | 9 | 40 | 1 | 341 |
| 4 | ಖಾನಾಪುರ | 332 | 1 | 0 | 4 | 21 | 0 | 358 |
| 5 | ರಾಮದುರ್ಗ | 199 | 2 | 0 | 7 | 53 | 0 | 261 |
| 6 | ಸೌದತ್ತಿ | 226 | 2 | 0 | 15 | 45 | 0 | 288 |
| | **ಬೆಳಗಾವಿ ಒಟ್ಟು** | **1,408** | **16** | **1** | **72** | **315** | **7** | **1,819** |

ಮಾಹಿತಿ ಮೂಲ: ಮೂಲ: ಡಿ.ಐ.ಎಸ್.ಈ.2009–10

ಕೋಷ್ಟಕ–13

ಮಾಧ್ಯಮವಾರು ಶಾಲೆಗಳ ಮಾಹಿತಿ

| ಮಾಧ್ಯಮವಾರು ಶಾಲೆಗಳ ಮಾಹಿತಿ | | | | | | | | | | | | | |
|---|---|---|---|---|---|---|---|---|---|---|---|---|---|
| ಕ್ರ.ಸಂ | ಪ್ರದೇಶವಾರು | ಕನ್ನಡ ಮಾಧ್ಯಮ | | | | ಇಂಗ್ಲೀಷ್ ಮಾಧ್ಯಮ | | | | ಉರ್ದು ಮಾಧ್ಯಮ | | | |
| | | ಸರ್ಕಾರಿ | ಅನುದಾನಿತ | ಅನುದಾನ ರಹಿತ | ಒಟ್ಟು | ಸರ್ಕಾರಿ | ಅನುದಾನಿತ | ಅನುದಾನ ರಹಿತ | ಒಟ್ಟು | ಸರ್ಕಾರಿ | ಅನುದಾನಿತ | ಅನುದಾನ ರಹಿತ | ಒಟ್ಟು |
| 1 | ರಾಜ್ಯ | 39,793 | 2,775 | 8,699 | **51,267** | 1,092 | 205 | 6,022 | **7,319** | 3,953 | 187 | 535 | **4,675** |
| 2 | ಬೆಳಗಾವಿ ನಗರ | 216 | 14 | 26 | **256** | 05 | 05 | 25 | **35** | 52 | 01 | 03 | **56** |

1. ರಾಜ್ಯ ಮತ್ತು ಬೆಳಗಾವಿ ನಗರದ ಮಾಹಿತಿಯ ಮೂಲ ಸರ್ವಶಿಕ್ಷಣ ಅಭಿಯಾನ, ಕರ್ನಾಟಕ ಬೆಂಗಳೂರು, 2014, ಪು.ಸಂ 1

**ಕೋಷ್ಟಕ –14**

**ಕರ್ನಾಟಕ ಬೆಳಗಾವಿ ಜಿಲ್ಲೆ ಮತ್ತು ಬೆಳಗಾವಿ ನಗರದ ದಾಖಲಾತಿ ವಿವರಗಳು**

| ಕ್ರ.ಸಂ | ಪ್ರಾದೇಶಿಕವಾರು | 1–5 | 6–8 | 1–10 |
|---|---|---|---|---|
| 1 | ಕರ್ನಾಟಕ ರಾಜ್ಯ | 10,45,432 | 5,59,186 | 19,24,669 |
| 2 | ಬೆಳಗಾವಿ ಜಿಲ್ಲೆ | 1,95,890 | 1,13,824 | 3,76,421 |
| 3 | ಬೆಳಗಾವಿ ನಗರ | 45,550 | 28,115 | 92,522 |

ಮೂಲ: ರಾಜ್ಯ ಮತ್ತು ಬೆಳಗಾವಿ ನಗರದ ಮಾಹಿತಿಯ ಮೂಲ ಸರ್ವಶಿಕ್ಷಣ ಅಭಿಯಾನ, 2014, ಕರ್ನಾಟಕ ಬೆಂಗಳೂರು, ಪು.ಸಂ 1

## ಕೋಷ್ಟಕ-15

### ಕರ್ನಾಟಕ ರಾಜ್ಯದ ಸಾಮಾಜಿಕ ವರ್ಗವಾರು ದಾಖಲಾತಿ ವಿವರ

| ಕ್ರ. ಸಂ | ರಾಜ್ಯ | ಸಾಮಾಜಿಕ ವರ್ಗಗಳು | | | | | | | | | | | | | |
|---|---|---|---|---|---|---|---|---|---|---|---|---|---|---|---|
| | | ಸಾಮಾನ್ಯ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ವರ್ಗ | | | ಹಿಂದುಳಿದ ಒಟ್ಟು | | | | |
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| 1 | ಕರ್ನಾಟಕ | 5,87,361 | 5,18,440 | 11,05,801 | 9,95,257 | 9,29,412 | 19,24,669 | 4,03,031 | 3,77,192 | 7,80,223 | 32,44,368 | 30,59,225 | 63,03,593 | 52,30,017 | 48,84,269 |

ರಾಜ್ಯ ಮತ್ತು ಬೆಳಗಾವಿ ನಗರದ ಮಾಹಿತಿಯ ಮೂಲ ಸರ್ವಶಿಕ್ಷಣ ಅಭಿಯಾನ, ಕರ್ನಾಟಕ ಬೆಂಗಳೂರು, 2014, ಪು.ಸಂ 1

**ಕೋಷ್ಟಕ-16**

**ಸಾಮಾಜಿಕ ವರ್ಗವಾರು ವಿದ್ಯಾರ್ಥಿಗಳ ದಾಖಲಾತಿ ವಿವರ**

| ಕ್ರ ಸಂ | ತಾಲೂಕುಗಳು | ಸಾಮಾಜಿಕ ವರ್ಗಗಳು | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| | | ಸಾಮಾನ್ಯ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ವರ್ಗ | | | ಹಿಂದುಳಿದ | | | ಒಟ್ಟು | | |
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| 1 | ಬೈಲಹೊಂಗಲ | 15684 | 14818 | 30502 | 2234 | 2191 | 4425 | 2739 | 2542 | 5281 | 6890 | 6442 | 13332 | 27547 | 25993 | 53540 |
| 2 | ಬೆಳಗಾವಿ (ನ) | 25664 | 21871 | 47535 | 3682 | 3316 | 6998 | 1642 | 1746 | 3388 | 7676 | 8188 | 15864 | 38544 | 36212 | 74756 |
| 3 | ಬೆಳಗಾವಿ(ಗ್ರಾ) | 18366 | 17269 | 35635 | 2180 | 2137 | 4317 | 4164 | 3866 | 8030 | 4508 | 4297 | 8805 | 29228 | 27569 | 56797 |
| 4 | ಖಾನಪುರ | 12680 | 12188 | 24868 | 1533 | 1477 | 3010 | 916 | 878 | 1794 | 2239 | 2122 | 4361 | 17388 | 146665 | 164053 |
| 5 | ರಾಮದುರ್ಗ | 1394 | 1271 | 2665 | 3369 | 3311 | 6680 | 796 | 727 | 1523 | 15060 | 14052 | 29112 | 20619 | 19361 | 39980 |
| 6 | ಸೌದತ್ತಿ | 4484 | 4199 | 8683 | 2755 | 2619 | 5374 | 2955 | 2968 | 5923 | 15740 | 15189 | 30929 | 25934 | 24965 | 50899 |
| | **ಬೆಳಗಾವಿ ಒಟ್ಟು** | **78272** | **71616** | **149888** | **15753** | **15051** | **30,804** | **13212** | **12727** | **25939** | **52113** | **50290** | **102403** | **159260** | **159260** | **440025** |

ಮೂಲ: ಮೂಲ: ಡಿ.ಐ.ಎಸ್.ಈ.2009-10

### ಕೋಷ್ಟಕ–17

### ರಾಜ್ಯದಲ್ಲಿ 1 ರಿಂದ 10 ನೇ ತರಗತಿಯ ವರೆಗೆ ಆಡಳಿತವಾರು ಮುಸ್ಲಿಂ ವರ್ಗದ ದಾಖಲಾತಿ ವಿವರ

| ಕ್ರಸಂ | ಆಡಳಿತವಾರು | ಗಂಡು | ಹೆಣ್ಣು | ಒಟ್ಟು |
|---|---|---|---|---|
| 1 | ಶಿಕ್ಷಣ ಇಲಾಖೆ ಶಾಲೆ | 13,62,493 | 14,89,230 | 28,51,723 |
| 2 | ಸಮಾಜ ಕಲ್ಯಾಣ ಇಲಾಖೆ ಶಾಲೆ | 31,508 | 32,159 | 63,667 |
| 3 | ಸ್ಥಳೀಯ ಸಂಸ್ಥೆ ಶಾಲೆ | 1,769 | 2,064 | 3,833 |
| 4 | ಅನುದಾನಿತ ಶಾಲೆ | 4,75,822 | 4,51,683 | 9,27,505 |
| 5 | ಅನುದಾನ ರಹಿತ ಶಾಲೆ | 13,61,398 | 10,75,305 | 24,36,703 |
| 6 | ಇತರೆ ಶಾಲೆ | 467 | 202 | 669 |
| 7 | ಕೇಂದ್ರೀಯ ಶಾಲೆ | 10.485 | 8,233 | 18,718 |
| 8 | ಮಾನ್ಯತೆ ರಹಿತ ಶಾಲೆ | 426 | 349 | 775 |
| | ಒಟ್ಟು | **32,44,368** | **30,59,225** | **63,03,593** |

ಮಾಹಿತಿ ಮೂಲ: ಸರ್ವಶೀಕ್ಷಣ ಅಭಿಯಾನ ಮತ್ತು ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ, 2014, ಕರ್ನಾಟಕ ಪು.ಸಂ 2

### ಕೋಷ್ಟಕ–18

### ರಾಜ್ಯದಲ್ಲಿರುವ ವಿವಿಧ ಶಾಲೆಗಳಲ್ಲಿರುವ ಶಿಕ್ಷಕರ ಪ್ರಮಾಣ

| ಕ್ರ ಸಂ | ಹಂತಗಳು | ಶಾಲೆಯ ವಿಧಗಳು | | | |
|---|---|---|---|---|---|
| | | ಸರ್ಕಾರಿ ಶಾಲೆಗಳು | ಅನುದಾನಿತ ಶಾಲೆಗಳು | ಅನುದಾನ ರಹಿತ ಶಾಲೆಗಳು | ಒಟ್ಟು |
| 1 | ಪ್ರಾಥಮಿಕ ಹಂತ | 48.47 | 50.18 | 71.37 | **55.42** |
| 2 | ಮಾಧ್ಯಮಿಕ ಹಂತ | 38.06 | 23.60 | 63.02 | **44.80** |
| | ಒಟ್ಟು | **46.77** | **33.74** | **70.15** | **52.46** |

ಮೂಲ: ಡಿ.ಐ.ಎಸ್.ಈ.2009–10

### ಕೋಷ್ಟಕ–19

### ರಾಜ್ಯದಲ್ಲಿರುವ ಲಿಂಗಾಧಾರಿತ ಶಿಕ್ಷಕರ ಪ್ರಮಾಣ

| ಕಿರಿಯ ಪ್ರಾಥಮಿಕ ಶಾಲೆಗಳು | | | ಹಿರಿಯ ಪ್ರಾಥಮಿಕ ಶಾಲೆಗಳು | | |
|---|---|---|---|---|---|
| ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| 30.574 | 28.883 | 59.457 | 95.163 | 1.28.109 | 2.23.272 |

ಮಾಹಿತಿಯ ಮೂಲ: ಡಿ.ಐ.ಎ ಈ.2009–10

## ಕೋಷ್ಟಕ–20

### ಜಿಲ್ಲೆಯ ವಲಯವಾರು ಶಿಕ್ಷಕರ ಮಾಹಿತಿ

| ಕ್ರ ಸಂ | ತಾಲೂಕುಗಳು | ಶಿಕ್ಷಣ ಇಲಾಖೆ | | | | | | | |
|---|---|---|---|---|---|---|---|---|---|
| | | ಕಿರಿಯ ಪ್ರಾಥಮಿಕ | | ಹಿರಿಯ ಪ್ರಾಥಮಿಕ | | ಪ್ರೌಢ ಹಂತಪದವಿ | | ಪೂರ್ವ ಹಂತ | |
| | | ಮಂಜೂರು | ಹಾಲಿ | ಮಂಜೂರು | ಹಾಲಿ | ಮಂಜೂರು | ಹಾಲಿ | ಮಂಜೂರು | ಹಾಲಿ |
| 1 | ಬೈಲಹೊಂಗಲ | 195 | 181 | 1,302 | 1,220 | 1,497 | 1,401 | 366 | 358 |
| 2 | ಬೆಳಗಾವಿ (ನ) | 135 | 131 | 796 | 713 | 931 | 844 | 118 | 110 |
| 3 | ಬೆಳಗಾವಿ(ಗ್ರಾ) | 240 | 223 | 1,556 | 1,398 | 1,796 | 1,621 | 166 | 165 |
| 4 | ಖಾನಪುರ | 487 | 392 | 1,044 | 879 | 1,531 | 1,271 | 106 | 96 |
| 5 | ರಾಮದುರ್ಗ | 225 | 194 | 783 | 647 | 1,008 | 841 | 175 | 164\ |
| 6 | ಸೌದತ್ತಿ | 241 | 222 | 1,072 | 932 | 1,313 | 1,154 | 217 | 201 |
| | **ಬೆಳಗಾವಿ ಒಟ್ಟು** | **1,523** | **1,343** | **6,553** | **5,789** | **8,076** | **7,132** | **1,148** | **1,094** |

ಮಾಹಿತಿ ಮೂಲ: ಮೂಲ: ಡಿ.ಐ.ಎಸ್.ಈ.2009–10

## ಕೋಷ್ಟಕ–21

### ರಾಜ್ಯದ ಮತ್ತು ಬೆಳಗಾವಿ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಮೂಲಭೂತ ಸೌಕರ್ಯಗಳ ವಿವರ

| ಕ್ರಸಂ | ಮೂಲಭೂತ ಸೌಕರ್ಯಗಳು | ರಾಜ್ಯದ ಒಟ್ಟು ಪ್ರಾಥಮಿಕ ಶಾಲೆಗಳು **60,928** | ಬೆಳಗಾವಿ ಜಿಲ್ಲೆಯ ಒಟ್ಟು ಪ್ರಾಥಮಿಕ ಶಾಲೆಗಳು **1,417** |
|---|---|---|---|
| | | ಕರ್ನಾಟಕ ರಾಜ್ಯದಲ್ಲಿ ಮೂಲಭೂತ ಸೌಕರ್ಯಗಳ ಕೊರತೆಗಳನ್ನು ಎದುರಿಸುತ್ತಿರುವ ಶಾಲೆಗಳ ಸಂಖ್ಯೆ | ಬೆಳಗಾವಿ ಜಿಲ್ಲೆಯಲ್ಲಿ ಮೂಲಭೂತ ಸೌಕರ್ಯಗಳ ಕೊರತೆಗಳನ್ನು ಶಾಲೆಗಳು ಎದುರಿಸುತ್ತಿರುವ ಕೊರತೆಗಳು |
| 1 | ಗಂಡು ಮಕ್ಕಳ ಶೌಚಾಲಯ | 335 | 18 |
| 2 | ಬಾಲಕಿಯರ ಶೌಚಾಲಯ | 125 | 17 |
| 3 | ವಿದ್ಯುತ್ ಸೌಲಭ್ಯ | 1,184 | 116 |
| 4 | ಆಟದ ಮೈದಾನ | 21,749 | 498 |
| 5 | ರ್‍ಯಾಂಪ್ ಸೌಲಭ್ಯ | 18,220 | 00 |
| 6 | ಗ್ರಂಥಾಲಯ ಸೌಲಭ್ಯ | 1,766 | 00 |
| 7 | ಕುಡಿಯುವ ನೀರಿನ ಸೌಲಭ್ಯ | 00 | 00 |
| 8 | ಶಾಲಾ ಆವರಣ ಗೋಡೆ ಸೌಲಭ್ಯ | 12,596 | 393 |

1. ರಾಜ್ಯದ ಮಾಹಿತಿ ಮೂಲ: ಸರ್ವಶೀಕ್ಷಣ ಅಭಿಯಾನ ಮತ್ತು ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ ಕರ್ನಾಟಕ ಪು.ಸಂ 5 2. ಬೆಳಗಾವಿ ಜಿಲ್ಲೆಯ ಮಾಹಿತಿ ಮೂಲ: ಶೈಕ್ಷಣಿಕ ವಿಶ್ಲೇಷಣಾ ವರದಿ ಸರ್ವಶಿಕ್ಷಣ ಅಭಿಯಾನ ಕರ್ನಾಟಕ ಪು.ಸಂ 103

## ಕೋಷ್ಟಕ–22

### ಕರ್ನಾಟಕ ರಾಜ್ಯದ ಅಲ್ಪಸಂಖ್ಯಾತರ ವಸತಿ ನಿಲಯಗಳ ವಿವರ

| ಕ್ರ ಸಂ | ಅನುದಾನಿತ ವಸತಿ ನಿಲಯಗಳು | ನಿಲಯಗಳ ಸಂಖ್ಯೆ | | | ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | ಮೆಟ್ರಿಕ್ ಪೂರ್ವ | 26 | 27 | 53 | 1,300 | 1,350 | **2,650** |
| 2 | ಮೆಟ್ರಿಕ್ ನಂತರ | 38 | 33 | 71 | 2,150 | 2,330 | **4,480** |
| ಅನುದಾನ ರಹಿತ ವಸತಿ ನಿಲಯಗಳು | | ನಿಲಯಗಳ ಸಂಖ್ಯೆ | | | ವಿದ್ಯಾರ್ಥಿಗಳ ಸಂಖ್ಯೆ | | |
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | ಮೆಟ್ರಿಕ್ ಪೂರ್ವ | 49 | 12 | 61 | 2,450 | 600 | **3050** |

**ಮಾಹಿತಿ ಮೂಲ:** ಅಲ್ಪ ಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ ಕ್ರಿಯಾ ಯೋಜನೆ 2012/13

## ಕೋಷ್ಟಕ–23

### ಬೆಳಗಾವಿ ಜಿಲ್ಲೆಯ ಅಲ್ಪಸಂಖ್ಯಾತರ ವಿದ್ಯಾರ್ಥಿ ನಿಲಯಗಳು

| ಕ್ರ.ಸಂ | ಜಿಲ್ಲೆ | ಸರ್ಕಾರಿ ಮೆಟ್ರಿಕ್ ಪೂರ್ವ | | | | | |
|---|---|---|---|---|---|---|---|
| | | ಬಾಲಕರ | | ಬಾಲಕಿಯರ | | ಒಟ್ಟು | |
| | | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು |
| 1 | ಬೆಳಗಾವಿ | 1 | 50 | 1 | 50 | 2 | 100 |
| ಕ್ರ.ಸಂ | ಜಿಲ್ಲೆ | ಸರ್ಕಾರಿ ಮೆಟ್ರಿಕ್ ನಂತರ | | | | | |
| | | ಬಾಲಕರ | | ಬಾಲಕಿಯರ | | ಒಟ್ಟು | |
| | | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು |
| 1 | ಬೆಳಗಾವಿ | 2 | 100 | 1 | 75 | 3 | 175 |
| ಕ್ರ.ಸಂ | ಜಿಲ್ಲೆ | ಅನುದಾನಿತ ಮೆಟ್ರಿಕ್ ಪೂರ್ವ | | | | | |
| | | ಬಾಲಕರ | | ಬಾಲಕಿಯರ | | ಒಟ್ಟು | |
| | | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು |
| 1 | ಬೆಳಗಾವಿ | 7 | 530 | 00 | 00 | 7 | 530 |

**ಮಾಹಿತಿ ಮೂಲ:** ಡಿ.ಐ.ಎಸ್.ಈ.2015–16

## ಕೋಷ್ಟಕ–24

**1 ರಿಂದ 10ನೇ ತರತಗತಿಯ ವರೆಗೆ ರಾಜ್ಯದ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ದಾಖಲಾತಿ ವಿವರ**

| ಕ್ರ.ಸಂ | ರಾಜ್ಯ | ಅಲ್ಪ ಸಂಖ್ಯಾತರ ತರಗತಿ 1–10 | | |
|---|---|---|---|---|
| | | ಮುಸ್ಲಿಂ | ಕ್ರಿಶ್ಚಿಯನ್ | ಜೈನ್ |
| 1 | ಕರ್ನಾಟಕ | 44,582 | 2738 | 5,874 |

**ಮೂಲ:** ಡಿ.ಐ.ಎಸ್.ಈ.2009–10

## ಕೋಷ್ಟಕ–25

### 1 ರಿಂದ 10ನೇ ತರತಗತಿಯ ವರೆಗೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ದಾಖಲಾತಿ ವಿವರ

| ಕ್ರ. ಸಂ | ತಾಲೂಕುಗಳು | ಅಲ್ಪ ಸಂಖ್ಯಾತರ ತರಗತಿ 1–8 | | | | | | | | | ಅಲ್ಪ ಸಂಖ್ಯಾತರ ತರಗತಿ 9–10 | | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | ಮುಸ್ಲಿಂ | | | ಕ್ರಿಶ್ಚಿಯನ್ | | | ಜೈನ್ | | | ಮುಸ್ಲಿಂ | | | ಕ್ರಿಶ್ಚಿಯನ್ | | | ಜೈನ್ | | |
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| 1 | ಬೈಲಹೊಂಗಲ | 3629 | 3509 | 7138 | 9 | 10 | 19 | 349 | 347 | 696 | 636 | 604 | 1240 | 6 | 1 | 7 | 84 | 82 | 166 |
| 2 | ಬೆಳಗಾವಿ (ನ) | 6395 | 6775 | 13170 | 459 | 441 | 900 | 938 | 790 | 1728 | 1314 | 1573 | 2887 | 311 | 121 | 232 | 365 | 312 | 677 |
| 3 | ಬೆಳಗಾವಿ(ಗ್ರಾ) | 1981 | 1861 | 3842 | 90 | 109 | 199 | 558 | 542 | 1100 | 292 | 216 | 508 | 25 | 36 | 61 | 134 | 113 | 247 |
| 4 | ಖಾನಪುರ | 1630 | 1531 | 3161 | 160 | 149 | 309 | 393 | 374 | 767 | 337 | 336 | 673 | 56 | 28 | 84 | 130 | 110 | 240 |
| 5 | ರಾಮದುರ್ಗ | 2248 | 2143 | 4391 | 0 | 0 | 0 | 15 | 05 | 20 | 374 | 331 | 705 | 0 | 00 | 00 | 15 | 00 | 15 |
| 6 | ಸೌದತ್ತಿ | 3023 | 2987 | 6010 | 0 | 1 | 1 | 03 | 89 | 189 | 462 | 395 | 857 | 10 | 00 | 01 | 17 | 12 | 29 |
| | ಒಟ್ಟು | 18906 | 18806 | 37712 | 718 | 710 | 1428 | 2353 | 2147 | 4500 | 3415 | 3455 | 6870 | 199 | 186 | 385 | 745 | 629 | 1374 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ–ಅಂಶಗಳು.

## ಕೋಷ್ಟಕ–26

### ಕರ್ನಾಟಕ ರಾಜ್ಯದ ಉರ್ದು ಮಾಧ್ಯಮ ಶಾಲೆಗಳ ವಿದ್ಯಾರ್ಥಿಗಳ ದಾಖಲಾತಿ ವಿವರ

| ಕ್ರಸಂ | ಆಡಳಿತವಾರು ಶಾಲೆಗಳು | ಕರ್ನಾಟಕ ರಾಜ್ಯದ ಆಡಳಿತವಾರು ಉರ್ದು ಮಾಧ್ಯಮ ಶಾಲೆಗಳ ವಿದ್ಯಾರ್ಥಿಗಳ ದಾಖಲಾತಿ | | | | | | | |
|---|---|---|---|---|---|---|---|---|---|
| | | 1–5 | | 6–8 | | 9–10 | | 1–10 | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| 1 | ಶಿಕ್ಷಣ ಇಲಾಖೆ ಶಾಲೆ | 67683 | 111286 | 31014 | 55690 | 7598 | 14969 | 106295 | 181945 |
| 2 | ಸಮಾಜ ಕಲ್ಯಾಣ ಇಲಾಖೆ ಶಾಲೆ | 0 | 0 | 203 | 233 | 97 | 143 | 300 | 376 |
| 3 | ಸ್ಥಳೀಯ ಸಂಸ್ಥೆ ಶಾಲೆ | 70 | 69 | 30 | 29 | 0 | 0 | 100 | 98 |
| 4 | ಅನುದಾನಿತ ಶಾಲೆ | 13055 | 21610 | 8122 | 16032 | 6406 | 15199 | 27583 | 52841 |
| 5 | ಅನುದಾನ ರಹಿತ ಶಾಲೆ | 31075 | 34308 | 7535 | 10170 | 3316 | 5347 | 41926 | 49825 |
| 6 | ಇತರೆ ಶಾಲೆ | 00 | 00 | 00 | 00 | 00 | 00 | 00 | 00 |
| 7 | ಕೇಂದ್ರೀಯ ಶಾಲೆ | 58 | 114 | 40 | 108 | 42 | 73 | 140 | 295 |
| 8 | ಮಾನ್ಯತೆ ರಹಿತ ಶಾಲೆ | 00 | 00 | 00 | 00 | 00 | 00 | 00 | 00 |
| | **ಒಟ್ಟು** | **1,11,941** | **1,67,387** | **46,944** | **82,262** | **17,459** | **35,731** | **1,76,344** | **2,85,380** |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ–ಅಂಶಗಳು

## ಕೋಷ್ಟಕ–27

### ಸರ್ಕಾರಿ ಉರ್ದು ಮಾಧ್ಯಮ ಶಾಲೆಗಳಲ್ಲಿ ವರ್ಗವಾರು ದಾಖಾಲಾತಿ ವಿವರ

| ಸರ್ಕಾರಿ | 1–5 | | | 6–8 | | | 9–10 | | | 1–10 | | |
|---|---|---|---|---|---|---|---|---|---|---|---|---|
| | ಗಂ | ಹೆ | ಒ | ಗಂ | ಹೆ | ಒ | ಶಂ | ಹೆ | ಒ | ಗಂ | ಹೆ | ಒ |
| ಬೈಲಹೊಂಗಲ | 577 | 1178 | 1755 | 233 | 509 | 742 | 57 | 192 | 249 | 867 | 1879 | 2746 |
| ಬೆಳಗಾವಿ (ನ) | 863 | 1965 | 2828 | 352 | 954 | 1306 | 60 | 149 | 209 | 1275 | 3068 | 4343 |
| ಬೆಳಗಾವಿ(ಗ್ರಾ) | 310 | 710 | 1020 | 117 | 319 | 436 | 00 | 00 | 00 | 427 | 1029 | 1456 |
| ಖಾನಾಪುರ | 297 | 619 | 916 | 145 | 233 | 378 | 00 | 00 | 00 | 442 | 852 | 1294 |
| ರಾಮದುರ್ಗ | 198 | 467 | 665 | 87 | 254 | 341 | 20 | 35 | 55 | 305 | 756 | 1061 |
| ಸೌದತ್ತಿ | 549 | 659 | 908 | 86 | 243 | 329 | 00 | 00 | 00 | 635 | 902 | 1537 |
| **ಬೆಳಗಾವಿ ಒಟ್ಟು** | **2,794** | **5,598** | **8,092** | **1,020** | **2,512** | **3,532** | **137** | **376** | **513** | **3,951** | **8,486** | **12,437** |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ–ಅಂಶಗಳು.

## ಕೋಷ್ಟಕ–28

### ಅನುದಾನಿತ ಉರ್ದು ಮಾಧ್ಯಮ ಶಾಲೆಗಳಲ್ಲಿ ವರ್ಗವಾರು ದಾಖಲಾತಿ ವಿವರ

| ಅನುದಾನಿತ | 1–5 | | | 6–8 | | | 9–10 | | | 1–10 | | |
|---|---|---|---|---|---|---|---|---|---|---|---|---|
| | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ಬೈಲಹೊಂಗಲ | 00 | 00 | 00 | 36 | 70 | 106 | 69 | 125 | 194 | 105 | 195 | 300 |
| ಬೆಳಗಾವಿ (ನ) | 108 | 358 | 466 | 180 | 469 | 649 | 333 | 954 | 1287 | 621 | 1781 | 2402 |
| ಬೆಳಗಾವಿ(ಗ್ರಾ) | 00 | 00 | 00 | 13 | 42 | 55 | 23 | 51 | 74 | 36 | 93 | 129 |
| ಖಾನಾಪುರ | 00 | 00 | 00 | 50 | 70 | 120 | 119 | 144 | 263 | 169 | 214 | 383 |
| ರಾಮದುರ್ಗ | 00 | 00 | 00 | 08 | 38 | 46 | 23 | 65 | 88 | 31 | 103 | 134 |
| ಸೌದತ್ತಿ | 00 | 00 | 00 | 12 | 28 | 40 | 15 | 62 | 77 | 27 | 90 | 117 |
| **ಬೆಳಗಾವಿ ಒಟ್ಟು** | **108** | **358** | **466** | **299** | **717** | **1,016** | **582** | **1,401** | **1,983** | **989** | **2,476** | **3,465** |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ–ಅಂಶಗಳು

**ಕೋಷ್ಟಕ–29**

**ಅನುದಾನ ರಹಿತ ಉರ್ದು ಮಾಧ್ಯಮ ಶಾಲೆಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ವಿವರ**

| ಅನುದಾನ ರಹಿತ | 1 | | 2 | | 3 | | 4 | | 5 | | 6 | | 7 | | 8 | | 9 | | 10 | |
|---|---|---|---|---|---|---|---|---|---|---|---|---|---|---|---|---|---|---|---|---|
| ತಾಲೂಕುಗಳು | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ |
| ಬೈಲಹೊಂಗಲ | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 |
| ಬೆಳಗಾವಿ (ನ) | 144 | 275 | 127 | 211 | 155 | 239 | 149 | 229 | 131 | 241 | 126 | 212 | 87 | 140 | 47 | 85 | 32 | 78 | 26 | 79 |
| ಬೆಳಗಾವಿ(ಗ್ರಾ) | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 |
| ಖಾನಪುರ | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 |
| ರಾಮದುರ್ಗ | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 |
| ಸೌದತ್ತಿ | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 00 | 15 | 36 | 23 | 23 | 13 | 33 |
| **ಬೆಳಗಾವಿ ಒಟ್ಟು** | **144** | **275** | **127** | **211** | **155** | **239** | **149** | **229** | **131** | **241** | **126** | **212** | **87** | **140** | **62** | **121** | **55** | **101** | **39** | **112** |
| **ಬಾಲಕರು:1,075 ಬಾಲಕಿ: 1,881 ಒಟ್ಟು:2,956** | | | | | | | | | | | | | | | | | | | | |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೊಷ್ಟಕ-30

### ಮುಸ್ಲಿಂ ಬಾಲಕಿಯರ ಶಿಕ್ಷಣದ ಅಪೇಕ್ಷೆಯ ವಿವರ

| ಕ್ರಸಂ | ವಿವಿಧ ತರಗತಿಗಳು | ಒಟ್ಟು | ಶಿಕ್ಷಣದ ಅಪೇಕ್ಷೆ ಹೊಂದಿರುವವರು | ಉನ್ನತ ಶಿಕ್ಷಣದ ಬಗ್ಗೆ ಒಲವು | ಉದ್ಯೋಗ ಮತ್ತು ದುಡಿಮೆಯ ಬಗ್ಗೆ ಒಲವು |
|---|---|---|---|---|---|
| 1 | ಪ್ರೌಢ/ಪಿ.ಯು.ಸಿ | 30(44.1%) | 27(90%) | 25(83.3%) | 21(70%) |
| 2 | ಪದವಿ | 20(29.4%) | 18(90%) | 19(95%) | 19(95%) |
| 3 | ತಾಂತ್ರಿಕ ಶಿಕ್ಷಣ | 12(17.6%) | 11(91.6%) | 11(91.6%) | 12(100%) |
| 4 | ಸ್ನಾತಕೋತ್ತರ | 06(8.9%) | 06 (100%) | 06(100%) | 06(100%) |
| | **ಒಟ್ಟು** | **68(100%)** | **62(91.2%)** | **61(90%)** | **58 (85.2%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಆವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ-31

### ಮುಸ್ಲಿಂ ಬಾಲಕಿಯರ ಶಿಕ್ಷಣದ ಬಗ್ಗೆ ಅವರ ಪೋಷಕರ ನಿಲುವುಗಳ ವಿವರ

| ಕ್ರಸಂ | ಪೋಷಕರ ಶಿಕ್ಷಣದ ಮಟ್ಟ | ಒಟ್ಟು | ಪೋಷಕರು | |
|---|---|---|---|---|
| | | | ಬೆಂಬಲಿಸುವವರು | ಬೆಂಬಲಿಸದವರು |
| 1 | ಅನಕ್ಷರಸ್ಥ ಕುಟುಂಬಗಳು | 49(41.9%) | 32(65.3%) | 17(34.7%) |
| 2 | ಪ್ರಾಥಮಿಕ ಶಾಲಾ ಮಟ್ಟದ ಕುಟುಂಬಗಳು | 25(21.4%) | 20(80%) | 5(20%) |
| 3 | ಪ್ರೌಢಶಿಕ್ಷಣ ಮಟ್ಟದ ಕುಟುಂಬಗಳು | 21(18%) | 18(85.7%) | 3(14.3%) |
| 4 | ಪದವಿ ಮಟ್ಟದ ಕಟುಂಬಗಳು | 17(14.5%) | 16(94.1%) | 1(5.9%) |
| 5 | ಸ್ನಾತಕೋತ್ತರ ಮಟ್ಟದ ಕುಟುಂಬಗಳು | 5(4.2%) | 5(100%) | 00(00%) |
| | **ಒಟ್ಟು** | **117(100%)** | **91(77.8%)** | **26(22.2%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಆವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಪರಾಮರ್ಶನ ಗ್ರಂಥಗಳು

೧. *ರಿಪೋರ್ಟ್ ಅಫ್ ದ ಡೈರೆಕ್ಟರ್ ಅಫ್ ಪಬ್ಲಿಕ್ ಇನ್ಸಪೆಕ್ಟರ್* ಬಾಂಬೆ, ೧೮೬೫/೬೬, ಅಪೆಂಡಿಕ್ಸ್–ಎ, ಪು,ಸಂ.೪೮, ೪೯, ೬೨, ಉಲ್ಲೇಖ:ಡಾ.ಎಂ.ಎಸ್ ಹತ್ತಿ, *ಮುಂಬಯಿ–ಕರ್ನಾಟಕದ ಗಡಿನಾಡ ಕನ್ನಡಿಗರ ಶೈಕ್ಷಣಿಕ ಸ್ಥಿತಿಗತಿ : ಒಂದು ಅಧ್ಯಯನ,* ಧಾರವಾಡ, ಶಶಿ ಕಿರಣ ಪ್ರಕಾಶನ, ೨೦೧೦, ಪು.ಸಂ.೨೯–೩೦

೨. ಡಾ.ಎಂ.ಎಸ್.ಹತ್ತಿ, *ಮುಂಬಯಿ–ಕರ್ನಾಟಕದ ಗಡಿನಾಡ ಕನ್ನಡಿಗರ ಶೈಕ್ಷಣಿಕ ಸ್ಥಿತಿಗತಿ : ಒಂದು ಅಧ್ಯಯನ,* ಧಾರವಾಡ, ಶಶಿ ಕಿರಣ ಪ್ರಕಾಶನ, ೨೦೧೦, ಪು. ೩೧–೩೨

೩. ಬಿ.ಎಸ್. ಗವಿಮಠ, "ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಇತಿಹಾಸ", ಡಾ.ಎಸ್.ಎಂ. ಹರದಗಟ್ಟಿ(ಸಂ), *ಬೆಳಗಾವಿ ಸಿರಿ,* ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ ೨೦೦೩ ನೇ ಮಾರ್ಚ್ ೭, ೮ ಮತ್ತು ೯ ಪು–೧೦೧–೧೦೨

೪. ಡಾ.ಎಂ.ಎಸ್.ಹತ್ತಿ, *ಮುಂಬಯಿ–ಕರ್ನಾಟಕದ ಗಡಿನಾಡ ಕನ್ನಡಿಗರ ಶೈಕ್ಷಣಿಕ ಸ್ಥಿತಿಗತಿ : ಒಂದು ಅಧ್ಯಯನ,* ಪುರ್ವೋಕ್ತ, ಪು. ೪೦–೪೪

೫. ಪಾಲಾಕ್ಷ, *ಸಮಗ್ರ ಕರ್ನಾಟಕ ಇತಿಹಾಸ* ಮತ್ತು *ಸಂಸ್ಕೃತಿ,* ಶಶಿ ಪ್ರಕಾಶನ, ತಿಪಟೂರು ೨೦೦೬, ಪು.೧೬೯

೬. *ಕನ್ನಡ–ಕನ್ನಡಿಗ–ಕರ್ನಾಟಕ,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮, ಪು,ಸಂ.೭೪–೮೫ ಉಲ್ಲೇಖ:ಡಾ.ಎಂ.ಎಸ್ ಹತ್ತಿ, ಪುರ್ವೋಕ್ತ, ಪು,ಸಂ ೬೮–೬೯.

೭. ಚಂದರಗಿ ಅಶೋಕ, *ಚಂದರಗಿ ಸಮಿತಿ ವರದಿ,* ಬೆಳಗಾವಿ, ೧೯೯೯, ಪು,ಸಂ೧–೧೩, ಉಲ್ಲೇಖ: ಡಾ.ಎಂ.ಎಸ್ ಹತ್ತಿ, ಪುರ್ವೋಕ್ತ, ಪು.ಸಂ ೭೦–೭೧

೮. ಡಾ.ಎಂ.ಎಸ್.ಹತ್ತಿ, ಪುರ್ವೋಕ್ತ, ಪು. ೩೧–೩೨

೯. ಡಾ.ಎಂ.ಎಸ್.ಹತ್ತಿ, ಪುರ್ವೋಕ್ತ, ಪು. ೩೪–೩೬

೧೦. ಟಿ.ಆರ್.ಚಂದ್ರಶೇಖರ, *ಲಿಂಗಸಂಬಂಧಿ ಅಭಿವೃದ್ಧಿ ಅಧ್ಯಯನ,* ಕರ್ನಾಟಕ ಜನಗಣತಿ ೨೦೧೧, ಹಂಪಿ, ಕನ್ನಡ ವಿಶ್ವವಿದ್ಯಾಲಯ ೨೦೧೨, ಪು. ೫೯–೬೩

೧೧. ರಾಜೇಂದರ್ ಸಾಚಾರ್, *ಹೈ ಲೇವಲ್ ಕಮಿಟಿ ರಿಪೋರ್ಟ್ ಆನ್ ಸೋಶಿಯಲ್, ಎಕನಾಮಿಕ್ ಆಂಡ್ ಎಜುಕೇಷನಲ್ ಸ್ಟೇಟಸ್ ಅಫ್ ದ ಮುಸ್ಲಿಂ ಕಮ್ಯೂನಿಟಿ ಅಫ್ ಇಂಡಿಯ,* ಡೆಲ್ಲಿ, ಅಕಲಂಕ್ ಪಬ್ಲಿಕೆಷನ್ಸ್, ೨೦೦೭, ಪು–೧೩೦

೧೨. ಜೋಯಾ ಹಸನ್ ಅಂಡ್ ರಿತು ಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪ ಪು.ಸಂ-೧೪೩

೧೩. ಇಮ್ತಿಯಾಜ್ ಅಹಮದ್, "ಮುಸ್ಲಿಂ ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್, ಎನ್ ಇನ್‌ಫೆರೆನ್‌ಶಿಯಲ್ ಎನಾಲಿಸಿಸ್", *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಪು.ಸಂ.೪೪, ಪು.ಸಂ.೪೭, ೨೦೦೯, ಪು.ಸಂ.೧೭-೨೧

೧೪. ರೆಹಮಾನ್‌ಖಾನ್, *ರಿಪೋರ್ಟ್ ಆಫ್ ಹೈಪವರ್ ಕಮಿಟಿ ಅನ್ ಸೋಶಿಯೊ-ಎಕನಾಮಿಕ್ ಆಂಡ್ ಎಜುಕೇಷನಲ್ ಸರ್ವೆ ಆಫ್ ರಿಲೀಜಿಯಸ್ ಮೈನಾರಿಟಿಸ್ ಇನ್ ಕರ್ನಾಟಕ*, ಬೆಂಗಳೂರು, ೧೯೯೪, ಕರ್ನಾಟಕ ಮೈನಾರಿಟಿ ಕಮಿಷನ್, ಪು.ಸಂ ೬೧

೧೫. ಹುಸೇನ್ ಎಂ,"ಪರ್ಸ್‌ಪೆಕ್ಟಿವ್ ಆನ್ ಉರ್ದು ಲಾಂಗ್ವೇಜ್ ಅಂಡ್ ಎಜುಕೇಷನ್ ಇನ್ ಇಂಡಿಯ",*ಸೋಶಿಯಲ್ ಸೈಂಟಿಸ್ಟ್*, ವಾ.ಸ.೨, ಸಂ ೨, ಜುಲೈ-ಡಿಸೆಂಬರ್-೨೦೧೦, ಪು-೧೨೬-೧೪೩

೧೬. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨/೧೩*, ಪುರ್ವೋಕ್ತ, ಪು-೭-೮

೧೭ ಟಿ.ಎ ಪ್ರಶಾಂತ್ ಬಾಬು, *ಮಳವಳ್ಳಿ ತಾಲೂಕಿನ ಉರ್ದು ಶಾಲೆಗಳ ಅಧ್ಯಯನ ವರದಿ-೨೦೦೮-೦೯*, ೨೦೧೦, ಪು.ಸಂ ೨೫-೪೦

೧೮. ಕೆ.ವೈಜಯಂತಿ, *ಎ ಸ್ಟಡಿ ಆಫ್ ಗವರ್ನಮೆಂಟ್ ಉರ್ದು ಪ್ರೈಮರಿ ಸ್ಕೂಲ್ ಇನ್ ಬೆಂಗಳೂರು*, ಬೆಂಗಳೂರು, ಅಕ್ಷರ ಫೌಂಡೇಶನ್ಸ್, ಜುಲೈ ೨೦೧೧, ಪು.ಸಂ ೫-೩೨

೧೯. ಮೇಯರ್ .ಎ. ಅಂಡ್ ಹೆಚ್.ಎಸ್. ಶಾರ್ಪ್, "ರಿಲೀಜಿಯಸ್ ಪ್ರಿಫರೆನ್ಸ್ ಅಂಡ್ ವರ್ಡ್ಲ್ ಸಕ್ಸಸ್" *ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಪಂ. ೨೭, ಪು.ಸಂ ೨೧೮-೨೨೭ ಮತ್ತು ವರ್ಸೂಫ್(ಸಂ), "ಆಚೀವ್ ಮೆಂಟ್, ಮೋಟಿವೇಷನ್, ಅಂಡ್ ರಿಲೀಜಿಯಸ್ ಬ್ಯಾಕ್ ಗ್ರೌಂಡ್" *ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಸಂ.೨೭ ಪು.ಸಂ ೨೦೫-೨೧೮ ಮತ್ತು ಸಿ.ಡಬ್ಲ್ಯೂ, ಮುಲ್ಲರ್, "ಎವಿಡೆನ್ಸ್ ಆನ್ ದ ರಿಲೇಷನ್‌ಶಿಪ್ ಬಿಟ್ವೀನ್ ರಿಲಿಜಿಯನ್ ಅಂಡ್ ಎಜುಕೇಷನ್ ಅಟೇನ್‌ಮೆಂಟ್ ಸೋಶಿಯಾಲಜಿ ಅಫ್ ಎಜುಕೇಷನ್", ೧೯೮೦ ವಾ.ಸಂ. ೨೩ ಪು.ಸಂ ೧೪೦-೧೫೨, ಮತ್ತು ಹಿರ್ಚಮನ್ ಅಂಡ್ ಎಲ್.ಎಂ. ಫಾಲ್‌ಕೋನ್, "ದ ಎಜುಕೇಷನ್‌ಲ್ ಅಟೇನ್‌ಮೆಂಟ್ ಆಫ್ ರಿಲೀಜಿಯೋ-ಎಥ್‌ನಿಕ್ ಗ್ರೂಪ್ ಇನ್ ದ ಯುನೈಟೆಡ್ ಸ್ಟೇಟ್ಸ್", *ರಿಸರ್ಚ್ ಇನ್ ಸೋಶಿಯೋಲಜಿ ಆಫ್ ಎಜುಕೇಷನ್ ಅಂಡ್ ಸೋಶಿಯಾಲೈಜೇಷನ್*,

೧೯೮೮, ವಾ.ಸಂ ೫, ಪು.ಸಂ ೮೩–೧೨೦ ಮತ್ತು ಸ್ಯಾಡರ್ಸ್ ಡಬ್ಲ್ಯೂ, "ದ ಎಫೆಕ್ಟ್ ಆಫ್ ಎಥ್‌ಸಿಸಿಟಿ ಅಂಡ್ ರಿಲಿಜಿಯನ್ ಆನ್ ಎಜುಕೇಷನ್‌ಲ್ ಅಟೇನ್‌ಮಂಟ್", ಎಕನಾಮಿಕ್ *ಆಫ್ ಎಜುಕೇಷನ್ ರಿವ್ಯೂ*, ೧೯೯೨, ವಾ.ಸಂ.೧೧ ಪು.ಸಂ ೧೯–೩೫, ಉಲ್ಲೇಖ: ಮಾಹಮದ್ ಸಂಜೀರ್ ಅಲಂ, ಅಂಡ್ ಸರಸ್ವತಿ ರಾಜು, "ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯನ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು.ಸಂ ೧೬೧೩–೧೬೨೨

೨೦. ಬೇಗ್ ಎಂ.ಆರ್.ಎ, ಮುಸ್ಲಿಂ ಡೈಲೆಮಾ ಇನ್ ಇಂಡಿಯಾ, ಡೆಲ್ಲಿ, ವಿಕಾಸ್ ಪಬ್ಲಿಷಿಂಗ್ ಹೌಸ್, ೧೯೭೪, ಪು.ಸಂ.೧೭೫

೨೧. ಅಮೀರ್ ಅಲಿ, *ಎಥಿಕ್ಸ್ ಆಫ್ ಇಸ್ಲಾಂ ಇನ್ ಕಲ್ಕತ್ತ*, ೧೯೫೦, ಪು–೧೬೧೪, ಅಂಡ್ ಶಫೀದ ಅಲ್ ಹರೀರಿ, *ಇಸ್ಲಾಂಸ್ ಪಾಯಿಂಟ್ ಆಫ್ ವ್ಯೂವ್ ಆನ್ ವಿಮೆನ್ಸ್ ಎಜಿಕೇಷನ್ ಇನ್ ಸೌದಿ ಅರೇಬಿಯ*, ಕಂಪ್ಯಾರೇಟಿವ್ ಎಜುಕೇಷನ್, ೧೯೮೭, ವಾಸ, ೨೩ ಪು.ಸಂ ೫೧–೫೭

೨೨. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರೆಫೆರೆನ್ಸ್ ಪ್ರೆಸ್, ೨೦೦೩, ಪು–೨೯೯–೩೦೬ ಮತ್ತು ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್", *ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೨೩. ಜಿ.ಎಸ್. ಸಿಂಗ್, *ಮುಸ್ಲಿಂ ಇನ್ ಇಂಡಿಯ ಆನ್ಯೂಯಲ್ ಪಬ್ಲಿಕೇಷನ್ಸ್*, ನ್ಯೂಡೆಲ್ಲಿ, ೨೦೦೩ ಪು.ಸಂ ೧೯೪

೨೪. ಯಾದವ್ ಎನ್, "ಎಜುಕೇಷನ್ ಫಾರ್ ವಿಮೆನ್", ನ್ಯೂಡೆಲ್ಲಿ, ರೆಫೆರೆನ್ಸ್ ಪ್ರೆಸ್, ೨೦೦೩, ಪು–೨೯೯–೩೦೬ ಮತ್ತು ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್",*ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೨೫. ಅಹಮದ್ ಜವಾದ್. ಹೆಚ್, *ರೈಟ್ಸ್ ಆಫ್ ವಿಮೆನ್ ಇನ್ ಇಸ್ಲಾಂ*, ನ್ಯೂಯಾರ್ಕ್, ಸೇಂಟ್ ಮಾರ್ಟಿನ್ಸ್ ಪ್ರೆಸ್, ೧೯೯೮, ಪು.ಸಂ ೨೦–೨೧

೨೬ ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್",*ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧–೧೭೦

೨೭. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರಫೆರೆನ್ಸ್ ಪ್ರೆಸ್, ೨೦೦೩, ಪು.ಸಂ ೨೯೯–೩೦೬ ಮತ್ತು ಅಸ್ಗರ್ ಅಲಿ ಇಂಜಿನಿಯರ್, *ಕುರಾನ್, ವುಮೆನ್, ಮಾಡರ್ನ್ ಸೊಸೈಟಿ*, ನ್ಯೂಡಾನ್ ಪ್ರೆಸ್, ಇಂಕ್, ಯುಕೆ, ಪು.ಸಂ ೨೦೯

೨೮. ಜಾನ್ ಎಲ್. *ಎಪೋಸಿಟೊ, ಇಸ್ಲಾಂ, ಜೆಂಡರ್ ಅಂಡ್ ಸೋಶಿಯಲ್ ಛೇಂಜ್*, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ೧೯೯೮, ಪು.ಸಂ ೧೫

೨೯. ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೪–೧೪೭

೩೦. ಮಲ್ಲಿಕಾರ್ಜುನಾ ನಾಗಶೆಟ್ಟಿ, *ಜಂಡರ್ ಪ್ರೊಫೈಲ್ ಆಫ್ ಪ್ರೊಫೆಷನಲ್ ಎಜ್ಯುಕೇಶನ್ ಥೀಸಿಸ್ ಸಬ್ಮಿನಿಡೆಟ್ ಟು ಡಿಪಾರ್ಟ್‌ಮೆಂಟ್ ಆಫ್ ಎಜ್ಯುಕೇಶನ್* ಗುಲ್ಬರ್ಗಾ ಯೂನಿವರ್ಸಿಟಿ, ಗುಲ್ಬರ್ಗಾ, ೨೦೧೦, ಪು.ಸಂ ೧೫೮–೧೭೬

೩೧. ಪಾವಲವಲ್ಲಿ ಗೋವಿಂದಸ್ವಾಮಿ ಅಂಡ್ ಬಿ ಎಂ. ರಮೇಶ್, "ಮಟಿರಿಯಲ್ ಎಜುಕೇಷನ್ ಅಂಡ್ ಜೆಂಡರ್ ಚಾಯ್ಸ್ ಇನ್ ಚೈಲ್ಡ್‌ಕೇರ್ ಪ್ರಾಕ್ಟಿಸೆಸ್ ಇನ್ ಇಂಡಿಯಾ",*ಅನಿವಲ್ ಮೀಟಿಂಗ್ಸ್ ಅಫ್ ದ ಪಾಪುಲೇಷನ್ ಅಸೋಸಿಯೇಷನ್ ಅಫ್ ಅಮೇರಿಕ*, ನ್ಯೂ ಓರ್ಲಿನ್ಸ್, ೧೯೯೬, ಉಲ್ಲೇಖ: ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೪೫

೩೨. ಕೆ.ಕೃಷ್ಣಮ್ಮ, "ಸೋಶಿಯಲ್ ಅಂಡ್ ಎಕನಾಮಿಕ್ ಆಸ್‌ಪೆಕ್ಟ್ಸ್ ಆಫ್ ಫೀಮೆಲ್ ಎಜ್ಯುಕೇಶನ್: ಎ ಕೇಸ್ ಸ್ಟಡಿ ಆಫ್ ರಾಯಲಸೀಮಾ", *ಎಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ*, ಜುಲೈ ೧೯೯೧, ವಾ ನಂ.೦೨, ಸಂ,೧ ಪು.ಸಂ ೧೭–೨೧

೩೩. ಮಹಮ್ಮದ್ ಪೀರ್, *ರಿಲೀಜನ್ ಅಂಡ್ ಎಜ್ಯುಕೇಶನ್: ಎ ಕೇಸ್ ಸ್ಟಡೀ ಆಫ್ ಮುಸ್ಲಿಂ ಕಮ್ಯುನಿಟಿ ಇನ್ ಬೆಂಗಳೂರು ಸಿಟಿ*, ಡಿಪಾರ್ಟ್‌ಮೆಂಟ್ ಆಫ್ ಸೋಷಿಯಲಜಿ, ಬೆಂಗಳೂರು ೧೯೮೮, ಪು.ಸಂ ೩೨–೪೦

೩೪. ಡಾ. ಶಕೀಲ್ ಅಹಮದ್ ಮತ್ತು ಡಾ. ಮಲಿಕಾ ಮಿಸ್ತ್ರಿ, "ಮಾಡರ್ನ್ ಎಜುಕೇಷನ್ ಅಂಡ್ ಸೋಶಿಯೋ–ಎಕನಾಮಿಕ್ ಚೇಂಜ್, ಎ ಕೇಸ್ ಸ್ಟಡಿ ಆಫ್ ಮುಸ್ಲಿಂ ವುಮೆನ್ ಇನ್ ಪುಣೆ ಸಿಟಿ", *ಇಂಡಿಯ ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾಮರ್ಸ್* ವಾ.ಸಂ.೧ ಸಂ.೧ ಅಕ್ಟೋಬರ್ ೨೦೧೦, ಪು–೧೩೯–೧೪೯

# ಅಧ್ಯಾಯ: ನಾಲ್ಕು

# ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ: ಪ್ರಭಾವ ಬೀರುವ ಅಂಶಗಳು

## ಅಧ್ಯಾಯ: ನಾಲ್ಕು

# ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ: ಪ್ರಭಾವ ಬೀರುವ ಅಂಶಗಳು

ಹಿಂದಿನ ಅಧ್ಯಾಯದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪರಿಸರವನ್ನು ಅರ್ಥ ಮಾಡಿಕೊಳ್ಳಲಾಗಿದೆ. ಬೆಳಗಾವಿ ಪ್ರದೇಶ ಇಂದಿಗೂ ಮರಾಠಿ ಭಾಷೆಯ ಪ್ರಾಬಲ್ಯಕ್ಕೆ ಒಳಗಾಗಿದೆ. ಏಕೀಕರಣೋತ್ತರದ ಸಂದರ್ಭದಲ್ಲೂ ಇದು ಮುಂದುವರೆದಿದೆ. ಈ ಪ್ರದೇಶದಲ್ಲಿ ಕನ್ನಡವನ್ನು ಪರಿಚಯಿಸುವುದರಲ್ಲಿ ವೀರಶೈವ ಮಠಗಳ ಕೊಡುಗೆಯನ್ನು ಮತ್ತು ವಿವಿಧ ಆಯೋಗಗಳು ನೀಡಿದ ಶಿಫಾರಸ್ಸುಗಳನ್ನು ಅರ್ಥ ಮಾಡಿಕೊಳ್ಳಲಾಗಿದೆ. ಕರ್ನಾಟಕ ಹಾಗೂ ಅಧ್ಯಯನ ಪ್ರದೇಶವಾದ ಬೆಳಗಾವಿ ನಗರದಲ್ಲಿರುವ ಸಾಕ್ಷರತೆ, ಶಾಲೆಗಳು, ಶಿಕ್ಷಕರ ಪ್ರಮಾಣ, ಸಮುದಾಯವಾರು ದಾಖಲಾತಿ ಹಾಗೂ ಶಾಲೆಗಳು ಎದುರಿಸುತ್ತಿರುವ ಮೂಲಭೂತ ಸೌಕರ್ಯಗಳ ಕೊರತೆ ಹಾಗೂ ಮುಸ್ಲಿಂ ಸಮುದಾಯದ ಸಾಕ್ಷರತೆ, ಶಾಲೆಗಳು ಮತ್ತು ವಸತಿ ನಿಲಯಗಳ ಲಭ್ಯತೆ ಮತ್ತು ಮುಸ್ಲಿಮರ ಸಾಮಾಜಿಕ ಪರಿಸರದಲ್ಲಿ ಶಿಕ್ಷಣದ ಬಗ್ಗೆ ಮುಸ್ಲಿಂ ಬಾಲಕಿಯರು ಮತ್ತು ಪೋಷಕರ ಅಭಿಪ್ರಾಯಗಳನ್ನು ಕಂಡುಕೊಳ್ಳಲಾಗಿದೆ. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರು ಮತ್ತು ಪೋಷಕರಲ್ಲಿ ಶಿಕ್ಷಣದ ಬಗ್ಗೆ ಸಕಾರಾತ್ಮಕ ಮನೋಭಾವನೆ ಕಂಡುಬರುತ್ತಿದೆ. ಆದರೂ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಗಿರುವ ಅಂಶಗಳು ಮತ್ತು ಅವರ ಶಿಕ್ಷಣವನ್ನು ಪ್ರಭಾವಿಸುವ ಅಂಶಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.ವಿವಿಧ ಅಧ್ಯಯನಗಳು ಗುರುತಿಸುವ ಶಿಕ್ಷಣಕ್ಕೆ ಸಂಬಂಧಿಸಿದ ಧಾರ್ಮಿಕ ದೃಷ್ಟಿಕೊನಗಳು ಹಾಗೂ ಇಸ್ಲಾಂ ಮತ್ತು ಶಿಕ್ಷಣದ ನಡುವಿನ ಸಂಬಂಧಗಳನ್ನು ಹಾಗೂ ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಪ್ರಭಾವಿಸುವಅಂಶಗಳನ್ನು ಮುಂದಿನ ಭಾಗಗಳಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

ವಿದ್ಯಾವಂತ ಮಹಿಳೆಯರಿಲ್ಲದೆ ವಿದ್ಯಾವಂತ ಜನರಿರಲು ಸಾಧ್ಯವಿಲ್ಲ. "ಶಿಕ್ಷಣದ ಅವಕಾಶವನ್ನು ಮಹಿಳೆಯರಿಗೆ ನೀಡಿದಲ್ಲಿ ಅದು ಖಂಡಿತವಾಗಿ ಮುಂದಿನ ತಲೆಮಾರಿಗೆ ವರ್ಗಾಯಿಸಲ್ಪಡುತ್ತದೆ"

೧೯೪೮ರಲ್ಲಿ ಡಾ.ರಾಧಾಕೃಷ್ಣನ್ ಅವರು ಹೇಳಿದ ಮಾತು ಇಂದಿಗೂ ಜೀವಂತವಾಗಿ ಚರ್ಚಿಸಲ್ಪಡುತ್ತಿದೆ.[೧] ಮಹಿಳಾ ಶಿಕ್ಷಣಕ್ಕಾಗಿ ಮಾಡುವ ವೆಚ್ಚ  ಬಡತನವನ್ನು ಕಡಿಮೆ ಮಾಡುತ್ತದೆ.[೨] ದೇಶದ ಯೋಜನಾಬದ್ಧ ಅಭಿವೃದ್ಧಿಯಲ್ಲಿ ಮಹಿಳಾ ಶಿಕ್ಷಣ ಹೆಚ್ಚು ಮಹತ್ವವನ್ನು ಪಡೆದುಕೊಂಡಿದೆ. ಮಹಿಳೆಯು ಅಮೂಲ್ಯವಾದ ಮಾನವ ಸಂಪನ್ಮೂಲವನ್ನು ಹೊಂದಿದ್ದು, ಸಮುದಾಯ ಮತ್ತು ದೇಶದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತಾಳೆ ಎಂಬುದೇ ಇದಕ್ಕೆ ಕಾರಣವಾಗಿದೆ. ಅನಕ್ಷರಸ್ಥ ಮಹಿಳೆಯು ಅಭಿವೃದ್ಧಿ ಮತ್ತು ಸಾಮಾಜಿಕ ಪರಿವರ್ತನೆ ತರುವಲ್ಲಿ ವಿಫಲಳಾಗುತ್ತಾಳೆ. ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತಿದ್ದು, ಶಿಕ್ಷಣ ಮಾನವ ಹಕ್ಕುಗಳು, ರಾಜ್ಯನಿರ್ದೇಶಕ ತತ್ವಗಳು, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಕಾಯಿದೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ.

## ೪.೧. ಮಹಿಳಾ ಶಿಕ್ಷಣ ಮತ್ತು ಸಾಮರ್ಥ್ಯದ ವಿಸ್ತರಣೆ

ಶಿಕ್ಷಣದ ಪ್ರಾಮುಖ್ಯತೆಯನ್ನು ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆ ತನ್ನ ೨೬ನೇ ವಿಧಿಯಲ್ಲಿ ಉಲ್ಲೇಖಿಸಿದೆ, ೨೦೦೨ ರಲ್ಲಿ ಭಾರತದ ಸಂವಿಧಾನವು ೮೬ನೇ ತಿದ್ದುಪಡಿಯ ಮೂಲಕ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಪರಿವರ್ತಿಸಿದೆ. ಕಾರಣವೆಂದರೆ ಶಿಕ್ಷಣವು ಆಧುನಿಕ ನಡಾವಳಿ ಗಳನ್ನು, ಮೌಲ್ಯಗಳನ್ನು ಮತ್ತು ಹೊಸ ನೋಟಗಳನ್ನು ನೀಡುವಲ್ಲಿ ಮುಖ್ಯ ಪಾತ್ರವಹಿಸುತ್ತದೆ.[೩] ಮಹಿಳೆಯರಿಗೆ ತಮ್ಮ ಕಾನೂನಾತ್ಮಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಹಕ್ಕುಗಳ ಬಗ್ಗೆ ಅರಿವು ಮೂಡಿಸಿ, ಅನ್ಯಾಯದ ವಿರುದ್ಧ ಹೋರಾಡಲು ಶಿಕ್ಷಣ ಉತ್ತೇಜನ ನೀಡುತ್ತದೆ. ಮಹಿಳೆಯರಿಗೆ ಕೌಶಲ್ಯಗಳನ್ನು ನೀಡಿ, ಉದ್ಯೋಗವನ್ನು ಸೃಷ್ಟಿಸಿ ಶಕ್ತಿಯುತಗೊಳಿಸುವ ಮೂಲಕ ಅವರ ಪೌಷ್ಠಿಕತೆ ಮತ್ತು ಆರೋಗ್ಯವನ್ನು ವೃಧಿಸುತ್ತದೆ. ಸಂಪ್ರದಾಯಗಳ ವಿರುದ್ಧ ಹೋರಾಡಿಸುವ ಶಕ್ತಿ ನೀಡಿ, ಸಮಾಜದಲ್ಲಿ ಅವರ ಸ್ಥಾನವನ್ನು ಎತ್ತರಿಸುತ್ತದೆ.[೪] ಆದ್ದರಿಂದ ಶಿಕ್ಷಣವು ಕೇವಲ ಮಹಿಳೆಯರ ರಾಜಕೀಯ ಸಹಭಾಗಿತ್ವ ಮತ್ತು ಆರ್ಥಿಕ ಸ್ವಾವಲಂಬನೆ ಹೆಚ್ಚಿಸುವುದಿಲ್ಲ, ಇವುಗಳ ಜೊತೆಗೆ ಅವರಿಗೆ ಉತ್ತಮ ಜೀವನ ರೂಪಿಸಿಕೊಳ್ಳಲು ಅನುವು ಮಾಡಿಕೊಟ್ಟು, ಆ ಮೂಲಕ ಅವರ ಕುಟುಂಬ ಹಾಗೂ ಇಡೀ ದೇಶದ ಸಾಮಾಜಿಕ ಜೀವನವನ್ನು ವಿಶಾಲಗೊಳಿಸುತ್ತದೆ. ಹಾಗಾಗಿ ಶಿಕ್ಷಣವು ಮಹಿಳೆಯ ಸ್ಥಾನವನ್ನು ಉತ್ತಮಗೊಳಿಸುವಲ್ಲಿ ಪ್ರಧಾನ ಪಾತ್ರವಹಿಸಿದೆ ಮತ್ತು ಪುರುಷ–ಮಹಿಳೆಯರ ನಡುವಿನ ಅಸಮಾನತೆಯನ್ನು ನಿವಾರಿಸಿ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅವರ ಸಕ್ರೀಯ ಪಾತ್ರವಹಿಸುವುದನ್ನು ಖಾತ್ರಿಪಡಿಸಿದೆ ಎಂಬುದನ್ನು ವಿವಿಧ ಅಧ್ಯಯಗಳು ದೃಢಪಡಿಸಿವೆ.[೫] ಆದರೂ ಮಹಿಳೆಯರ

ಶೈಕ್ಷಣಿಕ ಪ್ರಗತಿ ಆಶದಾಯಕವಾಗಿಲ್ಲ. ಪುರುಷ-ಮಹಿಳೆ, ಧರ್ಮ-ಧರ್ಮಗಳ ನಡುವೆ, ಸಮುದಾಯ-ಸಮುದಾಯಗಳ ನಡುವೆ ಶೈಕ್ಷಣಿಕ ಅಸಮಾನತೆ ಇರುವುದು ಭಾರತದಲ್ಲಿ ಸಾಮಾನ್ಯವಾಗಿದೆ. ಭಾರತದಲ್ಲಿ ಮುಸ್ಲಿಮರು ಶೈಕ್ಷಣಿಕವಾಗಿ ಇನ್ನೂ ಹಿಂದುಳಿದಿದ್ದಾರೆ, ಹಿಂದೂ ಸಮುದಾಯದ ಮಹಿಳೆಯರಿಗೆ ಹೋಲಿಸಿದರೆ, ಮುಸ್ಲಿಂ ಮಹಿಳೆಯರ ಶಿಕ್ಷಣ ಇನ್ನೂ ಕಷ್ಟವಾಗಿದೆ.[೬] ಸಂವಿಧಾನಾತ್ಮಕ ರಕ್ಷಣೆಯ ನಡುವೆಯೂ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದಿದ್ದಾರೆ.

### ೪.೨. ಭಾರತದ ಸಂವಿಧಾನ ಮತ್ತು ಮಹಿಳಾ ಶಿಕ್ಷಣ

ಭಾರತದ ಸಂವಿಧಾನವು ಮಹಿಳೆಯರ ಸಬಲೀಕರಣಕ್ಕಾಗಿ ವಿವಿಧ ಮೂಲಭೂತ ಕ್ರಮಗಳನ್ನು ಕೈಗೊಂಡಿದೆ. ಅವುಗಳಲ್ಲಿ ಮಕ್ಕಳು ಮತ್ತು ಮಹಿಳೆಯರಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ, ಬದುಕಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳ ಒದಗಿಸುವಿಕೆ, ವರದಕ್ಷಿಣೆ ಮತ್ತು ಮಹಿಳಾ ಶೋಷಣೆಯ ಮೇಲೆ ನಿರ್ಬಂಧಗಳನ್ನು ಹೇರಿದೆ. ಕಳೆದ ೭೦ ದಶಕಗಳಿಂದ ಸರ್ಕಾರಗಳು ಮಹಿಳಾ ಶಿಕ್ಷಣಕ್ಕಾಗಿ ವಿವಿಧ ಯೋಜನೆಗಳನ್ನು ರೂಪಿಸಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಆದರೂ ವಿವಿಧ ಸಮುದಾಯಗಳಲ್ಲಿ ಪುರುಷರಿಗಿಂತ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವುದು ವಿವಿಧ ವರದಿಗಳಿಂದ ಸಾಬೀತುಪಟ್ಟಿದೆ.ವಿಶೇಷವಾಗಿ ಮುಸ್ಲಿಂ ಸಮುದಾಯದಲ್ಲಿ ಪುರುಷರಿಗಿಂತ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿರುವುದು ರುಜುವಾತುಪಟ್ಟಿದೆ.ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿಯಲು ವಿವಿಧ ಕಾರಣಗಳನ್ನು ಮುಂದಿಡಲಾಗುತ್ತಿದೆ. ಇವುಗಳಲ್ಲಿ ಚಾರಿತ್ರಿಕ ಕಾರಣವೂ ಒಂದು.

### ೪.೩. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ: ಚಾರಿತ್ರಿಕ ಕಾರಣಗಳು

ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿಯಲು ಚರಿತ್ರೆ ಕಾರಣವೆಂದು ಗ್ರಹಿಸಲಾಗುತ್ತಿದೆ. ಈ ವಾದ ಹೇಳುವ ಪ್ರಕಾರ ಚಾರಿತ್ರಿಕ ನೋವುಗಳು ಮುಸ್ಲಿಮರ ಪರವಾಗಿಲ್ಲ. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಯು ನಮ್ಮನ್ನು ಭಾರತದ ಚರಿತ್ರೆಗೆ ಕೊಂಡೊಯ್ಯುತ್ತದೆ. ಅಭಿವೃದ್ಧಿ ಚಿಂತಕರು ಮುಸ್ಲಿಮರ ಹಿಂದುಳಿಯುವಿಕೆಗೆ ಚರಿತ್ರೆಯತ್ತ ಮುಖಮಾಡುತ್ತಾರೆ. ಶಿಕ್ಷಣದ ಅಸಮಾನ ಹಂಚಿಕೆಯ ಕಾರಣದಿಂದಾಗಿ ಮುಸ್ಲಿಮರ ಶಿಕ್ಷಣ ಹಿಂದುಳಿದಿದೆ ಎಂದು ವಾದಿಸಲಾಗುತ್ತಿದೆ. ಬ್ರಿಟೀಷರ ಕಾಲದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಅನುಕೂಲಕರವಾದ ಸ್ಥಳಗಳಲ್ಲಿ ಅಂದರೆ ಬಂದರುಗಳಿರುವ ಸ್ಥಳಗಳಲ್ಲಿ ಸ್ಥಾಪಿಸುತ್ತಿದ್ದರು. ಈ ಸ್ಥಳಗಳಿಂದ ಶಿಕ್ಷಣ ಪ್ರಸಾರಗೊಳ್ಳಲು ಹೆಚ್ಚು ಸಮಯ ಬೇಕಾಯಿತು. ಬಹುಸಂಖ್ಯಾತ ಮುಸ್ಲಿಮರು ಇಂತಹ ಪಟ್ಟಣಗಳಿಂದ ಅತೀ ದೂರದಲ್ಲಿ ವಾಸವಿದ್ದುದರಿಂದ ಅವರಿಗೆ ಶಿಕ್ಷಣ ಸಮಾನವಾಗಿ ಲಭ್ಯವಾಗಲಿಲ್ಲ. ಇಂತಹ ಪರಿಸ್ಥಿತಿಯಿಂದಾಗಿ ಮುಸ್ಲಿಮರಿಗೆ ಶಿಕ್ಷಣ ಅತ್ಯಂತ ತಡವಾಗಿ ಲಭ್ಯವಾಗಿದ್ದು, ಈ ಕ್ಷೇತ್ರದಲ್ಲಿ ಹೆಚ್ಚು

ಸಾಧನೆ ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವರು ಶೈಕ್ಷಣಿಕವಾಗಿ ಹಿಂದುಳಿಯಬೇಕಾಯಿತು.[೭] ಇದು ಅವರನ್ನು ಶೈಕ್ಷಣಿಕವಾಗಿ ಇತರೆ ಸಮುದಾಯಗಳನ್ನು ಮುಟ್ಟಲು ಹೆಚ್ಚು ಸಮಯಬೇಕಾಯಿತು. ಶೈಕ್ಷಣಿಕವಾಗಿ ಹಿಂದುಳಿಯುವಿಕೆಗೆ ಭಾರತದ ವಿಭಜನೆ ಮತ್ತು ಪಾಕಿಸ್ಥಾನದ ನಿರ್ಮಾಣದ ಸಂದರ್ಭ ಆಳವಾದ ಪ್ರಭಾವ ಬೀರಿತು. ಭಾರತದ ವಿಭಜನೆಯಾದಾಗ ಶಿಕ್ಷಿತರು, ಮಧ್ಯಮ ವರ್ಗದವರು, ವೃತ್ತಿಪರರು, ಮತ್ತು ಸಮುದಾಯದ ಉನ್ನತ ವರ್ಗ ಪಾಕಿಸ್ತಾನಕ್ಕೆ ವಲಸೆಹೋಯಿತು. ಭಾರತದಲ್ಲಿ ಉಳಿದವರು ಕೇವಲ ಕುಶಲ ಕರ್ಮಿಗಳು, ಕೃಷಿಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಸಣ್ಣ ಹಿಡುವಳಿದಾರರು ಮತ್ತು ಅಸಂಖ್ಯಾತ ಅವಿದ್ಯಾವಂತರು ಮಾತ್ರ. ಭಾರತದ ವಿಭಜನೆ ಮುಸ್ಲಿಂ ಸಮುದಾಯದ ಶೈಕ್ಷಣಿಕ ಬುನಾದಿಯನ್ನು ಅಲ್ಲಾಡಿಸಿದ್ದು ಮಾತ್ರವಲ್ಲ ಇದರೊಂದಿಗೆ ಶಿಕ್ಷಿತರು, ಉತ್ತಮ ಉದ್ಯೋಗಸ್ಥರ ಮಾದರಿಗಳು ಕೂಡ ಮುಸ್ಲಿಮರಿಗೆ ಇಲ್ಲವಾಯಿತು.[೮] ಹಾಗಾಗಿ ಚಾರಿತ್ರಿಕ ಕಾಲಘಟ್ಟಗಳು ಮುಸ್ಲಿಮರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಿದವು. ಅದರೆ ಸ್ವಾತಂತ್ರ್ಯದ ನಂತರ ವಿವಿಧ ಸರ್ಕಾರಗಳುಸಮಿತಿಗಳು ಮತ್ತು ಆಯೋಗಗಳು ನೀಡಿದ ಶಿಫಾರಸ್ಸುಗಳನ್ನು ಆಧರಿಸಿ ಅನೇಕ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ. ಹಾಗಾಗಿ ಚರಿತ್ರೆಯ ಪ್ರಮಾದಗಳನ್ನು ಇಂದಿನ ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಯೊಂದಿಗೆ ತಳಕು ಹಾಕುವುದು ಸಮಂಜಸವಾಗುವುದಿಲ್ಲ.ಮುಸ್ಲಿಮರ ಶೈಕ್ಷಣಿಕ ಚಾರಿತ್ರಿಕ ಕಾರಣಗಳೊಂದಿಗೆ ಹಿಂದುಳಿಯುವಿಕೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಮುಂದಿಡಲಾಗುತ್ತಿದೆ.

### ೪.೪. ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆ: ಧಾರ್ಮಿಕ, ಸಾಂಸ್ಕೃತಿಕ ಅಡ್ಡಿಗಳು

ಮುಸ್ಲಿಮರ ಶೈಕ್ಷಣಿಕ ಹಿಂದುಳಿಯುವಿಕೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಡೆತಡೆಗಳೇ ಕಾರಣ ಎನ್ನುವುದು ಇಂದಿಗೂ ಚಾಲ್ತಿಯಲ್ಲಿರುವ ಜನಪ್ರಿಯವಾದ. ಇಸ್ಲಾಂ ಧರ್ಮವು ಧಾರ್ಮಿಕ ಶಿಕ್ಷಣಕ್ಕೆ ಅಧಿಕ ಒಲವು ತೋರಿಸುತ್ತದೆ. ಅದ್ದರಿಂದ ಇಸ್ಲಾಂ ಧರ್ಮದ ದೃಷ್ಟಿಕೋನವೇ ಮುಸ್ಲಿಮರಿಗೆ ಆಧುನಿಕ ಶಿಕ್ಷಣ ಪಡೆದುಕೊಳ್ಳಲು ಪ್ರಮುಖ ಅಡ್ಡಿ ಎನ್ನುವುದು ಮೊದಲನೆಯ ಪ್ರಮುಖವಾದ ವಾದವಾಗಿದೆ. ಆದ್ದರಿಂದಲೇ ಪೋಷಕರು ತಮ್ಮ ಮಕ್ಕಳನ್ನು ಧಾರ್ಮಿಕ ಶಿಕ್ಷಣ ಪಡೆದುಕೊಳ್ಳಲು ಕಳುಹಿಸುತ್ತಾರೆ, ಆ ಮೂಲಕ ತಮ್ಮ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳುತ್ತಾರೆ.[೯] ಎಂದು ಹೇಳಲಾಗುತ್ತದೆ. ಎರಡನೆಯದಾಗಿ, ಸಾಮಾನ್ಯವಾಗಿ ಮುಸ್ಲಿಂ ಸಮಾಜಗಳು ಮಹಿಳೆಯರಿಗೆ ಕೆಳ ದರ್ಜೆಯ ಸ್ಥಾನವನ್ನು ನೀಡಿದ್ದು, ಅವರನ್ನು ಶಿಕ್ಷಣಕ್ಕಾಗಲಿ ಅಥವಾ ಉದ್ಯೋಗಕ್ಕಾಗಲಿ ಮನೆಯ ಹೊರಗಡೆ ಕಳುಹಿಸುವುದಿಲ್ಲ ಎಂದು ಗ್ರಹಿಸಲಾಗುತ್ತದೆ. ಶೈಕ್ಷಣಿಕವಾಗಿ ಹಿಂದುಳಿಯಲು ಮುಸ್ಲಿಂ ಬಾಲಕ ಮತ್ತು ಬಾಲಕಿಯರನ್ನು ಸಮಾನವಾಗಿ ನೋಡದಿರುವುದೇ ಪ್ರಮುಖ ಕಾರಣವಾಗಿದೆ. ಎಲ್ಲಿಯವರೆಗೂ ಇಬ್ಬರನ್ನೂ ಸಮಾವಾಗಿ

ಕಾಣುವುದಿಲ್ಲವೋ ಅಲ್ಲಿಯವರೆಗೆ ಮುಸ್ಲಿಂ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದಿರುತ್ತದೆ. ಈ ಲಕ್ಷಣಗಳು ಸಮುದಾಯದಲ್ಲಿ ಬೇರು ಮಟ್ಟದವರೆಗೆ ಆಳವಾಗಿ ಬೇರೂರಿವೆ.[೧೦]

### ೪.೫. ಮುಸ್ಲಿಮರ ಕನಿಷ್ಟ ಶಿಕ್ಷಣ: ಸೈದ್ಧಾಂತಿಕ ಪರಿಕಲ್ಪನೆಗಳು

ಮುಸ್ಲಿಮರ ಕನಿಷ್ಟ ಶಿಕ್ಷಣ ಮಟ್ಟವನ್ನು ಹೊಂದಿರುವ ಬಗ್ಗೆ ಎರೆಡು ಸೈದ್ಧಾಂತಿಕ ವಾದಗಳು ಚರ್ಚೆಯಲ್ಲಿವೆ. ಒಂದನೆಯದಾಗಿ, ಧಾರ್ಮಿಕ ಪರಿಕಲ್ಪನೆಯ ಮೂಲ. ಇದುಧರ್ಮಶಾಸ್ತ್ರೀಯ ಊಹೆಗಳನ್ನು ಅವಲಂಬಿಸಿದೆ. ಈ ಊಹೆ ನಂಬುವ ಪ್ರಕಾರ ಒಂದು ಧರ್ಮವು ನಿರ್ದಿಷ್ಟ ನಂಬಿಕೆ, ಮೌಲ್ಯಗಳು, ಪದ್ಧತಿಗಳು, ನಡವಳಿಗಳು ಮತ್ತು ವರ್ತನೆಗಳನ್ನು ವ್ಯಕ್ತಿಯ ಜೀವನಕ್ಕೆ ನಿಗದಿಪಡಿಸುತ್ತದೆ. ಇವುಗಳನ್ನು ಅಂತರ್ಗತಗೊಳಿಸಿಕೊಂಡ ವ್ಯಕ್ತಿಯು ಗುಂಪಿನೊಂದಿಗೆ ಹಂಚಿಕೊಳ್ಳುತ್ತಾನೆ. ಈ ಸಂಗತಿಗಳ ನಿಗದೀಕರಣ ಒಂದು ಧರ್ಮ ದಿಂದ ಮತ್ತೊಂದು ಧರ್ಮಕ್ಕಿಂತ ಭಿನ್ನವಾಗಿರುತ್ತದೆ. ಧರ್ಮವು ತನ್ನ ಅನುಯಾಯಿಗಳ ಸಮಾಜೋ–ಆರ್ಥಿಕ ಜೀವನ ಮತ್ತು ಸಾಧನೆಗಳನ್ನು ನಿಯಂತ್ರಿಸುವ ಪ್ರಭಾವಿಸುವ, ನಿರ್ಧರಿಸುವ, ಸೀಮಿತಗೊಳಿಸುವ ಮತ್ತು ನಿರ್ದೇಶಿಸುವ ಕೆಲಸವನ್ನು ಮಾಡುತ್ತದೆ.[೧೧] ಭಾರತದ ಮಟ್ಟಿಗೆ ಹೇಳುವುದಾದರೆ, ಮುಸ್ಲಿಮರ ಶಿಕ್ಷಣವು ಧರ್ಮದೊಂದಿಗೆ ಅಂತರ್ಗತಗೊಂಡಿದೆ. ಇಸ್ಲಾಂ ಧರ್ಮವು ಮುಸ್ಲಿಮರ ಶಿಕ್ಷಣವನ್ನು ನಿರ್ಧರಿಸುತ್ತದೆ ಎಂದು ಮೊದಲು ಹೇಳಿದವನು ಹಂಟರ್.ಇವನ ವಾದವನ್ನು ಆಧರಿಸಿ ಬೇಗ್ ಹೇಳುವ ಪ್ರಕಾರ ಮುಸ್ಲಿಮರ ಗೊಡ್ಡು ಸಂಪ್ರದಾಯಗಳು ಹಾಗೂ ಅಲೌಕಿಕ ಸಂಗತಿಗಳು ಸಾಮಾಜಿಕ ಸುಧಾರಣೆ ಬರುವವರೆಗೂ ವೈಜ್ಞಾನಿಕ ಶಿಕ್ಷಣಕ್ಕೆ ವಿರುದ್ಧವಾಗಿತ್ತು.[೧೨] ಮುಸ್ಲಿಂ ಸಮುದಾಯದ ಆರ್ಥಿಕ ಅಡ್ಡಿಗಳು ಅವರ ಶಿಕ್ಷಣ ಪಡೆಯುವಿಕೆಗೆ ಬಾಗಶಃ ಅಡ್ಡಿಯಾಗಿವೆ. ಮುಸ್ಲಿಮರ ಧಾರ್ಮಿಕ ಪಠ್ಯಗಳು ಅವರಿಗೆ ಆಧುನಿಕ ಶಿಕ್ಷಣ ಪಡೆಯುವಲ್ಲಿ ಅಡ್ಡಿಯಾಗಿವೆ. ಹಾಗಾಗಿ ಸಾಮಾನ್ಯ ಶಾಲೆಗಳಲ್ಲಿ ಅವರ ಪ್ರಾತಿನಿಧ್ಯ ಕಷ್ಟವಾಗಿದೆ ಎಂದು ಶರ್ಮ ವಾದಿಸುತ್ತಾರೆ.[೧೩] ಈ ವಾದಗಳು ತೀವ್ರ ಟೀಕೆಗೆ ಒಳಗಾಗಿವೆ. ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಎಲ್ಲಾ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ ಎಂದು ವಾದಿಸಲಾಗುತ್ತಿದೆ. ಇಂದಿನ ಕಾಲಘಟ್ಟದಲ್ಲಿ ಮುಸ್ಲಿಂ ಮಕ್ಕಳ ಪ್ರಾತಿನಿಧ್ಯಸಾಮಾನ್ಯ ಶಾಲೆಗಳಲ್ಲಿ ಹೆಚ್ಚಾಗಿದ್ದು, ಮದರಸಾಗಳಲ್ಲಿ ಅವರ ಪ್ರಾತಿನಿಧ್ಯ ಶೇ.೩ ರಷ್ಟಿದೆ ಎಂಬುದನ್ನು ಸಾಚಾರ್ ವರದಿ ಬಹಿರಂಗಪಡಿಸಿದೆ.

### ೪.೬. ಇಸ್ಲಾಂ ದೃಷ್ಟಿಕೋನ ಮತ್ತು ಮುಸ್ಲಿಂ ಮಹಿಳಾ ಶಿಕ್ಷಣ

ಒಂದು ಧಾರ್ಮಿಕ ನೆಲೆಯಲ್ಲಿ ಇಸ್ಲಾಂ ಎಲ್ಲಾ ಕಡ್ಡಾಯ ಶಿಕ್ಷಣವನ್ನು ಬೋಧಿಸಿದೆ.[೧೪] ಕುರಾನ್‌ನ ಉಲ್ಲೇಖದ ಪ್ರಕಾರ ಮಹಮದ್ ಪೈಗಂಬರರು ಕಡ್ಡಾಯವಾಗಿ ಜ್ಞಾನ ಪಡೆಯುವಂತೆ

ಹಾಗೂ ಜ್ಞಾನಕ್ಕಾಗಿ ಎಷ್ಟೇ ದೂರವಾದರೂ ಪಯಣಿಸುವಂತೆ ಮುಸ್ಲಿಮರಿಗೆ ಉಪದೇಶ ನೀಡಿದ್ದಾರೆ.[೧೫] ಇಸ್ಲಾಂ ತನ್ನ ಅನುಯಾಯಿಗಳಿಗೆ ಜ್ಞಾನದಿಂದ ಸಬಲೀಕರಣಗೊಳ್ಳಲು ಪ್ರೇರೇಪಿಸುತ್ತದೆ ಮತ್ತು ಎಲ್ಲಾ ಜ್ಞಾನ ಶಾಖೆಗಳಿಂದ ಪ್ರಬಲಗೊಳ್ಳಲು ಉತ್ತೇಜಿಸುತ್ತದೆ.[೧೬] ಸಬಲೀಕರಣವನ್ನು ವಿವಿಧ ಆಯಾಮಗಳ ಮೂಲಕ ವ್ಯಾಖ್ಯಾನಿಸಲಾಗುತ್ತದೆ. ಒಬನ್ಯ[೧೭] ವ್ಯಾಖ್ಯಾನಿಸುವ ಪ್ರಕಾರ ಸಬಲೀಕರಣ ನಿರಂತರ ಹಾಗೂ ಜೀವಮಾನದುದ್ದಕ್ಕೂ ಕೈಗೊಳ್ಳುವ ಪ್ರಕ್ರಿಯೆಯಾಗಿದ್ದು, ನಿಗದಿಪಡಿಸಿರುವ ನಿರ್ದಿಷ್ಟ ಗುರಿ ಸಾಧಿಸಲು ನಿರಂತರವಾಗಿ ಕೈಗೊಳ್ಳುವ ಪ್ರಯತ್ನವಾಗಿದೆ. ದುಲಿಯೇಮಿ.ಎ.ಎನ್ ವ್ಯಾಖ್ಯಾನಿಸುವ ಪ್ರಕಾರ ಜನ ಅಥವಾ ಸಮುದಾಯಗಳು ತಮ್ಮ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಜೀವನವನ್ನು ನಿಯಂತ್ರಿಸಲು ಪಡೆದುಕೊಳ್ಳುವ ಶಕ್ತಿ ಮತ್ತು ಸಾಮರ್ಥ್ಯದ ಪ್ರಕ್ರಿಯೆಯಾಗಿದೆ[೧೮] ಕುರಾನ್ ಆಗಲಿ ಅಥವಾ ಹದೀಸ್ ಆಗಲಿ ಶಿಕ್ಷಣ ಪಡೆಯಲು ಮುಸ್ಲಿಮರಿಗೆ ಅಡ್ಡಿಪಡಿಸುವುದಿಲ್ಲ.[೧೯] ಇಸ್ಲಾಂ ದೃಷ್ಟಿಯಲ್ಲಿ ಶಿಕ್ಷಣವನ್ನು ಪಡೆಯುವುದು ಉತ್ತಮ ಕಾರ್ಯಗಳಲ್ಲೊಂದಾಗಿದೆ. ಇಸ್ಲಾಂ ಮಹಿಳಾ ಶಿಕ್ಷಣ ವಿರೋಧಿ ಎನ್ನವುದು ಒಂದು ತಪ್ಪು ಗ್ರಹಿಕೆಯಾಗಿದೆ. ಕುರಾನ್ ಮತ್ತು ಹದೀಸ್‌ಗಳಲ್ಲಿ ಪುರುಷ ಮತ್ತು ಮಹಿಳೆಯರು ಸಮಾನವಾಗಿ ಶಿಕ್ಷಣ ಪಡೆಯುವಂತೆ ಒತ್ತಾಯಿಸಲಾಗಿದೆ. ಮಹಿಳೆಯು ಶಿಕ್ಷಣದ ಮೂಲಕ ಜ್ಞಾನ ಮತ್ತು ನೈತಿಕ ಮಟ್ಟವನ್ನು ಎತ್ತರಿಸಿಕೊಂಡು ಅದನ್ನು ಸಮಾಜಕ್ಕೆ ವಿನಿಯೋಗ ಮಾಡಬೇಕೆಂದು ಹೇಳಿದೆ.[೨೦] ಇಸ್ಲಾಂ ದೃಷ್ಟಿಯಲ್ಲಿ ಪುರುಷ ಮತ್ತು ಮಹಿಳೆಯರು ಎಲ್ಲಾ ವಿಷಯದಲ್ಲಿ ಸಮಾನರಾಗಿದ್ದಾರೆ. ಇವರಿಬ್ಬರ ಮಧ್ಯೆ ಯಾವುದೇ ವ್ಯತ್ಯಾಸವಿಲ್ಲ. ಕುರಾನ್ ಲಿಂಗಾಧಾರಿತ ಶ್ರೇಣಿಯನ್ನು ಪುರಷ್ಕರಿಸುವುದಿಲ್ಲ.[೨೧] ಆರಂಭಿಕ ಇಸ್ಲಾಮಿಕ್ ದಿನಗಳಲ್ಲಿ ಪುರುಷ ಮತ್ತು ಮಹಿಳೆಯರಿಗೆ ಸಮಾನ ಶೈಕ್ಷಣಿಕ ಹಕ್ಕನ್ನು ನೀಡಲಾಗಿತ್ತು. ಆದರೆ ಅದು ಬಹಳ ದಿನ ಉಳಿಯಲಿಲ್ಲ. ಕೊನೆ ಕೊನೆಗೆ ಮಹಿಳೆಯರಿಗೆ ಶೈಕ್ಷಣಿಕ ಹಕ್ಕನ್ನು ನಿರಾಕರಿಸಲಾಯಿತು. ಅಂತಿಮವಾಗಿ ಮಹಿಳೆಯರನ್ನು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಲಾಯಿತು. ಮಹಿಳೆಗೆ ಕೇವಲ ಧಾರ್ಮಿಕ ಶಿಕ್ಷಣ ಸಾಕು ಎನ್ನುವ ತೀರ್ಮಾನಕ್ಕೆ ಬರಲಾಯಿತು. ಅವರನ್ನು ಮನೆಗೆ ಸೀಮಿತಗೊಳಿಸಿ, ಆಧುನಿಕ ಶಿಕ್ಷಣವನ್ನು ನಿರಾಕರಿಸಿ, ಆಧುನಿಕ ಶಿಕ್ಷಣವು ಸಂಪ್ರದಾಯ ವಿರೋಧಿ ಎಂದು ಬಿಂಬಿಸಲಾಯಿತು. ಅಂತಿಮವಾಗಿ ಇಸ್ಲಾಂ ಕೂಡ ಒಪ್ಪದ ಉಳಿಗಮಾನ್ಯ ಸಂಪ್ರದಾಯಗಳ ಮೂಲಕ ಮಹಿಳೆಗೆ ಶಿಕ್ಷಣವನ್ನು ನಿರಾಕರಿಸಿ, ಅವರನ್ನು ಕೃತಕ ಸಂಪ್ರದಾಯಗಳಿಗೆ ದೂಡಲಾಯಿತು.[೨೨] ಆದ್ದರಿಂದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆ, ಆಧುನಿಕ ಮನೋಭಾವದ ಕೊರತೆ ಮತ್ತು ಅವರಲ್ಲಿ ಮೌಲ್ಯಗಳ ಕೊರತೆಗೆ ಉಳಿಗಮಾನ್ಯ ವ್ಯವಸ್ಥೆಯ ಮನೋಭಾವನೆಯೇ ಕಾರಣವಾಗಿದೆ. ಧಾರ್ಮಿಕ ಕಂದಾಚಾರ, ಸಾಮಾಜಿಕ ಪೂರ್ವಗ್ರಹಗಳು ಇಸ್ಲಾಂ ಧರ್ಮದ ಕೊಡುಗೆಯಲ್ಲ. ಆದರೆ ಇಂದು ಇಸ್ಲಾಂನಲ್ಲಿರುವ ಮಹಿಳಾ ಮೌಲ್ಯಗಳನ್ನು

ವಾಸ್ತವಿಕವಾಗಿ ಪಾಲಿಸಲಾಗುತ್ತಿಲ್ಲ. ಇಸ್ಲಾಂನಲ್ಲಿ ಮಹಿಳೆಯರಿಗೆ ನೀಡಿರುವ ಸ್ಥಾನಕ್ಕೂ ಅವರು ಇಂದು ಅನುಭವಿಸುತ್ತಿರುವ ಸ್ಥಾನ–ಮಾನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಮುಸ್ಲಿಂ ಮಹಿಳೆಯರಲ್ಲಿ ಅನಕ್ಷರತೆ ವ್ಯಾಪಕವಾಗಿ ಬೆಳೆಯುತ್ತಿದೆ. ಇಂದಿಗೂ ಅದೇ ಸ್ಥಿತಿ ಮುಂದು ವರೆದಿದೆ. ಹಲವಾರು ಪ್ರಯತ್ನಗಳ ಮಧ್ಯೆಯೂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ.[೨೩] ಈ ಎಲ್ಲಾ ವಿವರಣೆಗಳು ಮುಸ್ಲಿಮರು ಏಕರೂಪಿ ಸಮುದಾಯವೆಂದು. ಒಂದು ಕಡೆ ಇಸ್ಲಾಂ ವ್ಯಕ್ತಿಯ ಕುಟುಂಬ ಸ್ವರೂಪ, ವಿಚ್ಛೇದನವನ್ನು ಮತ್ತು ಮತ್ತೊಂದೆಡೆ ಶಿಕ್ಷಣ, ಉದ್ಯೋಗ ಮತ್ತು ಬಡತನವನ್ನು ನಿಯಂತ್ರಿಸುವ ಮತ್ತು ಕಟ್ಟಳೆಗಳನ್ನು ವಿಧಿಸುವ ಧರ್ಮವೆಂದು ಪರಿಭಾವಿಸುವ ಪ್ರಜ್ಞೆಯನ್ನು ಮೂಡಿಸುತ್ತದೆ.[೨೪]

ವಿವಿಧ ವೈಜ್ಞಾನಿಕ ಮತ್ತು ವಿಶ್ಲೇಷಣಾತ್ಮಕ ಅಧ್ಯಯನಗಳು ನಿರೂಪಿಸಿರುವಂತೆ ಮುಸ್ಲಿಮರು ಬಹುರೂಪಿ ಸಮುದಾಯವಾಗಿದ್ದು, ಇತರೆ ಸಮುದಾಯಗಳಂತೆ ವರ್ಗ ಮತ್ತು ಜಾತಿ ಆಧಾರದಲ್ಲಿ ವಿಭಜಿಸಲ್ಪಟ್ಟಿದ್ದಾರೆ. ಬಹುತೇಕ ಪ್ರದೇಶಗಳಲ್ಲಿ ಮುಸ್ಲಿಮೇತರರ ಸಂಪ್ರದಾಯಗಳನ್ನೇ ಅನುಸರಿಸುತ್ತಿದ್ದಾರೆ.[೨೫] ಧರ್ಮಾಧಾರಿತ ಊಹಾತ್ಮಕ ಲಕ್ಷಣಗಳ ಆಧಾರಿತ ಪರಿಕಲ್ಪನೆಯ ಮತ್ತೊಂದು ವಾದವೆಂದರೆ, ಮುಸ್ಲಿಮರ ಕನಿಷ್ಟ ಶೈಕ್ಷಣಿಕ ಮಟ್ಟಕ್ಕೂ ಅವರ ಸಮಾಜೋ–ಆರ್ಥಿಕ ಸ್ಥಿತಿಗಳಿಗೂ ನೇರವಾದ ಸಂಬಂಧವಿದೆ. ವಿವಿಧ ಪ್ರದೇಶಗಳಲ್ಲಿರುವ ಮುಸ್ಲಿಮರ ಶೈಕ್ಷಣಿಕ ಸ್ಥಿತಿಗಳಲ್ಲಿರುವ ವ್ಯತ್ಯಾಸಗಳಿಗೆ ಅವರ ಸಮಾಜೋ–ಆರ್ಥಿಕ ಸ್ಥಿತಿಗಳೇ ಕಾರಣವಾಗಿದೆ. ಹಾಗಾಗಿ ಶಿಕ್ಷಣ ಎಲ್ಲಾ ಪ್ರದೇಶದ ಮುಸ್ಲಿಮರಿಗೆ ಸಮಾನವಾಗಿ ವಿತರಣೆಯಾಗಿಲ್ಲ.[೨೬] ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ, ಒಂದು ಸಮುದಾಯದ ಶೈಕ್ಷಣಿಕ ಮಟ್ಟವು ಆ ಸಮುದಾಯದಲ್ಲಿ ಶಿಕ್ಷಣ ಬಯಸುವವರ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಹಾಗಾಗಿ ಮುಸ್ಲಿಂ ಸಮುದಾಯದ ಶೈಕ್ಷಣಿಕ ಹಿಂದುಳಿಯುವಿಕೆಯನ್ನು ಸಮುದಾಯದ ಶಿಕ್ಷಣ ಅಪೇಕ್ಷಿತರ ಸಣ್ಣ ಸಂಖ್ಯೆಯ ನೆಲೆಯಲ್ಲಿ ನೋಡಬಹುದಾಗಿದೆ.[೨೭] ಈ ಉಹಾತ್ಮಕವಾದವನ್ನು ವ್ಯಾಪಕವಾಗಿ ಚರ್ಚಿಸಲಾಗುತ್ತಿದೆ. ಸ್ವಾತಂತ್ರ್ಯ ನಂತರ ವಿವಿಧ ಹಂತಗಳಲ್ಲಿ ಮತ್ತು ಅನೇಕ ಸಮುದಾಯಗಳ ನಡುವೆ ಶೈಕ್ಷಣಿಕ ಅವಕಾಶಗಳನ್ನು ವಿಸ್ತರಿಸಲಾಗಿದೆ.[೨೮] ಆದರೆ ಶಿಕ್ಷಣವು ಸಾರ್ವತ್ರಿಕವಾಗಿ ಮತ್ತು ಸಮಾನವಾಗಿ ವಿತರಣೆಯಾಗಿದೆಯೆ? ಎನ್ನುವ ಪ್ರಶ್ನೆ ಇನ್ನೂ ಜೀವಂತವಾಗಿದೆ.[೨೯] ಮುಸ್ಲಿಂ ಸಮುದಾಯದಲ್ಲಿ ಮಡುಗಟ್ಟಿರುವ ಸಮಾಜೋ–ಆರ್ಥಿಕ ಹಿಂದುಳಿಯುವಿಕೆಯು ಅವರನ್ನು ಶಿಕ್ಷಣಕ್ಕಾಗಿ ಒತ್ತಾಯಿಸುವಂತೆ ಪ್ರೇರೇಪಿಸಿಲ್ಲ[೩೦]ಎನ್ನುವರು. ಇಂದು ಚರ್ಚೆಯಲ್ಲಿರುವ ಪ್ರಮುಖ ವಾದವಾಗಿದೆ. ಇದು ಜಾಗತೀಕರಣದ ಯುಗವಾಗಿದ್ದು ಹಿಂದಿಗಿಂತ ಇಂದು ಶಿಕ್ಷಣದ ಮಹತ್ವ ಹೆಚ್ಚಾಗುತ್ತಿದೆ. ಮುಸ್ಲಿಂ ಸಮುದಾಯದಲ್ಲಿ ಮುಖ್ಯವಾಗಿ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣದ ಅಪೇಕ್ಷೆ ಹೆಚ್ಚಾಗುತ್ತಿದೆ. ಈ ಹಿನ್ನೆಲೆಯಲ್ಲಿ

ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ತಪ್ಪು ಗ್ರಹಿಕೆ ಇಂದಿಗೂ ಮುಸ್ಲಿಮರಲ್ಲಿ ಉಳಿದುಕೊಂಡಿದೆಯೇ ಎನ್ನುವುದನ್ನು ಕಂಡುಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗಿದೆ. ಕ್ಷೇತ್ರ ಅಧ್ಯಯನದ ಮೂಲಕ ಇಸ್ಲಾಂ ಮತ್ತು ಶಿಕ್ಷಣಕ್ಕಿರುವ ಸಂಬಂಧಗಳ ಬಗ್ಗೆ ಪೋಷಕರ ಅಭಿಪ್ರಾಯಗಳನ್ನು ಕಂಡುಕೊಳ್ಳಲಾಗಿದೆ.

### ೪.೭. ಮಹಿಳಾ ಶಿಕ್ಷಣಕ್ಕೆ ಇಸ್ಲಾಂ ಧರ್ಮದ ನಿರ್ಬಂಧ ಮತ್ತು ಪೋಷಕರ ಅರಿವು

ಕ್ಷೇತ್ರ ಅಧ್ಯಯನದ ದತ್ತಾಂಶಗಳ ಪ್ರಕಾರ ಕೋಷ್ಟಕ-೩೨ ರಲ್ಲಿ ಕಂಡುಬರುವಂತೆ ಬೆಳಗಾವಿ ನಗರದ ಒಟ್ಟು ಮುಸ್ಲಿಮರಲ್ಲಿ ಶೇ.೧೧.೧ ರಷ್ಟು ಪೋಷಕರು ಇಸ್ಲಾಂ ಧರ್ಮವು ಮಹಿಳೆಯರಿಗೆ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಒಟ್ಟು ಪೋಷಕರಲ್ಲಿ ಶೇ.೫೯ ರಷ್ಟು ಪೋಷಕರು ನಿರ್ಬಂಧಿಸಿಲ್ಲ ಎನ್ನುವ ಖಚಿತ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಕನಿಷ್ಠ ಸಂಖ್ಯೆಯ ಶೇ.೮.೫ ರಷ್ಟು ಪೋಷಕರು ಗೊತ್ತಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಶೇ.೭.೭ ರಷ್ಟು ಪೋಷಕರು ಇಸ್ಲಾಂ ಧರ್ಮವು ಮಹಿಳೆಯರಿಗೆ ಆಧುನಿಕ ಶಿಕ್ಷಣ ಪಡೆಯಲು ಮಾತ್ರ ನಿರ್ಬಂಧ ವಿಧಿಸಿದೆ ಎಂದು ಮತ್ತು ಶೇ.೧೩.೭ ರಷ್ಟು ಪೋಷಕರು ಮಹಿಳೆಯರಿಗೆ ಉನ್ನತ ಶಿಕ್ಷಣವನ್ನು ಮಾತ್ರ ನಿರ್ಬಂಧಿಸಿದೆ ಎಂದು ಅಭಿಪ್ರಾಯಪಡುತ್ತಾರೆ. ಡಾ. ಶಕೀಲ್ ಅಹಮದ್ ರವರ ಪೂನಾದ ಅಧ್ಯಯನ ಕಂಡುಕೊಂಡಿರುವಂತೆ ಕೇವಲ ಶೇ.೩೯ ರಷ್ಟು ಮುಸ್ಲಿಮರಿಗೆ ಮಾತ್ರ ಇಸ್ಲಾಂ ಧರ್ಮ ಮಹಿಳಾ ಶಿಕ್ಷಣವನ್ನು ನಿಷೇದಿಸಿಲ್ಲ ಎನ್ನುವ ಸಂಗತಿ ತಿಳಿದಿದೆ. ಪ್ರಸ್ತುತ ಅಧ್ಯಯನಕ್ಕೆ ಈ ಅಧ್ಯಯನವನ್ನು ಹೋಲಿಸಿದರೆ ಪೋಷಕರಲ್ಲಿರುವ ಧರ್ಮ ನಿಷೇಧದ ತಪ್ಪು ಗ್ರಹಿಕೆ ಕಡಿಮೆಯಾದಂತೆ ಕಂಡುಬರುತ್ತಿದೆ. ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಪೋಷಕರಿಗೆ ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣವನ್ನು ನಿಷೇಧಿಸಿಲ್ಲ ಎನ್ನುವ ಅರಿವು ಇದೆ. ಆದರೆ ಕಡಿಮೆ ಸಂಖ್ಯೆಯಷ್ಟು ಮುಸ್ಲಿಮರು ಮಾತ್ರ ಇಸ್ಲಾಂ ಧರ್ಮವು ಮಹಿಳೆಯರಿಗೆ ಆಧುನಿಕ ಮತ್ತು ಉನ್ನತ ಶಿಕ್ಷಣವನ್ನು ನಿಷೇಧಿಸಿದೆ ಎನ್ನುವ ತಪ್ಪು ಗ್ರಹಿಕೆಯಲ್ಲಿ ಉಳಿದುಕೊಂಡಿದ್ದಾರೆ. ಪೂನಾದ ಅಧ್ಯಯನಕ್ಕೆ ಹೋಲಿಸಿದರೆ ಮುಸ್ಲಿಂ ಪೋಷಕರಲ್ಲಿ ಧಾರ್ಮಿಕ ನಿರ್ಬಂಧದ ತಪ್ಪು ಗ್ರಹಿಕೆ ನಿಧಾನವಾಗಿ ದೂರವಾಗುತ್ತಿದೆ. ಇಂದಿನ ಸಾರ್ವತ್ರಿಕ ಶಿಕ್ಷಣದಿಂದಾಗಿ ಮುಸ್ಲಿಂ ಸಮುದಾಯದಲ್ಲೂ ಸಾಕ್ಷರತೆ ಪ್ರಮಾಣ ಹೆಚ್ಚಾಗುತ್ತಿದೆ. ಸಾಕ್ಷರತೆ ಪ್ರಮಾಣದ ಹೆಚ್ಚಳದಿಂದಾಗಿ ಕಂದಾಚಾರಗಳು, ಮೂಢನಂಬಿಕೆಗಳು ಮತ್ತು ಪೂರ್ವಗ್ರಹಗಳು ದೂರವಾಗುತ್ತವೆ ಎಂದು ಗ್ರಹಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ಗ್ರಹಿಕೆಯನ್ನು ಬೆಳಗಾವಿ ನಗರದ ಮುಸ್ಲಿಂ ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ವಿವಿಧ ಶೈಕ್ಷಣಿಕ ಮಟ್ಟವನ್ನು ಹೊಂದಿರುವ ಬೆಳಗಾವಿ ಮುಸ್ಲಿಮರ ಗ್ರಹಿಕೆಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೪.೮. ಶಿಕ್ಷಣದ ನೆಲೆಯಲ್ಲಿ ಇಸ್ಲಾಂ ಮತ್ತು ಶಿಕ್ಷಣದ ನಡುವಿನ ಸಂಬಂಧದ ಬಗ್ಗೆ ಪೋಷಕರ ಅರಿವು

ಕೋಷ್ಟಕ–೩೩ ರಲ್ಲಿ ಕಂಡುಬರುವಂತೆ ಕೇತ್ರ ಅಧ್ಯಯನದ ದತ್ತಾಂಶಗಳ ಪ್ರಕಾರ ಬೆಳಗಾವಿ ನಗರದಒಟ್ಟು ಅನಕ್ಷರಸ್ಥ ಮುಸ್ಲಿಮರಲ್ಲಿ ಶೇ.೬೯.೪ ರಷ್ಟು ಪೋಷಕರು ಇಸ್ಲಾಂ ಧರ್ಮ ಮಹಿಳೆಯರಿಗೆ ಶಿಕ್ಷಣವನ್ನು ನಿರ್ಬಂಧಿಸಿದೆ ಎಂದು, ಶೇ.೬.೧ ರಷ್ಟು ಪೋಷಕರು ನಿರ್ಬಂಧಿಸಿಲ್ಲವೆಂದು, ಶೇ.೧೬.೩ ರಷ್ಟು ಪೋಷಕರು ಗೊತ್ತಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಅದೇ ಪ್ರಕಾರ ಒಟ್ಟು ಅನಕ್ಷರಸ್ಥರಲ್ಲಿ ಶೇ.೬.೧ ರಷ್ಟು ಪೋಷಕರು ಆಧುನಿಕ ಶಿಕ್ಷಣದ ನಿರ್ಬಂಧವಿದೆಯೆಂದು, ಶೇ.೨.೧ ರಷ್ಟು ಉನ್ನತ ಶಿಕ್ಷಣಕ್ಕೆ ಮಾತ್ರ ನಿರ್ಬಂಧವಿದೆಯಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಪ್ರಾಥಮಿಕ ಶಿಕ್ಷಣ ಪಡೆದ ಒಟ್ಟು ಮುಸ್ಲಿಮರಲ್ಲಿ ಶೇ.೫೨ ರಷ್ಟು ಪೋಷಕರು ಇಸ್ಲಾಂ ಧರ್ಮ ಮಹಿಳೆಯರಿಗೆ ಶಿಕ್ಷಣವನ್ನು  ನಿರ್ಬಂಧ ವಿಧಿಸಿದೆಯಂದು, ಶೇ.೧೬ ರಷ್ಟು ಪೋಷಕರು ಇಲ್ಲಾ ಎಂದು, ಶೇ.೧೬ ರಷ್ಟು ಪೋಷಕರು ಗೊತ್ತಿಲ್ಲಾ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಶೇ.೮ ರಷ್ಟು ಪೋಷಕರು ಮಹಿಳೆಗೆ ಆಧುನಿಕ ಶಿಕ್ಷಣದ ನಿರ್ಬಂಧವಿದೆಯಂದು ಮತ್ತು ಉಳಿದ ಶೇ.೮ ರಷ್ಟು ಪೋಷಕರು ಇಸ್ಲಾಂ ಪ್ರಕಾರ ಮುಸ್ಲಿಂ ಮಹಿಳೆಗೆ ಉನ್ನತ ಶಿಕ್ಷಣಕ್ಕೆ ಮಾತ್ರ ಇದೆಯಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅದೇ ಪ್ರಕಾರ ಪ್ರೌಢ ಮತ್ತು ಪಿಯುಸಿ ಹಂತದ ಶಿಕ್ಷಣ ಪಡೆದ ಒಟ್ಟು ಮುಸ್ಲಿಂ ಪೋಷಕರಲ್ಲಿ ಶೇ.೩೩.೩ ರಷ್ಟು ಪೋಷಕರು ಇಸ್ಲಾಂ ಮಹಿಳಾ ಶಿಕ್ಷಣಕ್ಕೆ ನಿರ್ಬಂಧ ವಿಧಿಸಿದೆಯಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇ.೪೭.೬ ರಷ್ಟು ಪೋಷಕರು ನಿರ್ಬಂಧ ವಿಧಿಸಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಶೇ.೧೪.೩ ರಷ್ಟು ಪೋಷಕರು ಗೊತ್ತಿಲ್ಲವೆಂದು, ಶೇ.೪.೮ ರಷ್ಟು ಪೋಷಕರು ಉನ್ನತ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಬೆಳಗಾವಿ ನಗರದ ಪದವಿ ಹಂತದ ಶಿಕ್ಷಣ ಪಡೆದ ಒಟ್ಟು ಪೋಷಕರಲ್ಲಿ ಶೇ.೮೮.೨ ರಷ್ಟು ಪೋಷಕರು ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣಕ್ಕೆ ನಿರ್ಬಂಧ ವಿಧಿಸಿಲ್ಲ ಎನ್ನುವ ಖಚಿತ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಈ ಗುಂಪಿನಲ್ಲಿ ಶೇ.೧೧.೮ ರಷ್ಟು ಪೋಷಕರು ಗೊತ್ತಿಲ್ಲವೆಂಬ ಅಭಿಪ್ರಾಯ ವ್ಯಕಪಡಿಸುತ್ತಾರೆ. ಆದರೆ ಸ್ನಾತಕೋತ್ತರ ಪದವಿ ಪಡೆದ ಎಲ್ಲಾ ಪೋಷಕರು ಇಸ್ಲಾಂ ಧರ್ಮವು ಮಹಿಳೆಯರ ಶಿಕ್ಷಣಕ್ಕೆ ಯಾವುದೇ ನಿರ್ಬಂಧ ವಿಧಿಸಿಲ್ಲ ಎನ್ನುವ ಸ್ಪಷ್ಟ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಸ್ಪಷ್ಟಪಡಿಸುವಸಕಾರಾತ್ಮಕ ಅಂಶವೇನೆಂದರೆ ಬೆಳಗಾವಿ ನಗರದ ಬಹುಸಂಖ್ಯಾತ ಪೋಷಕರು ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣಕ್ಕೆ ಯವುದೇ ನಿರ್ಬಂಧ ವಿಧಿಸಿಲ್ಲ ಎನ್ನುವ ಸ್ಪಷ್ಟ ಅಭಿಪ್ರಾಯ ಹೊಂದಿದ್ದಾರೆ. ದತ್ತಾಂಶಗಳು ತೋರಿಸುವ ಮತ್ತೊಂದು ಸಕಾರಾತ್ಮಕ ಅಂಶವೇನೆಂದರೆ ಮುಸ್ಲಿಮರಲ್ಲಿ ಸಾಕ್ಷರತೆ ಪ್ರಮಾಣ

ಮತ್ತು ಶಿಕ್ಷಣದ ಮಟ್ಟ ಹೆಚ್ಚಾದಂತೆ ಇಸ್ಲಾಂ ಮತ್ತು ಶಿಕ್ಷಣದ ನಡುವಿನ ಸಂಬಂಧಗಳ ತಪ್ಪು ಗ್ರಹಿಕೆಗಳು ಮಾಯವಾಗುತ್ತಿವೆ. ಫಯಾಜ್ ಅಹಮದ್ ಭಟ್ಅಭಿಪ್ರಾಯ ಪಡುವಂತೆ ಇಸ್ಲಾಂ ಮಹಿಳಾ ಶಿಕ್ಷಣ ವಿರೋಧಿ ಎನ್ನುವುದು ಕೇವಲ ತಪ್ಪು ಗ್ರಹಿಕೆಯಾಗಿದೆ. ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆಗೆ ಅವರಲ್ಲಿನ ಆಧುನಿಕ ಮನೋಭಾವದ ಕೊರತೆ ಕಾರಣವಾಗಿದೆ.[೨೦] ಡಾ.ಶಕೀಲ್ ಅಹಮದ್೩೨ರವರ ಅಧ್ಯಯನ ಹೇಳುವಂತೆ ಜಮ್ಮು ಕಾಶ್ಮೀರದ ಶೇ.೩೯ ರಷ್ಟು ಮಹಿಳೆಯರಿಗೆ ಮಾತ್ರ ಇಸ್ಲಾಂ ಧರ್ಮವು ಮಹಿಳೆಯರಿಗೆ ಶಿಕ್ಷಣವನ್ನು ನಿಷೇಧಿಸಿಲ್ಲ ಎನ್ನುವ ಸಂಗತಿ ತಿಳಿದಿದೆ. ಉಳಿದ ಬಹು ಸಂಖ್ಯಾತ ಮಹಿಳೆಯರಿಗೆ ಈ ಸಂಗತಿಯ ಅರಿವು ಇಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತತ ಅಧ್ಯಯನವು ಫಯಾಜ್ ಅಹಮದ್ ಭಟ್ ಮತ್ತು ಡಾ. ಶಕೀಲ್ ಅಹಮದ್ ಅವರ ಅಧ್ಯಯನವನ್ನು ಬೆಂಬಲಿಸುತ್ತದೆ. ವಿವಿಧ ಅಧ್ಯಯನಗಳ ಫಲಿತಗಳು ಮತ್ತು ಪ್ರಸ್ತುತ ಅಧ್ಯಯನವು ಕಂಡುಕೊಂಡಿರುವಂತೆ ಇಸ್ಲಾಂ ಧರ್ಮ, ಆಚರಣೆಗಳು ಮತ್ತು ಸಂಪ್ರದಾಯಗಳು ಮುಸ್ಲಿಮರ ಶಿಕ್ಷಣವನ್ನು ಪ್ರಭಾವಿಸುತ್ತಿಲ್ಲ. ಇತ್ತೀಚಿನ ಅಧ್ಯಯನಗಳು ಮಂಡಿಸುತ್ತಿರುವ ವಾದಗಳ ಪ್ರಕಾರ ಧಾರ್ಮಿಕ ಸಂಗತಿಗಳ ಹೊರತಾಗಿ ಇತರೆ ಅಂಶಗಳು ಮುಸ್ಲಿಮರ ಶಿಕ್ಷಣವನ್ನು ಪ್ರಭಾವಿಸುತ್ತಿವೆ. ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಪ್ರಭಾವಿಸುತ್ತಿರುವ ಅಂಶಗಳನ್ನು ಕ್ಷೇತ್ರ ಅಧ್ಯಯನದಿಂದ ಕಂಡುಕೊಳ್ಳಲಾಗಿದ್ದು, ಅವುಗಳನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

### ೪.೯. ಮುಸ್ಲಿಂ ಮಹಿಳೆಯರ ಶಿಕ್ಷಣದ ಮೇಲೆ ಕುಟುಂಬದ ಮುಖ್ಯಸ್ಥನ ಶಿಕ್ಷಣದ ಪ್ರಭಾವ

ಕುಟುಂಬದ ಮುಖ್ಯಸ್ಥನು ಶಿಕ್ಷಣ ಪಡೆದರೆ ಅದು ಅವನ ಮಕ್ಕಳಿಗೆ ಸ್ಪೂರ್ತಿಯನ್ನು ನೀಡುತ್ತದೆ. ಕುಟುಂಬದ ಮುಖ್ಯಸ್ಥನ ಶಿಕ್ಷಣವು ಮಕ್ಕಳನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರಭಾವ ಬೀರುತ್ತದೆ. ಮೊದಲ ತಲೆಮಾರಿನ ಮುಖ್ಯಸ್ಥನು ಶಿಕ್ಷಣವನ್ನು ಪಡೆದರೆ, ಅವನು ಅದರ ಪ್ರಯೋಜನವನ್ನು ಪಡೆಯುವುದು ಪ್ರತ್ಯಕ್ಷ ಲಾಭವಾದರೆ, ಕುಟುಂಬ ಸದಸ್ಯನಿಂದ ಪ್ರಭಾವಿತರಾಗಿ ಪ್ರಯೋಜನ ಪಡೆಯುವುದು ಪರೋಕ್ಷವಾದ ಲಾಭವಾಗಿದೆ. ಅಂತಿಮವಾಗಿ ಈ ಪ್ರಕಿಯೆಯು ಮಗುವಿನ ಶೈಕ್ಷಣಿಕ ಮಟ್ಟವನ್ನು ಉತ್ತಮಪಡಿಸುತ್ತದೆ ಎಂದು ವಾದಿಸಲಾಗುತ್ತಿದೆ. ಕ್ಷೇತ್ರ ಅಧ್ಯಯದ ಮೂಲಕ ವಿವಿಧ ಶಾಲೆಗಳು ಮತ್ತು ವಿವಿಧ ಶೈಕ್ಷಣಿಕ ಮಟ್ಟದ ಕುಟುಂಬಗಳಲ್ಲಿ ಪ್ರಾಥಮಿಕ ಶಾಲೆಯ ನಂತರ ಮುಂದಿನ ಹಂತಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರ ಪ್ರಮಾಣವನ್ನು ಕಂಡುಕೊಳ್ಳಲಾಗಿದೆ. ಕೋಷ್ಟಕ-೩೪ ರಲ್ಲಿ ಕಂಡುಬರುವಂತೆ ಒಟ್ಟು ನಮೂನೆಯಲ್ಲಿ ೬೮ ಮುಸ್ಲಿಂ ಬಾಲಕಿಯರು ಪ್ರಾಥಮಿಕ ಶಿಕ್ಷಣದ ನಂತರ ವಿವಿಧ ವರ್ಗಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಅನಕ್ಷರಸ್ಥ ಕುಟುಂಬಗಳಿಗೆ ಸೇರಿದ ೧೯ ಬಾಲಕಿಯರಲ್ಲಿ ಶೇ.೬೬.೭ ರಷ್ಟು ಬಾಲಕಿಯರು ಮತ್ತು

ಶೇ.೩೩.೩ ರಷ್ಟು ಬಾಲಕಿಯರು ಕ್ರಮವಾಗಿ ಪಿಯುಸಿ ಮತ್ತು ಪದವಿ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು, ತಾಂತ್ರಿಕ ಮತ್ತು ಸ್ನಾತಕ ತರಗತಿಗಳಲ್ಲಿ ಓದುವ ಬಾಲಕಿಯರು ಕಂಡುಬರುವುದಿಲ್ಲ. ಪ್ರಾಥಮಿಕ ಹಂತದ ಶಿಕ್ಷಣ ಪಡೆದ ಕುಟುಂಬಗಳ ೧೨ ಬಾಲಕಿಯರಲ್ಲಿ ಶೇ.೫೮.೩ ರಷ್ಟು ಪಿಯುಸಿ, ಶೇ.೩೩.೪ ರಷ್ಟು ಪದವಿ ತರಗತಿಗಳಲ್ಲಿ ಮತ್ತು ಶೇ.೮.೩ ರಷ್ಟು ಬಾಲಕಿಯರು ತಾಂತ್ರಿಕ ಶಿಕ್ಷಣವನ್ನು ಪಡೆಯುತ್ತಿದ್ದು, ಸ್ನಾತಕ ಪದವಿ ಓದುವ ಬಾಲಕಿಯರು ಕಂಡುಬರುವುದಿಲ್ಲ.

ಪ್ರೌಢ ಶಿಕ್ಷಣ ಪಡೆದ ಕುಟುಂಬಗಳ ೧೫ ಬಾಲಕಿಯರಲ್ಲಿ ಶೇ.೫೩.೩ ರಷ್ಟು ಪಿಯುಸಿ, ಶೇ.೨೬.೭ ರಷ್ಟು ಪದವಿ ತರಗತಿಗಳಲ್ಲಿ, ಶೇ.೧೩.೩ ರಷ್ಟು ತಾಂತ್ರಿಕ ಶಿಕ್ಷಣದಲ್ಲಿ ಮತ್ತು ಶೇ.೬.೭ ರಷ್ಟು ಸ್ನಾತಕ ಪದವಿಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಪದವಿ ಹಂತದ ಶಿಕ್ಷಣ ಪಡೆದ ಕುಟುಂಬಗಳ ೨೩ ಬಾಲಕಿಯರಲ್ಲಿ ಶೇ.೩೪.೮ ರಷ್ಟು ಪಿಯುಸಿ, ಶೇ.೩೪.೮ ರಷ್ಟು ಪದವಿ, ಶೇ.೨೧.೭ ರಷ್ಟು ತಾಂತ್ರಿಕ ಶಿಕ್ಷಣ ಮತ್ತು ಶೇ.೮.೭ ರಷ್ಟು ಬಾಲಕಿಯರು ಸ್ನಾತಕ ಪದವಿಗಳನ್ನು ಪಡೆಯುತ್ತಿದ್ದಾರೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಸ್ನಾತಕೋತ್ತರ ಪದವಿ ಪಡೆದ ಕುಟುಂಬಗಳ ೯ ಬಾಲಕಿಯರಲ್ಲಿಶೇ.೧೧.೧ ರಷ್ಟು ಪಿಯುಸಿ, ಶೇ.೧೧.೧ ರಷ್ಟು ಪದವಿ, ಶೇ.೪೪.೫ ರಷ್ಟು ತಾಂತ್ರಿಕ ಶಿಕ್ಷಣ ಮತ್ತು ಶೇ.೩೩.೩ ರಷ್ಟು ಬಾಲಕಿಯರು ಸ್ನಾತಕ ಪದವಿ ಪಡೆಯುತ್ತಿರುವುದು ಕಂಡುಬರುತ್ತದೆ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಅನಕ್ಷರಸ್ಥ ಮತ್ತು ಪ್ರಾಥಮಿಕ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಬಾಲಕಿಯರು ಕಂಡುಬರುವುದಿಲ್ಲ. ಆದರೆ ಪ್ರೌಢ ಶಿಕ್ಷಣದಿಂದ ಸ್ನಾತಕೋತ್ತರ ಪದವಿ ಪಡೆದ ಕುಟುಂಬಗಳಲ್ಲಿ ಉನ್ನತ ಹಂತದ ತಾಂತ್ರಿಕ ಮತ್ತು ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಬಾಲಕಿಯರು ಕಂಡುಬರುತ್ತಾರೆ. ಬೆಳಗಾವಿ ನಗರದ ಕನಿಷ್ಠ ಶಿಕ್ಷಣ ಪಡೆದ ಮುಸ್ಲಿಂ ಕುಟುಂಬಗಳಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ಬಾಲಕಿಯರ ಸಂಖ್ಯೆ ಕಡಿಮೆ ಇದ್ದು, ಉನ್ನತ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಉನ್ನತ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರು ಹೆಚ್ಚಾಗಿ ಕಂಡುಬರುತ್ತಾರೆ. ದತ್ತಾಂಶಗಳು ಹೇಳುವ ಪ್ರಕಾರ ಕುಟುಂಬಗಳ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಉನ್ನತ ವ್ಯಾಸಾಂಗದಲ್ಲಿ ತೊಡಗಿರುವ ಬಾಲಕಿಯರ ಪ್ರಮಾಣ ಹೆಚ್ಚಾಗುತ್ತಿದೆ. ಉನ್ನತ ವ್ಯಾಸಾಂಗದಲ್ಲಿ ತೊಡಗಿರುವ ಬಾಲಕಿಯರು ಪೋಷಕರ ಶಿಕ್ಷಣದಿಂದ ಪ್ರಭಾವಿತರಾಗಿದ್ದಾರೆಯೇ ಎಂಬುದನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು. ಅದರ ವಿಶ್ಲೇಷಣೆಯನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

### ೪.೧೦. ಮುಸ್ಲಿಂ ಬಾಲಕಿಯರ ಶಿಕ್ಷಣ ಮತ್ತು ಕುಟುಂಬದ ಮುಖ್ಯಸ್ಥನ ಸ್ಫೂರ್ತಿ

ಹಿಂದಿನ ಭಾಗದಲ್ಲಿ ಚರ್ಚಿಸಿರುವಂತೆ ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳಲ್ಲಿ ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಆ ಕುಟುಂಬಗಳಲ್ಲಿ ಪ್ರಾಥಮಿಕ ಶಿಕ್ಷಣದ ನಂತರ

ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಬಾಲಕಿಯರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಮುಸ್ಲಿಂ ಬಾಲಕಿಯರು ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡಲು ಸ್ಫೂರ್ತಿ ಯಾರಿಂದ ಪಡೆಯುತ್ತಿದ್ದಾರೆ ಎಂಬುದನ್ನು ಕಂಡುಕೊಳ್ಳುವುದು ಮುಖ್ಯವಾಗುತ್ತದೆ. ಇದರ ಚರ್ಚೆಯನ್ನು ಈ ಭಾಗದಲ್ಲಿ ಮಂಡಿಸಲಾಗಿದೆ. ಕೋಷ್ಟಕ-೩೫ ರಲ್ಲಿ ಕಂಡುಬರುವಂತೆ ಅನಕ್ಷರಸ್ಥ ಕುಟುಂಬಗಳಲ್ಲಿ ಶೇ.೨೨.೩ ರಷ್ಟು ಬಾಲಕಿಯರು ತಂದೆಯಿಂದ, ಶೇ.೪೪.೪ ರಷ್ಟು ಬಾಲಕಿಯರು ತಾಯಿಯಿಂದ ಮತ್ತು ಶೇ.೩೩.೩ ರಷ್ಟು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಪ್ರಾಥಮಿಕ ಶಿಕ್ಷಣ ಪಡೆದ ಪೋಷಕರ ಕುಟುಂಬಗಳಲ್ಲಿ ಶೇ.೫೮.೩ ರಷ್ಟು ಬಾಲಕಿಯರು ತಂದೆಯಿಂದ, ಶೇ.೧೬.೭ ರಷ್ಟು ತಾಯಿಯಿಂದ, ಶೇ.೨೫ ರಷ್ಟು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಅದೇ ಪ್ರಕಾರ ಪ್ರೌಢ ಶಿಕ್ಷಣ ಪಡೆದ ಪೋಷಕರ ಕುಟುಂಬಗಳಲ್ಲಿ ಶೇ.೮೩.೪ ರಷ್ಟು ಬಾಲಕಿಯರು ತಂದೆಯಿಂದ, ಶೇ.೮.೩ ರಷ್ಟು ತಾಯಿಯಿಂದ ಮತ್ತು ಶೇ.೮.೩ ರಷ್ಟು ಶಿಕ್ಷಕರಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ. ಪದವಿ ಹಂತದ ಶಿಕ್ಷಣ ಪಡೆದ ಕುಟುಂಬದಲ್ಲಿ ಶೇ.೭೨ ರಷ್ಟು ಬಾಲಕಿಯರು ತಂದೆಯಿಂದ, ಶೇ.೧೨ ರಷ್ಟು ತಾಯಿಯಿಂದ ಮತ್ತು ಶೇ.೧೬ ರಷ್ಟು ಶಿಕ್ಷಕರಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ. ಸ್ನಾತಕೋತ್ತರ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಶೇ.೭೦ ರಷ್ಟು ತಂದೆಯಿಂದ, ಶೇ.೩೦ ರಷ್ಟು ತಾಯಿಯಿಂದ ತಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ಸ್ಫೂರ್ತಿ ಪಡೆದಿದ್ದಾರೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಹೇಳುವ ಪ್ರಕಾರ ಒಟ್ಟು ಬಾಲಕಿಯರಲ್ಲಿ ಶೇ.೬೪.೭ ರಷ್ಟು ಬಾಲಕಿಯರು ತಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ತಂದೆಯಿಂದಲೇ ಸ್ಫೂರ್ತಿ ಪಡೆಯುತ್ತಾರೆ. ಶೇ.೧೯.೧ ರಷ್ಟು ತಾಯಿಯಿಂದ ಸ್ಫೂರ್ತಿ ಪಡೆಯುತ್ತಾರೆ ಮತ್ತು ಉಳಿದಂತೆ ಶೇ.೧೬.೨ ರಷ್ಟು ಬಾಲಕಿಯರು ಶಿಕ್ಷಕರಿಂದ ತಮ್ಮ ವಿದ್ಯಾಭ್ಯಾಸಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಅಂದರೆ ಬೆಳಗಾವಿ ನಗರದ ಬಹುತೇಕ ಬಾಲಕಿಯರಿಗೆ ತಮ್ಮ ಉನ್ನತ ವಿದ್ಯಾಭ್ಯಾಸಕ್ಕೆ ತಂದೆಯ ಶಿಕ್ಷಣದ ಮಟ್ಟವೇ ಸ್ಫೂರ್ತಿಯಾಗಿದೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಹೇಳುವ ಮತ್ತೊಂದು ಅಸಕ್ತಿಕರ ಸಂಗತಿಯಂದರೆ ಅನಕ್ಷರಸ್ಥ ಮತ್ತು ಪ್ರಾಥಮಿಕ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಪೋಷಕರ ಶಿಕ್ಷಣದ ಮಟ್ಟ ಉತ್ತಮವಾಗಿಲ್ಲ ವಾದ್ದರಿಂದ ಈ ಕುಟುಂಬದ ಬಾಲಕಿಯರು ಹೆಚ್ಚಾಗಿ ತಮ್ಮ ತಾಯಿ ಮತ್ತು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಿದ್ದಾರೆ. ಆದರೆ ಪ್ರೌಢಶಿಕ್ಷಣ, ಪದವಿ ಶಿಕ್ಷಣ ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದ ಕುಟುಂಬಗಳಲ್ಲಿ ತಂದೆಯ ಶಿಕ್ಷಣದ ಉತ್ತಮವಾಗಿರುವುದರಿಂದ ತಂದೆಯೇ ಮುಸ್ಲಿಂ ಬಾಲಕಿಯರ ಶಿಕ್ಷಣಕ್ಕೆ ಸ್ಫೂರ್ತಿಯಾಗಿದ್ದಾರೆ. ಒಟ್ಟಾರೆ ದತ್ತಾಂಶಗಳು ಹೇಳುವ ಪ್ರಕಾರ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ಉನ್ನತ ವ್ಯಾಸಾಂಗ ಪಡೆಯಲು ತಂದೆಯ ಶಿಕ್ಷಣವೇ ಪ್ರಮುಖ ಪ್ರಭಾವದ ಅಂಶವಾಗಿದೆ. ಶಕೀಲ್ ಅಹಮದ್[೩೩] ರವರ ಕಾಶ್ಮೀರ ಅಧ್ಯಯನದಲ್ಲಿ ಶೇ.೯೬ ರಷ್ಟು ತಂದೆ ತಾಯಿಯರು ಮಕ್ಕಳ

ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವುದು ಕಂಡುಬಂದಿದೆ. ಸಬಿಹಾ ಹುಸೆನ್[೩೪] ರವರ ಉತ್ತರ ಬಿಹಾರದ ಅಧ್ಯಯನ ಕಂಡುಕೊಂಡಿರುವಂತೆ ಬಹುತೇಕ ಪೋಷಕರು ತಮ್ಮ ಮಕ್ಕಳ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಅದೇ ಪ್ರಕಾರ ಸೈಯದ್ ಮೆಹದಿ ಹುಸೇನ್[೩೫] ರವರ ಹೈದ್ರಾಬಾದ್ ಅಧ್ಯಯನವು ಕೂಡ ಈ ಸಂಗತಿಯನ್ನು ಬೆಂಬಲಿಸುತ್ತದೆ. ಹಾಗೆ ಹಫಿಜ್ ಅಬ್ದುಲ್ ಮಹೂದ್[೩೬] ರವರ ಉತ್ತರ ಪ್ರದೇಶದ ಅಜಂಗಡದ ಅಧ್ಯಯನ ಕಂಡುಕೊಂಡಿರುವಂತೆ ಬಹುತೇಕ ಮುಸ್ಲಿಂ ಪೋಷಕರು ತಮ್ಮ ಮಕ್ಕಳ ವಿದ್ಯಾಬ್ಯಾಸವನ್ನು ಪ್ರೋತ್ಸಾಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಶಕೀಲ್ ಅಹಮದ್, ಸಬಿಹಾ ಹುಸೆನ್, ಸೈಯದ್ ಮೆಹದಿ ಹುಸೇನ್, ಹಫಿಜ್ ಅಬ್ದುಲ್ ಮಹೂದ್ ಇವರ ಅಧ್ಯಯನಗಳನ್ನು ಬೆಂಬಲಿಸುತ್ತದೆ. ಆದರೆ ಸೆಹರತುನ್ನಿಸಾ[೩೭] ಅವರ ಮಣಿಪುರದ ಅಧ್ಯಯನದಲ್ಲಿ ಬಹುತೇಕ ಮುಸ್ಲಿಂ ಪೋಷಕರು ಹೆಣ್ಣು ಮಕ್ಕಳ ಉನ್ನತ ವಿದ್ಯಾಬ್ಯಾಸವನ್ನು ಬೆಂಬಲಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಸೆಹರತುನ್ ನಿಶಾ ಅವರ ಅಧ್ಯಯನವನ್ನು ಬೆಂಬಲಿಸುವುದಿಲ್ಲ. ವಿವಿಧ ಅಧ್ಯಯನಗಳು ಕಂಡುಕೊಡಿರುವಂತೆ ಮುಸ್ಲಿಂ ಸಮುದಾಯದಲ್ಲಿ ಕುಟುಂಬದ ಮುಖ್ಯಸ್ಥನ ವೃತ್ತಿ ಮಕ್ಕಳ ಶಿಕ್ಷಣವನ್ನು ಪ್ರಭಾವಿಸುತ್ತದೆ. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ಪೋಷಕರ ವೃತ್ತಿಯು ಪ್ರಭಾವಿಸುತ್ತಿದೆಯೆ ಎಂಬುದನ್ನು ಕಂಡುಕೊಳ್ಳಲಾಗಿದೆ.

## ೪.೧೧. ಕುಟುಂಬದ ಮುಖ್ಯಸ್ಥನ ವೃತ್ತಿ ಮತ್ತು ಮುಸ್ಲಿಂ ಮಹಿಳೆಯರ ಶಿಕ್ಷಣ

ಕುಟುಂಬದ ಮುಖ್ಯಸ್ಥನ ಶಿಕ್ಷಣದಂತೆಯೇ ಅವನ ವೃತ್ತಿಯೂ ಮಕ್ಕಳ ಶಿಕ್ಷಣವನ್ನು ಪ್ರಭಾವಿಸುತ್ತದೆ. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಈ ಬೆಳವಣಿಗೆ ಕಂಡುಬರುತ್ತಿರುವುದನ್ನು ವಿವಿಧ ಅಧ್ಯಯನಗಳು ಸಾಬೀತುಮಾಡಿವೆ. ಅಧ್ಯಯನಗಳ ಈ ವಾದವು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳಲ್ಲಿ ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು,ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳು ಐದು ವೃತ್ತಿಗಳನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ಕೂಲಿ ಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಸ್ವಯಂ ಉದ್ಯೋಗ, ಖಾಸಗಿ ಉದ್ಯೋಗ ಮತ್ತು ಸರ್ಕಾರಿ ಉದ್ಯೋಗ ಮುಖ್ಯವಾದವುಗಳು. ಅವುಗಳಲ್ಲಿ ಶೇ.೨೯ ರಷ್ಟು ಕೂಲಿ ಕಾರ್ಮಿಕರು, ಶೇ.೯.೪ ರಷ್ಟು ಸಣ್ಣ ವ್ಯಾಪಾರಿಗಳು, ಶೇ.೧೯ ರಷ್ಟು ಸ್ವಯಂ ಉದ್ಯೋಗದಲ್ಲಿ ನಿರತರಾಗಿರುವವರು,ಶೇ.೩೫ ರಷ್ಟು ಖಾಸಗಿ ವ್ಯಾಪಾರಿಗಳು ಮತ್ತು ಶೇ.೭.೬ ರಷ್ಟು ಸರ್ಕಾರಿ ಉದ್ಯೋಗಿಗಳು ಕಂಡುಬರುತ್ತಾರೆ. ಈ ಎಲ್ಲಾ ವೃತ್ತಿವಾರು ಮುಸ್ಲಿಂ ಕುಟುಂಬಗಳಲ್ಲಿ ಒಟ್ಟು ೬೮ ಬಾಲಕಿಯರು ಪ್ರಾಥಮಿಕ ಶಿಕ್ಷಣದ ನಂತರದ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ೩೬ ನೇ ಕೋಷ್ಟಕದಲ್ಲಿ ಕಂಡುಬರುವಂತೆ, ಬೆಳಗಾವಿ

ನಗರದ ಒಟ್ಟು ಕೂಲಿ ಕಾರ್ಮಿಕರ ಕುಟುಂಬಗಳಿಗೆ ಸೇರಿದಶೇ.೪.೪ ರಷ್ಟು ಬಾಲಕಿಯರಲ್ಲಿ ಶೇ.೩ ರಷ್ಟು ಪಿಯುಸಿ, ಶೇ.೧.೪ ರಷ್ಟು ಪದವಿ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು ತಾಂತ್ರಿಕ ಮತ್ತು ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುವ ಬಾಲಕಿಯರು ಕಂಡುಬರುವುದಿಲ್ಲ. ಸಣ್ಣ ವ್ಯಾಪಾರಿಗಳ ಕುಟುಂಬಗಳಲ್ಲಿ ಒಟ್ಟು ಶೇ.೮.೮ ರಷ್ಟು ಬಾಲಕಿಯರು ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು ಅವರಲ್ಲಿ ಶೇ.೪.೪ ರಷ್ಟು ಪಿಯುಸಿ, ಶೇ.೩ ರಷ್ಟು ಪದವಿ ತರಗತಿಗಳಲ್ಲಿ, ಶೇ.೧.೪ ರಷ್ಟು ತಾಂತ್ರಿಕ ಶಿಕ್ಷಣದಲ್ಲಿ ವ್ಯಾಸಾಂಗ ಮಾಡುತ್ತಿದ್ದು ಈ ಕುಟುಂಬಗಳಲ್ಲಿ ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುವವರು ಕಂಡುಬರುವುದಿಲ್ಲ. ಸ್ವಯಂ ಉದ್ಯೋಗದಲ್ಲಿ ನಿರತರಾಗಿರುವ ಕುಟುಂಬಗಳಲ್ಲಿ ಒಟ್ಟು ಶೇ.೨೦.೬ ರಷ್ಟು ಬಾಲಕಿಯರು ವಿವಿಧ ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಅವರಲ್ಲಿ ಶೇ.೭.೪ ರಷ್ಟು ಪಿಯುಸಿ, ಶೇ.೭.೪ ರಷ್ಟು ಪದವಿ, ಶೇ.೪.೪ ರಷ್ಟು ತಾಂತ್ರಿಕ ಮತ್ತು ಶೇ.೧.೪ ರಷ್ಟು ಬಾಲಕಿಯರು ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವುದು ಕಂಡುಬರುತ್ತದೆ. ಖಾಸಗಿ ಉದ್ಯೋಗ ನಿರತ ಕುಟುಂಬಗಳಲ್ಲಿ ಒಟ್ಟು ಶೇ.೩೮.೨ ರಷ್ಟು ಬಾಲಕಿಯರು ವಿವಿಧ ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು ಅವರಲ್ಲಿ ಶೇ.೨೨ ರಷ್ಟು ಪಿಯುಸಿ, ಶೇ.೪.೪ ರಷ್ಟು ಪದವಿ, ಶೇ.೮.೮ ರಷ್ಟು ತಾಂತ್ರಿಕ ಮತ್ತು ಶೇ.೩ ರಷ್ಟು ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವುದು ಕಂಡುಬರುತ್ತದೆ. ಸರ್ಕಾರಿ ಉದ್ಯೋಗದಲ್ಲಿ ನಿರತರಾಗಿರುವ ಕುಟುಂಬಗಳಲ್ಲಿ ಒಟ್ಟು ಶೇ.೨೮ ರಷ್ಟು ಬಾಲಕಿಯರು ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವು ಕಂಡುಬರುತ್ತದೆ. ಅವರಲ್ಲಿ ಶೇ.೭.೪ ರಷ್ಟು ಪಿಯುಸಿ, ಶೇ.೧೩.೨ ರಷ್ಟು ಪದವಿ, ಶೇ.೩ ರಷ್ಟು ತಾಂತ್ರಿಕ ಮತ್ತು ಶೇ.೪.೪ ರಷ್ಟು ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಬೆಳಗಾವಿ ನಗರದ ಮುಸ್ಲಿಮರಲ್ಲಿ ಕಡಿಮೆ ಆದಾಯದ ಮತ್ತು ಭದ್ರತೆ ಇಲ್ಲದ ಉದ್ಯೋಗದಲ್ಲಿ ನಿರತರಾಗಿರುವ ಕುಟುಂಬಗಳಲ್ಲಿ ತಾಂತ್ರಿಕ ಮತ್ತು ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಬಾಲಕಿಯರು ಕಂಡುಬರುವುದಿಲ್ಲ. ಆದರೆ ಹೆಚ್ಚು ಆದಾಯ ತರುವ ಉದ್ಯೋಗಗಳಲ್ಲಿ ಮತ್ತು ಭದ್ರತೆ ಇರುವ ಸರ್ಕಾರಿ ನೌಕರಿಗಳಲ್ಲಿ ತೊಡಗಿರುವ ಕುಟುಂಬಗಳಲ್ಲಿ ಪದವಿ, ತಾಂತ್ರಿಕ ಶಿಕ್ಷಣ ಮತ್ತು ಸ್ನಾತಕೋತ್ತರ ಪದವಿ ಪಡೆಯುವ ಮುಸ್ಲಿಂ ಬಾಲಕಿಯರು ಕಂಡುಬರುವುದಿಲ್ಲ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ಕುಟುಂಬಗಳ ಉದ್ಯೋಗ ಮಟ್ಟ ಹೆಚ್ಚಾದಂತೆ ಮುಸ್ಲಿಂ ಬಾಲಕಿಯರ ಶಿಕ್ಷಣ ಪಡೆಯುವ ತರಗತಿಗಳ ಮಟ್ಟ ಉತ್ತಮಗೊಳ್ಳುತ್ತಿದೆ. ಬೆಳಗಾವಿ ನಗರದ ವಿವಿಧ ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಬಾಲಕಿಯರಿಗೆ ತಮ್ಮ ಪೋಷಕರ ವೃತ್ತಿ ಅವರ ಶಿಕ್ಷಣವನ್ನು ಪ್ರಭಾವಿಸುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಮೊಹಮದ್ ಸಂಜೀರ್ ಅಲಂ[೩೮] ರವರ ಬಿಹಾರದ ಅಧ್ಯಯನ ಕಂಡುಕೊಂಡಿರುವಂತೆ ಶೇ.೬೪.೮

ರಷ್ಟು ಬಾಲಕಿಯರಿಗೆ ತಮ್ಮ ತಂದೆಯ ವೃತ್ತಿ ಪ್ರಭಾವಾ ಬೀರಿದೆ. ಹಾಗೆಯೇ ಎಸ್.ಪಿ. ಜೈನ್‌ರ್‌ ರವರ ಅಧ್ಯಯನ ಕಂಡುಕೊಂಡಿರುವಂತೆ ಬಹುತೇಕ ಮುಸ್ಲಿಂ ಬಾಲಕಿಯರು ತಮ್ಮ ತಂದೆಯ ಉದ್ಯೋಗದಿಂದ ಶಿಕ್ಷಣಕ್ಕೆ ಸ್ಪೂರ್ತಿಯನ್ನು ಪಡೆದುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಸಂಜೀರ್ ಅಲಂ ಮತ್ತು ಜೈನ್ ರವರ ಅಧ್ಯಯನವನ್ನು ಬೆಂಬಲಿಸುತ್ತದೆ.

## ೪.೧೨. ಮುಸ್ಲಿಂ ಮಹಿಳೆಯ ಶಿಕ್ಷಣ ಮತ್ತು ಪೋಷಕರ ಜೀವನ ಮಟ್ಟ

ಹಿಂದಿನ ಭಾಗಗಳಲ್ಲಿ ಚರ್ಚಿಸಿರುವಂತೆ ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಬಾಲಕಿಯರು ಶಿಕ್ಷಣ, ಉನ್ನತ ಶಿಕ್ಷಣ, ಉದ್ಯೋಗ ಮತ್ತು ಹೊರಗಿನ ದುಡಿಮೆಯ ಬಗ್ಗೆ ಸಕಾರಾತ್ಮಕ ಮನೋಭಾವನೆಯನ್ನು ಹೊಂದಿದ್ದಾರೆ. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಶಿಕ್ಷಣದ ಮೇಲೆ ಪೋಷಕರ ಶಿಕ್ಷಣ ಮತ್ತು ವೃತ್ತಿಗಳು ಗಾಢವಾಗಿ ಪ್ರಭಾವಬೀರುತ್ತಿವೆ. ಚಾಲ್ತಿಯಲ್ಲಿರುವ ವಾದದ ಪ್ರಕಾರ ಒಂದು ಸಮುದಾಯದ ಶಿಕ್ಷಣದ ಮಟ್ಟ ಆ ಸಮುದಾಯದಲ್ಲಿ ಶಿಕ್ಷಣವನ್ನು ಅಪೇಕ್ಷಿಸುವವರ ಸಂಖ್ಯೆಯನ್ನು ಅವಲಂಬಿಸಿರುತ್ತದೆ.[೪೦] ಆದರೆ ಈ ವಾದವನ್ನು ಇಂದಿನ ಆಧುನಿಕ ಮುಸ್ಲಿಮರಿಗೆ ಅನ್ವಯಿಸುವಂತಿಲ್ಲ. ಏಕೆಂದರೆ ಕಳೆದ ೭೦ ದಶಕಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಿವಿಧ ಶೈಕ್ಷಣಿಕ ನೀತಿಗಳನ್ನು ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿ ವಿವಿಧ ಸಮುದಾಯಗಳ ಸಾಕ್ಷರತೆ ಪ್ರಮಾಣವನ್ನು ಹೆಚ್ಚಿಸಿವೆ. ಸರ್ಕಾರಗಳು ಮಹಿಳೆಯರ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸಲು ವಿಶೇಷ ಕಾರ್ಯಕ್ರಮಗಳನ್ನು ಜಾರಿಗೊಳಿಸಿ ಮಹಿಳಾ ಸಾಕ್ಷರತೆ ಪ್ರಮಾಣವನ್ನು ಹೆಚ್ಚಿಸುವಲ್ಲಿ ಸೂಕ್ತಕ್ರಮಗಳನ್ನು ಕೈಗೊಂಡಿವೆ. ಅಧ್ಯಯನ ಕಂಡುಕೊಂಡಿರುವಂತೆ ಬೆಳಗಾವಿ ನಗರದ  ಬಹುತೇಕ ಮುಸ್ಲಿಂ ಬಾಲಕಿಯರು ಶಿಕ್ಷಣ ಪಡೆಯುವ ಬಗ್ಗೆ ಉತ್ಸುಕರಾಗಿದ್ದಾರೆ. ಅದೇ ಪ್ರಕಾರ ಬೆಳಗಾವಿ ನಗರದ ಬಹುಸಂಖ್ಯಾತ ಪೋಷಕರು ಮಹಿಳೆಯರಿಗೆ ಶಿಕ್ಷಣ ನೀಡುವ ಬಗ್ಗೆ ಸಕಾರಾತ್ಮಕ ಮನೋಭಾವನೆ ಹೊಂದಿದ್ದಾರೆ. ಈ ಹಿನ್ನೆಲೆಯಲ್ಲಿ ಶಿಕ್ಷಣ ಅಪೇಕ್ಷಿತರ ಸಂಖ್ಯೆ ಮತ್ತು ಸಾಕ್ಷರತೆ ಪ್ರಮಾಣದ ಸಿದ್ಧಾಂತವನ್ನು ಬೆಳಗಾವಿ ಮುಸ್ಲಿಮರಿಗೆ ಅನ್ವಯಿಸುವಂತಿಲ್ಲ. ಆದರೆ, ಇಂದಿಗೂ ಪ್ರದೇಶವಾರು ಮತ್ತು ಸಮುದಾಯವಾರು ಶಿಕ್ಷಣ ಸಮಾನವಾಗಿ ಹಂಚಿಕೆಯಾಗಿದೆಯೆ ಎನ್ನುವ ಪ್ರಶ್ನೆ ಜೀವಂತವಾಗಿದೆ.[೪೧] ಇದರ ಜೊತೆಗೆ ಲಭ್ಯವಿರುವ ಶೈಕ್ಷಣಿಕ ಅವಕಾಶಗಳನ್ನು ತಮ್ಮದಾಗಿಸಿಕೊಳ್ಳಲುಅಸಂಖ್ಯಾತ ಸಮುದಾಯಗಳಿಗೆ ಧಾರಣಾ ಶಕ್ತಿ ಇದೆಯೇ ಎನ್ನುವ ಮೂಲಭೂತ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಸಾಧ್ಯವಾಗಿಲ್ಲ. ಮುಸ್ಲಿಂ ಸಮುದಾಯದಲ್ಲಿ ಆಳವಾಗಿ ಬೇರುಬಿಟ್ಟಿರುವ ಸಮಾಜೋ-ಆರ್ಥಿಕ ಸಮಸ್ಯೆಗಳು ಅವರನ್ನು ಶಿಕ್ಷಣಕ್ಕಾಗಿ ಒತ್ತಾಯಿಸುವಂತೆ ಪ್ರೇರೇಪಿಸಿಲ್ಲ.[೪೨] ಮುಸ್ಲಿಮರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಅವರಿಗೆ

ಶಿಕ್ಷಣವನ್ನು ಪಡೆಯುವ ಧಾರಣಾ ಶಕ್ತಿಯನ್ನು ಕುಂಠಿತಗೊಳಿಸಿವೆ. ಎನ್ನುವುದು ಇತ್ತೀಚಿನ ಅಧ್ಯಯನಗಳ ವಾದ. ಅನಕ್ಷರತೆ ಜಾಗತೀಕ ಮಟ್ಟದ ಸಮಸ್ಯೆಯಾಗಿದೆ.

### ೪.೧೩. ಶಿಕ್ಷಣ ಮತ್ತು ಅಂತರಾಷ್ಟ್ರೀಯ ಸ್ಥಿತಿಗಳು

ಅನಕ್ಷರತೆಯು ಕೇವಲ ಭಾರತದ ಅಥವಾ ಕರ್ನಾಟಕದ ಸಮಸ್ಯೆಯಲ್ಲ. ಇದು ಜಾಗತಿಕ ಮಟ್ಟದ ಸಮಸ್ಯೆಯೂ ಆಗಿದೆ. ಜಾಗತಿಕ ಮಟ್ಟದಲ್ಲಿಯು ಅನಕ್ಷರತೆಯ ಬಗ್ಗೆ ಹಲವಾರು ಅಧ್ಯಯನಗಳನ್ನು, ವರದಿಗಳನ್ನು ಮಂಡಿಸಲಾಗಿದೆ. ಸ್ಟೇಟ್ ಆಫ್ ಸಾರ್ಕ್ ಚೈಲ್ಡ್ ೨೦೦೫ರ ಯೂನಿಸೆಫ್ ತಯಾರಿಸಿದ ವರದಿಯ ಪ್ರಕಾರ ಸಾರ್ಕ್ ರಾಷ್ಟ್ರಗಳಲ್ಲಿ ೧೬೧ ಮಿಲಿಯನ್ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಅದರಲ್ಲಿ ೪೦ ಮಿಲಿಯನ್ ಮಕ್ಕಳು ಗೈರು ಹಾಜರಾಗುತ್ತಿದ್ದಾರೆ. ಅದರಲ್ಲಿ ಆತಂಕಕಾರಿ ಬೆಳವಣಿಗೆಯೆಂದರೆ ಗೈರು ಹಾಜರಾಗುತ್ತಿರುವವರಲ್ಲಿ ಹುಡುಗಿಯರ ಪ್ರಮಾಣವೇ ೨೧.೪ ಮಿಲಿಯನ್ ಆಗಿದೆ. ವಿಶ್ವದಲ್ಲಿ ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳಲ್ಲಿ ಶೇ.೩೫ ರಷ್ಟು ಸಾರ್ಕ್ ದೇಶಗಳಲ್ಲೇ ಕಂಡುಬರುತ್ತಾರೆ. ಸಾರ್ಕ್ ರಾಷ್ಟ್ರಗಳಾದ ಭಾರತದಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ೨೮ ಮಿಲಿಯನ್, ಅದರಲ್ಲಿ ಹುಡುಗಿಯರ ಸಂಖ್ಯೆ ೧೫ ಮಿಲಿಯನ್. ಅದೇ ಪ್ರಕಾರ ಕ್ರಮವಾಗಿ ಪಾಕಿಸ್ತಾನದಲ್ಲಿ ೮.೯(ಗಂಡು ಮಕ್ಕಳು) ಮತ್ತು ೪.೯(ಹೆಣ್ಣುಮಕ್ಕಳು), ಬಾಂಗ್ಲಾದೇಶದಲ್ಲಿ ೨ ಮತ್ತು ೦.೯(ಹೆಣ್ಣುಮಕ್ಕಳು), ನೇಪಾಳದಲ್ಲಿ ೦.೯ ಮತ್ತು ೦.೫(ಹೆಣ್ಣುಮಕ್ಕಳು), ಭೂತಾನದಲ್ಲಿ ೦.೨ ಮತ್ತು ೦.೧ ಹುಡುಗಿಯರಿದ್ದಾರೆ. ವರದಿ ಗುರುತಿಸಿರುವ ಪ್ರಕಾರ ಗಂಡು ಮಕ್ಕಳು ಮುಪ್ಪಿನಲ್ಲಿ ನೀಡುವ ಆಸರೆಯೇ ಸಾರ್ಕ್ ರಾಷ್ಟ್ರಗಳಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಪ್ರಮುಖ ಅಡ್ಡಿಯಾಗಿದೆ. ೨೦೦೫ ರಲ್ಲಿ ಡಿಪಾರ್ಟ್‌ಮೆಂಟ್ ಫಾರ್ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್ ಪ್ರಕಟಿಸಿದ ಎಜುಕೇಷನ್ ಟುವರ್ಡ್ಸ್ ಎ ಬೆಟರ್ ಫ್ಯೂಚರ್ ಫಾರ್ ಆಲ್ ಎಂಬ ವರದಿಯು ಅನಕ್ಷರತೆಯ ಮೇಲೆ ಬೆಳಕು ಚೆಲ್ಲಿದೆ. ಈ ವರದಿಯು ಜಗತ್ತಿನಲ್ಲಿ ೫೮ ಮಿಲಿಯನ್ ಹೆಣ್ಣು ಮಕ್ಕಳು ಶಾಲೆಯ ಮೆಟ್ಟಿಲನ್ನು ಹತ್ತಿಲ್ಲವೆಂದು ತಿಳಿಸುತ್ತದೆ. ಇದರಲ್ಲಿ ಹೆಚ್ಚಿನವರು ಆಫ್ರಿಕಾದ ಉಪ ಸಹರಾ, ಏಷ್ಯಾದ ದಕ್ಷಿಣ ಮತ್ತು ಪಶ್ಚಿಮ ದೇಶದವರೆಂದು ತಿಳಿಸಿದೆ. ಅವರಲ್ಲಿ ೨೨ ಮಿಲಿಯನ್ ಹುಡುಗಿಯರು ಭಾರತ ಮತ್ತು ಪಾಕಿಸ್ತಾನದವರು ಎಂಬುದು ಆಶ್ಚರ್ಯದ ಸಂಗತಿ. ಇದು ಒಟ್ಟಾರೆ ಜಾಗತಿಕ ಮಟ್ಟದ ಅನಕ್ಷರತೆ ಹಾಗೂ ಮುಖ್ಯವಾಗಿ ಮಹಿಳಾ ಅನಕ್ಷರತೆಯ ವಿಚಾರವಾದರೆ, ಅಂತರಾಷ್ಟ್ರೀಯ ಮಟ್ಟದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿಂದುಳಿಯುವಿಕೆಯ ಕುರಿತು ವರದಿಗಳು ಬೆಳಕು ಚೆಲ್ಲಿವೆ. ಬ್ಯೂರೊ ಫಾರ್ ಪಾಲಿಸಿ ಅಂಡ್ ಪ್ರೊಗ್ರಾಂ ಕೋ-ಆರ್ಡಿನೇಷನ್ ೨೦೦೩ರ ವರದಿಯಲ್ಲಿ ೧೩ ಮುಸ್ಲಿಂ ರಾಷ್ಟ್ರಗಳಲ್ಲಿನ ಲೌಕಿಕ ಮತ್ತು ಧಾರ್ಮಿಕ ಶಿಕ್ಷಣದ ಬಲ ಮತ್ತು ಕೊರತೆಯ ಅಂಶಗಳೊಂದಿಗೆ ೩೯ ರಾಷ್ಟ್ರಗಳ

ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಅಂಶಗಳನ್ನು ಆಧರಿಸಿದ ವಿಶ್ಲೇಷಣೆ ಮಾಡಿ ವರದಿ ಮಂಡಿಸಿತು. ವರದಿ ಹೇಳುವ ಪ್ರಕಾರ ಅಧಿಕ ಅನಕ್ಷರತೆಗೆ ಬಡತನ, ಶಾಲೆಗಳ ಕೊರತೆ ಮತ್ತು ಗುಣಮಟ್ಟದ ಕೊರತೆ ಎಂಬುದನ್ನು ಕಂಡುಕೊಂಡಿದೆ.

೨೦೦೮ ರ ಇಎಫ್‌ಎ ಗ್ಲೋಬಲ್ ಮಾನಿಟರಿಂಗ್ ರಿಪೋರ್ಟ್ ಹೇಳುವ ಪ್ರಕಾರ ೧೯೯೯ ರಿಂದ ೨೦೦೫ ರ ವರೆಗಿನ ಅವಧಿಯಲ್ಲಿ ಜಾಗತಿಕ ಮಟ್ಟದಲ್ಲಿ ಶಾಲಾ ದಾಖಲಾತಿಯು ೬೪೭ ಮಿಲಿಯನ್‌ನಿಂದ ೬೮೮ ಮಿಲಿಯನ್‌ವರೆಗೆ ಹೆಚ್ಚಳವಾಗಿದ್ದು, ಇದರಲ್ಲಿ ಶೇ.೨೨ ರಷ್ಟು ದಕ್ಷಿಣ ಮತ್ತು ಪಶ್ಚಿಮ ಏಷ್ಯಾ ಒಳಗೊಂಡಿದೆ. ಇದಕ್ಕೆ ಕಾರಣ ಈ ಉಪ ವಿಭಾಗದಲ್ಲಾದ ಸುಧಾರಣೆ ಎಂದು ಗುರುತಿಸಿದೆ. ಈ ಕಾರಣಕ್ಕಾಗಿ ೨೦೦೨ ರಿಂದ ಶಾಲೆ ಬಿಡುವ ಮಕ್ಕಳ ಸಂಖ್ಯೆಯಲ್ಲೂ ಇಳಿಕೆ ಕಂಡುಬಂದಿದೆ. ಅಂತರಾಷ್ಟ್ರೀಯ ಮಟ್ಟದಲ್ಲಿ ಮಹಿಳಾ ಶಿಕ್ಷಣಕ್ಕೆ ಇರುವ ಪ್ರಮುಖ ಅಡ್ಡಿಗಳನ್ನು ಕುರಿತು ವಿವಿಧ ವರದಿ, ಅಧ್ಯಯನಗಳು ಬೆಳಕು ಚೆಲ್ಲಿವೆ. ೨೦೦೮ ರ ವರ್ಲ್ಡ್ ಬ್ಯಾಂಕ್ ಹ್ಯೂಮನ್ ಡೆವಲಪ್‌ಮೆಂಟ್ ನೆಟ್‌ವರ್ಕ್ ವರದಿ ಗುರುತಿಸಿರುವ ಪ್ರಕಾರ ಸಾಮಾಜಿಕ, ಆರ್ಥಿಕ ಭಿನ್ನತೆಗಳು, ಸಾಮಾಜಿಕ ನಿರಾಸಕ್ತಿ, ಲೈಂಗಿಕ ತಾರತಮ್ಯಗಳು ಪ್ರಮುಖ ಕಾರಣಗಳಾಗಿವೆ.೪೩ಹಾಗಾಗಿ ಅನಕ್ಷರತೆ ಕೇವಲ ಕರ್ನಾಟಕ ಅಥವಾ ಭಾರತದ ಸಮಸ್ಯೆಯಾಗಿ ಉಳಿದುಕೊಂಡಿಲ್ಲ. ಆದರೆ ಆಧುನಿಕ ಕಾಲಘಟ್ಟದ ಲಿಂಗ ಸಂಬಂಧಿ ಮತ್ತು ಸಾಮಾಜಿಕ ಅಂದಾಜು ಅಧ್ಯಯನಗಳು ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿರುವ ವಿವಿಧ ಅಂಶಗಳನ್ನು ಗುರುತಿಸಿವೆ. ಈ ಕುರಿತು ಚರ್ಚೆಯನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

## ೪.೧೪. ಜಾಗತೀಕ ಸಂದರ್ಭದಲ್ಲಿ ಮಹಿಳಾ ಶಿಕ್ಷಣದ ಅಡ್ಡಿಗಳು

ಕೋಷ್ಟಕ ೩.೭ ರಲ್ಲಿ ಕಂಡುಬರುವಂತೆ ಲಿಂಗಸಂಬಂಧಿತ ಮತ್ತು ಸಾಮಾಜಿಕ ಅಂದಾಜು ಅಧ್ಯಯನಗಳು ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿರುವ ಮೂರು ಪ್ರಕಾರಗಳ ಅಡ್ಡಿಗಳನ್ನು ಗುರುತಿಸಿವೆ. ಮೂರು ಅಡ್ಡಿಗಳಲ್ಲಿ ಪ್ರಮುಖವಾದವುಗಳೆಂದರೆ ಸಾರ್ವತ್ರಿಕ ಉಲ್ಲೇಖಿತ ಅಡ್ಡಿಗಳು, ಸಾಂದರ್ಭಿಕ ಅಡ್ಡಿಗಳು ಮತ್ತು ಸ್ಥಳೀಯವಾದ ನಿರ್ದಿಷ್ಟ ಅಡ್ಡಿಗಳಾಗಿವೆ. ಸಾರ್ವತ್ರಿಕ ಉಲ್ಲೇಖಿತ ಅಡ್ಡಿಗಳಲ್ಲಿ ಸಣ್ಣ ಮಕ್ಕಳ ಆರೈಕೆ, ಬಾಲ್ಯ ವಿವಾಹ, ಗೃಹಕಾರ್ಯಗಳು, ಪೋಷಕರ ಅನಕ್ಷರತೆ, ಪೋಷಕರ ಉತ್ತೇಜನವಿಲ್ಲದಿರುವುದು, ಪೋಷಕರ ವೃತ್ತಿಗಳಲ್ಲಿ ಸಹಾಯ ಮತ್ತು ಪೋಷಕರಿಗೆ ಶೈಕ್ಷಣಿಕ ಖರ್ಚು ನಿಭಾಯಿಸುವ ಸಾಮರ್ಥ್ಯವಿಲ್ಲದಿರುವುದು ಮುಂತಾದವುಗಳಾಗಿವೆ.

ಸಾಂದರ್ಭಿಕ ಅಡ್ಡಿಗಳಲ್ಲಿ ಹೊಂದಾಣಿಕೆಯಾಗದ ಶಾಲಾ ಸಮಯ, ಶಿಕ್ಷಕರ ನಕಾರಾತ್ಮಕ ವರ್ತನೆ, ಶಿಕ್ಷಕರ ಸತತ ಗೈರುಹಾಜರಿ, ಸೂಕ್ತ ಪಠ್ಯಕ್ರಮದ ಕೊರತೆ, ಮಹಿಳಾ ಶಿಕ್ಷರಿಲ್ಲದಿರುವುದು

ಮತ್ತು ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳಿಲ್ಲದಿರುವುದು ಮುಂತಾದ ಅಡ್ಡಿಗಳಾಗಿವೆ. ಅದೇ ಪ್ರಕಾರ ಅಧ್ಯಯನಗಳು ವಿವಿಧ ಸ್ಥಳೀಯವಾದ ನಿರ್ದಿಷ್ಟ ಅಡ್ಡಿಗಳನ್ನು ಗುರುತಿಸುತ್ತವೆ ಅವುಗಳೆಂದರೆ ಶಾಲೆಗಳು ದೂರದ ಅಂತರದಲ್ಲಿರುವುದು, ಗೃಹ ಮತ್ತು ಕೌಟುಂಬಿಕ ಜವಾಬ್ದಾರಿಗಳು, ಪೋಷಕರಿಗೆ ಪಠ್ಯದಲ್ಲಿ ಆಸಕ್ತಿ ಇಲ್ಲದಿರುವುದು, ವಲಸೆ ಮತ್ತು ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಳ್ಳುವುದು, ಪರದಾ ಪದ್ಧತಿ ಮತ್ತು ಧಾರ್ಮಿಕ ಶಿಕ್ಷಣಕ್ಕೆ ಒತ್ತು ನೀಡುವುದು, ಬೆಂಬಲ ನೀಡುವ ವ್ಯವಸ್ಥೆ ಇಲ್ಲದಿರುವುದು ಮತ್ತು ಅಕಾಲಿಕ ಪರಿಸ್ಥಿತಿಯ ವಲಸೆ ಮುಂತಾದ ಕಾರಣಗಳನ್ನು ಗುರುತಿಸಲಾಗುತ್ತದೆ.ಆದರೆ ಈ ಎಲ್ಲಾ ಅಡ್ಡಿಗಳು ಭಾರತದ ಎಲ್ಲಾ ನಿರ್ಲಕ್ಷಿತ ಮತ್ತು ತಳ ಸಮುದಾಯಗಳು ಎದುರಿಸುತ್ತಿರುವ ಸಾಮಾನ್ಯವಾದ ಕಾರಣಗಳಾಗಿ ಕಂಡುಬರುತ್ತವೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಶಿಕ್ಷಣ ಮತ್ತು ಅನನ್ಯತೆಗೆ ಸಂಬಂಧಿಸಿದಂತೆ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಎದುರಿಸುತ್ತಿರುವ ಸಮಸ್ಯೆಗಳು ವಿಶಿಷ್ಟವಾಗಿದ್ದು, ಅವುಗಳನ್ನು ಭಾರತದ ವಿವಿಧ ರಾಜ್ಯಗಳು ಕಂಡುಕೊಂಡಿವೆ.

### ೪.೧೫. ಭಾರತೀಯ ಮತ್ತು ಕರ್ನಾಟಕದ ಸಂದರ್ಭದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿಗಳು

ಕೋಷ್ಟಕ ೩೮ ಸ್ಪಷ್ಟಪಡಿಸುವಂತೆ ಭಾರತದಲ್ಲಿ ರಾಷ್ಟ್ರೀಯ ಮಟ್ಟದ ಮತ್ತು ರಾಜ್ಯ ಮಟ್ಟದ ಅಧ್ಯಯನಗಳು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಎದುರಿಸುತ್ತಿರುವ ಕಾರಣಗಳನ್ನು ಪಟ್ಟಿಮಾಡಿದೆ. ಅವುಗಳೆಂದರೆ ಕುಟುಂಬದ ನಿರ್ವಹಣೆಗಾಗಿ ಮನೆಯ ಹೊರಗಡೆ ಕೆಲಸ ಮಾಡುವ ಅನಿವಾರ್ಯತೆ, ಸುಶಿಕ್ಷಿತ ಮಹಿಳಾ ಶಿಕ್ಷಕಿಯರ ಕೊರತೆ, ಲೈಂಗಿಕ ದೌರ್ಜನ್ಯದ ಭಯ, ಸೂಕ್ತವಲ್ಲದ ಶಾಲಾ ಸಮಯ, ಮನೆಯ ಸಂಪ್ರದಾಯಗಳು, ಬಡತನ, ಮಾಧ್ಯಮದ ಸಮಸ್ಯೆ, ಶಾಲೆಗಳ ಭೌತಿಕ ಸ್ಥಿತಿ, ಕ್ಲಿಷ್ಟ ಬೋಧನಾ ಕಲಿಕೆ, ಬಾಲ್ಯಾ ವಿವಾಹ, ದುಬಾರಿ ವೆಚ್ಚ, ಅನಾರೋಗ್ಯ, ಮನೆಗೆಲಸ ಧಾರ್ಮಿಕ ಶಿಕ್ಷಣಕ್ಕೆ ಒತ್ತು ನೀಡುವುದು, ಸಮುದಾಯದ ಬೆಂಬಲ ಇಲ್ಲದಿರುವುದು, ಪರದಾ ಪದ್ದತಿ, ಕಲಿಕೆಯಲ್ಲಿ ನಿರಾಸಕ್ತಿ, ಶಾಲೆಗಳ ಅಂತರ, ಉತ್ತಮ ಮನೆ ಇಲ್ಲದಿರುವುದು, ವಿದ್ಯುತ್‌ಚ್ಛಕ್ತಿ ಇಲ್ಲದಿರುವುದು, ಉದ್ಯೋಗದ ಭರವಸೆ ಇಲ್ಲದಿರುವುದು, ಮಹಿಳೆಯರಿಗೆ ಪ್ರತ್ಯೇಕ ಶಾಲೆ ಹಾಗೂ ಶೌಚಾಲಯ ಇಲ್ಲದಿರುವುದು, ಪೋಷಕರ ಅನಕ್ಷರತೆ, ಪೋಷಕರ ನಿರುತ್ಸಾಹ, ಹೆಣ್ಣು ದಾರಿ ತಪ್ಪುವ ಭಯ, ಶಿಕ್ಷಣದಿಂದ ಗಂಡು ಸಿಗದೆ ಇರುವುದು, ಶಿಕ್ಷಕರ ಅನುಚಿತ ವರ್ತನೆ, ಬಾಲಕಿಯರು ಹೆಚ್ಚಿನ ವಯೋಮಾನ ಮುಂತಾದ ಕಾರಣಗಳನ್ನು ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಪ್ರಮುಖ ಅಡ್ಡಿಗಳೆಂದು ಗುರುತಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸುತ್ತ ಅಧ್ಯಯನಕ್ಕೆ ಈ ಅಡ್ಡಿಗಳನ್ನು ಮೂಲವಾಗಿ

ಪರಿಭಾವಿಸಿಕೊಂಡು ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರು ಉನ್ನತ ಶಿಕ್ಷಣ ಪಡೆಯಲು ಅಡ್ಡಿಯಾಗಿರುವ ಅಂಶಗಳನ್ನು ಪೋಷಕರ ಜೀವನ ಮಟ್ಟದ ನೆಲೆಯಲ್ಲಿ ಮುಸ್ಲಿಂ ಪೋಷಕರ ನಿಲುವುಗಳನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು, ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

### ೪.೧೬. ಮುಸ್ಲಿಂ ಬಾಲಕಿಯರ ಶಿಕ್ಷಣಕ್ಕೆ ಪೋಷಕರ ಪ್ರೋತ್ಸಾಹ

ಕೋಷ್ಟಕ-೩೯ರಲ್ಲಿ ಕಂಡುಬರುವಂತೆ ಕ್ಷೇತ್ರ ಅಧ್ಯಯನಕ್ಕೆ ಆಯ್ದುಕೊಂಡ ಬೆಳಗಾವಿ ನಗರದ ಒಟ್ಟು ೧೧೭ ಮುಸ್ಲಿಂ ಪೋಷಕರಲ್ಲಿ ಶೇ.೭೭ ರಷ್ಟು ಬಡವರು, ಶೇ.೧೯.೬ ರಷ್ಟು ಮಧ್ಯಮ ವರ್ಗದವರು ಮತ್ತು ಶೇ.೩.೪ ರಷ್ಟು ಶ್ರೀಮಂತ ವರ್ಗದ ಕುಟುಂಬಗಳು ಕಂಡುಬರುತ್ತಾರೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಒಟ್ಟು ಬಡವರಲ್ಲಿ ಶೇ.೪೮ ರಷ್ಟು ಬಡವರು ಮುಸ್ಲಿಂ ಬಾಲಕಿಯರಿಗೆ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಆದರೆ ಶೇ.೨೯ ರಷ್ಟು ಬಡವರು ಬಾಲಕಿಯರಿಗೆ ಉನ್ನತ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಅದೇ ಪ್ರಕಾರ ಮಧ್ಯಮ ವರ್ಗದವರಲ್ಲಿ ಶೇ.೧೨.೮ ರಷ್ಟು ಮಧ್ಯಮ ವರ್ಗದವರು ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ, ಶೇ.೬.೮ ರಷ್ಟು ಮಧ್ಯಮ ವರ್ಗದವರು ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಒಟ್ಟು ಶೇ.೩.೪ ರಷ್ಟು ಶ್ರೀಮಂತ ಮುಸ್ಲಿಂ ಕುಟುಂಬಗಳಲ್ಲಿ ಶೇ.೨.೬ ರಷ್ಟು ಕುಟುಂಬಗಳು ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ, ಶೇ.೦.೮ ರಷ್ಟು ಕುಟುಂಬಗಳು ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳಲ್ಲಿ ಬಹುಸಂಖ್ಯಾತರು ಅಂದರೆ ಶೇ.೬೩.೪ ರಷ್ಟು ಪೋಷಕರು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ, ಉಳಿದ ಶೇ.೩೬.೬ ರಷ್ಟು ಪೋಷಕರು ಮಾತ್ರ ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಅಂದರೆ ಬೆಳಗಾವಿ ನಗರದ ಬಹುಂಖ್ಯಾತ ಪೋಷಕರು ಬಾಲಕಿಯರಿಗೆ ಕನಿಷ್ಠ ಶಿಕ್ಷಣವನ್ನು ನೀಡುವ ಒಲವು ತೋರಿಸುತ್ತಿದ್ದು, ಉನ್ನತ ಶಿಕ್ಷಣಕ್ಕೆ ಒಲವು ತೋರಿಸುವುದಿಲ್ಲ. ಇತ್ತೀಚಿನ ಅಧ್ಯಯನಗಳು ಪ್ರತಿಪಾದಿಸುವ ಪ್ರಕಾರ ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಇಸ್ಲಾಂ ಧರ್ಮ, ಸಂಸ್ಕೃತಿ, ಸಂಪ್ರದಾಯಗಳು ಮತ್ತು ಆಚರಣೆಗಳು ಪ್ರಭಾವ ಬೀರುವುದಕ್ಕಿಂತ ಅವರ ಜೀವನ ಮಟ್ಟ ಮಹಿಳೆಯರ ಶಿಕ್ಷಣವನ್ನು ಹೆಚ್ಚಾಗಿ ಬಾದಿಸುತ್ತಿವೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡಲು ಪೋಷಕರಿಗೆ ಅಡ್ಡಿಯಾಗಿರುವ ಅಂಶಗಳನ್ನು ಕ್ಷೇತ್ರ ಕಾರ್ಯದ ಮೂಲಕ ಗುರುತಿಸಲಾಗಿದ್ದು, ಅವುಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೪.೧೬. ಬೆಳಗಾವಿ ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣದ ಅಡ್ಡಿಗಳು

ಕೋಷ್ಟಕ ೪೦ ರಲ್ಲಿ ಕಂಡುಬರುವಂತೆ ಬಾಲಕಿಯರ ಉನ್ನತ ಶಿಕ್ಷಣವನ್ನು ಬೆಂಬಲಿಸದ ಒಟ್ಟು ಮುಸ್ಲಿಂ ಕುಟುಂಬಗಳಲ್ಲಿ ಶೇ.೧೨.೧ ರಷ್ಟು ಕುಟುಂಬಗಳು ಕುಟುಂಬ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ ಎನ್ನುವ ಕಾರಣಕ್ಕಾಗಿ, ಶೇ.೫.೪ ರಷ್ಟು ವಯಸ್ಕ ಹೆಣ್ಣು ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯದ ಭಯಕ್ಕಾಗಿ, ಶೇ.೮.೧ ರಷ್ಟು ಮುಸ್ಲಿಮರು ಮನೆಯ ಸಂಪ್ರದಾಯಗಳು ಒಪ್ಪುವುದಿಲ್ಲ ಎನ್ನುವ ಕಾರಣಕ್ಕಾಗಿ, ಶೇ.೫೨.೬ ರಷ್ಟು ಬಡತನದಿಂದಾಗಿ ಓದಿಸಲು ಸಾಧ್ಯವಿಲ್ಲ ಎನ್ನುವ ಕಾರಣಕ್ಕಾಗಿ, ಶೇ.೧೧ ರಷ್ಟು ವಿವಾಹ ಮಾಡಬೇಕೆನ್ನುವ ಕಾರಣಕ್ಕಾಗಿ, ಶೇ.೪ ರಷ್ಟು ಪೋಷಕರು ಪರದಾ ಪದ್ಧತಿಯ ಆಚರಣೆಯ ತೊಂದರೆಯಿಂದಾಗಿ, ಶೇ.೪ ರಷ್ಟು ಮಹಿಳೆಯರಿಗೆ ಉನ್ನತ ಶಿಕ್ಷಣಕ್ಕಿಂತ ಧಾರ್ಮಿಕ ಶಿಕ್ಷಣವೇ ಅಗತ್ಯ ಎನ್ನುವ ಕಾರಣಕ್ಕಾಗಿ ಮತ್ತು ಶೇ.೨.೬ ರಷ್ಟು ಮಹಿಳೆಯರು ಉನ್ನತ ಶಿಕ್ಷಣ ಪಡೆದರೆ ಉತ್ತಮ ಮತ್ತು ಸಮಾನ ಶೈಕ್ಷಣಿಕ ಮಟ್ಟದ ಗಂಡು ಸಿಗದಿರುವ ಕಾರಣಕ್ಕಾಗಿ ಪೋಷಕರು ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಆಸಕ್ತಿವಹಿಸುವುದಿಲ್ಲ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಬೆಳಗಾವಿ ನಗರದ ಬಹುಸಂಖ್ಯಾತ ಶೇ.೫೨.೬ ರಷ್ಟು ಮುಸ್ಲಿಮರು ಬಡತನದ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಸಾಧ್ಯವಾಗುತ್ತಿಲ್ಲ. ಎರಡನೆಯದಾಗಿ ಶೇ.೧೨.೧ ರಷ್ಟು ಮುಸ್ಲಿಮರಿಗೆ ಹೆಣ್ಣು ಮಕ್ಕಳು ತಮ್ಮ ಕುಟುಂಬದ ನಿರ್ವಹಣೆಗಾಗಿ ಹೆಣ್ಣು ಮಕ್ಕಳು ಅಗತ್ಯ ಎನ್ನುವ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳನ್ನು ಉನ್ನತ ಶಿಕ್ಷಣಕ್ಕೆ ಕಳುಹಿಸಲು ಆಸಕ್ತಿವಹಿಸುವುದಿಲ್ಲ. ನಂತರದ ಸ್ಥಾನದಲ್ಲಿ ಶೇ.೧೧ ರಷ್ಟು ಪೋಷಕರು ನಿರ್ಧರಿಸುವಂತೆ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದು ಆದ್ಯತೆಯಾಗಿದ್ದು, ಉನ್ನತ ಶಿಕ್ಷಣ ಅಗತ್ಯವಲ್ಲ ಎಂದು ನಿರ್ಧರಿಸುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವಂತೆ ಬೆಳಗಾವಿಯ ಮುಸ್ಲಿಂ ಬಾಲಕಿಯರು ತಮ್ಮ ಕುಟುಂಬದ ಬಡತನದಿಂದಾಗಿ ಮತ್ತು ಬಾಲಕಿಯರ ಸೇವೆ ಕುಟುಂಬದ ನಿರ್ವಹಣೆಗೆ ಅಗತ್ಯವಾಗಿರುವುದರಿಂದ ಉನ್ನತ ಶಿಕ್ಷಣದಿಂದ ವಂಚಿತಳಾಗುತ್ತಿದ್ದಾಳೆ. ಆದರೆ ಮುಸ್ಲಿಂ ಸಮುದಾಯದಲ್ಲಿ ಬಹುಸಂಖ್ಯಾತರು ಬಡವರಾಗಿದ್ದು ಅತೀ ಕಡಿಮೆ ಜನ ಮಧ್ಯಮ ವರ್ಗದವರು ಮತ್ತು ಕನಿಷ್ಟ ಸಂಖ್ಯೆಯಷ್ಟು ಜನ ಶ್ರೀಮಂತರು ಕಂಡುಬರುತ್ತಾರೆ. ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವ ಸಂಗತಿಯು ಜೀವನ ಮಟ್ಟವನ್ನು ಆಧರಿಸಿ ಬದಲಾಗುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡದಿರುವ ಸಂಗತಿಯನ್ನು ಆದಾಯದ ನೆಲೆಯನ್ನು ಆಧರಿಸಿ ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು, ಅದರ ಫಲಿತಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೪.೧೮. ಬಡವರು ಮತ್ತು ಬಾಲಕಿಯರ ಉನ್ನತ ಶಿಕ್ಷಣ

ಕೋಷ್ಟಕ–೪೧ ರಲ್ಲಿ ಕಂಡುಬರುವಂತೆ ಬೆಳಗಾವಿ ನಗರದ ಒಟ್ಟು ಬಡ ಮುಸ್ಲಿಂ ಪೋಷಕರಲ್ಲಿ ಶೇ.೪೮ ರಷ್ಟು ಬಡವರು ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವ ಸ್ಥಿತಿಯಲ್ಲಿ ಇಲ್ಲ. ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡದಿರಲು ವಿವಿಧ ಕಾರಣಗಳು ಕಂಡುಬರುತ್ತವೆ. ಶೇ.೧೪.೨ ರಷ್ಟು ಬಡವರು ತಮ್ಮ ಕುಟುಂಬದ ನಿರ್ವಹಣೆಯ ಕಾರಣಕ್ಕಾಗಿ, ಶೇ.೫.೩ ರಷ್ಟು ಲೈಂಗಿಕ ದೌರ್ಜನ್ಯಗಳಾಗುವ ಭಯದಿಂದಾಗಿ, ಶೇ.೭.೨ರಷ್ಟು ಮನೆಯ ಸಂಪ್ರದಾಯಗಳ ಕಾರಣದಿಂದಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ಸಾಧ್ಯವಿಲ್ಲ ಎನ್ನುತ್ತಾರೆ. ಆದರೆ ಇದಕ್ಕಿಂತ ಹೆಚ್ಚಾಗಿ ಶೇ.೫೯ ರಷ್ಟು ಬಡವರು ತಮ್ಮ ಬಡತನದ ಕಾರಣದಿಂದಾಗಿ, ಶೇ.೭.೨ ರಷ್ಟು ಹೆಣ್ಣು ಮಕ್ಕಳಿಗೆ ಶೀಘ್ರ ವಿವಾಹ ಮಾಡುವ ಕಾರಣಕ್ಕಾಗಿ, ಶೇ.೩.೫ ರಷ್ಟು ಪರದಾ ಪದ್ಧತಿಯ ಕಾರಣಕ್ಕಾಗಿ, ಶೇ.೧.೮ ರಷ್ಟು ಧಾರ್ಮಿಕ ಶಿಕ್ಷಣ ನೀಡುವ ಕಾರಣಕ್ಕಾಗಿ ಮತ್ತು ಶೇ.೧.೮ ರಷ್ಟು ಉನ್ನತ ಶಿಕ್ಷಣ ಪಡೆದರೆ ಉತ್ತಮ ವರ ಸಿಗುವುದು ಕಷ್ಟ ಎನ್ನುವ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಿಲ್ಲವೆಂದು ಅಭಿಪ್ರಾಯಪಡುತ್ತಾರೆ. ಕ್ಷೇತ್ರ ಅಧ್ಯಯನದ ಫಲಿತಗಳು ಸ್ಪಷ್ಟಪಡಿಸುವ ಪ್ರಕಾರ ಬಹುಸಂಖ್ಯಾತ ಬಡವರಿಗೆ ತಮ್ಮ ಬಡತನ ಮತ್ತು ಹೆಣ್ಣು ಮಕ್ಕಳು ಮನೆಯ ನಿರ್ವಹಣೆಗೆ ಅಗತ್ಯ ಎನ್ನುವ ಕಾರಣಕ್ಕೆ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ.

## ೪.೧೯. ಮಧ್ಯಮ ವರ್ಗ ಮತ್ತು ಬಾಲಕಿಯರ ಉನ್ನತ ಶಿಕ್ಷಣ

ಬೆಳಗಾವಿ ನಗರದ ಬಡವರು ಮತ್ತು ಮಧ್ಯಮ ವರ್ಗದ ನಿಲುವುಗಳಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುವುದಿಲ್ಲ. ಮಧ್ಯಮ ವರ್ಗದವರಲ್ಲಿ ಶೇ.೬.೭ ರಷ್ಟು ಕುಟುಂಬದ ನಿರ್ವಹಣೆಗಾಗಿ, ಶೇ.೬.೭ ರಷ್ಟು ಲೈಂಗಿಕ ದೌರ್ಜನ್ಯಗಳಾಗುವ ಭಯದಿಂದಾಗಿ, ಶೇ.೧೩.೨ ರಷ್ಟು ಮನೆಯ ಸಂಪ್ರದಾಯಗಳ ಕಾರಣಕ್ಕಾಗಿ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಅದೇ ಪ್ರಕಾರ ಶೇ.೪೦ ರಷ್ಟು ಮಧ್ಯಮ ವರ್ಗದವರಿಗೆ ತಮ್ಮ ಬಡತನದ ಸ್ಥಿತಿಯಿಂದಾಗಿ, ಶೇ.೨೦ ರಷ್ಟು ವಿವಾಹ ಮಾಡಬೇಕೆನ್ನುವ ಕಾರಣಕ್ಕಾಗಿ, ಶೇ.೬.೭ ರಷ್ಟು ಪರದಾ ಪದ್ಧತಿ, ಶೇ.೬.೭ ರಷ್ಟು ಧಾರ್ಮಿಕ ಶಿಕ್ಷಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಸಾಧ್ಯವಾಗುವುದಿಲ್ಲ ಎನ್ನುವ ಅಸಹಾಯಕತೆ ವ್ಯಕ್ತಪಡಿಸುತ್ತಾರೆ. ಮಧ್ಯಮ ವರ್ಗದವರಲ್ಲಿ ಬಹುಸಂಖ್ಯಾತರು ತಮ್ಮ ಆರ್ಥಿಕ ದುಸ್ಥಿತಿಯಿಂದಾಗಿ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ. ಈ ಸಂಗತಿಯಲ್ಲಿ ಬಡವರು ಮತ್ತು ಶ್ರೀಮಂತರ ನಡುವೆ ವ್ಯತ್ಯಾಸಗಳಿಲ್ಲ.

## ೪.೨೦. ಶ್ರೀಮಂತರು ಮತ್ತು ಬಾಲಕಿಯರ ಉನ್ನತ ಶಿಕ್ಷಣ

ಬಡವರು ಮತ್ತು ಮಧ್ಯಮ ವರ್ಗದವರಿಗೆ ಹೋಲಿಸಿದರೆ ಶ್ರೀಮಂತರ ಅಭಿಪ್ರಾಯಗಳು ಭಿನ್ನವಾಗಿವೆ. ಶ್ರೀಮಂತರಿಗೆ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವಲ್ಲಿ ಬಡತನ, ಮನೆಯ ಸಂಪ್ರದಾಯಗಳು, ಲೈಗಿಂಕ ದೌರ್ಜನ್ಯದ ಆತಂಕಗಳು ಮತ್ತು ಕುಟುಂಬದ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ ಎನ್ನುವ ಸಂಗತಿಗಳು ಅಡ್ಡಿಯಾಗುತ್ತಿಲ್ಲ. ಆದರೆ ಶೇ.೩೩.೩ ರಷ್ಟು ಮಕ್ಕಳಿಗೆ ವಿವಾಹ ಮಾಡುವ ಕಾರಣಕ್ಕಾಗಿ, ಶೇ.೩೩.೩ ರಷ್ಟು ಧಾರ್ಮಿಕ ಶಿಕ್ಷಣದ ಅಗತ್ಯಕ್ಕಾಗಿ ಮತ್ತು ಶೇ.೩೩.೩ ರಷ್ಟು ಉತ್ತಮ ವರ ಸಿಗದಿರುವ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುತ್ತಿಲ್ಲ.

ಭಾರತ ಮತ್ತು ಕರ್ನಾಟಕದ ನೆಲೆಗಳಲ್ಲಿ ಕೈಗೊಂಡ ಅಧ್ಯಯನಗಳು ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಅಡ್ಡಿಯಾಗಿರುವ ಒಟ್ಟು ೨೩ ಅಂಶಗಳನ್ನು ಗುರುತಿಸಿದೆ. ಅವುಗಳಲ್ಲಿ ಬೆಳಗಾವಿ ನಗರದ ಮುಸ್ಲಿಮರ ಅಧ್ಯಯನವು ೮ ಕಾರಣಗಳನ್ನು ಬೆಂಬಲಿಸುತ್ತಿದೆ. ಬೆಳಗಾವಿ ನಗರದ ಬಡವರು ಮತ್ತು ಮಧ್ಯಮ ವರ್ಗದ ಮುಸ್ಲಿಮರಿಗೆ ಬಡತನದ ಕಾರಣಕ್ಕಾಗಿ ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ. ಶ್ರೀಮಂತರಿಗೆ ವಿವಾಹ, ಧಾರ್ಮಿಕ ಶಿಕ್ಷಣ ಮತ್ತು ಉತ್ತಮ ವರ ಸಿಗದಿರುವ ಕಾರಣಗಳು ಅಡ್ಡಿಯಾಗಿವೆ. ವಿ.ಎಲ್ ಲಾವಣ್ಯ ಮತ್ತು ಮಲ್ಲಾರ್ ವಿಜಿ[೪೪] ರವರ ಅಧ್ಯಯನ ಕಂಡುಕೊಂಡಿರುವಂತೆ ಬಡತನದ ಕಾರಣಕ್ಕಾಗಿ ಕುಟುಂಬದ ವೆಚ್ಚವನ್ನು ನಿರ್ವಹಿಸಲು ಬಾಲಕಿಯರು ಕೆಲಸ ಮಾಡುವುದು ಅನಿವಾರ್ಯವಾಗಿದೆ. ಇದರ ಜೊತೆಗೆ ಮನೆಯ ಸಂಪ್ರದಾಯಗಳು ಮುಸ್ಲಿಂ ಬಾಲಕಿಯರನ್ನು ಉನ್ನತ ಶಿಕ್ಷಣದಿಂದ ವಂಚಿಸುತ್ತಿದೆ. ಮಧುಸುಧನ್ ಜೆವಿ[೪೫] ಅಧ್ಯಯನ ಗುರುತಿಸಿರುವಂತೆ ಹೆಣ್ಣು ಮಕ್ಕಳು ಮನೆಗೆಲಸ ಮತ್ತು ಅದಾಯದ ದುಡಿಮೆ ಮುಂತಾದ ಸಂಗತಿಗಳಲ್ಲಿ ಮುಸ್ಲಿಂ ಬಾಲಕಿಯರು ಕಡ್ಡಾಯವಾಗಿ ಭಾಗವಹಿಸಬೇಕಾಗಿರುವುದರಿಂದ ಶಿಕ್ಷಣದಿಂದ ವಂಚಿತರಾಗು ತ್ತಿದ್ದಾರೆ. ಸಬಿಹಾ ಹುಸೇನ್[೪೬] ರವರ ಬಿಹಾರದ ಅಧ್ಯಯನ ಕಂಡುಕೊಂಡಿರುವಂತೆ ಬಾಲ್ಯಾ ವಿವಾಹ ಮುಸ್ಲಿಂ ಮಹಿಳೆಯರ ಶಿಕ್ಷಣ ದಿಂದ ವಂಚಿತರನ್ನಾಗಿಸಿದೆ. ಅಫಿಜ್ ಅಬ್ದುಲ್ ಮಹೂದ್[೪೭] ರವರ ಉತ್ತರ ಪ್ರದೇಶದ ಅಧ್ಯಯನ ಕಂಡುಕೊಂಡಿರುವಂತೆ ಮದರಸಾ ಶಿಕ್ಷಕರು ಮಹಿಳೆಯರಿಗೆ ಕೇವಲ ಧಾರ್ಮಿಕ ಶಿಕ್ಷಣ ಮಾತ್ರ ಅಗತ್ಯವೆಂದು ಪ್ರತಿಪಾದಿಸುತ್ತಾರೆ. ಇದರೊಂದಿಗೆ ಶೇ.೮೦ ರಷ್ಟು ಪೋಷಕರು ಕೂಡ ಮಹಿಳೆಯರಿಗೆ ಕೇವಲ ಧಾರ್ಮಿಕ ಶಿಕ್ಷಣ ಮಾತ್ರ ಅಗತ್ಯವೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇಮಾಮ್ ಪರ್ವೀನ್[೪೮] ರವರ ಉತ್ತರ ಪ್ರದೇಶದ ಅಧ್ಯಯನ ಕಂಡುಕೊಂಡಿರುವಂತೆ ಬಹುತೇಕ ಮುಸ್ಲಿಂ ಮಹಿಳೆಯರು

ಮನೆ ಗೆಲಸ ಮತ್ತು ಬಾಲ್ಯ ವಿವಾಹದ ಕಾರಣದಿಂದಾಗಿ ಶಿಕ್ಷಣದಿಂದಾಗಿ ವಂಚಿತರಾಗುತ್ತಿದ್ದಾರೆ. ರೋಬಿಯಾ ಬೇಗಂ[೪೯] ರವರ ಪಶ್ಚಿಮ ಬಂಗಾಳದ ಅಧ್ಯಯನ ಗುರುತಿಸಿರುವಂತೆ ಬಡತನದ ಕಾರಣದಿಂದಾಗಿ ಶೇ.೨೫.೯ ರಷ್ಟು ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಮುಂದುವರೆಸುವುದು ಸಾಧ್ಯವಾಗುತ್ತಿಲ್ಲ ಸೇರಹತುನ್ನಿಸಾ[೫೦] ರವರ ಮಣಿಪುರದ ಅಧ್ಯಯನ ಗುರುತಿಸಿರುವಂತೆ ಶೇ.೪೭ ರಷ್ಟು ಹೆಣ್ಣು ಮಕ್ಕಳು ಬಡತನದಿಂದಾಗಿ ಶಾಲೆಯನ್ನು ತೊರೆದಿದ್ದಾರೆ. ಮೊಹಮದ್ ಸಂಜಿರ್ ಅಲಂ[೫೧] ರವರ ಅಧ್ಯಯನ ಕೂಡ ಬಹುತೇಕ ಹೆಣ್ಣು ಮಕ್ಕಳು ಆರ್ಥಿಕ ಸಂಕಷ್ಟದಿಂದಾಗಿ ಶಾಲೆಯನ್ನು ಮೊಟಕುಗೊಳಿಸಿರುವುದನ್ನು ಗುರುತಿಸಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಪಿ.ಎಲ್ ಲಾವಣ್ಯ ಮತ್ತು ಮಲ್ಲಾರ್, ರೋಬಿಯಾ ಬೇಗಂ, ಸೇರಹತುನ್ ನಿಸಾ ಮತ್ತು ಮೊಹಮದ್ ಸಂಜಿರ್ ಅಲಂ ರವರ ಅಧ್ಯಯನವನ್ನು ಬೆಂಬಲಿಸುತ್ತದೆ. ಆರಂಭಿಕ ಅಧ್ಯಯನಗಳು ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಇಸ್ಲಾಂ ಧರ್ಮ, ಮುಸ್ಲಿಮರ ಸಂಸ್ಕೃತಿ ಮತ್ತು ಆಚರಣೆಗಳೇ ಪ್ರಧಾನವಾದ ಅಡ್ಡಿಗಳೆಂದು ಗುರುತಿಸುತ್ತವೆ. ಆದರೆ ಇತ್ತೀಚಿನ ಅಧ್ಯಯನಗಳು ಸ್ಪಷ್ಟಪಡಿಸುವ ಪ್ರಕಾರ ಧರ್ಮ ಮತ್ತು ಸಾಂಸ್ಕೃತಿಕ ಅಂಶಗಳಿಗಿಂತ ಕುಟುಂಬಗಳ ಜೀವನ ಮಟ್ಟ ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಅಡ್ಡಿಪಡಿಸುತ್ತಿದೆ. ಬೆಳಗಾವಿ ನಗರದ ಮುಸ್ಲಿಮರಿಗೆ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವಲ್ಲಿ ಬಡತನವೇ ಪ್ರಮುಖವಾದ ಅಡ್ಡಿಯಾಗಿದೆ. ಧರ್ಮ ಮತ್ತು ಸಂಸ್ಕೃತಿಗಳು ಮಹಿಳೆಯರ ಶಿಕ್ಷಣವನ್ನು ಅಡ್ಡಿಪಡಿಸುವ ಸಂಗತಿಗಳಾಗಿ ಉಳಿದು ಕೊಂಡಿಲ್ಲ. ವ್ಯಕ್ತಿ ಮತ್ತು ಸಮುದಾಯಗಳ ಸಾಕ್ಷರತೆ ಮತ್ತು ಶಿಕ್ಷಣವನ್ನು ಹೆಚ್ಚಿಸುವಲ್ಲಿ ಸರ್ಕಾರಗಳು ಪ್ರಮುಖ ಪಾತ್ರ ವಹಿಸುತ್ತವೆ. ಕಳೆದ ಎಪ್ಪತ್ತು ದಶಕಗಳಲ್ಲಿ ಸರ್ಕಾರಗಳು ಶೈಕ್ಷಣಿಕ ಬದಲಾವಣೆ ತರುವಲ್ಲಿ ವಿವಿಧ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ. ಆದರೂ ಮುಸ್ಲಿಮರ ವಿಶೇಷವಾಗಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪ್ರಗತಿ ನಿರೀಕ್ಷಿತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ. ಕೇವಲ ಸರ್ಕಾರಗಳ ಕ್ರಮಗಳಿಂದಲೇ ಮುಸ್ಲಿಮರ ಶೈಕ್ಷಣಿಕ ಪ್ರಗತಿ ಸಾಧ್ಯವಾಗುವುದಿಲ್ಲ. ಸರ್ಕಾರಗಳ ಕ್ರಮಗಳ ಜೊತೆಗೆ ನಾಗರೀಕ ಸಮಾಜಗಳ ಪಾಲ್ಗೊಳ್ಳುವಿಕೆಯೂ ಅಗತ್ಯವೆಂದು ಪ್ರತಿಪಾದಿಸಲಾಗುತ್ತಿದೆ. ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪ್ರಗತಿಯಲ್ಲಿ ಸರ್ಕಾರಗಳು ಮತ್ತು ನಾಗರೀಕ ಸಮಾಜಗಳ ಪಾತ್ರವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ಕೋಷ್ಟಕ–32

**ಇಸ್ಲಾಂ ಧರ್ಮ ಮಹಿಳೆಯರಿಗೆ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವುದರ ಅರಿವು**

| ಕ್ರಸಂ | ಅಭಿಪ್ರಾಯಗಳು | ಪ್ರಮಾಣ |
|---|---|---|
| 1 | ಹೌದು | 13 (11.1%) |
| 2 | ಇಲ್ಲಾ | 69 (59%) |
| 3 | ಗೊತ್ತಿಲ್ಲಾ | 10 (8.5%) |
| 4 | ಆಧುನಿಕ ಶಿಕ್ಷಣ ಮಾತ್ರ | 09 (7.7%) |
| 5 | ಉನ್ನತ ಶಿಕ್ಷಣ ಮಾತ್ರ | 16 (13.7%) |
| | ಒಟ್ಟು | **117 (100%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

### ಕೋಷ್ಟಕ–33

**ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಇಸ್ಲಾಂ ಮತ್ತು ಮಹಿಳಾ ಶಿಕ್ಷಣದ ನಡುವಿನ ಸಂಬಂಧಗಳ ಅರಿವು**

| ಕ್ರಸಂ | ಅಭಿಪ್ರಾಯಗಳು | ಅನಕ್ಷರಸ್ಥರು | ಪ್ರಾಥಮಿಕ ಶಿಕ್ಷಣ ಪಡೆದವರು | ಪ್ರೌಢ ಶಿಕ್ಷಣ/ ಪಿ.ಯು.ಸಿ ಪಡೆದವರು | ಪದವಿ ಶಿಕ್ಷಣ ಪಡೆದವರು | ಸ್ನಾತಕೋತ್ತರ ಶಿಕ್ಷಣ |
|---|---|---|---|---|---|---|
| 1 | ಹೌದು | 34 (69.4%) | 13(52%) | 07(33.3%) | – | – |
| 2 | ಇಲ್ಲಾ | 03 (6.1%) | 04(16%) | 10(47.6%) | 15(88.2%) | 05 (100%) |
| 3 | ಗೊತ್ತಿಲ್ಲಾ | 08 (16.3%) | 04(16%) | 03(14.3%) | 02 (11.8%) | – |
| 4 | ಆಧುನಿಕ ಶಿಕ್ಷಣ ಮಾತ್ರ | 03 (6.1%) | 02(8%) | 01(4.8%) | – | – |
| 5 | ಉನ್ನತ ಶಿಕ್ಷಣ ಮಾತ್ರ | 01 (2.1%) | 02(8%) | – | – | – |
| 6 | ಒಟ್ಟು | **49 (100%)** | **25(100%)** | **21(100%)** | **17 (100%)** | **05 (100%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–34

### ಬೆಳಗಾವಿ ನಗರದ ವಿವಿಧ ಮುಸ್ಲಿಂ ಕುಟುಂಬಗಳಲ್ಲಿ ವ್ಯಾಸಂಗ ಮಾಡುತ್ತಿರುವ ಬಾಲಕಿಯರ ವಿವರ

| ಕ್ರ.ಸಂ | ಪೋಷಕರ ವಿವಿಧ ಶೈಕ್ಷಣಿಕ ಮಟ್ಟ | ಪಿ.ಯು.ಸಿ | ಪದವಿ | ತಾಂತ್ರಿಕ | ಸ್ನಾತಕ | ಒಟ್ಟು |
|---|---|---|---|---|---|---|
| 1 | ಅನಕ್ಷರಸ್ಥರು | 06(66.7%) | 03(33.3%) | 00 | 00 | **09(100%)** |
| 2 | ಪ್ರಾಥಮಿಕ | 07(58.3%) | 04(33.4%) | 01(8.3%) | 00 | **12(100%)** |
| 3 | ಪ್ರೌಢಶಿಕ್ಷಣ | 08(53.3%) | 04(26.7%) | 02(13.3%) | 01(6.7%) | **15(100%)** |
| 4 | ಪದವಿ | 08(34.8%) | 08(34.8.%) | 05(21.7%) | 02(8.7%) | **23(100%)** |
| 5 | ಸ್ನಾತಕೋತ್ತರ | 01(11.1%) | 01(11.1%) | 04(44.5%) | 03(33.3%) | **09(100%)** |
| | **ಒಟ್ಟು** | **30(44.1%)** | **20(29.4%)** | **12(17.6%)** | **06(8.9%)** | **68(100%)** |

ಮಾಹಿತಿಯ ಮೂಲ: 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–35

### ಬಾಲಕಿಯರಿಗೆ ಉನ್ನತ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡುತ್ತಿರುವವರು

| ಕ್ರ.ಸಂ | ಬಾಲಕಿಯರ ಕುಟುಂಬಗಳ ಶೈಕ್ಷಣಿಕ ಮಟ್ಟ | ತಂದೆ | ತಾಯಿ | ಶಿಕ್ಷಕರು | ಒಟ್ಟು |
|---|---|---|---|---|---|
| 1 | ಅನಕ್ಷರಸ್ಥ ಕುಟುಂಬಗಳು | 02(22.3%) | 04(44.4%) | 03(33.3%) | 09 (13.2%) |
| 2 | ಪ್ರಾಥಮಿಕ ಶಾಲಾ ಮಟ್ಟದ ಕುಟುಂಬಗಳು | 07(58.3%) | 02(16.7%) | 03(25%) | 12(17.7%) |
| 3 | ಪ್ರೌಢಶಿಕ್ಷಣ ಮಟ್ಟದ ಕುಟುಂಬಗಳು | 10(83.4%) | 01(8.3%) | 01(8.3%) | 12(17.7%) |
| 4 | ಪದವಿ ಮಟ್ಟದ ಕಟುಂಬಗಳು | 18(72%) | 03(12%) | 04(16%) | 25(36.7%) |
| 5 | ಸ್ನಾತಕೋತ್ತರ ಮಟ್ಟದ ಕುಟುಂಬಗಳು | 07(70%) | 03(30%) | 00(00%) | 10(14.7%) |
| | ಒಟ್ಟು | **44 (64.7%)** | **13 (19.1%)** | **11 (16.2%)** | **68(100%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ-36

### ಬೆಳಗಾವಿ ನಗರದ ವಿವಿಧ ವೃತ್ತಿಯಲ್ಲಿ ತೊಡಗಿರುವ ಮುಸ್ಲಿಂ ಕುಟುಂಬಗಳು ಹಾಗೂ ವಿವಿಧ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಬಾಲಕಿಯರ ವಿವರ

| ಕ್ರ.ಸಂ | ಕುಟುಂಬಗಳ ಮುಖ್ಯಸ್ಥರ ವಿವಿಧ ವೃತ್ತಿಗಳು | ವಿವಿಧ ತರಗತಿಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ | | | | |
|---|---|---|---|---|---|---|
| | | ಪಿ.ಯು.ಸಿ | ಪದವಿ | ತಾಂತ್ರಿಕ | ಸ್ನಾತಕೋತ್ತರ | ಒಟ್ಟು |
| 1 | ಕೂಲಿ ಕಾರ್ಮಿಕರು | 02(3%) | 01(1.4%) | 00(00%) | 00(00%) | 03(4.4%) |
| 2 | ಸಣ್ಣ ವ್ಯಾಪಾರಿಗಳು | 03(4.4%) | 02(3%) | 01(1.4%) | 00(00%) | 06(8.8%) |
| 3 | ಸ್ವಯಂ ಉದ್ಯೋಗ | 05(7.4%) | 05(7.4%) | 03(4.4%) | 01(1.4%) | 14(20.6%) |
| 4 | ಖಾಸಗಿ ಉದ್ಯೋಗ | 15(22.0%) | 03(4.4%) | 06(8.8%) | 02(3%) | 26(38.2%) |
| 5 | ಸರ್ಕಾರಿ ಉದ್ಯೋಗ | 05(7.4%) | 09(13.2%) | 02(3%) | 03(4.4%) | 19(28%) |
| ಒಟ್ಟು | | **30(44.1%)** | **20(29.4%)** | **12(17.7%)** | **06(8.8%)** | **68(100%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು.2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ-37

### ಲಿಂಗಸಂಬಂಧಿತ ಮತ್ತು ಸಾಮಾಜಿಕ ಅಂದಾಜು ಅಧ್ಯಯನಗಳ ಪ್ರಕಾರ ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿರುವ ಅಂಶಗಳು

| ಸಾರ್ವತ್ರಿಕ ಉಲ್ಲೇಖಿತ ಅಡ್ಡಿಗಳು | ಸಾಂದರ್ಭಿಕ ಅಡ್ಡಿಗಳು | ಸ್ಥಳಿಯವಾದ ನಿರ್ದಿಷ್ಟ ಅಡ್ಡಿಗಳು |
|---|---|---|
| 1. ಸಣ್ಣ ಮಕ್ಕಳ ಆರೈಕೆ.<br>2. ಬಾಲ್ಯ ವಿವಾಹ.<br>3. ಗೃಹಕಾರ್ಯಗಳು.<br>4. ಪೋಷಕರ ಅನಕ್ಷರತೆ.<br>5. ಪೋಷಕರ ಉತ್ತೇಜನವಿಲ್ಲದಿರುವುದು.<br>6. ಪೋಷಕರ ವೃತ್ತಿಗಳಲ್ಲಿ ಸಹಾಯ.<br>ಪೋಷಕರಿಗೆ ಶೈಕ್ಷಣಿಕ ಖರ್ಚು ನಿಭಾಯಿಸುವ ಸಾರ್ಮಥ್ಯವಿಲ್ಲದಿರುವುದು. | 1. ಹೊಂದಾಣಿಕೆಯಾಗದ ಶಾಲಾ ಸಮಯ.<br>2. ಶಿಕ್ಷಕರ ನಕಾರಾತ್ಮಕ ವರ್ತನೆ.<br>3. ಶಿಕ್ಷಕರ ಸತತ ಗೈರುಹಾಜರಿ<br>4. ಸೂಕ್ತ ಪಠ್ಯಕ್ರಮದ ಕೊರತೆ.<br>5. ಮಹಿಳಾ ಶಿಕ್ಷರಿಲ್ಲದಿರುವುದು.<br>ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳಿಲ್ಲದಿರುವುದು | 1. ಶಾಲೆಗಳು ದೂರದ ಅಂತರದಲ್ಲಿರುವುದು<br>2. ಗೃಹ ಮತ್ತು ಕೌಟುಂಬಿಕ ಜವಾಬ್ದಾರಿಗಳು.<br>3. ಪೋಷಕರಿಗೆ ಪಠ್ಯದಲ್ಲಿ ಆಸಕ್ತಿ ಇಲ್ಲದಿರುವುದು.<br>4. ವಲಸೆ ಮತ್ತು ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಳ್ಳುವುದು.<br>5. ಪರ್ದಾಪದ್ಧತಿ ಮತ್ತು ಧಾರ್ಮಿಕ ಶಿಕ್ಷಣಕ್ಕೆ ಒತ್ತು ನೀಡುವುದು<br>6. ಬೆಂಬಲ ನೀಡುವ ವ್ಯವಸ್ಥೆ ಇಲ್ಲದಿರುವುದು.<br>ಅಕಾಲಿಕ ಪರಿಸ್ಥಿತಿಯ ವಲಸೆ |

**ಮಾಹಿತಿ ಮೂಲ:** ವಾರ್ಷಿಕ ವರದಿ, ಮಾನವ ಸಂಪನ್ಮೂಲ ಇಲಾಖೆ, ಭಾರತ ಸರ್ಕಾರ, 2007/08

## ಕೋಷ್ಟಕ–38

### ಭಾರತ ಮತ್ತು ಕರ್ನಾಟಕದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿಗಳು

| ಭಾರತ ಮತ್ತು ಕರ್ನಾಟಕದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿಗಳು | |
|---|---|
| 1. ಕುಟುಂಬದ ನಿರ್ವಹಣೆಗಾಗಿ ಮನೆಯ ಹೊರಗಡೆ ಕೆಲಸ ಮಾಡುವ ಅನಿವಾರ್ಯತೆ, | 12. ಅನಾರೋಗ್ಯ, ಮನೆಗೆಲಸ ಮತ್ತು ಧಾರ್ಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುವುದು |
| 2. ಸುಶಿಕ್ಷಿತ ಮಹಿಳಾ ಶಿಕಕಿಯರ ಕೊರತೆ, | 13. ಸಮುದಾಯದ ಬೆಂಬಲ ಇಲ್ಲದಿರುವು, |
| 3. ಲೈಂಗಿಕ ದೌರ್ಜನ್ಯದ ಭಯ, | 14. ಪರದಾ ಪದ್ಧತಿ, ಕಲಿಕೆಯಲ್ಲಿ ನಿರಾಸಕ್ತಿ, |
| 4. ಸೂಕ್ತವಲ್ಲದ ಶಾಲಾ ಸಮಯ, | 15. ಶಾಲೆಗಳ ಅಂತರ, |
| 5. ಮನೆಯ ಸಂಪ್ರದಾಯಗಳು, | 16. ಉತ್ತಮ ಮನೆ ಇಲ್ಲದಿರುವುದು, |
| 6. ಬಡತನದ ಸಮಸ್ಯೆ | 17. ವಿದ್ಯುತ್ಚ್ಛಕ್ತಿ ಇಲ್ಲದಿರುವುದು, |
| 7. ಮಾಧ್ಯಮದ ಸಮಸ್ಯೆ, | 18. ಉದ್ಯೋಗದ ಬರವಸೆ ಇಲ್ಲದಿರುವುದು, |
| 8. ಶಾಲೆಗಳ ಭೌತಿಕ ಸ್ಥಿತಿ, | 19. ಮಹಿಳೆಯರಿಗೆ ಪ್ರತ್ಯೇಕಶಾಲೆ ಹಾಗೂ ಶೌಚಾಲಯ ಇಲ್ಲದಿರುವುದು ಪೋಷಕರ ಅನಕ್ಷರತೆ |
| 9. ಕ್ಲಿಷ್ಟ ಬೋಧನ ಕಲಿಕೆ, | 20. ಪೋಷಕರ ನಿರುತ್ಸಾಹ, |
| 10. ಬಾಲ್ಯಾ ವಿವಾಹ, | 21. ಹೆಣ್ಣು ದಾರಿ ತಪ್ಪುವ ಭಯ, |
| 11. ದುಬಾರಿ ವೆಚ್ಚ, | 22. ಶಿಕ್ಷಣದಿಂದ ಗಂಡು ಸಿಗದೆ ಇರುವುದು ಶಿಕ್ಷಕರ ಅನುಚಿತ ವರ್ತನೆ. |
| | 23. ಬಾಲಕಿಯರ ಹೆಚ್ಚಿನ ವಯೋಮಾನ |

**ಮಾಹಿತಿ ಮೂಲ:** ಭಾರತೀಯ ಅಧ್ಯಯನಗಳು

## ಕೋಷ್ಟಕ–39

### ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಶಿಕ್ಷಣದ ಬಗ್ಗೆ ಪೋಷಕರ ಅಭಿಪ್ರಾಯಗಳ ವಿವರ

| ಕ್ರ ಸಂ | ಬೆಳಗಾವಿ ನಗರದ ಮುಸ್ಲಿಮರ ವಿವಿಧ ಆದಾಯ ಗುಂಪುಗಳು | ಉನ್ನತ ಶಿಕ್ಷಣವನ್ನು ಬೆಂಬಲಿಸದವರು | ಕನಿಷ್ಟ ಶಿಕ್ಷಣವನ್ನು ಬೆಂಬಲಿಸುವವರು | ಒಟ್ಟು |
|---|---|---|---|---|
| 1 | ಬಡವರು | 56 (48%) | 34 (29%) | 90 (77%) |
| 2 | ಮಧ್ಯಮ ವರ್ಗದವರು | 15 (12.8%) | 08 (6.8%) | 23 (19.6%) |
| 3 | ಶ್ರೀಮಂತರು | 03 (2.6%) | 01 (0.8%) | 04 (3.4%) |
| | ಒಟ್ಟು | 74 (63.4%) | 43 (36.6%) | 117 (100%) |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–40

### ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡಲು ಬಯಸದ ಬೆಳಗಾವಿ ನಗರದ ಒಟ್ಟು ಮುಸ್ಲಿಮರು

| 1 ಅಡ್ಡಿಯ ವಿವಿಧ ಕಾರಣಗಳು | | ಕುಟುಂಬ ನಿರ್ವಹಣೆ | ಲೈಂಗಿಕ ದೌರ್ಜನ್ಯ | ಮನೆಯ ಸಂಪ್ರದಾಯ | ಬಡತನ | ಬಾಲ್ಯ ವಿವಾಹ | ಪರದಾ ಪದ್ಧತಿ | ಧಾರ್ಮಿಕ ಶಿಕ್ಷಣ | ಉತ್ತಮ ಗಂಡು ಸಿಗದಿರುವುದು |
|---|---|---|---|---|---|---|---|---|---|
| 2 ಒಟ್ಟು ಮುಸ್ಲಿಮರು | 74 (63.4%) | 09 (12.1%) | 04 (5.4%) | 06 (8.1%) | 39 (52.7%) | 08 (11%) | 03 (4.0%) | 03 (4.0%) | 02 (2.7%) |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–41

### ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಿಲ್ಲ ಎನ್ನುವ ತೀರ್ಮಾನಕ್ಕೆ ಕಾರಣಗಳು

| ಕ್ರ.ಸಂ | ವಿವಿಧ ಗುಂಪುಗಳು ಆದಾಯದ | ಒಟ್ಟು ಕುಟುಂಬಗಳು | ಕುಟುಂಬಗಳು ನೀಡುವ ಕಾರಣಗಳು | | | | | | | |
|---|---|---|---|---|---|---|---|---|---|---|
| | | | ಕುಟುಂಬ | ಲೈಂಗಿಕ ನಿರ್ವಹಣೆ | ಮನೆಯ ದೌರ್ಜನ್ಯ | ಬಡತನ ಸಂಪ್ರದಾಯ | ಬಾಲ್ಯ ವಿವಾಹ | ಪರದಾ ಪದ್ಧತಿ | ಧಾರ್ಮಿಕ ಶಿಕ್ಷಣ | ಉತ್ತಮ ಗಂಡು ಸಿಗದಿರುವುದು |
| 1 | ಬಡವರು | 56 (48%) | 08 (14.2%) | 03 (5.3%) | 04 (7.2%) | 33 (59%) | 04 (7.2%) | 02 (3.5%) | 01 (1.8%) | 01 (1.8%) |
| 2 | ಮಧ್ಯಮ ವರ್ಗ | 15 (12.8%) | 01 (6.7%) | 01 (6.7%) | 02 (13.2%) | 06 (40%) | 03 (20%) | 01 (6.7%) | 01 (6.7%) | 00 (00%) |
| 3 | ಶ್ರೀಮಂತರು | 03 (2.6%) | 00 (00%) | 00 (00%) | 00 (00%) | 00 (00%) | 01 (33.3%) | 00 (00%) | 01 (33.3%) | 01 (33.3%) |
| | ಒಟ್ಟು | 74 (63.4%) | 09 (12.1%) | 04 (5.4%) | 06 (8.1%) | 39 (52.7%) | 08 (11%) | 03 (4.0%) | 03 (4.0%) | 02 (2.7%) |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಪರಾಮರ್ಶನ ಗ್ರಂಥಗಳು


೧. ವಿ.ಎಲ್ ಲಾವಣ್ಯ ಅಮಡ್ ವಿ. ಮಲಾರ್ ವಿಜಿ, "ಎಂಪರ್‌ಮೆಂಟ್ ಆಫ್ ವಿಮೆನ್ ಥ್ರೂ ಎಜುಕೇಷನ್ ಇನ್ ಇಂಡಿಯ", *ಜರ್ನಲ್ ಆಫ್ ಎಜುಕೇಷನ್ ರಿಸರ್ಚ್ ಅಂಡ್ ಎಕ್ಸಟೆನ್ಷನ್*, ವಾ.ಸಂ. ೪೮, ಸಂ.೩, ಜುಲೈ-ಸೆಪ್ಟಂಬರ್, ೨೦೧೧, ಪು.ಸಂ ೮-೧೫

೨. ಆರ್.ಕೆ. ರಾವ್. *ವಿಮೆನ್ ಅಂಡ್ ಎಂಪರ್‌ಮೆಂಟ್*, ಕಲ್‌ಪಾಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ೨೦೦೧, ಪು.ಸಂ ೧೫೫-೧೫೭

೩. ಅಹಮದ್ .ಎಲ್,"ಎಜುಕೇಷನಲ್ ಡೆವೆಲಪ್‌ಮೆಂಟ್ ಆಫ್ ಮೈನಾರಿಟೀಸ್ ಇನ್ ಇಂಡಿಯ: ಫ್ಯೂಚರ್ ಪರ್ಸ್‌ಪೆಕ್ಟಿವ್", *ಎಜುಕೇಷನ್ ಪ್ಲಾನಿಂಗ್ ಅಂಡ್ ಅಡ್‌ಮಿನಿಸ್ಟ್ರೇಷನ್*, ೧೯೮೭ ವಾ.ಸಂ.೧, ಸಂ.೨, ಪು.ಸಂ ೨೦೧

೪. ಜಾವೀದ್ ಅಖ್ತರ್, "ಮುಸ್ಲಿಂ ವಿಮೆನ್ಸ್ ಎಜುಕೇಷನ್ ಇನ್ ಇಂಡಿಯ", ಇನ್ *ಮೋಹಿನಿ ಅಂಜುಮ್ (ಸಂ) ಮುಸ್ಲಿಂ ವಿಮೆನ್ ಇನ್ ಇಂಡಿಯ*, ರೇಡಿಯಂಟ್ ಪಬ್ಲಿಷರ್ಸ್, ನ್ಯೂಡೆಲ್ಲಿ, ೧೯೯೨, ಪು.ಸಂ ೭೫

೫. ಸಬೋತ್ ರಾಯ್. ಎಸ್, *ಸ್ಟೇಟಸ್ ಆಫ್ ಮುಸ್ಲಿಂ ವಿಮೆನ್ ಇನ್ ನಾರ್ತ್ ಇಂಡಿಯ : ಎ ಸ್ಟಡಿ ಇನ್ ಡೈನಾಮಿಕ್ ಛೇಂಜೆಸ್*, ನ್ಯೂಡೆಲ್ಲಿ, ಬಿ.ಆರ್. ಪಬ್ಲಿಷಿಂಗ್ ಕಾರ್ಪೂರೇಷನ್, ೧೯೭೯, ಪು.ಸಂ ೧೪೨-೧೪೭, ಮತ್ತು ಇಂದು ಮೆನನ್, *ಸ್ಟೆಟಸ್ ಆಫ್ ಮುಸ್ಲಿಂ ವಿಮೆನ್ ಇಂಡಿಯ*, ಉಪ್ಪಲ್ ಪಬ್ಲಿಕೇಷನ್, ೧೯೮೧, ನ್ಯೂಡೆಲ್ಲಿ, ಪು.ಸಂ ೨೦೫-೨೦೭ ಮತ್ತು ಅಗರವಾಲ್.ಎಂ. *ಎಜುಕೇಷನ್ ಅಂಡ್ ಮಾರ್ಡನೈಜೇಷನ್, ಎ ಸ್ಟಡಿ ಆಫ್ ಹಿಂದು ಅಂಡ್ ಮುಸ್ಲಿಂ ವಿಮೆನ್*, ಎಜುಕೇಷನ್ ರಿಸರ್ಚ್ ಪಬ್ಲಿಕೇಷನ್, ನ್ಯೂಡೆಲ್ಲಿ, ೧೯೮೬, ಪು.ಸಂ ೫೬, ಮತ್ತು ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೩-೧೪೬

೬. ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೫೩-೬೬.

೭ ಅಸೀಲ್ ಸೀಲ್, *ದಿ ಎಮರ್ಜೆನ್ಸ್ ಆಫ್ ಇಂಡಿಯನ್ ನ್ಯಾಷನ್ಯಾಲಿಸಂ*, ಕೇಂಬ್ರಿಡ್ಜ್, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್,೧೯೬೮, ಪು.ಸಂ ೩೫-೪೮, ಮತ್ತು ಡಬ್ಲ್ಯೂ.ಸಿ.ಸ್ಮಿತ್,

೧೯೪೬, ಮಾಡರ್ನ್ ಇಸ್ಲಾಂ ಇನ್ ಇಂಡಿಯ: ಎ *ಸೋಶಿಯಾಲಾಜಿಕಲ್ ಎನಾಲಿಸಿಸ್*, ನ್ಯೂಡೆಲ್ಲಿ, ಉಷಾ ಪಬ್ಲಿಕೇಷನ್, ರಿಪ್ರಿಂಟ್, ೧೯೭೯, ಪು.ಸಂ ೫೮–೬೯

೮. ಜಾಫರ್ ಇಮಾಮ್ (ಸಂ), *ಸಂಸ್ಥೆಸ್ಪೆಕ್ಟ್ಸ್ ಆಫ್ ದ ಸೋಶಿಯಲ್ ಸ್ಟ್ರಕ್ಚರ್*, ಮುಸ್ಲಿಮ್ಸ್ ಇನ್ ಇಂಡಿಯ ನ್ಯೂಡೆಲ್ಲಿ, ಓರಿಯಂಟ್ ಲಾಂಗ್‌ಮನ್, ಪು.ಸಂ ೭೦–೧೧೦

೯. ಬೇಗ್ ಎಂ. ಆರ್.ಎ ವಾಟ್ ಎಲ್ಸ್ ಎಜುಕೇಷನ್, *ಮುಸ್ಲಿಂ ಡೈಲೆಮಾ ಇನ್ ಇಂಡಿಯ*, ಡೆಲ್ಲಿ, ವಿಕಾಸ್ ಪಬ್ಲಿಷಿಂಗ್ ಹೌಸ್,೧೯೭೪, ಪು.ಸಂ೬

೧೦. ಬೇಗ್ ಎಂ. ಆರ್.ಎ ಪೂರ್ವೋಕ್ತ ಪು.ಸಂ ೭

೧೧. ಮೇಯರ್ .ಎ. ಅಂಡ್ ಹೆಚ್.ಎಸ್. ಶಾರ್ಪ್, "ರಿಲೀಜಿಯಸ್ ಪ್ರಿಫರೆನ್ಸೆಸ್ ಅಂಡ್ ವರ್ಲ್ಡ್ಲಿ ಸಕ್ಸೆಸ್" *ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಪಂ. ೨೭, ಪು.ಸಂ ೨೧೮–೨೨೭ ಮತ್ತು ವರ್ಸೂಫ್(ಸಂ), "ಆಚೀವ್ ಮೆಂಟ್, ಮೋಟಿವೇಷನ್, ಅಂಡ್ ರಿಲೀಜಿಯಸ್ ಬ್ಯಾಕ್ ಗ್ರೌಂಡ್" *ಅಮೇರಿಕನ್ ಸೋಶಿಯಾಲಾಜಿಕಲ್ ರಿವ್ಯೂ*, ೧೯೬೨, ವಾ.ಸಂ.೨೭ ಪು.ಸಂ ೨೦೫–೨೧೮ ಮತ್ತು ಸಿ.ಡಬ್ಲ್ಯೂ, ಮುಲ್ಲರ್, "ಎವಿಡೆನ್ಸ್ ಆನ್ ದ ರಿಲೇಷನ್‌ಶಿಪ್ ಬಿಟ್ವೀನ್ ರಿಲಿಜಿಯನ್ ಅಂಡ್ ಎಜುಕೇಷನ್ ಅಟೇನ್‌ಮೆಂಟ್ ಸೋಶಿಯಾಲಜಿ ಅಫ್ ಎಜುಕೇಷನ್", ೧೯೮೦ ವಾ.ಸಂ. ೨೩ ಪು.ಸಂ ೧೪೦–೧೫೨, ಮತ್ತು ಹಿರ್ಚಮನ್ ಅಂಡ್ ಎಲ್.ಎಂ. ಫಾಲ್‌ಕೋನ್, "ದ ಎಜುಕೇಷನ್‌ಲ್ ಅಟೇನ್‌ಮೆಂಟ್ ಆಫ್ ರಿಲೀಜಿಯೋ–ಎಥ್‌ನಿಕ್ ಗ್ರೂಪ್ ಇನ್ ದ ಯುನೈಟೆಡ್ ಸ್ಟೇಟ್ಸ್", *ರಿಸರ್ಚ್‌ಇನ್ ಸೋಶಿಯೋಲಜಿ ಆಫ್ ಎಜುಕೇಷನ್ ಅಂಡ್ ಸೋಶಿಯಾಲೈಜೇಷನ್*, ೧೯೮೮, ವಾ.ಸಂ ೫, ಪು.ಸಂ ೮೩–೧೨೦ ಮತ್ತು ಸ್ಯಾಡರ್ಸ್ ಡಬ್ಲ್ಯೂ, "ದ ಎಫೆಕ್ಟ್ ಆಫ್ ಎಥ್‌ಸಿಸಿಟಿ ಅಂಡ್ ರಿಲಿಜಿಯನ್ ಆನ್ ಎಜುಕೇಷನ್‌ಲ್ ಅಟೇನ್‌ಮೆಂಟ್", *ಎಕನಾಮಿಕ್ ಆಫ್ ಎಜುಕೇಷನ್ ರಿವ್ಯೂ*, ೧೯೯೨, ವಾ.ಸಂ.೧೧ ಪು.ಸಂ ೧೯–೩೫, ಉಲ್ಲೇಖ: ಮಾಹಮದ್ ಸಂಜೀರ್ ಅಲಂ, ಅಂಡ್ ಸರಸ್ವತಿ ರಾಜು, "ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯನ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", ಇಕನಾಮಿಕ್ ಅಂಡ್ ಪೂಲಿಟಿಕಲ್ ವೀಕ್ಲಿ, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು.ಸಂ ೧೬೧೩–೧೬೨೨

೧೨. ಬೇಗ್ ಎಂ.ಅರ್. ಎ, ಪೂರ್ವೋಕ್ತ ಪು.ಸಂ ೧೭೫

೧೩. ಶರ್ಮ ಕೆ.ಡಿ, *ಎಜಿಕೇಷನ್ ಆಫ್ ಎ ನ್ಯಾಷನಲ್ ಮೈನಾರಿಟಿ: ಎ ಕೇಸ್ ಆಫ್ ಇಂಡಿಯನ್* ಮುಸ್ಲಿಮ್ಸ್, ಕಮಲಾಕರ್ ಪ್ರಕಾಶನ್, ನ್ಯೂಡೆಲ್ಲಿ, ೧೯೭೮, ಪು.ಸಂ ೪೪–೪೮

೧೪. ಅಮೀರ್ ಅಲಿ, *ಎಥಿಕ್ಸ್ ಆಫ್ ಇಸ್ಲಾಂ ಇನ್ ಕಲ್ಕತ್ತ*, ೧೯೩೦, ಪು-೧೬೧೪, ಆಂಡ್ ಶಫೀದ ಅಲ್ ಹರೀರಿ, *ಇಸ್ಲಾಂಸ್ ಪಾಯಿಂಟ್ ಆಫ್ ವ್ಯೂವ್ ಆನ್ ವಿಮೆನ್ಸ್ ಎಜಿಕೇಷನ್ ಇನ್ ಸೌದಿ ಅರೇಬಿಯ*, ಕಂಪ್ಯಾರೇಟಿವ್ ಎಜುಕೇಷನ್, ೧೯೮೭, ವಾಸ, ೨೩ ಪು.ಸಂ ೩೧-೩೭

೧೫. ಜೆ.ಎಸ್. ಸಿಂಗ್, *ಮುಸ್ಲಿಂ ಇನ್ ಇಂಡಿಯ ಆನ್ಯೂಯಲ್ ಪಬ್ಲಿಕೇಷನ್ಸ್*, ನ್ಯೂಡೆಲ್ಲಿ, ೨೦೦೩ ಪು.ಸಂ ೧೯೪

೧೬. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರೆಫರೆನ್ಸ್ ಪ್ರಸ್, ೨೦೦೩, ಪು-೨೯೯-೩೦೬ ಮತ್ತು ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್", *ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧-೧೭೦

೧೭. ಒಬನ್ಯ ಪಿ.*ರಿವೈಟಲೈಜಿಂಗ್ ಎಜುಕೇಷನ್ ಇನ್ ಆಫ್ರಿಕ*, ಇಬಾಡನ್, ಸ್ಟರ್ಲಿಂಗ್-ಹೋರ್ಡೆನ್ ಪಬ್ಲೀಷರ್ಸ್, ನೈಜೇರಿಯಾ, ೨೦೦೨, ಪು.ಸಂ ೧೩೦-೧೩೫

೧೮. ದುಲಿಯೇಮಿ.ಎ.ಎನ್, "ಗರ್ಲ್ ಚೈಲ್ಡ್ ಎಜುಕೇಷನ್ ಆಂಡ್ ಎಂಪವರ್‌ಮೆಂಟ್", *ಕಿನೋಟ್ ಅಡ್ರಸ್ ಪ್ರೆಸೇಂಟೆಡ್ ಆಟ್ ವರ್ಕ್‌ಷಾಪ್ ಫಾರ್ ಸೀನಿಯರ್ ಸೆಕೆಂಡರಿ ಸ್ಕೂಲ್ ಫೀಮೇಲ್ ಸ್ಟೂಡೆಂಟ್ಸ್, ಟೀಚರ್ಸ್ ಆಂಡ್ ಎಜುಕೇಷನ್ ಆಫೀಸರ್ಸ್ ಇನ್ ಓಂಡೊ ಸೌತ್‌ವೆಸ್ಟ್ ಸೇನಾಟೋರಿಯಲ್ ಡಿಸ್ಟ್ರಿಕ್ಸ್*, ಒಕಿಟಿಪೂಪ ಉಲ್ಲೇಖ: ಆದೇಜುಮ್ ಓಜೀರೆ ಆಂಡ್ ಓಕೊಮೊಲಾಫೇ, "ಎಂಪವರಿಂಗ್ ಫಿಮೇಲ್ ಯೂತ್ ಥ್ರೂ ಹೈಯರ್ ಎಜುಕೇಷನ್ ಇನ್ ನೈಜೇರಿಯ", *ಜರ್ನಲ್ ಆಫ್ ಎಮರ್ಜಿಂಗ್ ಟ್ರೆಂಡ್ಸ್ ಇನ್ ಎಜುಕೇಷನಲ್ ರೀಸರ್ಚ್ ಆಂಡ್ ಪಾಲಿಸಿ ಸ್ಟಡೀಸ್*, ೨೦೦೯, ವಾ.ಸಂ.೧, ಸಂ.೨, ಪು.ಸಂ ೩೦-೩೪

೧೯. ಯಾದವ್ ಎನ್, "ಎಜುಕೇಷನ್ ಫಾರ್ ವಿಮೆನ್", ನ್ಯೂಡೆಲ್ಲಿ, ರೆಫರೆನ್ಸ್ ಪ್ರಸ್, ೨೦೦೩, ಪು-೨೯೯-೩೦೬ ಮತ್ತು ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್",*ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧-೧೭೦

೨೦. ಅಹಮದ್ ಜವಾದ್. ಹೆಚ್, *ರೈಟ್ಸ್ ಆಫ್ ವಿಮೆನ್ ಇನ್ ಇಸ್ಲಾಂ*, ನ್ಯೂಯಾರ್ಕ್, ಸೇಂಟ್ ಮಾರ್ಟಿನ್ಸ್ ಪ್ರಸ್, ೧೯೯೮, ಪು.ಸಂ ೨೦-೨೧

೨೧. ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್",ಇನ್ಸ್ಟಿಟ್ಯೂಟ್ ಆಫ್ *ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್*, ೧೯೮೯, ವಾ.ಸಂ.೧೦, ಸಂ.೧, ಪು.ಸಂ ೧೬೧-೧೭೦

೨೨. ಯಾದವ್ ಎನ್, *ಎಜುಕೇಷನ್ ಫಾರ್ ವಿಮೆನ್*, ನ್ಯೂಡೆಲ್ಲಿ, ರೆಫೆರೆನ್ಸ್ ಪ್ರಸ್, ೨೦೦೩, ಪು.ಸಂ ೨೯೯-೩೦೬ ಮತ್ತು ಅಸ್ಗರ್ ಅಲಿ ಇಂಜಿನಿಯರ್, *ಕುರಾನ್, ವುಮೆನ್, ಮಾಡರ್ನ್ ಸೊಸೈಟಿ*, ನ್ಯೂಡಾನ್ ಪ್ರೆಸ್, ಇಂಕ್, ಯುಕೆ, ಪು.ಸಂ ೨೦೯

೨೩. ಜಾನ್ ಎಲ್. *ಎಪೋಸಿಟೂ,ಇಸ್ಲಾಂ, ಜೆಂಡರ್ ಅಂಡ್ ಸೋಶಿಯಲ್ ಛೇಂಜ್*, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ೧೯೯೮, ಪು.ಸಂ ೧೫

೨೪. ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೪-೧೪೭

೨೫. ಇಮ್ತಿಯಾಜ್ ಅಹಮದ್, "ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್",*ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿಸ್ಟ್ರೇಷನ್*, ೧೯೮೭, ವಾ.ಸಂ.೧ ಸಂ.೨ ಪು.ಸಂ ೧೯೭-೨೦೯, ಮತ್ತು ಅಸ್ಗರ್ ಅಲಿ ಇಂಜಿನಿಯರ್, "ಮುಸ್ಲಿಮ್ಸ್ ಅಂಡ್ ಎಜುಕೇಷನ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೨೦೦೧, ಆಗಸ್ಟ ೨೫, ವಾ.ಸಂ.೨೬ ಸಂ.೨ ಪು.ಸಂ ೩೨೨೧-೨೩ ಮತ್ತು ಜೋಯಾಹಸನ್ ಅಂಡ್ ರಿತುಮೆನನ್, ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೪-೧೪೭

೨೬ ಮಾರೀಶ್, *ದಿ ಸೋಶಿಯಾಲಜಿ ಆಫ್ ಎಜುಕೇಷನ್*, ಜಾರ್ಜ್‌ಅಲೆನ್ ಅಂಡ್ ಉರ್ಮಿನ್, ಲಂಡನ್ ಮತ್ತು ಮುಲ್ಲರ್ ಡಬ್ಲ್ಯೂ ೧೯೭೨, "ಫ್ಯಾಮಿಲಿ ಬ್ಯಾಕ್‌ಗ್ರೌಂಡ್", *ಎಜುಕೇಷನ್ ಅಂಡ್ ಕೆರಿಯರ್ ಮೊಬಿಲಿಟಿ ಸೋಶಿಯಲ್ ಸೈನ್ಸ್* ಇನ್ಫಾರ್ಮೇಷನ್ ವಾ.ಸಂ. ೧೧ ಪು.ಸಂ ೨೨೩-೫೫ ಮತ್ತು ಆ ಕ್ಲೋನ್ (ಸಂ) ೧೯೯೧, "ಫ್ಯಾಮಿಲಿ ಸ್ಟ್ರಕ್ಚರ್, ಪೇರೆಂಟಲ್ ಪ್ರಾಕ್ಟೀಸಸ್ ಅಂಡ್ ಹೈಸ್ಕೂಲ್ ಕಂಪ್ಲೀಷನ್",*ಅಮೇರಿಕನ್ ಸೋಶಿಯಲೋಜಿಕಲ್ ರಿವ್ಯೂ*, ವಾ.ಸಂ ೫೬, ಪು.ಸಂ ೩೦೯-೨೦ ಮತ್ತು ಜಾನ್ ರಾಬರ್ಟ್ ವಾರೆನ್, "ಎಜುಕೇಷನ್ ಇನ್ ಇಕ್ವಾಲಿಟಿ ಅಮಾಂಗ್ ವೈಟ್ ಅಮಡ್ ಮೆಕ್ಸಿಕನ್ ಆರಿಜನ್ ಅಡಾಲ್‌ಸೆಂಟ್ಸ್ ಇನ್ ದ ಅಮೇರಿಕನ್ ಸೌಥ್-ವೆಸ್ಟ್", ೧೯೯೬, ಸೋಶಯಾಲಜಿ ಉಲ್ಲೇಖ:- ಮಾಹಮದ್

ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು "ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯಸ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನ್‌ಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಮೇ ೫, ವಾ.ಸಂ ೪೮, ಸಂ.೮, ೨೦೦೭, ಪು.ಸಂ ೧೬೧೩-೧೬೨೨

೨೭. ಇಮ್ತಿಯಾಜ್ ಅಹಮದ್, "ಎಜುಕೇಷನ್‌ಲ್ ಡೆವಲಪ್‌ಮೆಂಟ್ ಆಫ್ ಮೈನಾರಿಟೀಸ್", *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿನ್ಸ್ಟ್ರೇಷನ್*, ೧೯೮೭, ವಾ.ಸಂ.೧, ಸಂ.೨, ಪು.ಸಂ ೧೯೭-೨೦೯, ಮತ್ತು ಅಸ್ಗರ್ ಅಲಿ ಇಂಜಿನಿಯರ್, "ಮುಸ್ಲಿಮ್ಸ್ ಅಂಡ್ ಎಜುಕೇಷನ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೨೦೦೧, ಆಗಸ್ಟ ೨೫, ವಾ.ಸಂ.೨೬, ಸಂ.೨, ಪು.ಸಂ ೩೨೨೧-೨೩ ಮತ್ತು ಜೋಯಾಹಸನ್ ಅಂಡ್ ರಿತುಮೆನನ್, *ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ*, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ನ್ಯೂಡೆಲ್ಲಿ, ೨೦೦೪, ಪು.ಸಂ ೧೩೨-೧೪೬

೨೮. ಕಾಮತ್ ಎ.ಆರ್. *ಸ್ಟಡೀಸ್ ಇನ್ ಎಜುಕೇಷನ್ ರಿಫಾರ್ಮ್ಸ್ ಇನ್ ಇಂಡಿಯ*, ಬಾಂಬೆ, ಹಿಮಾಲಯ ಪಬ್ಲಿಷಿಂಗ್ ಹೌಸ್, ೧೯೮೯, ಪು.ಸಂ ೧೪೫-೧೬೮ ಮತ್ತು ತಿಲಕ್ ಎ. ಜಿ.ಬಿ, "ಹೌ ಫ್ರೀ ಈಸ್ ಫ್ರೀ ಎಜುಕೇಷನ್ ಇನ್ ಇಂಡಿಯ? ಅಕೇಷನಲ್ ಪೇಪರ್ ೨೧", ನ್ಯೂಡೆಲ್ಲಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್‌ಲ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಷನ್, ೧೯೯೫, ಪು.ಸಂ ೧೪-೧೮

೨೯. ಜೆ.ಪಿ. ಸಿಂಗ್, "ಯೂನಿವರ್ಸಲೈಜೇಷನ್ ಆಫ್ ಎಜುಕೇಷನ್ ಇನ್ ಇಂಡಿಯ", *ಪ್ರಾಮಿಸೆಸ್ ಅಮಡ್ ಪರ್ಫಾರ್ಮೆನ್ಸಸ್, ಮ್ಯಾನ್ ಅಂಡ್ ಡೆವೆಲಪ್‌ಮೆಂಟ್*, ೨೦೦೫, ವಾ.ಸಂ. ೨೭. ಸಂ.೧ ಪು.ಸಂ ೧೦೩-೧೨೪ ಮತ್ತು ತಿಲಕ್ ಜೆ.ಬಿ.ಜಿ. ಎಜುಕೇಷನ್: *ಸಾಗಾ ಆಫ್ ಸ್ಪೆಕ್ಟಾಕುಲರ್ ಅಚಿವ್‌ಮೆಂಟ್ ಅಂಡ್ ಫಲ್ಯೂರ್ ಇನ್ ಇಂಡಿಯ*, ಸೋಶಿಯಲ್ ಡೆವೆಲಪ್‌ಮೆಂಟ್ ರಿಪೋರ್ಟ್, ಆಕ್ಸಫರ್ಡ್ ಯೂನಿವರ್ಸಿಟಿ ನ್ಯೂಡೆಲ್ಲಿ, ೨೦೦೬, ಪು.ಸಂ ೬೮-೮೯

೩೦. ಜೈನ್ ಎಸ್.ಪಿ. "ರಿಲಿಜಿಯನ್, ಕಾಸ್ಟ್ ಕ್ಲಾಸ್ ಅಂಡ್ ಪೇರೆಂಟಲ್ ಎಜುಕೇಷನ್‌ಲ್ ಆಸ್ಪಿರೇಷನ್ಸ್ ಇನ್ ನಾರ್ತ್ ಇಂಡಿಯನ್ ಕಮ್ಯುನಿಟಿ", *ಇಂಡಿಯನ್ ಎಜುಕೇಷನ್‌ಲ್ ರಿವ್ಯೂ*, ೧೯೬೬, ವಾ.ಸಂ.೪, ಪು.ಸಂ ೬೪-೭೨, ಮತ್ತು ಇಮ್ತಿಯಾಜ್ ಅಹಮದ್, "ಮುಸ್ಲಿಂ ಎಜುಕೇಷನ್ ಬ್ಯಾಕ್‌ವರ್ಡ್‌ನೆಸ್ ಎನ್ ಇನ್‌ಫಕೆನ್ಷ್ಯಲ್ ಎನಾಲಿಸಿಸ್", ಇಕನಾಮಿಕ್

ಅಂಡ್ ಪೊಲಿಟಿಕಲ್ ವೀಕ್ಲಿ, ೧೯೮೧, ವಾ.ಸಂ.೧೦, ಪು.ಸಂ ೧೪೫೭–೬೫ ಮತ್ತು ಸುಶೀಲ್ ಜೈನ್, ಮುಸ್ಲಿಮ್ಸ್ ಅಂಡ್ ಮಾಡರ್ನೈಜೇಷನ್, ರಾವತ್ ಪಬ್ಲಿಕೇಷನ್, ಜೈಪುರ್, ೧೯೮೦, ಪು.ಸಂ ೨೦೧–೨೧೧ ಮತ್ತು ಇಮ್ತಿಯಾಜ್ ಅಹಮದ್,"ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್", ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡಿಮಿಸ್ಟ್ರೇಷನ್, ೧೯೮೭, ವಾ.ಸಂ.೧ ಸಂ.೨ ಪು.ಸಂ ೧೯೧–೨೦೯, ಮತ್ತು ಮೆಹನಾಜ್ ಅನ್ಸಾರಿ, "ಟ್ರಡಿಷನಲ್ ಅಕ್ಯೂಪೇಷನ್ಸ್, ಚೈಲ್ಡ್ ಲೇಬರ್ ಅಂಡ್ ಟ್ರೇಡ್ ಪಾಲಿಸಿ: ಎವಿಸಿಯಸ್ ಸರ್ಕಲ್ ಆರೌಂಡ್ ಎಜುಕೇಷನ್‌ಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಮ್ಸ್",ಜರ್ನಲ್ ಆಫ್ ಎಜುಕೇಷನ್‌ಲ್ ಪ್ಲಾನಿಂಗ್ ಅಂಡ್ ಅಡಿಮಿಸ್ಟ್ರೇಷನ್, ೨೦೦೨, ವಾ.ಸಂ.೧೫, ಸಂ೩, ಪು.ಸಂ ೩೭೩–೩೫೩

೩೧. ಫಯಾಜ್ ಅಹಮದ್ ಭಟ್ ಫೌಜಿಯಾ ಖುರ್ಶೀದ್, ನಜ್ಮುಲ್ ಹುಸೇನ್, "ಇಸ್ಲಾಂ, ಜೆಂಡರ್ ಅಂಡ್ ಎಜುಕೇಷನ್ : ಎ ಕೇಸ್ ಸ್ಟಡಿ ಆಫ್ ಜಮ್ಮು–ಕಾಶ್ಮೀರ",ಏಷ್ಯಾ ಪೆಸಿಫಿಕ್ ಜರ್ನಲ್ ಆಫ್ ಸೋಶಿಯಲ್ ಸೈನ್ಸ್‌ಸ್, ವಾ.ಸಂ.೩ ಸಂ.೨, ಜುಲೈ–ಡಿಸೆಂಬರ್,೨೦೧೧, ಪು–೧೫೯–೧೮೭

೩೨. ಡಾ. ಶಕೀಲ್ ಅಹಮದ್ ಮತ್ತು ಡಾ. ಮಲಿಕಾ ಮಿಸ್ತ್ರಿ, "ಮಾಡರ್ನ್ ಎಜುಕೇಷನ್ ಅಂಡ್ ಸೋಶಿಯೋ–ಎಕನಾಮಿಕ್ ಚೇಂಜ್, ಎ ಕೇಸ್ ಸ್ಟಡಿ ಆಫ್ ಮುಸ್ಲಿಂ ವುಮೆನ್ ಇನ್ ಪುಣೆ ಸಿಟಿ", ಇಂಡಿಯ ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾಮರ್ಸ್ ವಾ.ಸಂ.೧ ಸಂ.೧ ಅಕ್ಟೋಬರ್ ೨೦೧೦, ಪು–೧೩೬–೧೪೯

೩೩. ಡಾ. ಶಕೀಲ್ ಅಹಮದ್ ಪೂರ್ವೋಕ್ತ, ಪು–೧೩೬–೧೪೯

೩೪. ಸಬಿಹಾ ಹುಸೇನ್, "ಮಾಡರ್ನೈಜೇಷನ್ ಅಮಾಂಗ್ ಮುಸ್ಲಿಂ ವಿಮೆನ್ ಇನ್ ಇಂಡಿಯಾಎ ಕೇಸ್ ಸ್ಟಡಿ ಆಫ್ ದರ್ಬಾಂಗ್ ಟೌನ್ ಇನ್ ನಾರ್ಥ್ ಬಿಹಾರ್", ಸೆಂಟರ್ ಫಾರ್ ಸ್ಟಡಿ ಆಫ್ ಸೋಶಿಯಲ್ ಸಿಸ್ಟಮ್, ನ್ಯೂಡೆಲ್ಲಿ, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ಪಿ.ಹೆಚ್.ಡಿ. ಮಹಾಪ್ರಬಂಧ, ಪು.ಸಂ ೬೭–೯೧

೩೫. ಸೈಯದ್ ಮೆಹದಿ ಹುಸೇನ್, ಮುಸ್ಲಿಂ ವುಮೆನ್ ಅಂಡ್ ಹೈಯರ್ ಎಜುಕೇಷನ್ : ಎ ಕೇಸ ಸ್ಟಡಿ ಆಫ್ ಹೈದ್ರಬಾದ್ ಇನ್ ಅಸ್ಗರ್ ಅಲಿ ಇಂಜಿನಿಯರ್(ಸಂ) ಪ್ರಾಬ್ಲಮ್ಸ್ ಆಫ್ ಮುಸ್ಲಿಂ ವುಮೆನ್ ಇನ್ ಇಂಡಿಯ, ಹೈದ್ರಬಾದ್ ಓರಿಯಂಟ್ ಲಾಂಗ್‌ಮನ್ ೧೯೯೫, ಪು.ಸಂ ೩೩–೫೨

೩೬. ಹಫೀಜ್ ಅಬ್ದುಲ್ ಮಹೂದ್,*ಎ ಸ್ಟಡಿ ಆಫ್ ಆ್ಯಟಿಟ್ಯೂಟ್ಸ್ ಆಫ್ ಟೀಚರ್ಸ್ ಅಂಡ್ ಪೇರೆಂಟ್ಸ್ ಆಫ್ ಆಜಮ್‌ಗಡ್ ಡಿಸ್ಟ್ರಿಕ್ ಟುವರ್ಡ್ಸ್ ಮುಸ್ಲಿಂ ಗರ್ಲ್ಸ್ ಎಜುಕೇಷನ್:* ಎ. ಡೆಸರ್ಟೇಷನ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ಜಾಮಿಯಾ ಮಿಲಿಯಾ ಇಸ್ಲಾಮಿಯ, ನ್ಯೂಡೆಲ್ಲಿ, ೧೯೯೩, ಪು.ಸಂ ೫೬–೭೦

೩೭. ಸೆಹರಾತುನ್ ನಿಶಾ, "ಸೋಶಿಯೋ–ಇಕನಾಮಿಕ್ ಅಂಡ್ ಕಲ್ಚುರಲ್ ಬ್ಯಾರಿಯರ್ಸ್ ಇನ್ ದ ಎಜುಕೇಷನ್ ಆಫ್ ಮುಸ್ಲಿಂ ವಿಮೆನ್ ಇನ್ ದ ಸ್ಟೇಟ್ ಆಫ್ ಮಣಿಪೂರ್" ಪಿ.ಎಚ್.ಡಿ. ಮಹಾಪ್ರಬಂಧ, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಜಾಮಿಯಾ ಮಿಲಿಯಾ ಇಸ್ಲಾಮಿಯ, ನ್ಯೂಡೆಲ್ಲಿ, ೨೦೦೧, ಪು.ಸಂ ೩೩–೪೨

೩೮. ಮೊಹಮದ್ ಸಂಜೀರ್ ಅಲಂ, ಪೂರ್ವೋಕ್ತ, ಪು.ಸಂ ೧೬೧೩–೧೬೨೨

೩೯. ಜೈನ್ ಎಸ್.ಪಿ., ಪೂರ್ವೋಕ್ತ, ಪು.ಸಂ ೬೪–೭೨

೪೦. ಇಮ್ತಿಯಾಜ್ ಅಹಮದ್, "ಎಜುಕೇಷನ್‌ಲ್ ಡೆವೆಪ್‌ಮೆಂಟ್ ಆಫ್ ಮೈನಾರಿಟೀಸ್", ಪೂರ್ವೋಕ್ತ, ಪುಸಂ ೧೯೭–೨೦೯

೪೧. ಜಿ.ಎಸ್. ಸಿಂಗ್, ಪೂರ್ವೋಕ್ತ, ಪು.ಸಂ ೧೯೪

೪೨. ಜೈನ್ ಎಸ್.ಪಿ., ಪೂರ್ವೋಕ್ತ, ಪು.ಸಂ ೬೪–೭೨

೪೩. ಸುಧಾ.ಟಿ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ,* ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೮–೩೧

೪೪. ವಿ.ಎಲ್ ಲಾವಣ್ಯ ಅಂಡ್ ವಿ. ಮಲಾರ್ ವಿಜಿ, ಪೂರ್ವೋಕ್ತ, ಪು.ಸಂ ೮–೧೫

೪೫. ಮಧುಸೂಧನ್ ಜೆ.ವಿ, ಜಿತೇಂದ್ರಕುಮಾರ್ ಸಿಂಗ್ ಮತ್ತು ಜಿತೇಂದ್ರ ಯಾದವ್,"ಟ್ರೆಂಡ್ಸ್ ಇನ್ ಸ್ಕೂಲಿಂಗ್ ಅಮಾಂಗ್ ಮುಸ್ಲಿಮ್ಸ್ ಅಂಡ್ ಹಿಂದೂಸ್ ಇನ್ ಇಂಡಿಯಾ", ಏಷ್ಯಾ ಪೆಸಿಫಕ್ ಆಫ್ ಸೋಶಿಯಲ್ ಸೈನ್ಸ್‌ಸ್, ವಾ.ಸಂ.೨, ಸಂ.೨, ಜುಲೈ–ಡಿಸೆಂಬರ, ೨೦೧೦, ಪು.ಸಂ ೧೨೬–೧೪೩

೪೬. ಸಬಿಹಾ ಹುಸೇನ್, ಪೂರ್ವೋಕ್ತ, ಪು.ಸಂ ೬೭–೯೧

೪೭. ಹಫೀಜ್ ಅಬ್ದುಲ್ ಮಹೂದ್, ಪೂರ್ವೋಕ್ತ, ಪು,ಸಂ ೫೬–೭೦

೪೮. ಇಮಾಮ್ ಪರ್ವೀನ್, "ಎಕ್ಸ್‌ಕ್ಲುಜನ್ ಆಫ್ ಮುಸ್ಲಿಂ ಗರ್ಲ್ಸ್ ಫ್ರಮ್ ಸ್ಕೂಲ್ ಎ ಪಾರ್ಟಸಿಪೆಟರಿ ಎನಾಲಿಸಿಸ್ ಇನ್ ದಿ ಡಿಸ್ಟ್ರಿಕ್ಟ್ ಆಫ್ ರಾಂಪುರ್", ಪ್ರಾಜೆಕ್ಟ್ ಸ್ಪಾನ್ಸರ್ಡ್ ಬೈ ಸ್ವ್ಕೆಯರ್, ೧೯೯೯, ಪು.ಸಂ ೫೬–೬೫

೪೯. ರೋಖಿಯಾ ಬೇಗಂ, "ಎಜುಕೇಷನ್ ಅಂಡ್ ಮುಸ್ಲಿಂ ವುಮೆನ್ ಇನ್ ರೂರಲ್ ವೆಸ್ಟ ಬೆಂಗಾಲ್" ಇನ್ *ಸಿದೀಖಿ.ಎಂ.ಕೆ.ಎ (ಸಂ)* "ಮುಸ್ಲಿಂ ಇನ್ ಫ್ರೀ ಇಂಡಿಯ: ದೇರ್ ಸೋಶಿಯಲ್ ಪ್ರೊಫೈಲ್ ಅಂಡ್ ಪ್ರಾಬ್ಲೆಮ್ಸ್", ನ್ಯೂಡೆಲ್ಲಿ , ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೮ ಪು ೩೬–೪೮

೫೦. ಸೆಹರಾತುನ್ನಿಸಾ, ಪೂರ್ವೋಕ್ತ, ಪು.ಸಂ ೩೩–೪೨

೫೧. ಮೊಹಮದ್ ಸಂಜೀರ್ ಅಲಂ, ಪೂರ್ವೋಕ್ತ, ಪು.ಸಂ ೧೬೧೩–೧೬೨೨

## ಅಧ್ಯಾಯ: ಐದು

# ಮುಸ್ಲಿಂ ಮಹಿಳೆಯ ಶಿಕ್ಷಣ: ಸರ್ಕಾರಗಳು ಮತ್ತು ನಾಗರೀಕ ಸಮಾಜದ ಪಾತ್ರ

ಭಾರತದ, ಕರ್ನಾಟಕದ ಸಂದರ್ಭದಲ್ಲಿ ನಾಗರೀಕ ಸಮಾಜವೆಂಬುದು ತುಂಬಾ ದುರ್ಬಲವಾಗಿದೆಯೆಂದು, ಅದರ ವ್ಯಾಪ್ತಿ, ಮತ್ತು ಜನರನ್ನು ಒಳಗೊಳ್ಳುವ ಸಾಮರ್ಥ್ಯ ತುಂಬಾ ಸೀಮಿತವಾಗಿದೆಯೆಂದೂ, ನಾಗರೀಕ ಪ್ರಜ್ಞೆಯೆಂಬುದು ಅಪರೂಪದ ಸಂಗತಿಯಾಗಿದೆಯೆಂದು ಹೇಳಲಾಗುತ್ತಿದೆ. ಈ ಕಾರಣಗಳಿಂದಾಗಿಯೇ ಭಾರತ–ಕರ್ನಾಟಕ ಹಿಂದುಳಿದ ಸ್ಥಿತಿಯಲ್ಲಿವೆ ಯೆಂದೂ ಹೇಳಲಾಗುತ್ತಿದೆ. ಇತ್ತೀಚಿಗೆ ಅಭಿವೃದ್ಧಿ ಕುರಿತ ಸೈದ್ಧಾಂತಿಕ ಚರ್ಚೆಗಳಲ್ಲಿ ಸಮಾಜ–ನಾಗರೀಕ ಪ್ರಜ್ಞೆಗಳನ್ನು ಸಾಮಾಜಿಕ ಬಂಡವಾಳವೆಂಬ ಅಭಿದಾನದಲ್ಲಿ ಗ್ರಹಿಸಲಾಗುತ್ತಿದೆ. ಅಭಿವೃದ್ಧಿಯ ಚಾಲಕಶಕ್ತಿಯಾಗಿ ಅದು ಕೆಲಸ ಮಾಡುತ್ತದೆಯೆಂದು ನಂಬಲಾಗುತ್ತಿದೆ. ಶಿಕ್ಷಣ, ನಾಗರೀಕಸಮಾಜ, ಅಭಿವೃದ್ಧಿ ಇವುಗಳ ನಡುವೆ ಸೂಕ್ಷ್ಮವಾದ ಸಂಬಂಧವನ್ನು ಗುರುತಿಸಲಾಗುತ್ತಿದೆ.[೧] ಪ್ರಜಾಸತ್ತಾತ್ಮಕ ಸರ್ಕಾರಗಳನ್ನು ಸರಿಯಾದ ಮಾರ್ಗದಲ್ಲಿ ನಡೆಸುವಲ್ಲಿ ನಾಗರೀಕ ಸಮಾಜಗಳು ಪ್ರಮುಖ ಪಾತ್ರವಹಿಸುತ್ತವೆ ಎಂದು ಚರ್ಚಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಗಳು ಮತ್ತು ನಾಗರೀಕ ಸಮಾಜಗಳು ಬೆಳಗಾವಿ ನಗರದ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ನಿರ್ವಹಿಸಿರುವ ಪಾತ್ರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.ಮಾನವ ಸರ್ಕಾರಗಳಿಂದ ತನ್ನ ಸರ್ವಾಂಗೀಣ ಪ್ರಗತಿಯನ್ನು ನಿರೀಕ್ಷಿಸುತ್ತಾನೆ.

ಈ ಹಿನ್ನೆಲೆಯಲ್ಲಿ ನಮ್ಮ ಮುಂದೆ ಎದ್ದು ನಿಲ್ಲುವ ಪ್ರಶ್ನೆಗಳು ಹೀಗಿವೆ. ನಾಗರೀಕ ಸಮಾಜ ವೆಂದರೆ ಯಾವುದು? ಸಮಾಜದೊಳಗೊಂದು ಸಮಾಜವೆ? ನಾಗರೀಕ ಸಮಾಜವೆಂಬುದೊಂದು ಇರುವುದಾದರೆ ಉಳಿದದ್ದು ಅನಾಗರೀಕ ಸಮಾಜವೆ? ನಾಗರೀಕ ಸಮಾಜವೆಂಬುದು ನಗರ ಪ್ರದೇಶದ ವಿಶಿಷ್ಟತೆಯೆ? ನಾಗರೀಕ ಸಮಾಜವೆಂದರೆ ಆಧುನಿಕ ಸಮಾಜವೆ? ನಾಗರೀಕ ಸಮಾಜದ ಉತ್ಪಾದನೆಯಲ್ಲಿ ಶಿಕ್ಷಣದ ಪಾತ್ರವೇನು? ಲಿಂಗ ತಾರತಮ್ಯದಿಂದಕೂಡಿರುವ, ಜಾತಿ ಶ್ರೇಣೀಕರಣದ

ನಮ್ಮ ಸಂದರ್ಭದ ಹಿನ್ನೆಲೆಯಲ್ಲಿ ನಾಗರೀಕ ಸಮಾಜವನ್ನು ಪರಿಭಾವಿಸಿಕೊಳ್ಳುವುದು ಹೇಗೆ ?

### ೫.೧. ಸರ್ಕಾರ ಮತ್ತು ಜನ ಕಲ್ಯಾಣದ ಜವಾಬ್ದಾರಿಗಳು

ಮನುಷ್ಯ ಇಂದು ಕಲ್ಯಾಣ ರಾಜ್ಯದ ಪರಿಕಲ್ಪನೆಯಲ್ಲಿ ಜೀವಿಸುತ್ತಿದ್ದಾನೆ. ಹಿಂದುಳಿದ, ಮುಂದುವರೆಯುತ್ತಿರುವ ಮತ್ತು ಮುಂದುವರಿದ ರಾಷ್ಟ್ರಗಳಲ್ಲಿ ಕಲ್ಯಾಣ ರಾಜ್ಯದ ಪರಿಕಲ್ಪನೆ ರಾಜಕಾರಣದ ಅವರ್ಗೀಯ ಅಂಗವಾಗಿ ಮುಂದುವರೆದಿದೆ. ಸಾಮಾಜಿಕ ಮತ್ತು ಆರ್ಥಿಕ ರಂಗಗಳಲ್ಲಿ ಇದರ ಸ್ವರೂಪ ಬದಲಾವಣೆಗೆ ಒಳಗಾಗುತ್ತದೆ. ಸಾರ್ವತ್ರಿಕ ಸಂತೋಷವನ್ನು ಉತ್ತೇಜಿಸುವ ರಾಜ್ಯದ ಕ್ರಮವನ್ನು ಕಲ್ಯಾಣ ರಾಜ್ಯ ಎಂದು ವ್ಯಾಖ್ಯಾನಿಸಲಾಗುತ್ತದೆ. ಕಲ್ಯಾಣ ರಾಜ್ಯದ ಪರಿಕಲ್ಪನೆಯನ್ನು ಒಪ್ಪಿಕೊಂಡ ಸರ್ಕಾರಗಳು ಸಾರ್ವತ್ರಿಕವಾಗಿ ಜನರಿಗೆ ಉದ್ಯೋಗ, ಆದಾಯ, ಶಿಕ್ಷಣ, ವೈದ್ಯಕೀಯ ಸೇವೆ, ಸಾಮಾಜಿಕ ಭದ್ರತೆ ಮತ್ತು ವಸತಿಯಂಥ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಪ್ರಾಥಮಿಕ ಜವಾಬ್ದಾರಿಯಾಗಿದೆ. ಸರ್ಕಾರಗಳು ಒದಗಿಸುವ ಮೂಲಭೂತ ಸೇವೆಗಳಲ್ಲಿ ಶಿಕ್ಷಣವು ಅತ್ಯಂತ ಮಹತ್ತರವಾದ ಸೇವೆಯಾಗಿದೆ. ಶಿಕ್ಷಣವನ್ನು ಪಡೆದ ವ್ಯಕ್ತಿಯು ಉದ್ಯೋಗವನ್ನು ಸಂಪಾದಿಸುತ್ತಾನೆ. ವ್ಯಕ್ತಿಯು ಉದ್ಯೋಗದ ಮೂಲಕ ಹಣ ಸಂಪಾದಿಸಿ ತನ್ನ ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ಶಿಕ್ಷಣವು ವ್ಯಕ್ತಿಯನ್ನು ಸಬಲೀಕರಣಗೊಳಿಸುವ ಪ್ರಭಲವಾದ ಮಾಧ್ಯಮವೆಂದು ಪರಿಭಾವಿಸಲಾಗಿದೆ. ಇದರ ಜೊತೆಗೆ ಮಹಿಳೆಯನ್ನು ಸಬಲೀಕರಿಸಲು ಶಿಕ್ಷಣ ಪ್ರಮುಖ ಮಾಧ್ಯಮವೆಂದು ಪರಿಭಾವಿಸಲಾಗುತ್ತದೆ.[೨]

### ೫.೨. ಶಿಕ್ಷಣ ಮತ್ತು ಪರಿವರ್ತನೆ

ಬಡವರ ಮುಖ್ಯವಾಗಿ ಮಹಿಳೆಯರ ಚಾರಿತ್ರಿಕ, ಸಮಾಜೋ-ಆರ್ಥಿಕ ಮತ್ತು ರಾಜಕೀಯ ಅಂಶಗಳಿಗೆ ಉತ್ತರ ನೀಡುವ ಸಾಮರ್ಥ್ಯವನ್ನು ಶಿಕ್ಷಣ ನೀಡುತ್ತದೆ. ಮಹಿಳೆಗೆ ಮಾಹಿತಿ ಪಡೆಯುವ, ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ, ತಮ್ಮ ಭೌತಿಕ ಮತ್ತು ಸಾಮಾಜಿಕ ಸ್ಥಿತಿಗಳ ಬಗ್ಗೆ ಅಮೂಲಾಗ್ರ ಪರಿವರ್ತನೆಯನ್ನು ಪಡೆದುಕೊಳ್ಳುವಲ್ಲಿ ಹಾಗೂ ವ್ಯಕ್ತಿ ಮತ್ತು ಸಮಾಜಕ್ಕೆ ಹೆಚ್ಚು ಜವಾಬ್ದಾರಿಗಳನ್ನು ನೀಡುತ್ತದೆ.೩ಶಿಕ್ಷಣವು ಮಹಿಳೆಗೆ ತನ್ನ ಆರೋಗ್ಯ, ತನ್ನ ಸ್ವಂತಕ್ಕೆ ಹಣ ಖರ್ಚುಮಾಡುವ ಸಂಗತಿಗಳಲ್ಲಿ ನಿರ್ಣಯ ಕೈಗೊಳ್ಳುವ ಶಕ್ತಿ ನೀಡುತ್ತದೆ.[೪] ಮಹಿಳೆಯರ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವು ಅವರ ನಿರ್ಣಯ ಸಾಮರ್ಥ್ಯದ ಮೇಲೆ ಸಕಾರಾತ್ಮಕ ಪರಿಣಾಮ ಬೀರುತ್ತದೆ.[೫] ಬ್ಲೂಮ್ ಮತ್ತು ಹೋಲೋಸ್ ರವರ ಅಧ್ಯಯಯನಗಳು ಹೇಳುವ ಪ್ರಕಾರ ಮಹಿಳೆಗೆ ಶಿಕ್ಷಣವು ಚಲನಾ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯ ಅಧಿಕಾರವನ್ನು ನೀಡುತ್ತದೆ.[೬] ಆರ್ಥಿಕ ಸ್ವಾಯತ್ತತೆಯನ್ನು ನೀಡುವ ಮೂಲಕ ಪಿತೃ ಪ್ರಧಾನ ಕುಟುಂಬ ರಚನೆಯಲ್ಲಿ ಅಮೂಲಾಗ್ರ ಬದಲಾವಣೆಯನ್ನು

ತಂದಿದೆ. ಮಹಿಳೆಯರಿಗೆ ಆರ್ಥಿಕ ಸ್ವಾಯತ್ತತೆ ಇಲ್ಲದೆ ಇರುವುದರಿಂದ ಅವಳು ಪುರುಷರಿಗಿಂತ ಕಡಿಮೆ ಸ್ಥಾನವನ್ನು ಪಡೆದುಕೊಂಡಿದ್ದಾರೆ.[೭] ಅಮರ್ತ್ಯಸೇನ್ ಹೇಳುವ ಪ್ರಕಾರ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳೇ ಪೋಷಕರಿಗೆ ಹೆಚ್ಚು ಭದ್ರತೆ ನೀಡುತ್ತಾರೆಂದು ಭಾವಿಸಲಾಗುತ್ತದೆ.[೮] ಗಂಡು ಮಕ್ಕಳನ್ನು ಬಯಸುವ ಸಂಗತಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಮಹಿಳೆಯರಿಗಿಂತ ಉನ್ನತ ಶಿಕ್ಷಣ ಪಡೆದ ಮಹಿಳೆಯರ ಮೇಲೆ ಸಕಾರಾತ್ಮಕ ಪರಿಣಾಮ ಬೀರಿದೆ. ಅಂದರೆ ಮಹಿಳೆಯರು ಉನ್ನತ ಶಿಕ್ಷಣ ಪಡೆದಂತೆ ಅವರಲ್ಲಿನ ಲಿಂಗ ಸಂಬಂಧಿ ಗೊಂದಲಗಳು ಮಾಯವಾಗುತ್ತವೆ[೯] ಎಂದು ವಿವಿಧ ಅಧ್ಯಯನಗಳು ತಿಳಿಸುತ್ತವೆ.

ಅಮರ್ತ್ಯಸೇನ್ ಹೇಳುವಂತೆ, ಭಾರತದಲ್ಲಿ ಉನ್ನತ ಶಿಕ್ಷಣವನ್ನು ಉತ್ತಮಗೊಳಿಸಬೇಕಾದರೆ ಮೊದಲು ಶಾಲಾ ಶಿಕ್ಷಣವನ್ನು ಸಮಗ್ರವಾಗಿ ಸುಧಾರಣೆ ಮಾಡುವ ಅಗತ್ಯವಿದೆ.[೧೦] ಮುಸ್ಲಿಂ ಮಹಿಳೆಯರು ಅಧಿಕಾರದಿಂದ ವಂಚಿತರಾಗಲು ಕಾರಣವೆಂದರೆ ಅವರ ಕನಿಷ್ಠ ಶಿಕ್ಷಣ ಮಟ್ಟವೆಂದು ಹೇಳಲಾಗುತ್ತಿದೆ.[೧೧] ಎಪ್ಪತ್ತು ದಶಕಗಳ ನಂತರವು ಸರ್ಕಾರ ಮುಸ್ಲಿಂ ಮಹಿಳೆಯರಿಗೆ ಶೈಕ್ಷಣಿಕ ಪ್ರೋತ್ಸಾಹ ನೀಡಬೇಕು, ಹದಿನೈದು ಅಂಶಗಳ ಕಾರ್ಯಕ್ರಮಗಳು ಜಾರಿಗೊಳ್ಳಬೇಕು, ಮುಸ್ಲಿಂ ಮಹಿಳೆಯರ ಸಬಲೀಕರಣಕ್ಕಾಗಿ ವಿವಿಧ ಆಯೋಗಳು ನೀಡಿದ ಶಿಫಾರಸ್ಸುಗಳು ಪರಿಣಾಮಕಾರಿಯಾಗಿ ಜಾರಿಗೊಳ್ಳಬೇಕು, ಮುಸ್ಲಿಂ ಮಹಿಳೆಯರ ಸಬಲೀಕರಣಕ್ಕಾಗಿ ಸರ್ಕಾರೇತರ ಸಂಸ್ಥೆಗಳು ಸಕ್ರೀಯವಾಗಿ ಪಾಲ್ಗೊಳ್ಳಬೇಕು ಹಾಗೂ ಮುಸ್ಲಿಂ ಧಾರ್ಮಿಕ ನಾಯಕರು ಸೂಕ್ತ ಮಾರ್ಗದರ್ಶನ ನೀಡಬೇಕು ಎಂದು ಚರ್ಚಿಸಲಾಗುತ್ತಿದೆ.[೧೨] ಆದರೆ ಇನ್ನೂ ಕೆಲವು ಅಧ್ಯಯನಗಳು ಹೇಳುವಂತೆ ಮದರಸ ವಿದ್ಯಾರ್ಥಿಗಳು ಸಾಮಾನ್ಯ ಶಾಲೆಗಳಿಗೆ ಸೇರುವಂತಾಗಬೇಕು, ಬಿಸಿಯೂಟ, ಶಿಷ್ಯವೇತನ ಹಾಗೂ ಸಮವಸ್ತ್ರ ನೀಡುವ ಮೂಲಕ ಶಾಲೆಗಳನ್ನು ಆಕರ್ಷಕಗೊಳಿಸಬೇಕು ಹಾಗೂ ಮುಸ್ಲಿಂ ಮಹಿಳೆಯರಿಗೆ ಪ್ರತ್ಯೇಕವಾದ ಶಾಲೆಗಳಾಗಬೇಕು ಎಂದು ವಾದ ಮಂಡಿಸುತ್ತಿವೆ.[೧೩] ಏಕೆಂದರೆ ಪ್ರಾಥಮಿಕ ಶಿಕ್ಷಣದ ಬೆಳವಣಿಗೆ ಎಲ್ಲಾ ಪ್ರದೇಶಗಳಲ್ಲಿ ಸಮಾನವಾಗಿಲ್ಲ, ಜೊತೆಗೆ ಶಾಲೆಗಳು ಜನಸಂಖ್ಯಾ ಬೆಳವಣಿಗೆಗೆ ಪೂರಕವಾಗಿಲ್ಲ. ಇದರ ಜೊತೆಗೆ ಮುಸ್ಲಿಂ ಮಹಿಳೆಯರು ಶಿಕ್ಷಕರ ಕೊರತೆ, ಮೂಲ ಸೌಲಭ್ಯಗಳ ಕೊರತೆ ಹಾಗೂ ಬಡತನ, ನಿರಾಸಕ್ತಿ ಹಾಗೂ ಪೂರಕವಲ್ಲದ ವಾತಾವರಣದಿಂದಾಗಿ ಅವರ ಶಿಕ್ಷಣದ ಮಟ್ಟ ಕುಂಠಿತಗೊಳ್ಳುತ್ತಿದೆ.[೧೪] ಅಮರ್ತ್ಯಸೇನ್ ಹೇಳುವಂತೆ ಲಿಂಗಸಂಬಂಧಿ ಅಸಮಾನತೆಯು ಅಂತಿಮವಾಗಿ ಸ್ವಾತಂತ್ರ್ಯದ ಉಲ್ಲಂಘನೆಯಾಗಿದೆ. ಲಿಂಗಸಂಬಂಧಿ ಅಸಮಾನತೆಗಳು ಅಧಿಕಾರ, ಬಲ, ವರ್ಗ, ಜಾತಿ ಶ್ರೇಣಿಗಳು ಮತ್ತು ಸಮಾಜೋ-ಆರ್ಥಿಕ ಸಂಪ್ರದಾಯಗಳು ನಡಾವಳಿಗಳ ಮೂಲದಿಂದ ಹುಟ್ಟಿಕೊಳ್ಳುತ್ತವೆ. ಸಂರಚನೆಗಳನ್ನು ಮತ್ತು ಸಂಸ್ಥೆಗಳನ್ನು ಆಮೂಲಾಗ್ರವಾಗಿ ರೂಪಿಸುವುದರ ಮೂಲಕ ತರುವ ಪರಿವರ್ತನೆಯನ್ನು

ಸಬಲೀಕರಣವೆಂದು ಪರಿಭಾವಿಸಲಾಗಿದೆ.[೧೫] ಇನ್ನೊಂದು ಅರ್ಥದಲ್ಲಿ ಇದನ್ನು ಲಿಂಗ ಸಂಬಂಧಿ ಮುಖ್ಯವಾಹಿನೀಕರಣ ಎನ್ನಲಾಗಿದೆ. ಶಿಕ್ಷಣವು ಮಹಿಳಾ ಪರಿವರ್ತನೆಯ ಪ್ರಮುಖ ಮಾಧ್ಯಮವಾಗಿದ್ದು ಹಿಂದಿನಿಂದಲೂ ಇದರ ಬಗ್ಗೆ ಕ್ರಮಗಳನ್ನು ಕೈಗೊಳ್ಳಲಾಗಿದೆ. ಭಾರತದ ಸಂವಿಧಾನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಗೆ ನಿರ್ದಿಷ್ಟ ಕ್ರಮಗಳನ್ನು ಕೈಗೊಂಡಿದೆ.

## ೫.೩. ಮಹಿಳಾ ಮತ್ತು ಅಭಿವೃದ್ಧಿಯ ಸಂವಿಧಾನಾತ್ಮಕ ರಕ್ಷಣೆ

ಭಾರತದ ಸಂವಿಧಾನದ ೩೯ನೇ ವಿಧಿಯು ಹೇಳುವ ಪ್ರಕಾರ ರಾಜ್ಯವು ಪುರುಷರಿಗೂ ಮತ್ತು ಮಹಿಳೆಯರಿಗೆ ಜೀವನಾವಶ್ಯಕ ಅಗತ್ಯಗಳನ್ನು ಪೂರೈಸಬೇಕು. ವಿದ್ಯಾಭ್ಯಾಸದ ಹಕ್ಕುಗಳಿಗೆ ಬೇಕಾದ ನಿಯಮಗಳನ್ನು ರೂಪಿಸಬೇಕೆಂದು ೪೧ನೇ ವಿಧಿ ಪ್ರಸ್ತಾಪಿಸಿದೆ. ಪುರುಷರು ಮತ್ತು ಮಹಿಳೆಯರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕು, ಕೆಲಸಕ್ಕೆ ಬೇಕಾಗುವ ಅಗತ್ಯ ಮತ್ತು ಮಾನವೀಯ ಪರಿಸ್ಥಿತಿಗಳನ್ನು ಮತ್ತು ಹೆರಿಗೆ ಸೌಲಭ್ಯಗಳನ್ನು ಒದಗಿಸಬೇಕೆಂದು ೪೨ನೇ ವಿಧಿ ತಿಳಿಸುತ್ತದೆ. ಪ್ರಜೆಗಳ ಪೌಷ್ಟಿಕ ಆಹಾರ ಪದಾರ್ಥಗಳ ಮತ್ತು ಜೀವನ ಮಟ್ಟವನ್ನು ಹೆಚ್ಚಿಸುವುದು ಹಾಗೂ ಸಾರ್ವಜನಿಕ ನೈರ್ಮಲ್ಯವನ್ನು ಕಾಪಾಡುವುದು ತನ್ನ ಆದ್ಯ ಕರ್ತವ್ಯವೆಂದು ರಾಜ್ಯವು ಭಾವಿಸಿ, ಆರೋಗ್ಯಕ್ಕೆ ಮಾರಕವಾದ ಮದ್ಯಪಾನವನ್ನು ನಿಷೇಧಿಸಿ ಜಾರಿಗೊಳಿಸಬೇಕೆಂದು ೪೭ನೇ ವಿಧಿ ಹೇಳುತ್ತದೆ. ೨೩ನೇ ವಿಧಿಯನ್ವಯ, ೧೪ ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಅಪಾಯಕಾರಿ ಕೆಲಸಗಳಲ್ಲಿ ತೊಡಗಿಸುವಂತಿಲ್ಲ. ಅನೈತಿಕ ಅಥವಾ ಇತರೆ ಉದ್ದೇಶಗಳಿಗಾಗಿ ಮಹಿಳೆಯರು, ಮಕ್ಕಳು ಅಥವಾ ಬಲಹೀನರನ್ನು ಶೋಷಣೆ ಮಾಡಬಾರದೆಂದು ಸಂವಿಧಾನ ಸ್ಪಷ್ಟಪಡಿಸಿದೆ. ಸಂವಿಧಾನ ಮಹಿಳೆಯರನ್ನು ಶೋಷಣೆಯಿಂದ ಮುಕ್ತಗೊಳಿಸಿ, ಸಬಲೀಕರಣಗೊಳಿಸುವ ಆಶಯವನ್ನು ಈಡೇರಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾಯಿದೆಗಳನ್ನು ಜಾರಿಗೊಳಿಸಿವೆ.

## ೫.೪. ಮಹಿಳಾ ಅಭಿವೃದ್ದಿಯ ಆಶೋತ್ತರಗಳ ಕಾರ್ಯಚರಣೆ

೧೯೫೬ರ ಅನೈತಿಕ ವ್ಯವಹಾರ ತಡೆ ಕಾಯಿದೆ ವೇಶ್ಯಾ ವೃತ್ತಿಯನ್ನು ನಿಷೇಧಿಸಿದೆ. ೧೯೭೮ ಮತ್ತು ೧೯೮೬ ರಲ್ಲಿ ತಿದ್ದುಪಡಿಗೊಂಡ ಕಾಯಿದೆಯು, ಮಕ್ಕಳನ್ನು ವೇಶ್ಯಾವೃತ್ತಿಗೆ ತರುವವರನ್ನು ಜೀವಾವಧಿ ಅಥವಾ ಏಳು ವರ್ಷ ಜೈಲುವಾಸ ವಿಧಿಸುತ್ತದೆ. ೧೯೬೧ ರ ವರದಕ್ಷಿಣೆ ನಿಷೇಧ ಕಾಯಿದೆಯು ೧೯೮೪, ೧೯೮೫ ಮತ್ತು ೧೯೮೬ ರಲ್ಲಿ ತಿದ್ದುಪಡಿಗೊಂಡಿದ್ದು, ಈ ಕಾಯಿದೆಯು ವರದಕ್ಷಿಣೆ ಸಾವಿಗೆ ಕಾರಣರಾದವರನ್ನು ಏಳು ವರ್ಷಗಳ ಶಿಕ್ಷಗೆ ಗುರಿಪಡಿಸುತ್ತದೆ. ೧೯೭೬ ರ ಸಮಾನ ವೇತನ ಕಾಯಿದೆಯು ಮಹಿಳೆಯರ ಶೊಷಣೆಯನ್ನು ನಿಯಂತ್ರಿಸುವಲ್ಲಿ ಸಹಾಯಕವಾಗಿದೆ.

ಒಂದೇ ಕೆಲಸಕ್ಕೆ ಪುರುಷರು ಮತ್ತು ಮಹಿಳೆಯರಿಗೆ ಸಮಾನ ವೇತನ ನೀಡಬೇಕೆಂಬುದು ಇದರ ಆಶಯ.

೧೯೮೭ ರಲ್ಲಿ ರೂಪ ಕನ್ವರ್ ನಿಧನದಿಂದ ಉಂಟಾದ ಸಾಮಾಜಿಕ ತಲ್ಲಣದ ಹಿನ್ನೆಲೆಯಲ್ಲಿ ೧೯೮೭ ರ ಸತಿ ನಿಷೇಧ ಕಾಯಿದೆಯನ್ನು ಜಾರಿಗೊಳಿಸಲಾಯಿತು. ಈ ಕಾಯಿದೆಯ ಪ್ರಕಾರ ಸತಿ ಪದ್ಧತಿಯನ್ನು ಪ್ರೇರೇಪಿಸುವವರಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ಮತ್ತು ಜುಲ್ಮಾನೆಯನ್ನು ವಿಧಿಸಲು ಅವಕಾಶವಿದೆ. ೧೯೯೦ರಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರೀಯ ಮಹಿಳಾ ಆಯೋಗ ಕಾಯಿದೆಯನ್ನು ಜಾರಿಗೊಳಿಸಿತು. ಮಹಿಳೆಯರಿಗೆ ಸಂಬಂಧಿಸಿದ ಸಂವಿಧಾನಾತ್ಮಕ ಮತ್ತು ಕಾನೂನು ರಕ್ಷಣೆಗಳನ್ನು ಅಧ್ಯಯನ ಮಾಡುವುದು, ಜಾರಿಯಲ್ಲಿರುವ ಕಾನೂನುಗಳನ್ನು ಪರಿಶೀಲಿಸಿ, ಅವರ ರಕ್ಷಣೆಗೆ ಬೆಂಬಲ ನೀಡುವುದು ಮತ್ತು ಮಹಿಳೆಯರಿಗೆ ಸಂಬಂಧಪಟ್ಟಂತೆ ಸರ್ಕಾರ ನಿರ್ಧಾರಗಳನ್ನು ಕೈಗೊಳ್ಳುವಾಗ ಮಹಿಳಾ ಆಯೋಗದ ಜೊತೆ ಚರ್ಚಿಸುವುದು, ಇಂತಹ ಮಹಿಳಾ ಪರವಾದ ಮತ್ತು ಮಹಿಳಾ ಅಭಿವೃದ್ಧಿಗೆ ಪೂರಕವಾದ ಕಾರ್ಯಗಳನ್ನು ಮಹಿಳಾ ಆಯೋಗ ನಿರ್ವಹಿಸುತ್ತಿದೆ. ಕರ್ನಾಟಕ ಸರ್ಕಾರವು ಮಹಿಳಾ ಆಯೋಗವನ್ನು ರಚಿಸಿದೆ. ಇದರೊಂದಿಗೆ ದೇವದಾಸಿ ಪದ್ಧತಿಯನ್ನು ನಿಷೇಧಿಸಿ, ಕಾನೂನನ್ನು ಉಲ್ಲಂಘಿಸಿದವರಿಗೆ ೨೦೦೦ ರೂ. ರಿಂದ ೫೦೦೦ ರೂ. ಜುಲ್ಮಾನ ವಿಧಿಸುವ ಕಾನೂನನ್ನು ಕರ್ನಾಟಕ ಸರ್ಕಾರ ೧೯೮೨ ರಲ್ಲಿ ಜಾರಿಗೊಳಿಸಿದೆ.

ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯು ೧೯೯೪ ರಲ್ಲಿ ಜಾರಿಗೊಂಡು, ೨೦೧೧ ರಲ್ಲಿ ತಿದ್ದುಪಡಿಗೊಂಡಿತು. ಈ ಕಾಯಿದೆಯು ಭ್ರೂಣ ಲಿಂಗ ಪತ್ತೆಮಾಡುವುದನ್ನು ನಿಷೇದಿಸಿದ್ದು, ಕಾನೂನು ಉಲ್ಲಂಘಿಸಿದವರಿಗೆ ೫೦,೦೦೦ ರೂ. ದಂಡ ವಿಧಿಸಲಾಗುತ್ತದೆ. ಇದರ ಜೊತೆಗೆ ಕೇಂದ್ರ ಸರ್ಕಾರ ಕೌಟುಂಬಿಕ ದೌರ್ಜನ್ಯ ನಿಷೇಧ ಕಾಯ್ದೆಯನ್ನು ೨೦೦೫ ರಲ್ಲಿ ಜಾರಿಗೊಳಿಸಿದೆ. ಈ ಕಾಯ್ದೆಯನ್ವಯ ದೈಹಿಕ ಅಥವಾ ಮಾನಸಿಕ ಹಿಂಸೆ ಮತ್ತು ವರದಕ್ಷಿಣೆ ಅಥವಾ ಆಸ್ತಿಗಾಗಿ ಕಿರುಕುಳ ನೀಡುವುದು ಕೌಟುಂಬಿಕ ದೌರ್ಜನ್ಯವಾಗುತ್ತದೆ. ದೌರ್ಜನ್ಯಕ್ಕೊಳಗಾದ ಮಹಿಳೆಗೆ ಉಚಿತ ನ್ಯಾಯ ಸೇವೆಯನ್ನು ಒದಗಿಸುವುದು ರಾಜ್ಯದ ಜವಾಬ್ದಾರಿ ಎಂದು ಕಡ್ಡಾಯಗೊಳಿಸಲಾಗಿದೆ. ಇವೆಲ್ಲವುಗಳ ಜೊತೆಗೆ ಮೊಹಮದನ್ ಕಾನೂನುಗಳು ಇಂದು ದೇಶದಲ್ಲಿ ಜಾರಿಯಲ್ಲಿದೆ. ಮುಸ್ಲಿಮರ ವಿವಾಹ, ವಿಚ್ಛೇದನ, ದತ್ತು ಮತ್ತು ಉತ್ತರಾಧಿಕಾರತ್ವಕ್ಕೆ ಸಂಬಂಧಿಸಿದ ವಿಷಯಗಳನ್ನು ಈ ಕಾನೂನುಗಳ ಅನ್ವಯ ಇತ್ಯರ್ಥಪಡಿಸಿಕೊಳ್ಳಲಾಗುತ್ತದೆ. ಇಂದಿಗೂ ಮುಸ್ಲಿಂ ಮಹಿಳೆಯರ ವಿಚ್ಛೇದನ ಪ್ರಕ್ರಿಯೆ ಚರ್ಚಾಸ್ಪದ ವಿಷಯವಾಗಿದೆ. ಮೂರು ಬಾರಿ ತಲಾಬ್ ಉಚ್ಚರಿಸುವ ಮೂಲಕ ವಿಚ್ಛೇಧನ ನೀಡುವ ವಿಧಾನವನ್ನು ಖಂಡಿಸಲಾಗುತ್ತಿದೆ. ಇದು ಸರಿ ಇರಬಹುದು. ಆದರೆ,

ತಲಾಖ್ ವಿಧಾನದ ಪರಿಷ್ಕರಣೆ, ಏಕರೂಪ ನಾಗರೀಕ ಸಂಹಿತೆಗಳು ಚುನಾವಣಾ ಸಂದರ್ಭದಲ್ಲಿ ಚರ್ಚೆಯಾಗುವುದು ಮತ್ತು ಇದನ್ನು ಪುರುಷರ ಮಂಡಳಿಗಳು ಮಾತ್ರ ವಿರೋಧಿಸುವುದು ಮಹಿಳಾ ಪರವಾದ ಕಾಳಜಿಗಳಾಗಿ ಗೋಚರಿಸುವುದಿಲ್ಲ.[೧೬] ಮಹಿಳಾ ಅಭಿವೃದ್ಧಿ ಸಂಗತಿಗಳು ರಾಜಕೀಕರಣಗೊಳ್ಳುವುದು ಕೇವಲ ಶೋಷಣೆ ಮತ್ತೊಂದು ರಾಜಕೀಯ ಆಯಾಮ ಮುಸ್ಲಿಮರಿಗೆ ಸಂಬಂಧಿಸಿದಂತೆ ಕೇವಲ ಭಾವಾನಾತ್ಮಕ ಸಂಗತಿಗಳನ್ನು ಮಾತ್ರ ಚರ್ಚಿಸಲಾಗುತ್ತಿದೆಯೇ ಹೊರತು ವಾಸ್ತವಿಕವಾಗಿ ಅವರ ಸಾಮಾಜಿಕ, ಆರ್ಥಿಕ ಸಂಗತಿಗಳನ್ನು ಚರ್ಚಿಸುತ್ತಿಲ್ಲ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದ್ದರೂ ಇದು ಗಂಭೀರವಾದ ಚರ್ಚೆಗೆ ಅವಕಾಶ ನೀಡಲಾಗುತ್ತಿಲ್ಲ. ಇಂತಹ ಚರ್ಚೆಗಳನ್ನು ನಾಗರೀಕ ಸವಾಜಗಳು ಕೈಗೊಳ್ಳಬೇಕೆಂದು ನಿರಿಕ್ಷಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಪೂರಕವಾಗಿ,ನಾಗರೀಕ ಸಮಾಜದ ಹುಟ್ಟು, ಅರ್ಥ, ವ್ಯಾಪ್ತಿ ಮತ್ತು ಜವಾಬ್ದಾರಿಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

### ೫.೫. ನಾಗರೀಕ ಸಮಾಜ: ಒಂದು ಪರಿಕಲ್ಪನೆ

೧೭ನೇ ಶತಮಾನದ ನಂತರ ನಾಗರೀಕ ಸಮಾಜದ ಪರಿಕಲ್ಪನೆ ಚಿಂತಕರ ಗಮನವನ್ನು ಸೆಳೆದುಕೊಂಡಿದೆ. ರಾಜ್ಯ ಮತ್ತು ನಾಗರೀಕ ಸಮಾಜಗಳು ಒಂದೇ ಅಲ್ಲ ಎಂಬ ಚರ್ಚೆಗಳು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಹಾಬ್ಸ್, ಲಾಕ್ ಮತ್ತು ಹೆಗೆಲ್ ರವರು ರಾಜ್ಯ ಮತ್ತು ನಾಗರೀಕ ಸಮಾಜವನ್ನು ಪ್ರತ್ಯೇಕಿಸಿದವರಲ್ಲಿ ಪ್ರಮುಖರು. ನಾಗರೀಕ ಸಮಾಜವು ಸುಸಂಘಟಿತವಾದ ಸಮಾಜವಾಗಿದ್ದು. ಅದು ರಾಜ್ಯದಿಂದ ಆಳಲ್ಪಡುತ್ತದೆ. ಈ ವ್ಯಾಖ್ಯಾನ ಪರಿಪೂರ್ಣವಾಗಿ ಮೌಲ್ಯಯುತವಾದದ್ದಲ್ಲ, ಎನ್ನುವುದು ಮತ್ತೊಂದು ವಾದ ಕಾರಣವೆಂದರೆ, ರಾಜ್ಯವು ಸಮಾಜದ ಅವಿಭಾಜ್ಯ ಅಂಗವಾಗಿರುತ್ತದೆ ಎಂದು ವಾದಿಸಲಾಗುತ್ತಿದೆ. ಅಂದರೆ ನಾಗರೀಕ ಸಮಾಜವು ಬಹು ವೈವಿಧ್ಯಮಯವಾದ ಸ್ವಯಂಸೇವಾ ಸಂಘಟನೆಗಳನ್ನು ಒಳಗೊಂಡಿದೆ. ಒಂದು ಮತ್ತೊಂದರ ಜೊತೆ ಸ್ಪರ್ಧಿಸುತ್ತದೆ ಮತ್ತು ತಮ್ಮ ತಮ್ಮ ಹಿತಾಸಕ್ತಿಗಳಿಗಾಗಿ ಹೋರಾಡುತ್ತವೆ. ನಾಗರೀಕ ಸಮಾಜವು ರಾಜ್ಯದಿಂದ ಪ್ರತ್ಯೇಕವಾಗಿದ್ದರೂ ಅದು ರಾಜ್ಯ ಮತ್ತು ರಾಜಕಾರಣದೊಂದಿಗೆ ಪರಸ್ಪರ ವರ್ತಿಸುತ್ತದೆ.[೧೭] ನಾಗರೀಕ ಸಮಾಜವು ಸಂಘಟಿತವಾದ ಸಮಾಜವಾಗಿದ್ದು, ಅದು ರಾಜ್ಯ ಮತ್ತು ಕುಟುಂಬಗಳ ನಡುವೆ ಮಧ್ಯಸ್ಥಿಕೆಯಾಗಿ ಕಾರ್ಯನಿರ್ವಹಿಸುತ್ತದೆ. ಎನ್ನುವುದು ಹೆಗಲ್‌ರ ವಾದ. ಅದು ಸಂಪೂರ್ಣವಾಗಿ ಸ್ವಾಯತ್ತತೆಯನ್ನು ಹೊಂದಿದ್ದರೂ ಅದು ರಾಜ್ಯ ಮತ್ತು ಅದರ ಸರ್ಕಾರಿ ಸಂಸ್ಥೆಗಳಿಗೆ ಉತ್ತರದಾಯಿಯಾಗಿರುತ್ತದೆ. ಹಾಗಾಗಿ ನಾಗರೀಕ ಸಮಾಜವು, ಸಂಘ ಸ್ಥಾಪಿಸುವ, ದೂರು ನೀಡುವ ಮತ್ತು ಗುಂಪಿನ ಅಥವಾ ಸಮುದಾಯದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ನಾಗರೀಕ ಮತ್ತು ಆರ್ಥಿಕ ಹಕ್ಕುಗಳನ್ನು ಒಳಗೊಂಡಿದ್ದು, ಸರ್ಕಾರದ ಮೂಲಕ

ತನ್ನ ನಿಗದಿತ ಗುರಿಯನ್ನು ಪೂರೈಸಿಕೊಳ್ಳುತ್ತದೆ. ಆ ಮೂಲಕ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾನೆ. ಏಕೆಂದರೆ ವ್ಯಕ್ತಿಯ ಸಾಮಾಜಿಕ ಐಕ್ಯತೆ ಮತ್ತು ಅವನ ಕಲ್ಯಾಣ ಇತರರನ್ನು ಅವಲಂಬಿತವಾಗಿರುತ್ತದೆ[೧೮] ಎನ್ನುವುದನ್ನು ಸಾರ್ವತ್ರಿಕವಾಗಿ ಅಂಗೀಕರಿಸಿದೆ.

ನಾಗರೀಕ ಸಮಾಜವು ರಾಜಕೀಯ ಅಧಿಕಾರದ ಹೊರತಾಗಿ ಸ್ವತಂತ್ರವಾಗಿ ಅಸ್ತಿತ್ವದಲ್ಲಿರುವುದಿಲ್ಲ ಅಥವಾ ನಾಗರೀಕ ಸಮಾಜವಿಲ್ಲದೆ ರಾಜಕೀಯ ಅಧಿಕಾರ ಅಸ್ತಿತ್ವದಲ್ಲಿರುವುದು ಸಾಧ್ಯವಿಲ್ಲ. ಒಂದು ಮತ್ತೊಂದರ ಅಸ್ತಿತ್ವವಿಲ್ಲದೆ ಬಹು ದಿನಗಳವರೆಗೆ ಜೀವಿಸಲಾರವು. ಅದ್ದರಿಂದ ಇವೆರಡರ ನಡುವೆ ಸ್ಪಷ್ಟವಾದ ಗಡಿಗಳನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ. ನಾಗರೀಕ ಸಮಾಜವು ಬಲತ್ಕಾರವಿಲ್ಲದ ಇಚ್ಚಿತ ಹಿತಾಸಕ್ತಿಗಳು, ಉದ್ದೇಶಗಳು ಮತ್ತು ಮೌಲ್ಯಗಳನ್ನು ಸಾಧಿಸಿಕೊಳ್ಳುವ ಕಾರ್ಯಕ್ಷೇತ್ರವಾಗಿದೆ. ತಾತ್ವಿಕ ಮತ್ತು ಸೈದ್ಧಾಂತಿಕವಾಗಿ ರಾಜ್ಯ, ನಾಗರೀಕ ಸಮಾಜ ಮತ್ತು ಕುಟುಂಬಗಳು ಪ್ರತ್ಯೇಕವಾಗಿವೆ. ಆದರೆ ವಾಸ್ತವಿಕವಾಗಿ ಇವುಗಳ ನಡುವೆ ಮೇರೆಗಳನ್ನು ಗರುತಿಸುವುದು ಕಷ್ಟಸಾಧ್ಯ.[೧೯]

ನಾಗರೀಕ ಸಮಾಜ ರಾಜ್ಯದ ಬಲವಂತದ ವಿರುದ್ಧವಾಗಿ ರೂಪುಗೊಂಡ ಪರಿಕಲ್ಪನೆಯಾಗಿದೆ. ಈ ಪರಿಕಲ್ಪನೆಯು ವಿವಿಧ ರೀತಿಯ ಭಾಷೆಗಳು, ಮೌಲ್ಯಗಳು ಮತ್ತು ಸಂಸ್ಥೆಗಳನ್ನು ಒಳಗೊಡಿದ್ದು, ಇವುಗಳು ಪ್ರಜಾಪ್ರಭುತ್ವಕ್ಕೆ ಅಗತ್ಯವಾದ ಅಂಶಗಳಾಗಿವೆ. ರಾಜಕೀಯ, ಸಾಮಾಜಿಕ, ನಾಗರೀಕ ಹಕ್ಕುಗಳು, ಕಾನೂನಿನ ಅಧಿಪತ್ಯ, ಸಾರ್ವಜನಿಕ ಅವಕಾಶ ಎಲ್ಲಕ್ಕಿಂತ ಮೇಲಾಗಿ ಸಂಘ-ಸಂಸ್ಥೆಗಳ ಬಹುತ್ವತೆ ಮುಂತಾದವುಗಳನ್ನು ಒಳಗೊಂಡಿದೆ.[೨೦] ರಜನಿ ಕೊಠಾರಿಯವರು ಪರಿಭಾವಿಸುವಂತೆ ನಾಗರೀಕ ಸಮಾಜವೆಂದರೆ ಮಾನವೀಯ ಆಡಳಿತವನ್ನು ಸೃಜಿಸುವ ಕೇಂದ್ರ ಸ್ಥಳವಾಗಿದ್ದು, ಸಾಮಾಜಿಕ ಚಳುವಳಿಗಳು, ಸ್ವಯಂಸಂಘ ಹಾಗೂ ಸ್ವನಿಯಂತ್ರಿತ ಸಂಸ್ಥೆಗಳಾಗಿವೆ.[೨೧] ಜನರು ನಿರ್ದಿಷ್ಟ ಮಾರ್ಗದಲ್ಲಿ ಸಂಘಟಿತರಾಗುವ ಕೇಂದ್ರ ನಾಗರೀಕ ಸಮಾಜ ಎನ್ನುವುದು ನೀರಾ ಚಂದೋಕೆಯವರ ಅಭಿಪ್ರಾಯ.[೨೨] ಸರಳವಾಗಿ ನಾಗರೀಕ ಸಮಾಜವೆಂದರೆ ಸರ್ಕಾರೇತರ ಸಂಸ್ಥೆಗಳು ಮತ್ತು ಲಾಭರಹಿತ ಸಂಸ್ಥೆಗಳಾಗಿವೆ.[೨೩] ಬೌಲಿಂಗ್ ಪರಿಭಾವಿಸುವಂತೆ ನಾಗರೀಕ ಸಮಾಜಗಳೆಂದರೆ ರಾಜ್ಯದ ನೇರ ನಿಯಂತ್ರಣವಿಲ್ಲದ ಸಾರ್ವಜನಿಕ ಕಾರ್ಯಕ್ಷೇತ್ರವಾಗಿದ್ದು. ಅದು ನಾಗರೀಕರನ್ನು ಔಪಚಾರಿಕ ಮತ್ತು ಅನೌಪಚಾರಿಕ ಸಂಘಟನೆಗಳೊಂದಿಗೆ ಜೋಡಿಸುತ್ತದೆ. ನಾಗರೀಕ ಸಮಾಜವು ಸ್ವಯಂಸೇವಾ ಸಂಘಗಳಿಗೆ ಒತ್ತು ನೀಡುತ್ತದೆ.[೨೪] ಅಂಟೋನಿಯೋ ಗ್ರಾಮ್ಷಿಯವರ ಪ್ರಕಾರ ನಾಗರೀಕ ಸಮಾಜಗಳು ಸರ್ಕಾರೇತರ ಸಂಸ್ಥೆಗಳಾಗಿದ್ದು, ಜನತೆಗೆ ಔಪಚಾರಿಕ ರಾಜಕೀಯ ಸಂಸ್ಥೆಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಸುವ ಮೂಲ ತಳಹದಿ

ಯಾಗಿದ್ದು, ಅವುಗಳು ವ್ಯಕ್ತಿಯ ಅಭಿವ್ಯಕ್ತಿ ಸ್ವಾತಂತ್ರ, ಸಂಘ ಸ್ವಾತಂತ್ರ್ಯವನ್ನು ಬೆಂಬಲಿಸಿ, ನಿರಂಕುಶತೆಯನ್ನು ವಿರೋಧಿಸುತ್ತವೆ.[೨೫]

ನಾಗರೀಕ ಸಮಾಜವು ನಿರ್ದಿಷ್ಟ ಸ್ವರೂಪವನ್ನು ಹೊಂದಿದ್ದು, ಅದು ನಿರಂಕುಶ ಆಳ್ವಿಕೆ ಅಥವಾ ಪ್ರಜಾಸತ್ತಾತ್ಮಕ ಸರ್ಕಾರ ಇವೆರಡರಲ್ಲಿ ಯಾವ ಸರ್ಕಾರಗಳಲ್ಲಿ ಕಾರ್ಯನಿರ್ವಹಿಸುತ್ತದೆ ಎನ್ನುವುದನ್ನು ಆಧರಿಸಿ ಅದರ ಸ್ವರೂಪ ನಿರ್ಧಾರವಾಗುತ್ತದೆ. ಜೆರೆಮಿಕ್ ಗುರುತಿಸುವ ಪ್ರಕಾರ ನಾಗರೀಕ ಸಮಾಜವೆಂದರೆ ವ್ಯಕ್ತಿಗಳ ಭಿನ್ನಾಭಿಪ್ರಾಯವಾಗಿದ್ದು, ಅವುಗಳು ವ್ಯಾಪಾರಿ ಸಂಘಗಳು, ರೈತ ಸಂಘಗಳು ಮತ್ತು ವಿದ್ಯಾರ್ಥಿ ಸಂಘಗಳು ಮುಂತಾದವುಗಳನ್ನು ನಾಗರೀಕ ಸಮಾಜ ಒಳಗೊಂಡಿರುತ್ತದೆ.[೨೬] ಆಧುನಿಕ ಕಾಲಘಟ್ಟದಲ್ಲಿ ನಾಗರೀಕ ಸಮಾಜದ ಪ್ರಸ್ತುತತೆ ಹೆಚ್ಚು ಚರ್ಚೆಗೆ ಒಳಗಾಗಿದೆ. ಇಂದು ಮಾಹಿತಿ ಮತ್ತು ಸಂವಹನ ತಾಂತ್ರಿಕತೆಯಿಂದಾಗಿ ನಾಗರೀಕ ಸಮಾಜಕ್ಕೆ ಹೆಚ್ಚು ಸವಾಲುಗಳು ಎದುರಾಗಿವೆ.[೨೭] ರಾಜ್ಯ ಮತ್ತು ಕುಟುಂಬಗಳ ನಡುವೆ ಸಮತೋಲನವನ್ನುಂಟು ಮಾಡಲು ನಾಗರೀಕ ಸಮಾಜಗಳ ಅಗತ್ಯವಿದ್ದು, ಇವುಗಳ ಮೂಲಕ ಉತ್ತಮ ಆಡಳಿತವನ್ನು ಜಾರಿಗೆ ತರಲು ಸಾಧ್ಯವಿದೆ. ರಾಜಕೀಯ ನಿರ್ಣಯಗಳಲ್ಲಿ ನಾಗರೀಕರು ಸಕ್ರೀಯವಾಗಿ ಪಾಲ್ಗೊಳ್ಳುವಲ್ಲಿ ನಾಗರೀಕರ ಸಮಾಜಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ.[೨೮] ವಿವಿಧ ಅಧ್ಯಯನಗಳು ಗುರುತಿಸಿರುವ ಪ್ರಕಾರ ನಾಗರೀಕ ಸಮಾಜವು ರಾಜ್ಯ ಮತ್ತು ಕುಟುಂಬಗಳ ನಡುವಿನ ಕಂದಕವನ್ನು ಕಡಿಮೆ ಮಾಡಿ, ನಿರ್ಲಕ್ಷಿತ ಸಮುದಾಯದ ಬದುಕಿನಲ್ಲಿ ಬದಲಾವಣೆ ತರುತ್ತವೆ. ನಾಗರೀಕ ಸಮಾಜದ ಮಧ್ಯ ಪ್ರವೇಶಿಕೆಯು ಅಸಂಘಟಿತವಾಗಿರುವ ಸಾಮಾಜಿಕ ಚಳುವಳಿಗಳನ್ನು ಹೆಚ್ಚು ಸಂಘಟಿತಗೊಳಿಸಿ, ರಾಜ್ಯದಲ್ಲಿ ಜನರ ಪಾಲ್ಗೊಳ್ಳುವಿಕೆಯನ್ನು ಕ್ರಿಯಶೀಲಗೊಳಿಸುತ್ತದೆ.[೨೯] ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಇಂದು ನಾಗರೀಕ ಸಮಾಜಗಳು ಸಕ್ರಿಯವಾದ ಪಾತ್ರವನ್ನು ವಹಿಸುತ್ತಿವೆ. ಭಾರತದಲ್ಲೂ ಇಂದು ನಾಗರೀಕ ಸಮಾಜಗಳ ಸಂಖ್ಯೆ ಹೆಚ್ಚಾಗುತ್ತಿರುವ ಜೊತೆಗೆ ವಿವಿಧ ಕ್ಷೇತ್ರಗಳಲ್ಲಿ ಸಕ್ರೀಯವಾಗಿ ಪಾತ್ರವಹಿಸುತ್ತಿವೆ. ಭಾರತದಲ್ಲೂ ನಾಗರೀಕ ಸಮಾಜಗಳು ಕ್ರಿಯಾಶೀಲಗೊಂಡಿವೆ. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ನಾಗರೀಕ ಸಮಾಜಗಳ ವಿಕಾಸವನ್ನು ಅರಿಯುವುದು ಅಗತ್ಯವಾಗಿದ್ದು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

### ೫.೬. ಭಾರತದಲ್ಲಿ ನಾಗರೀಕ ಸಮಾಜದ ಉದ್ಬವ ಮತ್ತು ಬೆಳವಣಿಗೆ

ಪಾಶ್ಚಿಮಾತ್ಯ ದೇಶಗಳಲ್ಲಿ ರಾಜ್ಯ ಮತ್ತು ನಾಗರೀಕ ಸಮಾಜಗಳು ಏಕಕಾಲದಲ್ಲಿ ಉದ್ಭವವಾಗಿವೆ. ಆದರೆ ಭಾರತದಲ್ಲಿ ಮೊದಲು ರಾಜ್ಯ ಉದ್ಭವಾಗಿ, ಕಾಲಾನುಕ್ರಮದಲ್ಲಿ ನಾಗರೀಕ ಸಮಾಜಗಳು ಉದ್ಭವಾಗಿವೆ ಎಂದು ಹೇಳಲಾಗಿದೆ. ೧೯೮೦ರ ನಂತರ ಭಾರತದ ಸರ್ಕಾರವು

ಸಾಮಾಜಿಕ ಅಭಿವೃದ್ಧಿಗಾಗಿ ಸರ್ಕಾರೇತರ ಸಂಸ್ಥೆಗಳನ್ನು ಪ್ರೋತ್ಸಾಹಿಸಿತು. ಇಂದು ಸರ್ಕಾರೇತರ ಸಂಸ್ಥೆಗಳ ಸಂಖ್ಯೆ ಗಣನಿಯವಾಗಿ ಹೆಚ್ಚಾಗಿದ್ದು ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಸಂಖ್ಯೆ ೩೦.೦೦೦ ದಾಟಿದೆ. ಸರ್ಕಾರಗಳು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಕೈಗೊಳ್ಳಲು ವಿಫಲವಾದ್ದರಿಂದ ಸಾಮಾಜಿಕ ಗುಂಪುಗಳು ಮತ್ತು ವ್ಯಕ್ತಿಗಳು ನಾಗರೀಕ ಸಮಾಜದಲ್ಲಿ ಭಾಗವಹಿಸಲು ಕಾರಣವಾಯಿತು. ಆದರೆ ಮೂಲ ಶಿಕ್ಷಣ ಮತ್ತು ಇತರ ಸಾಮಾಜಿಕ ಸೌಲಭ್ಯಗಳನ್ನು ಸರ್ಕಾರಗಳು ಒದಗಿಸದೇ ಇದ್ದುದರಿಂದ ನಾಗರೀಕ ಸಮಾಜಗಳ ಬೆಳವಣಿಗೆಯು ಒಂದು ಕಡೆ ಕುಂಠಿತಗೊಂಡಿತು. ಆದ್ದರಿಂದ ರಾಜ್ಯ ಮತ್ತು ಇತರೆ ಸಂಸ್ಥೆಗಳು ಸಾಮಾಜಿಕ ಅಭಿವೃದ್ಧಿಗಾಗಿ ನಾಗರೀಕ ಸಮಾಜಗಳ ಸಾಮರ್ಥ್ಯ ಮತ್ತು ಮೂಲ ಸೌಕರ್ಯಗಳನ್ನು ಉಪಯೋಗಿಸಿಕೊಂಡವು. ಭಾರತವು ಹಲವಾರು ಸಾಮಾಜಿಕ, ಧಾರ್ಮಿಕ, ಸಮಸ್ಯೆಗಳನ್ನು ಹೊಂದಿದ್ದು, ಭಾರತದ ನಾಗರೀಕ ಸಮಾಜಗಳಲ್ಲಿ ಅಸಮಾನತೆ ಮತ್ತು ಸಂಘರ್ಷಗಳನ್ನು ಕಾಣುತ್ತೇವೆ.[೩೦]

ದ್ವಿತೀಯ ಮಹಾ ಯುದ್ಧದ ನಂತರ ಮಾನವನು ವಿವಿಧ ಸಮಸ್ಯೆಗಳನ್ನು ಎದುರಿಸ ಬೇಕಾಯಿತು. ಈ ಸಮಸ್ಯೆಗಳ ಪರಿಹಾರಕ್ಕಾಗಿ ನಾಗರೀಕ ಸಮಾಜಗಳು ಸಕ್ರಿಯವಾಗಿ ಪಾಲ್ಗೊಂಡಿದ್ದ ರಿಂದ ಅವುಗಳ ಕಾರ್ಯವ್ಯಾಪ್ತಿಯು ವಿಶಾಲವಾಯಿತು. ಇಂದು ನಾಗರೀಕ ಸಮಾಜದ ಕಾರ್ಯವ್ಯಾಪ್ತಿಯ ಬಗ್ಗೆ ಹೆಚ್ಚು ಚರ್ಚೆಗಳಾಗುತ್ತಿವೆ. ರಚನಾತ್ಮಕ ನಾಗರೀಕ ಸಮಾಜವು ಕೇವಲ ಸಮಾಜದ ಪಾತ್ರಧಾರಿಗಳು ನೀಡುವ ಕಾರ್ಯವನ್ನು ಮಾತ್ರ ನಿರ್ವಹಿಸುವುದಿಲ್ಲ, ಬದಲಾಗಿ ಇತರರು ನೀಡುವ ಕಾರ್ಯಗಳನ್ನು ಕೂಡ ನಿರ್ವಹಿಸುತ್ತವೆ. ಹಾಗಾಗಿ ಅವುಗಳ ಕಾರ್ಯ ವ್ಯಾಪ್ತಿಯು ವಿಶಾಲಗೊಂಡಿದೆ. ಕ್ರೊಯ್ ಸಾಂಚ್ ಹೇಳುವ ಪ್ರಕಾರ ಸಾಮಾನ್ಯವಾಗಿ ನಾಗರೀಕ ಸಮಾಜಗಳು ಮುಖ್ಯವಾಗಿ ಐದು ಕಾರ್ಯವ್ಯಾಪ್ತಿಯಲ್ಲಿ ನಿರ್ವಹಿಸುತ್ತವೆ. ರಕ್ಷಣೆ ಇದರ ಜವಾಬ್ದಾರಿಯಾಗಿದ್ದು, ರಾಜ್ಯದ ವ್ಯಾಪ್ತಿಯನ್ನು ಮೀರಿ ನಾಗರೀಕ ಸಮಾಜಗಳು ನಾಗರೀಕ ಹಕ್ಕುಗಳಿಗಾಗಿ ಹೋರಾಡುತ್ತವೆ. ನಾಗರೀಕ ಹಕ್ಕುಗಳನ್ನು ರಕ್ಷಿಸುವುದು ರಾಜ್ಯದ ಕರ್ತವ್ಯವಾಗಿದೆ. ಅದರೆ ಈ ಕರ್ತವ್ಯಗಳಲ್ಲಿ ರಾಜ್ಯವು ವಿಫಲವಾದಾಗ ಅವುಗಳನ್ನು ಜ್ಞಾಪಿಸುವ, ಕರ್ತವ್ಯ ನಿರ್ವಹಿಸಲು ಒತ್ತಾಯಿಸುವ ಕಾರ್ಯವನ್ನು ನಿರ್ವಹಿಸುತ್ತದೆ. ರಾಜ್ಯ ಮತ್ತು ನಾಗರೀಕರ ನಡುವೆ ಮಧ್ಯವರ್ತಿಯಾಗಿಯೂ ಕಾರ್ಯ ನಿರ್ವಹಿಸುತ್ತದೆ. ಅಂದರೆ, ಸ್ವಯಂ ಸಂಘಟಿತ ಸಂಘಟನೆಗಳು ರಾಜ್ಯದ ಅಧಿಕಾರವನ್ನು ಸೀಮೀತಗೊಳಿಸುವ ಹಾಗೂ ಪ್ರಭಾವಿಸುವ ಕಾರ್ಯವನ್ನು ನಿರ್ವಹಿಸುತ್ತದೆ ಮತ್ತು ಸಾಮಾಜೀಕರಣದ ಕಾರ್ಯಗಳನ್ನು ನಿರ್ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ನಾಗರೀಕ ಸಮಾಜಗಳನ್ನು ಪ್ರಜಾಪ್ರಭುತ್ವದ ಶಾಲೆಗಳೆಂದು ಪರಿಗಣಿಸಲಾಗಿದೆ. ನಾಗರೀಕರಿಗೆ ಹಕ್ಕುಗಳನ್ನು ಕೊಡಿಸುವಲ್ಲಿ ಸಹಭಾಗಿಯಾಗುವ, ಜನತೆಗೆ ಸಹಿಸ್ಣುತೆಯ ಪ್ರವೃತ್ತಿಯನ್ನು ಕಲಿಸಿ, ಅಧಿಕಾರ

ವಿಕೇಂದ್ರಿಕರಣವನ್ನು ಬೆಂಬಲಿಸುತ್ತವೆ. ಸಮುದಾಯದ ಐಕ್ಯತೆಗೆ ಆದ್ಯತೆ ನೀಡಿ, ವ್ಯಕ್ತಿಗಳಿಗೆ ಸಾಮಾಜಿಕ ಸಂಬಂಧಗಳ ಬಗ್ಗೆ ಅರಿವು ಮೂಡಿಸಿ, ವ್ಯಕ್ತಿಗತ ಆಕಾಂಕ್ಷೆಗಳನ್ನು ಈಡೇರಿಸುವ ಮೂಲಕ ಸಮುದಾಯದ ಐಕ್ಯತೆಯನ್ನು ಸಾಧಿಸುತ್ತವೆ.

ನಾಗರೀಕ ಸಮಾಜಗಳು ಸಂವಹನ ಕಾರ್ಯಗಳನ್ನು ಕೂಡ ನಿರ್ವಹಿಸುತ್ತವೆ. ಸಮಾಜದ ಬಗ್ಗೆ ಮುಕ್ತವಾದ ವಿಚಾರಗಳ ಅಭಿವ್ಯಕ್ತತೆ ಮತ್ತು ವಿನಿಮಯವನ್ನು ಪ್ರೋತ್ಸಾಹಿಸುವ ಮೂಲಕ ಪ್ರಜಾತಂತ್ರ ವ್ಯವಸ್ಥೆಯನ್ನು ಜೀವಂತವಾಗಿಡುತ್ತವೆ.[೬೧] ಎಡ್ವೆರ್ಡ್‌ರವರುಹೇಳುವಂತೆ ನಾಗರೀಕರ ರಕ್ಷಣೆ ಅಂದರೆ ರಾಜ್ಯದ ದಬ್ಬಾಳಿಕೆಯಿಂದ ನಾಗರೀಕ ಜೀವ, ಸ್ವಾತಂತ್ರ್ಯ ಮತ್ತು ಆಸ್ತಿಯನ್ನು ರಕ್ಷಿಸುವ ಕಾರ್ಯಗಳನ್ನು ನಿರ್ವಹಿಸುತ್ತವೆ. ಎರಡನೆಯದಾಗಿ, ಉತ್ತರದಾಯಿತ್ವದ ಮೇಲ್ವಿಚಾರಣೆ ಮಾಡುವ ಕಾರ್ಯಗಳನ್ನು ನಿರ್ವಹಿಸುತ್ತದೆ. ಅಂದರೆ ಎಡ್ವರ್ಡ್ ಪ್ರತಿಪಾದಿಸುವಂತೆ ಶಾಲಾ ದಾಖಲಾತಿಯೂ ನಾಗರೀಕ ಸಮಾಜಗಳ ಪ್ರಮುಖ ಕಾರ್ಯವ್ಯಾಪ್ತಿಯಾಗಿದೆ.[೬೨] ಭಾರತದಂತಹ ರಾಷ್ಟ್ರದಲ್ಲಿ ಶಿಕ್ಷಣಕ್ಷೇತ್ರ, ಮುಖ್ಯವಾಗಿ ಮಹಿಳಾ ಶೈಕ್ಷಣಿಕ  ಕ್ಷೇತ್ರದಲ್ಲಿ ನಾಗರೀಕ ಸಮಾಜಗಳು ಯಾಕೆ ಮಧ್ಯ ಪ್ರವೇಶಿಸಬೇಕು ಎಂಬ ಪ್ರಶ್ನೆಗಳು ಇಂದು ಹೆಚ್ಚು ಚರ್ಚೆಯಲ್ಲಿವೆ. ಶಿಕ್ಷಣವು ನಾಗರೀಕ ಸಮಾಜವನ್ನು ನಿರ್ಮಾಣ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದುಅಭಿಪ್ರಾಯಪಡಲಾಗಿದೆ. ಇದರ ಜೊತೆಗೆ ಒಂದು ಸಮುದಾಯದ ಶಿಕ್ಷಣವನ್ನು ಉತ್ತಮ ಪಡಿಸುವಲ್ಲಿ ನಾಗರೀಕ ಸಮಾಜಗಳು ಪ್ರಮುಖ ಪಾತ್ರವಹಿಸುತ್ತವೆ ಎಂದು ಗ್ರಹಿಸಲಾಗುತ್ತಿದೆ.ಭಾರತವು ಸ್ವಾತಂತ್ರ್ಯದ ಎಪ್ಪತ್ತು ದಶಕಗಳ ನಂತರವೂ ಶಿಕ್ಷಣದಲ್ಲಿ ಹಿಂದುಳಿದಿದೆ. ಸಮುದಾಯವಾರು ಶೈಕ್ಷಣಿಕ ಹಿಂದುಳಿಯುವಿಕೆಯನ್ನು ಪರಿಶೀಲಿಸಿದರೆ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ್ದಾರೆ. ಈ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಾಗೂ ನಾಗರೀಕ ಸಮಾಜಗಳು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗಾಗಿ ಕೈಗೊಂಡಿರುವ ಕ್ರಮಗಳನ್ನು ಗುರುತಿಸುವುದು ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಸರ್ಕಾರಗಳು ಎಂದರೆ ಕೇಂದ್ರ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳೆಂದು ಹಾಗೂ  ವಿವಿಧ ಸಮುದಾಯಗಳಿಗೆ ಸರ್ಕಾರಗಳಿಂದ ಮೂಲಭೂತ ಸೌಕರ್ಯಗಳನ್ನು ಕೊಡಿಸುವಲ್ಲಿ ಕ್ರಿಯಾಶೀಲವಾಗಿರುವ ಸ್ವಯಂ ಸೇವಾ ಸಂಸ್ಥೆಗಳನ್ನು ನಾಗರೀಕ ಸಮಾಜಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಭಾರತದಲ್ಲಿ ಶೈಕ್ಷಣಿಕ ಅಭಿವೃದ್ಧಿಯ ಮಜಲುಗಳನ್ನು ಚಾರಿತ್ರಿಕ ಘಟ್ಟಗಳಲ್ಲಿ ಗುರುತಿಸಬಹುದಾಗಿದೆ.

### ೫.೭. ಪ್ರಾಚೀನ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮಹಿಳಾ ಶಿಕ್ಷಣದ ಬೆಳವಣಿಗೆ ಮತ್ತು ಮಹತ್ವ

ಮಹಿಳಾ ಶಿಕ್ಷಣವು ಭಾರತಕ್ಕೆ ಹೊಸ ವಿಚಾರವಲ್ಲ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣಕ್ಕೆ ಉನ್ನತವಾದ ಪರಂಪರೆ ಇದೆ. ಗಾರ್ಗಿ, ಮೈತ್ರೇಯಿ, ಭಾರತಿ, ಲಖಿಮ ಮತ್ತು

ಬಿಸ್ವಾಸ್ ದೇವಿಯವರ ಹೆಸರುಗಳು ಪ್ರಾಚೀನ ಶೈಕ್ಷಣಿಕ ರಂಗದಲ್ಲಿ ಚಿರಪರಿಚಿತವಾಗಿವೆ. ಚಾರಿತ್ರಿಕ ದಾಖಲೆಗಳು ಹೇಳುವಂತೆ ಹಿಂದು ಮತ್ತು ಮುಸ್ಲಿಮರ ಪುರುಷ ಪ್ರಧಾನ ಸಮಾಜಗಳು ಪ್ರಾಚೀನ ಕಾಲದಲ್ಲಿ ಮಹಿಳಾ ಶಿಕ್ಷಣವನ್ನು ತೀವ್ರವಾಗಿ ವಿರೋಧಿಸಿದ್ದವು. ಭಾರತದಲ್ಲಿ ನಡೆದ ಪುನರುಜ್ಜೀವನ ಚಳುವಳಿಯು ಮಹಿಳಾ ಶಿಕ್ಷಣಕ್ಕೆ ಹೊಸ ಆಯಾಮವನ್ನು ಕೊಡುವಲ್ಲಿ ಯಶಸ್ವಿಯಾಯಿತು. ೧೯೧೪ರಲ್ಲಿ ಅನಿಬೆಸೆಂಟ್ ರವರು ಬಾಲ್ಯವಿವಾಹ ಮತ್ತು ಅನಕ್ಷರತೆಯ ವಿರುದ್ಧ ಒಂದಾಗುವಂತೆ ಭಾರತೀಯರಿಗೆ ಕರೆ ನೀಡಿದರು. ೧೯೨೧-೨೨ ರಲ್ಲಿ ರಾಷ್ಟ್ರೀಯ ಕಾಂಗ್ರೇಸ್ ಅಹಮದಾಬಾದ್‌ನಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನವನ್ನು ಆಯೋಜಿಸುವ ಮೂಲಕ ಮಹಿಳಾ ಅಭಿವೃದ್ಧಿಗೆ ಕ್ರಮಗಳನ್ನು ಕೈಗೊಂಡಿದೆ. ಮಹಾತ್ಮ ಗಾಂಧಿಯವರು ಕೂಡಾ ಮಹಿಳಾ ಶಿಕ್ಷಣದ ಮಹತ್ವವನ್ನು ಪ್ರತಿಪಾದಿಸಿದವರಲ್ಲಿ ಪ್ರಮುಖರಾಗಿದ್ದಾರೆ.೩೩ಆದರೆ ಭಾರತದಲ್ಲಿ ಮಹಿಳಾ ಶಿಕ್ಷಣ ಅಧಿಕೃತವಾಗಿ ಬೆಳಕಿಗೆ ಬಂದಿದ್ದು ೧೯೨೦ರಲ್ಲಿ ಅಂದರೆ ೧೯೧೯ರ ಮಾಂಟೇಗೊ-ಚೆಲ್ಮ್ಸ್‌ಫರ್ಡ್ ಸುಧಾರಣೆಯ ನಂತರವಷ್ಟೆ. ಸಂವಿಧಾನದಲ್ಲಿ ಶಿಕ್ಷಣವು ವರ್ಗಾಯಿಸಲ್ಪಡುವ ವಿಷಯವಾಯಿತು. ೧೯೨೧ ರಲ್ಲಿ ದ್ವಿ ಸರ್ಕಾರ ರಚನೆಯಾದ ನಂತರ ಶಿಕ್ಷಣವು ಇದರ ನಿಯಂತ್ರಣಕ್ಕೆ ಒಳಪಟ್ಟಿತು. ಈ ಸರ್ಕಾರದಲ್ಲಿ ಶಿಕ್ಷಣಕ್ಕೆ ಹೆಚ್ಚು ಬೆಂಬಲ ದೊರೆತು ಕಡ್ಡಾಯ ಶಿಕ್ಷಣ ಮಸೂದೆ ಪಾಸಾಯಿತು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ವಿವಿಧ ಸಮಿತಿಗಳು ಮತ್ತು ಆಯೋಗಗಳನ್ನು ಆಧರಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶೈಕ್ಷಣಿಕ ಯೋಜನೆಗಳನ್ನು ಜಾರಿಗೊಳಿವೆ. ಎಪ್ಪತ್ತರ ದಶಕಗಳಲ್ಲಿ ಸಾಕ್ಷರತೆ ಪ್ರಮಾಣ ಹೆಚ್ಚಾಗಿದೆ. ಈ ಎಲ್ಲಾ ಪ್ರಯತ್ನಗಳ ನಡುವೆಯೂ, ಇಂದಿಗೂ ಭಾರತದಲ್ಲಿ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ್ದಾರೆ. ಇದರ ಜೊತೆಗೆ ಮುಸ್ಲಿಮರು ವಿಶೇಷವಾಗಿ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಸರ್ಕಾರ ಸಾರ್ವತ್ರಿಕ ಶಿಕ್ಷಣದಲ್ಲಿ ಅಮೂಲಾಗ್ರ ಬಲಾವಣೆ ತರುವ ಉದ್ದೇಶದಿಂದ ಆಯೋಗಗಳನ್ನು ರಚಿಸಿ ಅವುಗಳ ಶಿಫಾರಸ್ಸುಗಳನ್ನು ಅಂಗೀಕರಿಸಿದೆ. ಇವುಗಳ ಶಿಫಾರಸ್ಸುಗಳನ್ನು ಚರ್ಚಿಸುವುದು ಅಗತ್ಯವಾಗಿದೆ.

### ೫.೮. ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಆಯೋಗಗಳು ಮತ್ತು ಮಹಿಳಾ ಶಿಕ್ಷಣದ ಬೆಳವಣಿಗೆ

ಸ್ವಾತಂತ್ರ್ಯದ ನಂತರ ಮಹಿಳಾ ಶಿಕ್ಷಣವನ್ನು ಅಭಿವೃದ್ಧಿಪಡಿಸುವುದು ಸರ್ಕಾರಕ್ಕೆ ದೊಡ್ಡ ಸವಾಲಾಗಿ ಪರಿಣಮಿಸಿತು. ಸರ್ಕಾರ ಶೈಕ್ಷಣಿಕ ಸವಲತ್ತುಗಳನ್ನು ಅಭಿವೃದ್ಧಿಪಡಿಸಲು ಸಲಹೆಗಳಿಗಾಗಿ ವಿವಿಧ ಆಯೋಗಗಳನ್ನು ರಚಿಸಿತು. ಈ ಸಂಬಂಧ ೧೯೪೮ ರಲ್ಲಿ ಮೊದಲ ಮತ್ತು ೧೯೫೨ ರಲ್ಲಿ ಎರಡನೇ ಆಯೋಗವನ್ನು ರಚಿಸಿತು. ಸಂವಿಧಾನದ ೪೫ನೇ ವಿಧಿಯ ಪ್ರಕಾರ ಪ್ರತಿಯೊಬ್ಬರಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವುದು ಒತ್ತಾಸೆಯಾಗಿದ್ದು, ಈ ಹಿನ್ನಲೆಯಲ್ಲಿ ವಿವಿಧ ಆಯೋಗಗಳು ಶಿಕ್ಷಣದ ಸುಧಾರಣೆಗೆ ಹಲವಾರು ಶಿಫಾರಸ್ಸುಗಳನ್ನು ಮಾಡಿವೆ. ಮೊದಲ

ಆಯೋಗವು ಪ್ರಾಥಮಿಕ, ಪ್ರೌಢಶಿಕ್ಷಣ ಮತ್ತು ಕಾಲೇಜು ಶಿಕ್ಷಣದ ಬಗ್ಗೆ ಶಿಫಾರಸ್ಸು ನೀಡಿವೆ. ಎರಡನೇ, ಮೂರನೇ ಮತ್ತು ನಾಲ್ಕನೇ ಆಯೋಗವು ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಬಗ್ಗೆ ಮತ್ತು ಐದನೇ ಆಯೋಗವು ಪ್ರೌಢಶಿಕ್ಷಣದ ಬಗ್ಗೆ ಶಿಫಾರಸ್ಸು ನೀಡಿದೆ. ೧೯೬೪-೬೬ ರ ಕೊಠಾರಿ ಆಯೋಗವು ಶಿಕ್ಷಣವು ರಾಷ್ಟ್ರೀಯ ಅಭಿವೃದ್ಧಿಯ ಮಾಧ್ಯಮವೆಂದು ಗುರುತಿಸಿತು. ೧೯೭೪ ರ ಸೆಂಟ್ರಲ್ ಅಡ್ವೈಜರಿ ಬೋರ್ಡ್ ಹತ್ತು ವರ್ಷಗಳ ನಂತರ ಶಾಲಾ ಶಿಕ್ಷಣದ ಹಾಗೂ ಐದು ವರ್ಷಗಳ ಶಿಕ್ಷಣ ಪೂರೈಕೆಯ ನಂತರ ಪದವಿ ನೀಡಬೇಕೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸನ್ನು ೧೯೮೬ ರ ಹೊಸ ಶಿಕ್ಷಣ ನೀತಿ ಅನ್ವಯ ಎಲ್ಲಾ ರಾಜ್ಯಗಳಲ್ಲಿ ಜಾರಿಗೊಳಿಸ ಲಾಯಿತು.

೨೦೦೪ ರ ಮಾನವಾಭಿವೃದ್ಧಿ ವರದಿಯು ಮಹಿಳಾ ಸಬಲೀಕರಣದ ಪ್ರಮುಖ ಸೂಚಿಗಳಾದ ಸಂಪನ್ಮೂಲಗಳ ಹಕ್ಕು, ಮಾಹಿತಿ, ಗೃಹ ನಿರ್ಣಯಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಬಗ್ಗೆ ಚರ್ಚಿಸಿದೆ.೩೪ವಿಶ್ವಸಂಸ್ಥೆಯ ಕಾರ್ಯಕಾರಿ ಗುಂಪು ಲಿಂಗ ಸಂಬಂಧಿ ಅಧ್ಯಯನಗಳಿಗಾಗಿ ಅದರ ಎಲ್ಲಾ ಉಪ ಸಂಸ್ಥೆಗಳಲ್ಲಿ ದಕ್ಷತೆ ಮತ್ತು ಪರಿಣಾಮಕಾರಿತ್ವವನ್ನು ತರಲು ಪ್ರಯತ್ನಿಸಿದೆ. ಶಾಸನೀಯ ಕ್ರಮಗಳ ಮೂಲಕ ಮಹಿಳೆಯರಿಗೆ ನಿರ್ಣಯಗಳಲ್ಲಿ ಪಾಲ್ಗೊಳ್ಳುವ ಸಾಮರ್ಥ್ಯವನ್ನು ನೀಡಲು ಶ್ರಮಿಸುತ್ತಿದೆ. ಲಿಂಗ ಸಂಬಂಧಿ ಹಿಂದುಳಿಯುವಿಕೆಯನ್ನು ವಿವಿಧ ಸೂಚಿಗಳಲ್ಲಿ ಮಾಪನ ಮಾಡಿ ಪುರುಷರ ಅಭಿವೃದ್ಧಿಯೊಂದಿಗೆ ತುಲನಾತ್ಮಕ ಮಾಪನ ಮಾಡಲಾಗುತ್ತದೆ. ಈ ಹಿನ್ನಲೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ರಾಷ್ಟ್ರಗಳು ಶಿಕ್ಷಣದ ಮೂಲಕ ಮಹಿಳಾ ಸಬಲೀಕರಣಕ್ಕೆ ಒತ್ತು ನೀಡಲು ಮುಂದಾಗಿವೆ.೩೫ ಆದರೂ ಇಂದಿಗೂ ಶಿಕ್ಷಣದಲ್ಲಿ ಲಿಂಗಸಂಬಂಧಿ ಅಸಮಾನತೆಗಳು ಜೀವಂತವಾಗಿವೆ. ೧೯೮೬ರ ಹೊಸ ಶಿಕ್ಷಣ ನೀತಿಯ ನಂತರ ಭಾರತ ಸರ್ಕಾರವು ಮಹಿಳಾ ಶಿಕ್ಷಣಕ್ಕಾಗಿ ಹಲವಾರು ಯೋಜನೆ ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಸಕಾರದ ಪ್ರಮುಖ ಶೈಕ್ಷಣಿಕ ಯೋಜನೆಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೫.೯. ಸಾರ್ವತ್ರಿಕ ಶಿಕ್ಷಣಕ್ಕಾಗಿ ಸರ್ಕಾರದ ಕ್ರಮಗಳು

ಎಂಟನೆಯ ಪಂಚವಾರ್ಷಿಕ ಯೋಜನೆಯು ಮಾನಾವಾಭಿವೃದ್ಧಿಗೆ ಹೆಚ್ಚು ಒತ್ತು ನೀಡಿತು. ಇದು ಪ್ರಮುಖವಾಗಿ ಮಹಿಳೆಯರು ಮತ್ತು ಮಕ್ಕಳನ್ನು ಮುಖ್ಯವಾಹಿನಿಗೆ ತರುವ ಆಶಯವನ್ನು ಹೊಂದಿದೆ. ಒಂಭತ್ತನೆ ಪಂಚವಾರ್ಷಿಕ ಯೋಜನೆಯೂ ಕೂಡ ಶಾಸನೀಯ, ಸಾಂಸ್ಥಿಕ ಮತ್ತು ನೀತಿ-ನಿರೂಪಣೆಯ ಮೂಲಕ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ಒತ್ತು ನೀಡಿದೆ.[೩೬] ೯ನೇ ಪಂಚವಾರ್ಷಿಕ ಯೋಜನೆಯು ೨೦೦೫ ರ ಹೊತ್ತಿಗೆ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸು ವುದು ವಿಶೇಷವಾಗಿ ಬಾಲಕಿಯರ ಶಿಕ್ಷಣ ಮತ್ತು ನಿರ್ಲಕ್ಷಿತ ಸಮುದಾಯಗಳಿಗೆ ವಿಶೇಷ ಒತ್ತು

ನೀಡುವುದು, ೨೦೦೭ ರ ಹೊತ್ತಿಗೆ ೧೪ ನೇ ವಯಸ್ಸಿನ ಮಕ್ಕಳನ್ನು ಶೇ.೧೦೦ ದಾಖಲಾತಿಯಲ್ಲಿ ಉಳಿಸುವುದು, ೨೦೦೭ ರ ಹೊತ್ತಿಗೆ ಒಂದು ಕಿ.ಮೀ ಒಳಗಡೆ ಶಾಲೆ ಲಭ್ಯವಾಗುವಂತೆ ನೋಡಿಕೊಳ್ಳುವುದು ಮತ್ತು ೨೦೦೧ ರ ಹೊತ್ತಿಗೆ ಸಾಕ್ಷರತೆ ಪ್ರಮಾಣವನ್ನು ಶೇ.೭೩.೫ ರಿಂದ ಶೇ.೮೦ಕ್ಕೆ ಎತ್ತರಿಸುವುದು.[೩೭] ಮುಂತಾದ ಗುರಿಗಳನ್ನು ಹೊಂದಿತ್ತು. ಈ ಗುರಿಗಳ ಸಾಧನೆಗಾಗಿ ಸರ್ಕಾರ ವಿವಿಧ ಶೈಕ್ಷಣಿಕ ಯೋಜನೆಗಳನ್ನು ಜಾರಿಗೊಳಿಸಿದೆ. ಈ ಯೋಜನೆಗಳನ್ನು ಮುಂದೆ ಚರ್ಚಿಸಲಾಗಿದೆ.

೧. **ಕಪ್ಪು ಹಲಗೆ ಕಾರ್ಯಾಚರಣೆ ಮತ್ತು ಎಲ್ಲರಿಗೂ ಶಿಕ್ಷಣ ಕಾರ್ಯಕ್ರಮ:** ೧೯೮೭-೮೮ರಲ್ಲಿ ಈ ಕಾರ್ಯಕ್ರಮವನ್ನು ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಉದ್ದೇಶದಿಂದ ಜಾರಿಗೊಳಿಸಲಾಯಿತು. ಈಗ ಈ ಕಾರ್ಯಕ್ರಮವನ್ನು ಸರ್ವ ಶಿಕ್ಷಣ ಅಭಿಯಾನದಲ್ಲಿ ಸೇರ್ಪಡೆಗೊಳಿಸಲಾಗಿದೆ. ಮಹಿಳಾ ಸಾಕ್ಷರತೆ ಕಡಿಮೆ ಇರುವ ವಲಯಗಳಲ್ಲಿ ಮಹಿಳಾ ಶಿಕ್ಷಕಿಯರನ್ನು ಒದಗಿಸುವ ಮತ್ತು ಅಗತ್ಯ ಸೌಲಭ್ಯಗಳನ್ನು ಒದಗಿಸುವ ಮೂಲಕ ಶಾಲೆಗಳ ಮಟ್ಟವನ್ನು ಎತ್ತರಿಸುವ ಗುರಿಯನ್ನು ಹೊಂದಿತ್ತು. ಶೇ.೫೦ ರಷ್ಟು ಮಹಿಳಾ ಶಿಕ್ಷಕಿಯರನ್ನು ನೇಮಕ ಮಾಡುವ ಗುರಿಯನ್ನು ಹೊಂದಿತ್ತು.

೨. **ಮಹಿಳಾ ಸಮಸ್ಯೆ:** ೧೯೮೬ರ ನಂತರ ಹೊಸ ಶಿಕ್ಷಣ ನೀತಿಯ ಗುರಿಯನ್ನು ಸಾಧಿಸಲು ಈ ಯೋಜನೆಯನ್ನು ಜಾರಿಗೊಳಿಸಲಾಯಿತು. ಕಲಿಕೆಯ ವಾತಾವರಣವನ್ನು ಸೃಷ್ಟಿಸುವ ಮೂಲಕ ಗ್ರಾಮೀಣ ಮಹಿಳೆಯರನ್ನು ಸಂಘಟಿಸುವ ಗುರಿಯನ್ನು ಹೊಂದಿತ್ತು. ಮಹಿಳೆಯರ ಅನಕ್ಷರತೆ, ಕನಿಷ್ಟ ಸ್ಥಾನ-ಮಾನ, ಬಡತನ ಮುಂತಾದ ಸಮಸ್ಯೆಗಳನ್ನು ದೂರ ಮಾಡಲು ಶಿಕ್ಷಣವೇ ಮುಖ್ಯ ಸಾಧನವೆಂದು ಭಾವಿಸಲಾಗಿತ್ತು. ಮಹಿಳಾ ಸಮಸ್ಯೆಯ ಮೂಲಕ ಮಹಿಳಾ ಪಠ್ಯವನ್ನು ಅಗತ್ಯಕ್ಕೆ ತಕ್ಕಂತೆ ರೂಪಿಸುವ ಗುರಿಯನ್ನು ಹೊಂದಿತ್ತು.

೩. **ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ(ಡಿಪಿಇಪಿ):** ೧೯೯೪ ರಲ್ಲಿ ರಾಷ್ಟ್ರವ್ಯಾಪಿಯಾಗಿ ಜಾರಿಯಾದ ಈ ಕಾರ್ಯಕ್ರಮ ಶಿಕ್ಷಣದಲ್ಲಿರುವ ಲಿಂಗಸಂಬಂಧಿ ಮತ್ತು ಸಾಮಾಜಿಕ ಅಸಮಾನತೆಯನ್ನು ದೂರ ಮಾಡಿ, ಹೆಣ್ಣು ಮಕ್ಕಳಿಗೆ ಸಾರ್ವತ್ರಿಕವಾಗಿ ಮತ್ತು ಸುಲಭವಾಗಿ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದು ಯೋಜನೆಯ ಗುರಿಯಾಗಿತ್ತು. ಲಿಂಗ ಸಮಾನತೆ ಈ ಯೋಜನೆಯ ಮುಖ್ಯ ಉದ್ದೇಶವಾಗಿತ್ತು. ಅದ್ದರಿಂದ ಈ ಯೋಜನೆಯನ್ನು ಮಹಿಳಾ ಸಾಕ್ಷರತೆ ಹೆಚ್ಚಾಗಿರುವ ಜಿಲ್ಲೆಗಳಲ್ಲಿ ಜಾರಿಗೊಳಿಸಲಾಯಿತು. ಗ್ರಾಮ ಶಿಕ್ಷಣ ಸಮಿತಿಯಲ್ಲಿ ಮಹಿಳಾ ಪ್ರತಿನಿಧಿಯನ್ನು ಕಡ್ಡಾಯಗೊಳಿಸ ಲಾಯಿತು ಮತ್ತು ಶಾಲೆಗಳಿಗೆ ಶೌಚಾಲಯ, ನೀರು, ಮಹಿಳಾ ಶಿಕ್ಷಕಿಯರನ್ನು ಒದಗಿಸುವ ಗುರಿಯನ್ನು ನಿಗದಿಪಡಿಸಲಾಯಿತು.

೪. **ಸರ್ವ ಶಿಕ್ಷಣ ಅಭಿಯಾನ:** ಇದು ರಾಷ್ಟ್ರ ವ್ಯಾಪಿಯಾದ ಕಾರ್ಯಕ್ರಮವಾಗಿದ್ದು ಮಹಿಳಾ ಶಿಕ್ಷಣಕ್ಕಾಗಿ ಹಿಂದುಳಿದ ವಲಯಗಳಲ್ಲಿ ಯೋಜನೆಗಳನ್ನು ರೂಪಿಸಲಾಗಿತ್ತು ಹಾಗೂ ಗುಣಮಟ್ಟದ ಶಿಕ್ಷಣವೂ ಇದರ ಗುರಿಯಾಗಿತ್ತು. ದೂರದ ಹಳ್ಳಿಗಳಲ್ಲಿರುವ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದು ಇದರ ಆಶಯವಾಗಿತ್ತು. ಇದರ ಅಡಿಯಲ್ಲಿ ಕಸ್ತೂರಿ ಬಾ ಗಾಂಧಿ ಬಾಲಿಕ ವಿದ್ಯಾಲಯಗಳನ್ನು ಹಿಂದುಳಿದ ಮತ್ತು ನಿರ್ಲಕ್ಷಿತ ಸಮುದಾಯಗಳಿಗಾಗಿ ಜಾರಿಗೊಳಿಸಲಾಯಿತು.

೫. **ಮಹಿಳೆಯರಿಗೆ ಪ್ರಾಥಮಿಕ ಹಂತದವರೆಗೆ ಶಿಕ್ಷಣದ ರಾಷ್ಟ್ರೀಯ ಕಾರ್ಯಕ್ರಮ:** ೨೦೦೩ ರಲ್ಲಿ ಜಾರಿಯಾದ ಕಾರ್ಯಕ್ರಮ ಸರ್ವಶಿಕ್ಷಣ ಅಭಿಯಾನದ ಭಾಗವಾಗಿದ್ದರೂ, ವಿಶಿಷ್ಟವಾದ ಕಾರ್ಯಕ್ರಮವಾಗಿದೆ. ಇದು ಹಿಂದುಳಿದ ಮತ್ತು ನಿರ್ಲಕ್ಷಿತ ಸಮುದಾಯದ ಹೆಣ್ಣು ಮಕ್ಕಳ ಪ್ರಾಥಮಿಕ ಶಿಕ್ಷಣಕ್ಕೆ ವಿಶೇಷವಾದ ಅವಕಾಶಗಳನ್ನು ನೀಡುತ್ತದೆ. ಈ ಕಾರ್ಯಕ್ರಮವನ್ನು ಶಿಕ್ಷಕಿಯರಿಗೆ ಲಿಂಗ ಸೂಕ್ಷ್ಮತೆಯ ತರಬೇತಿ, ಮಾದರಿ ಶಾಲೆಗಳ ಪೂರೈಕೆ, ಸಮವಸ್ತ್ರ, ಗೃಹಕಾರ್ಯ ಪುಸ್ತಕಗಳನ್ನು ಒದಗಿಸುವ ಮೂಲಕ ಮಹಿಳಾ ಶಿಕ್ಷಣಕ್ಕೆ ಒತ್ತು ನೀಡಲಾಗುತ್ತಿದೆ.

೬. **ಕಸ್ತೂರಿ ಬಾ ಗಾಂಧಿ ಬಾಲಿಕ ವಿದ್ಯಾಲಯ:** ೨೦೦೪ರ ಜುಲೈನಲ್ಲಿ ಈ ಕಾರ್ಯಕ್ರಮವನ್ನು ಜಾರಿಗೊಳಿಸಲಾಯಿತು. ಇದರ ಪ್ರಕಾರ ಕಸ್ತೂರಿ ಬಾ ಗಾಂಧಿ ಬಾಲಿಕ ವಿದ್ಯಾಲಯಗಳನ್ನು ಪರಿಶಿಷ್ಟ ಜಾತಿ, ಪಂಗಡ ಮತ್ತು ಅಲ್ಪಸಂಖ್ಯಾತ ಸಮುದಾಯಗಳ ಹೆಣ್ಣು ಮಕ್ಕಳಿಗೆ ಒದಗಿಸಲಾಯಿತು. ಶೇ.೭೫ ರಷ್ಟು ಸ್ಥಾನಗಳು ಈ ಸಮುದಾಯಗಳಿಗೆ ಮತ್ತು ಉಳಿದ ಶೇ.೨೫ರಷ್ಟು ಬಡ ಕುಟುಂಬಗಳಿಗೆ ನಿಗದಿಪಡಿಸಲಾಯಿತು. ೨೦೦೭ರ ಮಾರ್ಚ್ ಹೊತ್ತಿಗೆ ೨,೧೮೬ ಶಾಲೆಗಳನ್ನು ರಾಷ್ಟ್ರೀಯ ಸರಾಸರಿಗಿಂತ ಕಡಿಮೆ ಮಹಿಳಾ ಸಾಕ್ಷರತೆ ಇರುವ ವಲಯಗಳಲ್ಲಿ ಸ್ಥಾಪಿಸಲಾಯಿತು. ನಂತರ ಈ ಯೋಜನೆಯನ್ನು ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ವಿಲೀನಗೊಳಿಸಲಾಯಿತು.

೭. **ಲಿಂಗಸಂಬಂಧಿ ಆಯವ್ಯಯ ಕೋಶ:** ಈ ಕೋಶವನ್ನು ಜಂಟಿ ಕಾರ್ಯದರ್ಶಿ ಮಟ್ಟದ ಅಧಿಕಾರಿ ನೇತೃತ್ವದಲ್ಲಿ ಮಾನವ ಸಂಪನ್ಮೂಲ ಇಲಾಖೆಯಲ್ಲಿ ಸ್ಥಾಪಿಸಲಾಯಿತು. ಲಿಂಗಸಂಬಂಧಿ ವಿತರಣೆ, ಮಹಿಳಾ ಅಭಿವೃದ್ಧಿ ಯೋಜನೆಗಳ ಕಾರ್ಯಚರಣೆಗೆ ನಿಗಾವಹಿಸುವುದು ಇದರ ಜವಾಬ್ದಾರಿಯಾಗಿದೆ. ಇವೆಲ್ಲವುಗಳ ಜೊತೆಗೆ ವಿವಿಧ ರಾಜ್ಯ ಸರ್ಕಾರಗಳು ಮಹಿಳಾ ಶಿಕ್ಷಣಕ್ಕಾಗಿ ವಿಶೇಷ ಯೋಜನೆಗಳನ್ನು ಜಾರಿಗೊಳಿಸಿದೆ. ಆದರೂ ಇಂದಿಗೂ ಮಹಿಳಾ ಸಾಕ್ಷರತೆ ಹಿಂದುಳಿದಿದೆ. ಇದು ವ್ಯಕ್ತಿಗತ ಅಭಿವೃದ್ಧಿ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳು. ರಾಷ್ಟ್ರೀಯ ಅಭಿವೃದ್ಧಿ ಮತ್ತು ಎಲ್ಲದಕ್ಕಿಂತ ಮುಖ್ಯವಾಗಿ ಮಿಷನ್ ೨೦೨೦ಗೆ ಸವಾಲಾಗಿ ಪರಿಣಮಿಸಿದೆ.[೪೮] ಸರ್ಕಾರದ ಈ ಕಾರ್ಯಕ್ರಮಗಳು ಶಿಕ್ಷಣ ಕ್ಷೇತ್ರದಲ್ಲಿ ಗುಣಾತ್ಮಕ ಮತ್ತು ಪರಿಮಾಣಾತ್ಮಕ ಬದಲಾವಣೆಗಳನ್ನು ತರುವಲ್ಲಿ ಯಶಸ್ವಿಯಾಗಿದೆ.

## ೫.೧೦. ಸರ್ಕಾರದ ಶೈಕ್ಷಣಿಕ ಕಾರ್ಯಕ್ರಮಗಳು: ಗುಣಾತ್ಮಕ ಮತ್ತು ಪರಿಮಾಣಾತ್ಮಕ ಬದಲಾವಣೆಗಳು

ಸರ್ಕಾರ ಕೈಗೊಂಡ ಶೈಕ್ಷಣಿಕ ಕಾರ್ಯಕ್ರಮಗಳಿಂದ ಹಲವಾರು ಬದಲಾವಣೆಗಳು ಕಂಡುಬಂದಿವೆ. ೧೯೫೦-೫೧ರಲ್ಲಿ ೩,೦೯,೬೭೧ ಪ್ರಾಥಮಿಕ ಶಾಲೆಗಳು ಮತ್ತು ೧೩,೫೯೬ ಮಾಧ್ಯಮಿಕ ಶಾಲೆಗಳ ಸಂಖ್ಯೆಗಳನ್ನು ೨೦೦೨-೦೩ ರ ಹೊತ್ತಿಗೆ ಪ್ರಾಥಮಿಕ ಶಾಲೆಗಳನ್ನು ೬,೫೧,೩೭೫ಕ್ಕೆ ಮತ್ತು ಮಾಧ್ಯಮಿಕ ಶಾಲೆಗಳನ್ನು ೨,೪೫,೨೭ಕ್ಕೆ ಹೆಚ್ಚಿಸಲಾಯಿತು.[೫೯] ಇದೇ ಸಂದರ್ಭದಲ್ಲಿ ಮಹಿಳಾ ಶಿಕ್ಷಕರ ಸಂಖ್ಯೆಯನ್ನು ಗಣನಿಯವಾಗಿ ಹೆಚ್ಚಿಸಲಾಯಿತು. ೧೯೫೦-೫೧ ರಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ೮೨.೦೦೦ ಮಹಿಳಾ ಶಿಕ್ಷಕಿಯರು, ಮಾಧ್ಯಮಿಕ ಶಾಲೆಗಳಲ್ಲಿ ೧೩,೦೦೦ ಶಿಕ್ಷಕಿಯರಿದ್ದರು, ೨೦೦೨-೦೩ ರ ಹೊತ್ತಿಗೆ ೭.೪೬.೦೦೦ ಶಿಕ್ಷಕಿಯರು ಪ್ರಾಥಮಿಕ ಶಾಲೆಗಳಲ್ಲಿ ಹಾಗೂ ೬.೪೫.೦೦೦ ಶಿಕ್ಷಕಿಯರು ಮಾಧ್ಯಮಿಕ ಶಾಲೆಗಳಲ್ಲಿ  ಕಾರ್ಯನಿರ್ವಹಿಸುತ್ತಿದ್ದರು. ಅಂದರೆ ೬೦ ವರ್ಷಗಳಲ್ಲಿ ಶಿಕ್ಷಕಿಯರ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿದೆ. ಇದರ ಜೊತೆಗೆ ಮಹಿಳಾ ಸಾಕ್ಷರತೆ ೧೯೫೧ ರಲ್ಲಿದ್ದಂತೆ ಶೇ. ೮.೮೬ ರಿಂದ ೨೦೦೧ಕ್ಕೆ ಶೇ.೫೪.೧೬ ರಷ್ಟು ಮಾತ್ರ ಹೆಚ್ಚಾಯಿತು. ಪ್ರಾಥಮಿಕ ಶಾಲೆಗಳಲ್ಲಿ ೧೯೫೦-೫೧ ರಲ್ಲಿ ಶೇ.೨೮.೧ ರಷ್ಟು ಬಾಲಕಿಯರು ದಾಖಲಾಗಿದ್ದರೆ, ೨೦೦೧-೦೨ ರ ಹೊತ್ತಿಗೆ ದಾಖಲಾತಿಯ ಪ್ರಮಾಣ ಶೇ.೨೮.೧ ರಷ್ಟು ಹೆಚ್ಚಾಯಿತು. ಮಾಧ್ಯಮಿಕ ಶಾಲೆಗಳಲ್ಲಿ ೧೯೫೦-೫೧ ರಲ್ಲಿ ಶೇ.೧೬.೧ ರಷ್ಟು ಬಾಲಕಿಯರ ದಾಖಲಾತಿ ಇದ್ದರೆ ೨೦೦೧-೦೨ ರ ಹೊತ್ತಿಗೆ ಬಾಲಕಿಯರ ದಾಖಲಾತಿಯ ಪ್ರಮಾಣ ಶೇ.೪೧.೮ ರಷ್ಟು ಅಧಿಕವಾಯಿತು. ಈ ಎಲ್ಲಾ ಶೈಕ್ಷಣಿಕ ಬೆಳವಣಿಗೆ ಮತ್ತು ಅಭಿವೃದ್ಧಿಯ ನಡುವೆಯೂ ಅಸಂಖ್ಯಾತ ಬಾಲಕಿಯರು ಪ್ರಾಥಮಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆ ಎಂದು ಯೂನಿಸೆಫ್ ಹೇಳಿದೆ.[೬೦] ಇದರ ಜೊತೆಗೆ ಮುಸ್ಲಿಂ ಮಹಿಳೆಯರ ಸಾಕ್ಷರತೆ ಮತ್ತು ಶೈಕ್ಷಣಿಕ ಮಟ್ಟ ದಯನೀಯವಾದ ಸ್ಥಿತಿಯಲ್ಲಿಯೇ ಮುಂದುವರೆದಿದೆ. ಸರ್ಕಾರಗಳು ನೇಮಿಸಿದ ಆಯೋಗಗಳು ಇದನ್ನು ನಿರೂಪಿಸುತ್ತವೆ.

## ೫.೧೧. ಮುಸ್ಲಿಮರ ಶೈಕ್ಷಣಿಕ ವರದಿಗಳು ಮತ್ತು ಸರ್ಕಾರದ ಯೋಜನಾವಾರು ಕ್ರಮಗಳು

೧೯೮೦ರ ಗೋಪಾಲಸಿಂಗ್ ವರದಿ, ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಇತ್ತೀಚಿನ ೨೦೦೬ರ ಸಾಚಾರ್ ವರದಿ ಗುರುತಿಸಿರುವಂತೆ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ.[೬೧] ೨೦೦೫ ಮಾರ್ಚ್‌ನಲ್ಲಿ ಯುಪಿಎ ಸರ್ಕಾರ ಅಧಿಕಾರಕ್ಕೆ ಬಂದ ಆರು ತಿಂಗಳಲ್ಲಿಯೇ ಮುಸ್ಲಿಮರ ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಅಧ್ಯಯನ ಮಾಡಿ, ಮುಸ್ಲಿಮರ ಅಭಿವೃದ್ಧಿಗಾಗಿ ಸರ್ಕಾರದ ಮಧ್ಯಪ್ರವೇಶಿಕೆ ಎಲ್ಲೆಲ್ಲಿ ಅಗತ್ಯವಿದೆ ಎಂಬುದನ್ನು ಶಿಫಾರಸ್ಸು ಮಾಡಲು ಸಾಚಾರ್ ಸಮಿತಿಯನ್ನು ರಚಿಸಲಾಯಿತು. ಸಮಿತಿಯ ವರದಿಯನ್ನು  ಜಾರಿಗೊಳಿಸಲು ಅಲ್ಪಸಂಖ್ಯಾತರ

ಕಲ್ಯಾಣ ಮಂತ್ರಾಲಯವನ್ನು ನೋಡಲ್ ಏಜೆನ್ಸಿಯನ್ನಾಗಿ ನೇಮಕಮಾಡಿತು. ಸಮಿತಿಯ ಶಿಫಾರಸ್ಸುಗಳು ದೇಶದಾದ್ಯಂತ ಚರ್ಚೆಗೆ ಕಾರಣವಾಯಿತು. ಏಳನೆಯ ಪಂಚವಾರ್ಷಿಕ ಯೋಜನೆಯವರೆಗೂ ಇತರೆ ಹಿಂದುಳಿದ ವರ್ಗಗಳ ಜೊತಗೆ ಅಲ್ಪಸಂಖ್ಯಾತರೂ ಕೂಡ ಅಭಿವೃದ್ಧಿಯ ಅವಕಾಶಗಳನ್ನು ಪಡೆದುಕೊಳ್ಳುತ್ತಿದ್ದರು. ೧೯೮೯ ರಲ್ಲಿ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗಾಗಿ, ಪ್ರಮುಖವಾಗಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗಾಗಿ ಸ್ವಾಯತ್ತ, ರಾಜಕೀಯೇತರ ಮತ್ತು ಲಾಭರಹಿತವಾದ ಮೌಲಾನ ಆಜಾದ್ ಎಜುಕೇಷನ್ ಫೌಡೇಶನ್ ಸಂಸ್ಥೆಯನ್ನು ಸ್ಥಾಪಿಸಲಾಯಿತು. ೧೦೦ ಕೋಟಿ ರೂಪಾಯಿಗಳ ಕಾರ್ಪಸ್ ಬಂಡವಾಳದೊಂದಿಗೆ ಶಾಲೆಗಳನ್ನು, ವಸತಿ ಶಾಲೆಗಳನ್ನು, ಕಾಲೇಜುಗಳನ್ನು, ವಸತಿ ನಿಲಯಗಳನ್ನು ಸ್ಥಾಪಿಸುವ ಮತ್ತು ವಿಸ್ತರಿಸುವ ಹಾಗೂ ಪ್ರಯೋಗಾಲಯಗಳ ಉಪಕರಣಗಳನ್ನು ಮತ್ತು ಪಿಠೋಪಕರಣಗಳನ್ನು ಖರೀದಿಸುವ ಹಾಗೂ ವೃತ್ತಿಪರ ಸಂಸ್ಥೆಗಳನ್ನು ತಾಂತ್ರಿಕ ಸಂಸ್ಥೆಗಳನ್ನು, ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸುವ ಹಾಗೂ ಪ್ರತಿಭಾನ್ವಿತ ಹೆಣ್ಣು ಮಕ್ಕಳಿಗೆ ಶಿಷ್ಯ ವೇತನವನ್ನು ನೀಡುವ, ಮೌಲಾನಾ ಆಜಾದ್ ಸಾಕ್ಷರತಾ ಪ್ರಶಸ್ತಿಯನ್ನು ನೀಡುವ, ಮೌಲಾನಾ ಆಜಾದ್ ಸದ್ಭಾವನಾ ಕೇಂದ್ರಗಳನ್ನು (ಇತ್ತೀಚೆಗೆ ಇದನ್ನು ನಿಲ್ಲಿಸಲಾಗಿದೆ) ಸ್ಥಾಪಿಸುವ ಕ್ರಮಗಳನ್ನು ಕೈಗೊಂಡಿತು. ಹತ್ತನೇ ಯೋಜನೆಯ ಅಂತಿಮ ವರ್ಷದಲ್ಲಿ ಕಾರ್ಪಸ್ ಹಣ ೧೦೦ ಕೋಟಿ ಹಾಗೂ ಮೂಲ ಹಣವನ್ನು ದ್ವಿಗುಣಗೊಳಿಸಲಾಯಿತು. ಕಾರ್ಪಸ್ ಹಣದ ಬಡ್ಡಿಯನ್ನು ಶೈಕ್ಷಣಿಕ ಕಾರ್ಯಕ್ರಮಗಳ ಕಾರ್ಯಚರಣೆಗೆ ಬಳಸಲಾಯಿತು. ಫೌಂಡೇಶನ್ ೯೧.೮೧ ಕೋಟಿ ರೂಪಾಯಿಗಳನ್ನು ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ ಹಾಗೂ ವಿಸ್ತರಣೆಗಾಗಿ ಒಟ್ಟು ೨೦ ರಾಜ್ಯಗಳು ಹಾಗೂ ೨ ಕೇಂದ್ರಾಡಳಿತ ಪ್ರದೇಶಗಳಿಗೆ ಅನುದಾನವನ್ನು ಡಿಸೆಂಬರ್ ೨೦೦೬ರ ವರೆಗೆ ಬಿಡುಗಡೆ ಮಾಡಿತು. ೨೦೦೩-೦೪ ರಿಂದ ೨೦೦೫-೦೬ರ ಅವಧಿಯಲ್ಲಿ ಫೌಂಡೇಶನ್ ೬೯೮೬ ವಿದ್ಯಾರ್ಥಿನಿಯರಿಗೆ ಒಟ್ಟು ೬.೯೮ ಕೋಟಿ ವಿದ್ಯಾರ್ಥಿವೇತನವನ್ನು ೨೯ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಬಿಡುಗಡೆ ಮಾಡಿತು. ೧೯೯೨-೯೭ರ ಎಂಟನೆಯ ಯೋಜನೆಯ ಅವಧಿಯಲ್ಲಿ ಅಲ್ಪಸಂಖ್ಯಾತರ ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಎರಡು ವಿಶೇಷವಾದ ಯೋಜನೆಗಳನ್ನು ಜಾರಿಗೊಳಿಸಲಾಯಿತು. ೧೯೯೭-೦೨ರ ಒಂಭತ್ತನೇ ಯೋಜನೆಯಲ್ಲಿ ಆರ್ಥಿಕ ಮಾನದಂಡಗಳನ್ನು ಆಧರಿಸಿ ದುರ್ಬಲ ವರ್ಗಗಳಿಗೆ ಪರೀಕ್ಷಾ ಪೂರ್ವ ತರಬೇತಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿತು. ಅಲ್ಪಸಂಖ್ಯಾತರನ್ನು ಸ್ಪರ್ಧಾತ್ಮಕ ಮತ್ತು ತಾಂತ್ರಿಕ ಪರೀಕ್ಷೆಗಳಿಗೆ ತರಬೇತುಗೊಳಿಸಲು ಸ್ವಯಂಸೇವಾ ಸಂಸ್ಥೆಗಳಿಗೆ ಧನಸಹಾಯವನ್ನು ನೀಡಿತು. ಈ ಕಾರ್ಯಕ್ಕಾಗಿ ಕೆಲವೇ ಕೆಲವು ಸ್ವಯಂಸೇವಾ ಸಂಸ್ಥೆಗಳು ಮುಂದೆ ಬಂದಿದ್ದರಿಂದ ಈ ಯೋಜನೆಯನ್ನು ಹಾಗೂ ಒಬಿಸಿ ತರಬೇತಿ ಯೋಜನೆಯನ್ನು ಕೇಂದ್ರ ಸರ್ಕಾರದ ಪ್ರಾಯೋಜಿತ ಪರಿಶಿಷ್ಟ ಜಾತಿ ತರಬೇತಿ ಯೋಜನೆಯೊಂದಿಗೆ

೨೦೦೧ರಲ್ಲಿ ವಿಲೀನಗೊಳಿಸಲಾಯಿತು. ಈ ಯೋಜನೆಯನ್ನು ಪರಿಶಿಷ್ಟ ಜಾತಿ, ಹಿಂದುಳಿದ ಹಾಗೂ ಅಲ್ಪಸಂಖ್ಯಾರ ಸಮುದಾಯದ ತರಬೇತಿ ಹಾಗೂ ಸಂಬಂಧಿತ ಕಾರ್ಯಕ್ರಮಗಳ ಯೋಜನೆ ಎಂದು ಮರುನಾಮಕರಣ ಮಾಡಲಾಯಿತು. ಹತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸಿನ ನಿಗಮದ(ಎನ್‌ಎಂಎಫ್‌ಡಿಸಿ) ಮೂಲ ಅಧಿಕೃತ ಬಂಡವಾಳದ ಪಾಲನ್ನು ೬೫೦ ಕೋಟಿ ರೂ ಗಳಿಗೆ ಏರಿಸಲಾಯಿತು. ಅದರಲ್ಲಿ ೪೨೨.೫೦ ಕೋಟಿ(ಶೇ.೬೫ ರಷ್ಟು) ರೂಪಾಯಿಯನ್ನು ಕೇಂದ್ರ ಸರ್ಕಾರದ ಪಾಲು, ೧೬೯ ಕೋಟಿ(ಶೇ.೨೬ ರಷ್ಟು) ರೂಪಾಯಿಗಳು ರಾಜ್ಯ ಸರ್ಕಾರದ ಪಾಲನ್ನು ಹಾಗೂ ಉಳಿದ ೫೮.೫೦ ಕೋಟಿ (ಶೇ.೯ ರಷ್ಟು) ರೂಪಾಯಿಗಳನ್ನು ಅಲ್ಪಸಂಖ್ಯಾತರ ಅಭಿವೃದ್ಧಿ ಹಾಗೂ ಕಲ್ಯಾಣದಲ್ಲಿ ಆಸಕ್ತಿ ಇರುವ ವ್ಯಕ್ತಿ ಹಾಗೂ ಸಂಸ್ಥೆಗಳು ದೇಣಿಗೆ ನೀಡುವ ಅವಕಾಶವನ್ನು ಕಲ್ಪಿಸಲಾಯಿತು. ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸಿನ ನಿಗಮದ ಮುಖ್ಯ ಕರ್ತವ್ಯವೆಂದರೆ ಆರ್ಥಿಕವಾಗಿ ದುರ್ಬಲವಾಗಿರುವ ಅಲ್ಪಸಂಖ್ಯಾತರಿಗೆ ಕಡಿಮೆ ಬಡ್ಡಿ ದರದ ಸಾಲಗಳನ್ನು ನೀಡಿ ಆದಾಯ ಉತ್ಪಾದಿತ ಕಾರ್ಯಚಟುವಟಿಕೆಗಳಲ್ಲಿ ತೊಡಗುವಂತೆ ಪ್ರೇರೇಪಿಸುವುದಾಗಿತ್ತು. ಇದು ಸ್ಥಾಪನೆಯಾದಾಗಿನಿಂದ ಒಟ್ಟು ೨೨ ರಾಜ್ಯಗಳು ಹಾಗೂ ೩ ಕೇಂದ್ರಡಳಿತ ಪ್ರದೇಶಗಳಲ್ಲಿ ೨.೧೬ ಲಕ್ಷ ಫಲಾನುಭವಿಗಳಿಗೆ ಒಟ್ಟು ೮೨೭ ಕೋಟಿ ರೂಪಾಯಿಗಳ ಆರ್ಥಿಕ ಸಹಾಯವನ್ನು ನೀಡಿದೆ. ಈ ಎಲ್ಲಾ ಕಾರ್ಯಕ್ರಮಗಳ ಹೊರತಾಗಿಯೂ ೨೦೦೫-೦೬ರ ಅಂತ್ಯಕ್ಕೆ ಸಮಾಜ ಕಲ್ಯಾಣ ಮತ್ತು ಸಬಲೀಕರಣ ಇಲಾಖೆಯು ಅಲ್ಪಸಂಖ್ಯಾತರ ಶಿಕ್ಷಣ ಮತ್ತು ಅಭಿವೃದ್ಧಿಗಾಗಿ ಹಲವಾರು ಕಾರ್ಯಾಕ್ರಮಗಳನ್ನು ಜಾರಿಗೊಳಿಸುತ್ತಿತ್ತು. ಆನಂತರ ೨೯ನೇ ಜನವರಿ ೨೦೦೬ ರಂದು ಪ್ರತ್ಯೇಕವಾಗಿ ಅಲ್ಪಸಂಖ್ಯಾತರ ಕಲ್ಯಾಣ ಮಂತ್ರಾಲಯವನ್ನು ಸ್ಥಾಪಿಸಲಾಯಿತು. ಅದು ಅಂದಾಜು ಮೇಲ್ವಿಚಾರಣಾ ಪ್ರಾಧಿಕಾರ, ರಾಷ್ಟ್ರೀಯ ದತ್ತಾಂಶ ಬ್ಯಾಂಕ್ ಮತ್ತು ಸಮಾನ ಅವಕಾಶಗಳ ಆಯೋಗವನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿತು. ಇದರ ಜೊತಗೆ ರಿಯಾಯಿತಿ ದರದಲ್ಲಿ ಹಾಸ್ಟೆಲ್ ಸ್ಥಾಪನೆ, ಸಾಮಾನ್ಯ ಪಠ್ಯದಲ್ಲಿ ಅಲ್ಪಸಂಖ್ಯಾತರ ಆಯಾಮ ಸೇರ್ಪಡೆ, ಶಿಕ್ಷಕರಿಗೆ ತರಬೇತಿ, ರಾಜ್ಯಗಳು ನಡೆಸುತ್ತಿರುವ ಉರ್ದು ಶಾಲೆಗಳ ಸದೃಢೀಕರಣ, ಮದರಸಗಳನ್ನು ಪ್ರೌಢ ಶಾಲಾ ಮಂಡಳಿಗೆ ಸಂಪರ್ಕ ಕಲ್ಪಿಸುವುದು, ಮದರಸಾಗಳ ಪದವಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಅರ್ಹವೆಂದು ಪರಿಗಣಿಸುವುದು ಮತ್ತು ಮದರಸಗಳಿಗೆ ಹಣಕಾಸಿನ ನೆರವನ್ನು ನೀಡುವುದು ಮುಂತಾದ ಕ್ರಮಗಳನ್ನು ಕೈಗೊಳ್ಳುವಂತೆ ಸಲಹೆ ನೀಡಿತು.[೪೨]

ಮಾನವ ಸಂಪನ್ಮೂಲ ಇಲಾಖೆಯು ಮುಸ್ಲಿಂ ಮಕ್ಕಳ ಶಾಲಾ ದಾಖಲಾತಿಗೆ ಸೂಕ್ತ ಕ್ರಮಗಳನ್ನು ಕೈಗೊಂಡಿದೆ. ೨೦೦೬-೦೭ ನೇ ಸಾಲಿನಲ್ಲಿ ಮುಸ್ಲಿಮರು ಶೇ.೨೦ ಕ್ಕಿಂತ ಹೆಚ್ಚು ವಾಸಿಸುವ, ದೇಶದ ಒಟ್ಟು ೯೩ ಜಿಲ್ಲೆಗಳಲ್ಲಿ ೭,೦೦೦ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು

ಮತ್ತು ಶಿಕ್ಷಣ ಖಾತ್ರಿ ಯೋಜನೆಯಲ್ಲಿ ೩೫.೨೫೦ ಕೇಂದ್ರಗಳನ್ನು ಸ್ಥಾಪಿಸಿತು. ಶಿಕ್ಷಣದ ಎಲ್ಲಾ ಹಂತಗಳಲ್ಲೂ ಸೂಕ್ತ ಕ್ರಮಗಳನ್ನು ಕೈಗೊಂಡಿತು.[೪೩] ಮುಸ್ಲಿಮರ ಉನ್ನತ ಶಿಕ್ಷಣಕ್ಕಾಗಿ ಸಂವಿಧಾನದ ೩೦ ವಿಧಿಯಂತೆ ಸ್ಥಾಪಿಸಲ್ಪಟ್ಟಿರುವ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳನ್ನು ಮತ್ತು ಖಾಸಗಿ ಸಂಸ್ಥೆಗಳನ್ನು ಅವಲಂಬಿಸಬೇಕಾಗಿದೆ. ಇಂತಹ ಸಂಸ್ಥೆಗಳಲ್ಲಿ ಸುಪ್ರೀಂಕೋರ್ಟ್ ಮೀಸಲಾತಿಯನ್ನು ಕಲ್ಪಿಸಿದೆ. ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳು ಮುಸ್ಲಿಮರನ್ನು ಶೈಕ್ಷಣಿಕವಾಗಿ ಅಭಿವೃದ್ಧಿ ಪಡಿಸುತ್ತವೆಂದು ನಿರೀಕ್ಷಿಸಲಾಗಿದೆ. ಈ ದಿಶೆಯಲ್ಲಿ ಯುಪಿಎ ಸರ್ಕಾರ ಕೈಗೊಂಡ ಪ್ರಮುಖ ಹೆಜ್ಜೆ ಎಂದರೆ ನ್ಯಾಷನಲ್ ಕಮಿಷನ್ ಫಾರ್ ಮೈನಾರಿಟಿ ಎಜುಕೇಷನ್ ಇನ್ಸಿಟಿಟ್ಯೂಷನ್ ಅನ್ನು ೨೦೦೪ ರಲ್ಲಿ ಸ್ಥಾಪನೆ ಮಾಡಿದ್ದು,[೪೪] ಈ ಕಮಿಷನ್ ಅಲ್ಪಸಂಖ್ಯಾತ ವೃತ್ತಿಪರ ಸಂಸ್ಥೆಗಳನ್ನು ನೇರವಾಗಿ ಕೇಂದ್ರೀಯ ವಿಶ್ವವಿದ್ಯಾಲಯಗಳಿಗೆ ಸಂಲಗ್ನತೆ ಪಡೆಯುವಂತೆ ಸಹಕರಿಸುತ್ತಿದ್ದು, ಕೇಂದ್ರೀಯ ವಿಶ್ವವಿದ್ಯಾಲಯಗಳು ಅಲ್ಪಸಂಖ್ಯಾತ ಸಂಸ್ಥೆಗಳ ಪಠ್ಯಗಳನ್ನು ಪ್ರಸ್ತುತಗೊಳಿಸುವಲ್ಲಿ ಸಹಕರಿಸುತ್ತಿವೆ. ಆದರೆ ಈ ನೀತಿಗಳ ಕಾರ್ಯಾಚರಣೆಯು ಎಷ್ಟು ಪರಿಣಾಮಕಾರಿಯಾಗಿದೆ ಎಂಬುದನ್ನು ಅಳೆಯುವ ಮಾಪನವಿಲ್ಲ. ಈ ಪ್ರಯತ್ನಗಳು ಮುಸ್ಲಿಮರ ಶೈಕ್ಷಣಿಕ ಕೊರತೆಯನ್ನು ನೀಗಿಸಿಲ್ಲ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಮುಸ್ಲಿಂ ಸಮುದಾಯದ ಸಕ್ರೀಯ ಪಾಲ್ಗೊಳ್ಳುವಿಕೆ ಮತ್ತು ಸರ್ಕಾರದ ಬದ್ಧತೆಗಳು ಮಾತ್ರ ಇಂತಹ ಕೊರತೆಯನ್ನು ನೀಗಿಸಬಲ್ಲವು. ಸಾಚಾರ್ ವರದಿ ಸ್ಪಷ್ಟಪಡಿಸಿರುವಂತೆ ಕಡ್ಡಾಯ ಶಾಲಾ ಕಾಲೇಜುಗಳಿಗೆ ಯಾವುದೇ ಪರ್ಯಾಯವಿಲ್ಲ ಮತ್ತು ರಾಜ್ಯದ ಅಲ್ಪಸಂಖ್ಯಾತರು ಎದುರಿಸುತ್ತಿರುವ ಅಡ್ಡಿ ಅತಂಕಗಳನ್ನು ನಿವಾರಿಸುವುದು ರಾಜ್ಯಕ್ಕೆ ಕಷ್ಟದ ಕೆಲಸವಾಗಿದೆ. ಯುಪಿಎ ಸರ್ಕಾರವು ಅಲ್ಪಸಂಖ್ಯಾತ ವ್ಯವಹಾರಗಳ ಮಂತ್ರಾಲಯದ ಮೂಲಕ ನಾಲ್ಕು ವಿದ್ಯಾರ್ಥಿ ವೇತನಗಳನ್ನು ಜಾರಿಗೊಳಿಸಿದೆ. ಈ ವಿದ್ಯಾರ್ಥಿ ವೇತನಗಳಲ್ಲಿ ಪ್ರಿ ಮೆಟ್ರಿಕ್, ಪೋಸ್ಟ್ ಮೆಟ್ರಿಕ್, ಮೆರಿಟ್ ಮತ್ತು ಉಚಿತ ತರಬೇತಿ ಶಿಷ್ಯ ವೇತನಗಳಿವೆ. ಇದರ ಜೊತೆಗೆ ಮಹಿಳೆಯರಿಗೆ ಪ್ರತ್ಯೇಕವಾದ ಹಾಸ್ಟೆಲ್‌ಗಳನ್ನು ಸ್ಥಾಪಿಸಲಾಗುತ್ತಿದೆ. ಎಲ್ಲಾ ವಿದ್ಯಾರ್ಥಿ ವೇತನಗಳಲ್ಲಿ ಶೇ.೩೦ ರಷ್ಟು ಮಹಿಳೆಯರಿಗೆ ಮೀಸಲಿರಿಸಲಾಗಿದೆ.

೨೦೦೩ ರಲ್ಲಿ ಮೌಲಾನಾ ಆಜಾದ್ ಎಜುಕೇಷನ್ ಫೌಂಡೇಶನ್ ವತಿಯಿಂದ ೫೯,೩೦೩ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ ನೀಡಿದ್ದು, ಅದರ ಮೊತ್ತ ೬೯ ಕೋಟಿಗಳಾಗಿವೆ. ಒಟ್ಟಾರೆ ೨೦೧೧-೧೨ ನೇ ಸಾಲಿನಲ್ಲಿ ಸರ್ಕಾರವು ೧,೦೯೪,೯೪ ಕೋಟಿಗಳನ್ನು ೬೨.೬೨ ಲಕ್ಷ ವಿದ್ಯಾರ್ಥಿಗಳಿಗೆ ವಿತರಿಸಿದೆ. ೨೦೧೦-೧೧ರಲ್ಲಿ ಅಲ್ಪಸಂಖ್ಯಾತರಿಗೆ ೨೫೬ ಕೋಟಿ ಹಣವನ್ನು ವಿದ್ಯಾರ್ಥಿ ವೇತನಕ್ಕಾಗಿ ಬಿಡುಗಡೆ ಮಾಡಲಾಗಿದ್ದು. ಇದು ಶೈಕ್ಷಣಿಕ ಹಿಂದುಳಿಯುವಿಕೆಯನ್ನು ಕಡಿಮೆ ಮಾಡುವ ಸರ್ಕಾರದ ಸಣ್ಣ ಮಧ್ಯಪ್ರವೇಶಿಕೆಯಾಗಿದೆ. ೨೦೦೯-೧೦ ರಲ್ಲಿ ಉನ್ನತ

ಶಿಕ್ಷಣದಲ್ಲಿ ಚೇತರಿಕೆ ಕಂಡು ಬಂದರೂ ಇತರ ಸಮುದಾಯಗಳಿಗೆ ಹೋಲಿಸಿದರೆ ಇದರ ಪ್ರಮಾಣ ಕಡಿಮೆಯಾಗಿದೆ. ಮಾನವಾಭಿವೃದ್ಧಿ ಇಲಾಖೆಯು ಹೇಳುವ ಪ್ರಕಾರ ಅಲ್ಪಸಂಖ್ಯಾತರಿಂದ ಶಿಷ್ಯ ವೇತನಕ್ಕಾಗಿ ತುಂಬಾ ಬೇಡಿಕೆ ಕಂಡು ಬರುತ್ತಿದೆ. ಆದರೆ ಸರ್ಕಾರ ಒದಗಿಸುವ ಹಣ ಅಲ್ಪವಾಗಿದೆ. ಈ ಹಂತದಲ್ಲಿ ಕೇಳಿಬರುತ್ತಿರುವ ಮಾತುಗಳೆಂದರೆ ಇಂದಿಗೂ ಮುಸ್ಲಿಮರು ಬ್ಯಾಂಕ್ ಖಾತೆ ತೆರೆಯುವಲ್ಲಿ ಮತ್ತು ಶಿಷ್ಯವೇತನದ ಮಾಹಿತಿ ಪಡೆಯುವಲ್ಲಿ ಸಮಸ್ಯೆ ಎದುರಿಸುತ್ತಿದ್ದಾರೆ. ಶಿಷ್ಯವೇತನ ಎಲ್ಲರಿಗೂ ಸಾರ್ವತ್ರಿಕಗೊಳಿಸಿದಲ್ಲಿ ಮತ್ತು ಬೇಡಿಕೆಗೆ ಅನುಗುಣವಾಗಿ ಪೂರೈಸಿದಲ್ಲಿ ಎಲ್ಲರಿಗೂ ಶಿಷ್ಯವೇತನ ಪೂರೈಸಬಹುದು[೪೫] ಎಂದು ಹೇಳಲಾಗುತ್ತಿದೆ.

ಶೈಕ್ಷಣಿಕವಾಗಿ ಹಿಂದುಳಿದ ಮುಸ್ಲಿಮರಿಗೆ ಶಿಷ್ಯ ವೇತನಕ್ಕಾಗಿ ನಿಗದಿಪಡಿಸಿದ ಅನುದಾನವೂ ಕನಿಷ್ಠವಾಗಿತ್ತು. ವಾರ್ಷಿಕ ಗುರಿಗಾಗಿ ಕೇಂದ್ರ ಸರ್ಕಾರವು ೨೪ ಲಕ್ಷ ರೂ. ಗಳನ್ನು ಮುಸ್ಲಿಮರಿಗೆ ವಾರ್ಷಿಕ ಪ್ರಿ ಮೆಟ್ರಿಕ್ ಶಿಷ್ಯವೇತನವಾಗಿ ನಿಗದಿಯಾಗಿತ್ತು. ಡಿಸ್ಟ್ರಿಕ್ಟ್ ಇನ್‌ಫಾರ್‌ಮೇಷನ್ ಸಿಸ್ಟಮ್ ಫಾರ್ ಎಜ್ಯೂಕೇಷನ್ ಅಂಕಿ-ಅಂಶ ಹೇಳುವ ಪ್ರಕಾರ, ೨೦೦೯-೧೦ ರಲ್ಲಿ ಹಿರಿಯ ಪ್ರಾಥಮಿಕ ಶಾಲೆಗೆ ದಾಖಲಾದ ಮುಸ್ಲಿಂ ಮಕ್ಕಳ ಸಂಖ್ಯೆ ೨.೪೫ ಲಕ್ಷ ಅಂದರೆ ಮಕ್ಕಳ ಸಂಖ್ಯೆಗೆ ಸಮವಾಗಿ ಅನುದಾನ ಬಿಡುಗಡೆಯಾಗಿಲ್ಲ. ಶಿಷ್ಯ ವೇತನದ ಮೊತ್ತವು ವಾರ್ಷಿಕ ರೂ.೧೦೦೦ ಮಾತ್ರ ಅಲ್ಪಸಂಖ್ಯಾತರ ಮಂತ್ರಾಲಯವು ೯೦ ಜಿಲ್ಲೆಗಳಿಗೆ ಕೇವಲ ೮ ಕೋಟಿಯನ್ನು ನಿಗದಿಪಡಿಸಿತ್ತು. ಆದ್ದರಿಂದ ಈ ಕಾರ್ಯಕ್ರಮವು ಅಲ್ಪಸಂಖ್ಯಾತರ ಶೈಕ್ಷಣಿಕ ಕೊರತೆಯನ್ನು ನೀಗಿಸಲು ವಿಫಲವಾಯಿತು. ಅನುದಾನದ ಬಳಕೆಯಲ್ಲೂ ಸಮಸ್ಯೆಯನ್ನು ಎದುರಿಸಬೇಕಾಯಿತು. ಬಿಡುಗಡೆಯಾದ ಅನುದಾನದಲ್ಲಿ ಶೇ.೭೮ ರಷ್ಟನ್ನು ಮಾತ್ರ ಬಳಸಲಾಯಿತು. ೨೦೦೮-೦೯ ರ ಅನುದಾನದ ಬಳಕೆಯು ತಡವಾದದ್ದು ಕೂಡ ಒಂದು ಪ್ರಮುಖ ಕಾರಣವಾಗಿದೆ, ಜೊತೆಗೆ ರಾಜ್ಯಗಳು ನಿಗದಿತ ಸಮಯದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸದಿರುವುದು ಮತ್ತು ನಿಗದಿತ ಸಮಯದಲ್ಲಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದಿರುವುದು ಕೂಡ ಮುಖ್ಯ ಕಾರಣಗಳಾಗಿವೆ.

೧೧ನೇ ಯೋಜನೆಯಲ್ಲೂ ಶಿಷ್ಯವೇತನ ಕಾರ್ಯಕ್ರಮ ಸರಿಯಾದ ರೀತಿಯಲ್ಲಿ ವಿನಿಯೋಗವಾಗಲಿಲ್ಲ. ಫಲಾನುಭವಿಗಳಲ್ಲಿ ಈ ಕಾರ್ಯಕ್ರಮವನ್ನು ಜನಪ್ರಿಯಗೊಳಿಸದಿರುವುದು ಒಂದು ಕಾರಣ ಆದರೂ ತಕ್ಕಮಟ್ಟಿಗೆ ವಿನಿಯೋಗ ಚೇತರಿಕೆ ಕಂಡು ಬಂದಿದೆ.[೪೬] ವಿದ್ಯಾರ್ಥಿ ವೇತನ ಕಾರ್ಯಕ್ರಮಗಳಲ್ಲಿ ನೀತಿ ನಿರೂಪಣೆ ಮತ್ತು ಕಾರ್ಯಚರಣೆಯು ತೊಂದರೆದಾಯಕ ಮತ್ತು ವಿಳಂಬದಾಯವಾದ ಕಾರ್ಯಕ್ರಮವಾಗಿದೆ. ಬಹುತೇಕ ವಿದ್ಯಾರ್ಥಿವೇತನ ಕಾರ್ಯಕ್ರಮಗಳಿಗೆ ಬ್ಯಾಂಕ್ ಖಾತೆ ತೆರೆಯುವುದು ಮತ್ತು ಅದಕ್ಕೆ ಸಂಬಂಧಿಸಿದ ಅದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು ಒದಗಿಸುವುದು ಒಳಗೊಂಡಿದೆ. ಜೊತೆಗೆ ಅರ್ಜಿ ಸಲ್ಲಿಸುವ, ಪ್ರವೇಶ ಶುಲ್ಕ, ಬೋಧನಾ

ಶುಲ್ಕ ಮುಂತಾದವುಗಳನ್ನು ನಿಖರವಾಗಿ ನಮೂದಿಸಲು ಶಿಸ್ತುಬದ್ಧವಾದ ಸಾಂಕ್ಷಿಕ ಸ್ವರೂಪ ಇಲ್ಲದಿರುವುದು ಮುಖ್ಯವಾದ ಕೊರತೆಯಾಗಿದೆ. ಪ್ರಿ ಮೆಟ್ರಿಕ್ ವಿದ್ಯಾರ್ಥಿ ವೇತನ ಪಡೆಯಲು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳಿಗೆ ೨ ಲಕ್ಷ ಆದಾಯ ಮಿತಿಯಾದರೆ, ಮುಸ್ಲಿಮರಿಗೆ ೧ ಲಕ್ಷ ಮಿತಿ ಇದೆ. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ತಿಂಗಳಿಗೆ ರೂ.೧೫೦ ಗಳಾದರೆ, ಮುಸ್ಲಿಂ ವಿದ್ಯಾರ್ಥಿಗಳಿಗೆ ಕೇವಲ ರೂ.೧೦೦ ಗಳಿದೆ. ಈ ಯೋಜನೆಗಳನ್ನು ಜಾರಿಗೊಳಿಸಲು ಸಂಸ್ಥೆಗಳು ಮತ್ತು ಮಾನವ ಸಂಪನ್ಮೂಲ ಇಲ್ಲದಿರುವುದು ಮತ್ತೊಂದು ಮುಖ್ಯ ಕೊರತೆಯಾಗಿದೆ. ಆದರೂ ಮುಸ್ಲಿಮರನ್ನೇ ಗುರಿಯಾಗಿಸಿ ಕಾರ್ಯಕ್ರಮವನ್ನು ಜಾರಿಗೊಳಿಸುವುದು ಸಮಾಜದ ನೆಮ್ಮದಿಗೆ ಭಂಗವಾಗುತ್ತದೆ ಎಂಬುದು ಅಧಿಕಾರಿಗಳ ಧೋರಣೆ.[೪೭] ಆದರೂ ಎಲ್ಲಾ ನಾಗರೀಕರ ಮೂಲಭೂತ ಅಗತ್ಯವಾದ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ವಿವಿಧ ಕಾರ್ಯಕ್ರಮ ಮತ್ತು ಯೋಜನೆಗಳನ್ನು ರೂಪಿಸಿದ್ದು, ಅವುಗಳು ಇಂದಿಗೂ ಜಾರಿಯಲ್ಲಿವೆ. ಇವುಗಳ ಜೊತೆಗೆ ಕರ್ನಾಟಕದ ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರ ವಿವಿಧ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಇವುಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

### ೫.೧೨. ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರದ ಕ್ರಮಗಳು

ಅಲ್ಪಸಂಖ್ಯಾತರನ್ನು ಸಾಮಾಜಿಕವಾಗಿ, ಶೈಕ್ಷಣಿವಾಗಿ ಮತ್ತು ಆರ್ಥಿಕವಾಗಿ ಸಬಲೀಕರಣ ಗೊಳಿಸುವ ಸಲುವಾಗಿ ೧೯೮೬ರಲ್ಲಿ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿದೆ. ಇದರ ಜೊತೆಗೆ ಅಲ್ಪಸಂಖ್ಯಾತರ ಸರ್ವತೋಮುಖ ಅಭಿವೃದ್ಧಿಗಾಗಿ ೧೯೯೪ರಲ್ಲಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಯೋಗವನ್ನು ಸ್ಥಾಪಿಸಿತು ಇದರ ಜೊತೆಗೆ ಅಲ್ಪಸಂಖ್ಯಾತರ ಅಭಿವೃದ್ಧಿ ಕಾರ್ಯಕ್ರಮಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ನಿರ್ದೇಶನಾಲಯವನ್ನು ಅಸ್ತಿತ್ವಕ್ಕೆ ತಂದಿದ್ದು, ೧೯೯೯-೨೦೦೦ ಸಾಲಿನಿಂದ ಕಾರ್ಯನಿರ್ವಹಿಸುತ್ತಿದೆ. ಶೈಕ್ಷಣಿಕ ಮತ್ತು ಉದ್ಯೋಗಕ್ಕಾಗಿ. ಮೀಸಲಾತಿಯ ಸೌಲಭ್ಯವನ್ನು ಒದಗಿಸಿದೆ.[೪೮] ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಕರ್ನಾಟಕ ಸಕಾರದ ಜಾರಿಗೊಳಿಸಿದ ಕೆಲವು ಕಾರ್ಯಕ್ರಮಗಳನ್ನು ಚರ್ಚಿಸಿದೆ.

**೧. ಅಲ್ಪಸಂಖ್ಯಾತರಿಗಾಗಿ ಕೌಶಲ್ಯ ಅಭಿವೃದ್ಧಿ ಯೋಜನೆ:** ಕರ್ನಾಟಕ ಸರ್ಕಾರವು ಅಲ್ಪಸಂಖ್ಯಾತ ಯುವಕ, ಯುವತಿಯರಿಗೆ ನಿರುದ್ಯೋಗ ನಿವಾರಣೆ ಮತ್ತು ಆರ್ಥಿಕ ಸ್ವಾವಲಂಬನೆಗಾಗಿ ನರ್ಸಿಂಗ್ ತರಬೇತಿ ಹಾಗೂ ಕಂಪ್ಯೂಟರ್ ತರಬೇತಿ ಕಾರ್ಯಕ್ರಮವನ್ನು ಜಾರಿಗೊಳಿಸಿದೆ. ಈ ಕಾರ್ಯಕ್ರಮಕ್ಕಾಗಿ ಸರ್ಕಾರ ೨೦೧೫-೧೬ನೇ ಸಾಲಿಗೆ ಒಂದು ಕೋಟಿ ರೂಪಾಯಿಗಳನ್ನು ಖರ್ಚುಮಾಡಿದೆ.

**೨. ಜಿ.ಎನ್.ಎಂ ಮತ್ತು ಬಿ.ಎಸ್ಸಿ ನರ್ಸಿಂಗ್ ತರಬೇತಿ:** ಸರ್ಕಾರವು ಜಿ.ಎನ್.ಎಂ ಮತ್ತು ಬಿ.ಎಸ್ಸಿ ನರ್ಸಿಂಗ್ ತರಬೇತಿ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಸರ್ಕಾರವು ಸಮವಸ್ತ್ರ, ಪುಸ್ತಕಗಳು, ಬೋಧನ ಶುಲ್ಕ ಮುಂತಾದ ಖರ್ಚುಗಳನ್ನು ನೀಡುತ್ತಿದೆ. ಈ ಕಾರ್ಯಕ್ರಮವನ್ನು ಜಿಲ್ಲಾ ಮಟ್ಟದಲ್ಲಿ ಅನುಷ್ಠಾನ ಗೊಳಿಸುತ್ತಿದೆ.

**೩. ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಕಲಿಕೆ ಮತ್ತು ಬೋಧನ ಸಾಮಾಗ್ರಿ ಪೂರೈಕೆ:** ಸರ್ಕಾರದಿಂದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಶಾಲೆಗಳ ಕಲಿಕೆ ಗುಣಮಟ್ಟ ಹೆಚ್ಚಿಸಲು ಹಾಗೂ ಬೋಧನಾ ಸಾಮರ್ಥ್ಯ ಹೆಚ್ಚಿಸಲು ಕಲಿಕೆ ಮತ್ತು ಬೋಧನಾ ಸಾಮಾಗ್ರಿ ಖರೀದಿಗಾಗಿ ಒಂದು ಶಾಲೆಗೆ ಒಂದೇ ಬಾರಿ ನಿಯಮದಂತೆ ಹತ್ತು ಸಾವಿರ ರೂಪಾಯಿಗಳನ್ನು ಪೂರೈಸಲಾಗುತ್ತಿದೆ. ಒಂದು ವರ್ಷಕ್ಕೆ ಐದು ನೂರು ಶಾಲೆಗಳಿಗೆ ಈ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ೨೦೧೫-೧೬ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ಒಟ್ಟು ಎರಡು ಕೋಟಿ ರೂಪಾಯಿಗಳನ್ನು ಖರ್ಚುಮಾಡಲಾಗಿದೆ. ಪ್ರತೀ ಜಿಲ್ಲೆಯಲ್ಲಿಯೂ ಈ ಕಾರ್ಯಕ್ರಮ ಅನುಷ್ಠಾನದಲ್ಲಿದೆ.

**೪. ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ:** ಪ್ರತೀ ಜಿಲ್ಲೆಯಲ್ಲಿ ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ವಿದ್ಯಾರ್ಥಿಗಳಿಗೆ ಮುಂದಿನ ವಿದ್ಯಾಭ್ಯಾಸ ಮುಂದುವರೆಸಲು ಉತ್ತೇಜನ ವೇತನವನ್ನು ಮಂಜೂರು ಮಾಡಲಾಗುತ್ತಿದೆ. ಈ ಕಾರ್ಯಕ್ರಮಕ್ಕಾಗಿ ೨೦೧೫-೧೬ನೇ ಸಾಲಿನಲ್ಲಿ ಒಟ್ಟು ಒಂದು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಈ ಕಾರ್ಯಕ್ರಮವು ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನದಲ್ಲಿದೆ.

**೫. ಹೊಸ ಮೊರಾರ್ಜಿ ದೇಸಾಯಿ ಶಾಲೆಗಳು:** ೨೦೧೫-೧೬ನೇ ಸಾಲಿಗೆ ಮೂರು ಮೊರಾರ್ಜಿ ದೇಸಾಯಿ ಶಾಲೆಗಳು ಹಾಗೂ ಮೂರು ಪದವಿ ಪೂರ್ವ ಕಾಲೇಜುಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದ್ದು, ೨೦೧೫-೧೬ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕಾಗಿ ಎರೆಡು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ.

**೬. ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು:** ಸರ್ಕಾರವು ಈಗ ಮೊರಾರ್ಜಿ ವಸತಿ ಶಾಲೆಗಳನ್ನು/ ಕಾಲೇಜುಗಳನ್ನು ಜಿಲ್ಲಾ ವಲಯದಿಂದ ರಾಜ್ಯವಲಯಕ್ಕೆ ವರ್ಗಾಹಿಸಿದೆ. ಈಗ ಜಿಲ್ಲೆ ಮತ್ತು ತಾಲೂಕುಗಳಲ್ಲಿ ಒಟ್ಟು ೪೮ ವಸತಿ ಶಾಲೆಗಳು, ೩ ಪದವಿ ಪೂರ್ವ ಕಾಲೇಜುಗಳು ಮತ್ತು ೫ ಮುಸ್ಲಿಂ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ೨೦೧೫-೧೬ನೇ ಸಾಲಿನಲ್ಲಿ ಯೋಜನೆಯಡಿ ೨೧೯೦.೩೫ ರೂಪಾಯಿಗಳನ್ನು ಮತ್ತು ಯೋಜನೇತರ ಅಡಿಯಲ್ಲಿ ೨೨೫.೦೦ ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಆಂಗ್ಲ ಭಾಷೆಯ, ೨೫೦ ವಿದ್ಯಾರ್ಥಿಗಳ ಸಾಮರ್ಥ್ಯದ ಮೊರಾರ್ಜಿ ದೇಸಾಯಿ ವಸತಿ ಶಾಲೆ ಹುಲಿಕಟ್ಟೆ ಶ್ರೀನಗರದಲ್ಲಿ ಕಾರ್ಯನಿರ್ವಹಿಸುತ್ತಿದೆ.

೭. **ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ಯೋಜನೆ:** ಈ ಯೋಜನೆಯನ್ನು ಸರ್ಕಾರವು ೨೦೧೦-೧೧ನೇ ಸಾಲಿಗೆ ಮಂಜೂರಾತಿ ನೀಡಿದ್ದು ಅಲ್ಪಸಂಖ್ಯಾತ ಸಮುದಾಯದ ವಿದ್ಯಾರ್ಥಿಗಳಿಗೆ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಒಂದು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ ಇಂದಿಗೂ ಈ ಕಾರ್ಯಕ್ರಮ ಜಾರಿಯಲ್ಲಿದೆ.

೮. **ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕ ಯೋಜನೆ:** ಈ ಯೋಜನೆಯು ೨೦೧೦-೧೧ನೇ ಸಾಲಿಗೆ ಮಂಜೂರಾತಿ ಆದೇಶ ಪಡೆದುಕೊಂಡಿದೆ. ಈ ಸಾಲಿನಲ್ಲಿ ೪೦೦.೦೦ ಲಕ್ಷ ರೂಪಾಯಿಗಳನ್ನು ವ್ಯಯಿಸಲಾಗಿದೆ. ಕರ್ನಾಟಕದಲ್ಲಿ ೪೬೫೧ ಉರ್ದು ಉನ್ನತ ಮಾಧ್ಯಮಿಕ ಶಾಲೆಗಳು ಮತ್ತು ಪ್ರೌಢ ಶಾಲೆಗಳಿವೆ. ಎಂಟನೇ ತರಗತಿ ಮತ್ತು ಪಿ.ಯು.ಸಿ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಿಗೆ ತರಬೇತಿ ನೀಡಲಾಗುತ್ತದೆ. ಇದರ ಜೊತೆಗೆ ಗಣಿತ, ಸಾಮಾನ್ಯ ವಿಜ್ಞಾನ ವಿಷಯಗಳಲ್ಲಿ ಪರಿಹಾರ ಬೋಧನೆ ನೀಡಲಾಗುತ್ತದೆ.

೯. **ಹಾಸ್ಟೆಲ್ ಕಟ್ಟಡಗಳ ನಿರ್ಮಾಣ:** ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ೧೨೪ ವಿದ್ಯಾರ್ಥಿ ನಿಲಯಗಳಲ್ಲಿ ೨೯ ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡವನ್ನು ನಿರ್ಮಾಣ ಮಾಡಲಾಗಿದೆ. ಈ ಕಾರ್ಯಕ್ರಮಕ್ಕಾಗಿ ೨೦೧೫-೧೬ನೇ ಸಾಲಿನಲ್ಲಿ ೨೦೦೦.೦೦ ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

೧೦. **ವಿದೇಶದಲ್ಲಿ ಉನ್ನತ ವ್ಯಾಸಂಗ ಯೋಜನೆ:** ಕರ್ನಾಟಕ ಸರ್ಕಾರವು ೨೦೧೧ ರಲ್ಲಿ ರಾಜ್ಯದ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ವಿದೇಶಗಳಲ್ಲಿ ಅಧ್ಯಯನ ಮಾಡಲು ವೇತನ ನೀಡುವ ಯೋಜನೆಯನ್ನು ರೂಪಿಸಿದೆ.

## ಜಿಲ್ಲಾ ವಲಯ ಕಾರ್ಯಕ್ರಮಗಳು

ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರವು ಜಿಲ್ಲಾ ವಲಯದಲ್ಲಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದೆ. ಅವುಗಳನ್ನು ಚರ್ಚಿಸುವುದು ಅಗತ್ಯ

೧೧. **ಕಾನೂನು ಪದವಿಧರರಿಗೆ ತರಬೇತಿ ಭತ್ಯೆ ನೀಡಿಕೆ:** ಅಲ್ಪಸಂಖ್ಯಾತ ಸಮುದಾಯದ ಕಾನೂನು ಪದವಿಧರ ವಿದ್ಯಾರ್ಥಿಗಳಿಗೆ ಅನುಭವಿ ವಕೀಲರಿಂದ ತರಬೇತಿ ಕೊಡಿಸಲಾಗುತ್ತಿದ್ದು, ಅಭ್ಯರ್ಥಿಗಳಿಗೆ ತಿಂಗಳಿಗೆ ಸಾವಿರ ರೂಪಾಯಿ ಭತ್ಯೆ ನೀಡಲಾಗುತ್ತಿದೆ. ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ೨೦೧೫-೧೬ನೇ ಸಾಲಿನಲ್ಲಿ ೧೫೪.೫೦ ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

೧೨. **ಮೆಟ್ರಿಕ್ ನಂತರದ ಬಾಲಕಿಯರ/ಬಾಲಕರ ವಿದ್ಯಾರ್ಥಿ ನಿಲಯಗಳು:** ಅಲ್ಪಸಂಖ್ಯಾತ ಸಮುದಾಯದ ಬಾಲಕಿಯರ ಶಿಕ್ಷಣಕ್ಕೆ ಅನುಕೂಲವಾಗುವಂತೆ ವಿದ್ಯಾರ್ಥಿ ನಿಲಯಗಳು ಜಿಲ್ಲೆಗಳಲ್ಲಿ

ಮಂಜೂರಾಗಿದ್ದು ಸದ್ಯ ಕಾರ್ಯನಿರ್ವಹಿಸುತ್ತಿವೆ. ಇದರಲ್ಲಿ ಮಾಸಿಕ ೭೫೦ ರೂಪಾಯಿಗಳ ದರದಲ್ಲಿ ಊಟ, ವಸತಿ ಹಾಗೂ ಉಚಿತ ಗ್ರಂಥಾಲಯ ಸೌಕರ್ಯಗಳನ್ನು ಕಲ್ಪಿಸಲಾಗುತ್ತಿದೆ. ಅದೇ ಪ್ರಕಾರ ಬಾಲಕರಿಗೆ ಈ ಸೌಕರ್ಯವನ್ನು ನೀಡಲಾಗಿದೆ. ಬೆಳಗಾವಿ ನಗರದಲ್ಲಿ ಒಂದು ಬಾಲಕಿಯರ ಮತ್ತು ಎರೆಡು ಬಾಲಕರ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ. ಹಾಗೆಯೇ ತಲಾ ಒಂದೊಂದು ಮೆಟ್ರಿಕ್ ಪೂರ್ವ ಬಾಲಕ ಬಾಲಕಿಯರ ವಿದ್ಯಾರ್ಥಿ ನಿಲಯಗಳು ಕಾರ್ಯ ನಿರ್ವಹಿಸುತ್ತಿವೆ.

**೧೩. ಅಲ್ಪಸಂಖ್ಯಾತರ ಸಂಸ್ಥೆಗಳಿಂದ ನಡೆಸಲ್ಪಡುವ ವಿದ್ಯಾರ್ಥಿ ನಿಲಯಗಳು:** ರಾಜ್ಯದ ಅಲ್ಪಸಂಖ್ಯಾತ ಸಮುದಾಯದ ವಿದ್ಯಾರ್ಥಿಗಳು ಪ್ರಾಥಮಿಕ ಹಾಗೂ ಪ್ರೌಢಶಾಲಾ ಹಂತದಲ್ಲಿ ವ್ಯಾಸಂಗ ಕಡಿತಗೊಳಿಸದಂತೆ ಸಹಾಯ ನೀಡಲು ಅಲ್ಪಸಂಖ್ಯಾತರು ನಡೆಸುತ್ತಿರುವ ೬೦ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಿಗೆ ಅನುದಾನ ನೀಡಲಾಗುತ್ತದೆ. ಈ ಪ್ರಯೋಜನವನ್ನು ೩೩೫೦ ವಿದ್ಯಾರ್ಥಿಗಳು ಪಡೆಯುತ್ತಿದ್ದಾರೆ. ಬೆಳಗಾವಿ ಜಿಲ್ಲೆಯಲ್ಲಿ ಇಂತಹ ಆರು ವಿದ್ಯಾರ್ಥಿ ನಿಲಯಗಳಿದ್ದು ಒಟ್ಟು ೪೧೦ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ.

**೧೪. ಐಟಿಐ ಮತ್ತು ಡಿಪ್ಲೋಮಾ ವಿದ್ಯಾರ್ಥಿಗಳಿಗೆ ಶಿಷ್ಯವೇತನ:** ಕರ್ನಾಟಕ ರಾಜ್ಯದ ಸರ್ಕಾರಿ, ಅನುದಾನಿತ ಐಟಿಐ ಮತ್ತು ಡಿಪ್ಲೋಮಾದಲ್ಲಿ ಅಧ್ಯಯನ ಮಾಡುತ್ತಿರುವ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ತಿಂಗಳಿಗೆ ೧೫೦ ರೂಪಾಯಿಗಳಂತೆ ಹತ್ತು ತಿಂಗಳಿಗೆ ಸ್ಟೈಫಂಡ್ ನೀಡಲಾಗುತ್ತಿದೆ ಇದಕ್ಕಾಗಿ ೪೧.೩೩ ಲಕ್ಷ ಆಯ-ವ್ಯಯ ಒದಗಿಸಿದ್ದು ಒಟ್ಟು ೨೭೫೬ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ.

**೧೫. ಅಲ್ಪಸಂಖ್ಯಾತರಿಗಾಗಿ ವೃತ್ತಿ ತರಬೇತಿ:** ಅಲ್ಪಸಂಖ್ಯಾತ ನಿರುದ್ಯೋಗಿ ಯುವಕ ಯುವತಿಯರಿಗೆ ವಿವಿಧ ವೃತ್ತಿಪರ ಕೋರ್ಸ್‌ಗಳಿಗೆ ತರಬೇತಿ ನೀಡಿ ಸ್ವಯಂ ಉದ್ಯೋಗ ಹೊಂದಲು ಪ್ರೋತ್ಸಾಹ ನೀಡಲಾಗುತ್ತದೆ. ಅಭ್ಯರ್ಥಿಗಳಿಗೆ ಪ್ರತೀ ತಿಂಗಳು ೫೦೦ ರೂಪಾಯಿ ಮಾಸಿಕ ಸ್ಟೈಫಂಡ್ ನೀಡಲಾಗುತ್ತಿದ್ದು, ೨೦೧೫-೧೬ ರಲ್ಲಿ ಒಟ್ಟು ೨೭.೦೫ ಲಕ್ಷ ರೂಪಾಯಿಗಳನ್ನು ವಿನಿಯೋಗ ಮಾಡಲಾಗಿದೆ.

**೧೬. ಅನಾಥಾಲಯಗಳಿಗೆ ಅನುದಾನ:** ಈ ಯೋಜನೆ ಅಡಿಯಲ್ಲಿ ಅಲ್ಪಸಂಖ್ಯಾತರ ಸ್ವಯಂಸೇವಾ ಸಂಸ್ಥೆಗಳು ನಡೆಸುತ್ತಿರುವ ೪೦ ಅನಾಥಾಲಯಗಳಿಗೆ ಪ್ರತೀ ಮಗುವಿಗೆ ತಿಂಗಳಿಗೆ ೩೫೦ ರೂಪಾಯಿಗಳಂತೆ ಅನುದಾನ ನೀಡಲಾಗುತ್ತಿದೆ. ಈ ಅನಾಥಾಲಯಗಳಲ್ಲಿ ೧ ರಿಂದ ೧೦ನೇ ತರಗತಿಯವರೆಗೆ ಅನಾಥ ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಈ ಕಾರ್ಯಕ್ರಮಕ್ಕಾಗಿ ಸರ್ಕಾರ ೨೦೧೫-೧೬ನೇ ಸಾಲಿನಲ್ಲಿ ೭೩.೫೦ ಲಕ್ಷ ರೂಪಾಯಿಗಳನ್ನು ಒದಗಿಸಿದೆ.[೪೯]

ಇಷ್ಟೆಲ್ಲಾ ಪ್ರಯತ್ನಗಳ ನಡುವೆಯೂ ಮುಸ್ಲಿಮರ ಶೈಕ್ಷಣಿಕ ಮಟ್ಟ ಮುಖ್ಯವಾಗಿ, ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಚಿಂತಾಜನಕವಾಗಿದೆ. ಅದರೂ ಮುಸ್ಲಿಮರ ಶಿಕ್ಷಣಕ್ಕೆ ಸಂಬಂಧಿಸಿದ ಸಂಸ್ಥೆಗಳ ಬಗ್ಗೆ ವಿವಾದಗಳು ತೀವ್ರಗೊಳ್ಳುತ್ತಿವೆ. ವಿಶೇಷವಾಗಿ ಮದರಸಾಗಳು ಇಂದು ಹೆಚ್ಚು ಚರ್ಚೆಗೆ ಒಳಗಾಗುತ್ತಿವೆ. ಈ ವಿವಾದಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೫.೧೩. ಮದರಸ ಶಿಕ್ಷಣದ ಅಭಿವೃದ್ಧಿ ಮತ್ತು ವಿವಾದಗಳು

ಶಿಕ್ಷಣವು ಅಸಮಾನ ಸಮಾಜದಲ್ಲಿ ಸಮಾನತೆಯನ್ನು ತರುವ ಪ್ರಬಲವಾದ ಅಸ್ತ್ರವಾಗಿದೆ. ಆದರೆ ಮುಸ್ಲಿಮರ ಅವರ ಅನನ್ಯತೆಯ ಸಮಸ್ಯೆಗಳೇ ಅವರನ್ನು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಿವೆ. ಸರ್ಕಾರವು ಎರಡು ವಿಧಾನಗಳ ಮೂಲಕ ಶಿಕ್ಷಣದ ಕೊರತೆಯನ್ನು ನೀಗಿಸಲು ಪ್ರಯತ್ನಿಸುತ್ತಿದೆ. ಒಂದು, ಮದರಸಾಗಳು ಧಾರ್ಮಿಕ ಶಿಕ್ಷಣಕ್ಕಾಗಿ ಸ್ಥಾಪನೆಯಾಗಿದ್ದು, ಅವುಗಳಿಗೆ ಅನುದಾನವನ್ನು ನೀಡುವ ಮೂಲಕ, ಹುದ್ದೆಗಳ ಮೂಲಕ ಮತ್ತು ಆಧುನೀಕರಣಗೊಳಿಸುವ ಮೂಲಕ ಶಿಕ್ಷಣವನ್ನು ಸಮುದಾಯಕ್ಕೆ ಪೂರೈಸಲಾಗುತ್ತಿದೆ. ಆದರೂ ಮದರಸಾಗಳು ಸೀಮಿತವಾದ ವ್ಯಾಪ್ತಿಯನ್ನು ಹೊಂದಿದ್ದು, ಸಾಮಾನ್ಯ ಶಾಲೆಗಳ ಮಟ್ಟದ ಶಿಕ್ಷಣವನ್ನು ಪೂರೈಸುತ್ತಿಲ್ಲ. ಕಾರಣವೆಂದರೆ ರಾಜ್ಯ ಮತ್ತು ಸಮುದಾಯದ ನಡುವೆ ಮದರಸಾಗಳು ಶೈಕ್ಷಣಿಕ ಕೇಂದ್ರಗಳ ಬದಲಾಗಿ ವಿವಾದಾತ್ಮಕ ಕೇಂದ್ರಗಳಾಗಿ ಹೆಚ್ಚು ಚರ್ಚೆಯಲ್ಲಿವೆ. ಹಿಂದುತ್ವವಾದಿಗಳು ಹೇಳುವ ಪ್ರಕಾರ ಮದರಸಾಗಳು ಹಿಂದು ವಿರೋಧಿಗಳಾಗಿವೆ ಮತ್ತು ರಾಷ್ಟ್ರ ವಿರೋಧಿಯಾಗಿವೆ. ಆದರೆ ಮದರಸಾ ಪರವಾಗಿರುವವರು ಹೇಳುವ ಪ್ರಕಾರ ಮದರಸಾಗಳಲ್ಲಿ ಯಾವುದೇ ರಾಷ್ಟ್ರ ವಿರೋಧಿ ಚಟುವಟಿಕೆಗಳು ನಡೆಯುತ್ತಿಲ್ಲ. ಮದರಸಾಗಳು ಮುಸ್ಲಿಂ ಸಮುದಾಯದ ಅನನ್ಯತೆಯ ಭಾಗಗಳೇ ಆಗಿರುವುದರಿಂದ, ಅವುಗಳ ವಿರುದ್ಧದ ಟೀಕೆಗಳನ್ನು ಮುಸ್ಲಿಂ ಸಮುದಾಯದ ವಿರುದ್ಧವೇ ಎಂದು ಭಾವಿಸಲಾಗುತ್ತದೆ. ಸಾಚಾರ್ ವರದಿ ಹೇಳಿರುವ ಪ್ರಕಾರ ಕೇವಲ ಶೇ.೪ ರಷ್ಟು ಮುಸ್ಲಿಂ ಮಕ್ಕಳು ಮಾತ್ರ ಮದರಸಾಗಳಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಈ ಅಂಕಿ–ಅಂಶ ಸರಿಯಲ್ಲ ಮತ್ತು ಇದರ ಅಂದಾಜು ಸರಿಯಾಗಿಲ್ಲ.[೫೦] ಏಕೆಂದರೆ, ಅಸಂಘಟಿತ ಮದರಸಗಳನ್ನು ಸಾಚಾರ್ ಸಮಿತಿಯು ಲೆಕ್ಕಕ್ಕೆ ಪರಿಗಣಿಸಿಲ್ಲ ಎನ್ನುವ ವಾದವೂ ಇದೆ. ಮುಸ್ಲಿಂ ಸಮುದಾಯದಲ್ಲಿರುವ ಮದರಸಾಗಳು ಅವರ ಶೈಕ್ಷಣಿಕ ಅಭಿವೃದ್ಧಿಗಳಿಗೆ ಯಾವ ಕೊಡುಗೆಯನ್ನು ನೀಡಿವೆ ಎಂಬ ಚರ್ಚೆಗಳು ಕೇಳಿ ಬರುತ್ತಿವೆ. ಕೆಲವರ ವಾದದ ಪ್ರಕಾರ ಮದರಸಾಗಳ ಪುರಾತನ ಪಠ್ಯಕ್ರಮವು ಆಧುನಿಕ ಸಮಾಜದಲ್ಲಿರುವ ಮುಸ್ಲಿಮರಿಗೆ ಅಪ್ರಸ್ತುತವಾಗಿದೆ. ಇನ್ನೂ ಕೆಲವರ ಪ್ರಕಾರ ಮದರಸಾಗಳು ಮುಸ್ಲಿಮರ ಸಾಕ್ಷರತಾ ಪ್ರಮಾಣವನ್ನು ಹೆಚ್ಚಿಸಿದ್ದು, ಕೇವಲ ಅವುಗಳಿಗೆ ಆಧುನಿಕರಣ ಅಗತ್ಯವಿದೆ.[೫೧] ಇಂದಿನ ಅವರ ಸ್ಥಿತಿಗಳು ದಲಿತರ ಸ್ಥಿತಿಗಳಿಗಿಂತ ಭಿನ್ನವಾಗಿಲ್ಲ. ೧೯೪೭ರ ವರ್ಷವನ್ನು ಮೂಲವಾಗಿ ತೆಗೆದುಕೊಂಡರೆ ಅಲ್ಲಿಂದ ಇಲ್ಲಿವರೆಗೆ

ಮುಸ್ಲಿಮರು ಹಿಂದುಳಿಯುತ್ತಲೇ ಬಂದಿದ್ದಾರೆ. "ಮುಸ್ಲಿಮರ ವೈವಿಧ್ಯತೆಯನ್ನು ಗೌರವಿಸಿ, ಮುಖ್ಯವಾಹಿನಿ ಸಮುದಾಯವಾಗಿ ಗುರುತಿಸಿ, ಒಳಗೊಳ್ಳುವ ಸಮುದಾಯವಾದ ಅವರ ಅಭಿವೃದ್ಧಿಗೆ ಪ್ರಯತ್ನಿಸಬೇಕೆಂದು ಶಿಫಾರಸ್ಸು ಮಾಡಿದೆ". "ಸಾಚಾರ್ ಸಮಿತಿಯ ಮುಖ್ಯವಾದ ಹೆಗ್ಗಳಿಕೆ ಎಂದರೆ, ಮುಸ್ಲಿಂ ಸಮುದಾಯವನ್ನು ಧಾರ್ಮಿಕ ಮತ್ತು ಸಾಂಸ್ಕೃತಿಕ ಸಮುದಾಯ ಎನ್ನುವುದರ ಜೊತೆಗೆ, ಸಮುದಾಯವನ್ನು ಅಭಿವೃದ್ಧಿಯ ವಸ್ತುವನ್ನಾಗಿ ಪರಿಗಣಿಸುವಂತೆ ಮಾಡಿತು".[೫೨] ರಾಷ್ಟ್ರೀಯ ಶಿಕ್ಷಣ ನೀತಿಯನ್ನು ೧೯೮೬ರಲ್ಲಿ ಅಳವಡಿಸಿಕೊಳ್ಳಲಾಯಿತು. ಸಾಕ್ಷರತೆಯನ್ನು ಹೆಚ್ಚಿಸಲು ನಿರ್ಣಯಿಸಿ, ಹಲವಾರು ಸಂಸ್ಥೆಗಳನ್ನು ಸೃಷ್ಟಿಸಲಾಯಿತು. ಈ ನೀತಿಯು ಮಹಿಳೆಯರು, ಹಿಂದುಳಿದ ವರ್ಗಗಳು ಹಾಗೂ ಅಶಕ್ತರಿಗೆ ಒತ್ತು ನೀಡಲು ಮಾರ್ಗದರ್ಶಿ ಸೂತ್ರಗಳನ್ನು ಜಾರಿಗೊಳಿಸಿತು. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ತೀರ್ಮಾನಿಸಿತು. ಈ ನೀತಿಯ ಹಲವಾರು ಆಯಾಮಗಳನ್ನು ಪುನರ್‌ಪರೀಶಿಲಿಸಲು ಪುನರ್‌ವಿಮರ್ಶಾ ಸಮಿತಿಯನ್ನು ರಚಿಸಲಾಗಿತ್ತು. ಅದು ತನ್ನ ವರದಿಯನ್ನು ೧೯೯೧ ರಲ್ಲಿ ಸಲ್ಲಿಸಿತು. ನಂತರ ರಚಿಸಲಾದ ಸೆಂಟ್ರಲ್ ಅಡ್ವೈಸರಿ ಬೋರ್ಡ್ ಆಫ್ ಎಜುಕೇಷನ್ ೧೯೯೨ ರಲ್ಲಿ ವರದಿಯನ್ನು ಸಲ್ಲಿಸಿತು. ಈ ವರದಿಯ ಆಧಾರದ ಮೇಲೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ(೧೯೯೪), ಮಧ್ಯಾಹ್ನದ ಊಟ ಯೋಜನೆ (೧೯೯೫), ಸರ್ವಶಿಕ್ಷಣ ಅಭಿಯಾನ (೨೦೦೨) ಮುಂತಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಿತು. ಈ ಎಲ್ಲಾ ಶಿಫಾರಸ್ಸುಗಳ ಹಿನ್ನಲೆಯಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಸಂಖ್ಯೆಗಳನ್ನು ಗಣನೀಯವಾಗಿ ಹೆಚ್ಚಿಸಲಾಯಿತು.[೫೩] ಇಷ್ಟೆಲ್ಲಾ ಪ್ರಯತ್ನಗಳು ಕೈಗೊಂಡಿದ್ದರೂ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿ ನೀರಿಕ್ಷಿತ ಮಟ್ಟವನ್ನು ತಲುಪುವುದು ಸಾಧ್ಯವಾಗಿಲ್ಲ. ಕೇವಲ ಸರ್ಕಾರಗಳು ಮಾತ್ರ ಯಾವುದೇ ಸಮುದಾಯದ ಶೈಕ್ಷಣಿಕ ಅಭಿವೃದ್ಧಿ ಸಾಧಿಸುವುದು ಸಾಧ್ಯವಾಗುವುದಿಲ್ಲ. ಸರ್ಕಾರಗಳ ಜೊತೆಗೆ ಶೈಕ್ಷಣಿಕ ಕ್ಷೇತ್ರದ ವಿವಿಧ ಹಂತಗಳಲ್ಲಿ ನಾಗರೀಕ ಸಮುದಾಯ ಸಕ್ರೀಯವಾಗಿ ಭಾಗವಹಿಸುವುದರಿಂದ ಸಾಧ್ಯವಾಗುತ್ತದೆ.[೫೪] ಭಾರತ ಸಂವಿಧಾನದ ಆಶಯಗಳು ಎಲ್ಲಾ ವರ್ಗದವರಿಗೂ ಸಮಾನವಾಗಿ ಶಿಕ್ಷಣ ನೀಡಬೇಕೆಂದು ಆಶಿಸುತ್ತದೆ. ಈ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಶೈಕ್ಷಣಿಕ ಅವಕಾಶಗಳನ್ನು ಸೃಷ್ಟಿಸಿವೆ. ಆದರೆ ಈ ಅವಕಾಶಗಳನ್ನು ತಮ್ಮದಾಗಿಸಿಕೊಳ್ಳುವ ಧಾರಣಾ ಸಾಮರ್ಥ್ಯ ದುರ್ಬಲ ಸಮುದಾಯಗಳಿಗೆ ಇರುವುದಿಲ್ಲ. ಈ ಸಂಗತಿಯಲ್ಲಿ ಮುಸ್ಲಿಂ ಸಮುದಾಯವೂ ಹೊರತಾಗಿಲ್ಲ. ಸರ್ಕಾರದ ಶೈಕ್ಷಣಿಕ ಕಾರ್ಯಕ್ರಮಗಳನ್ನು ಜನರಿಗೆ ತಲುಪಿಸುವಲ್ಲಿ ನಾಗರೀಕ ಸಮಾಜಗಳು ಮುಖ್ಯವಾಗಿ ಮುಸ್ಲಿಂ ನಾಗರೀಕ ಸಮಾಜಗಳು ಎಷ್ಟರ ಮಟ್ಟಿಗೆ ಪಾತ್ರ ವಹಿಸಿವೆ, ಆ ಮೂಲಕ ಮುಸ್ಲಿಂ ನಾಗರೀಕ ಸಮಾಜಗಳು ಸಮುದಾಯವನ್ನು ಶೈಕ್ಷಣಿಕವಾಗಿ ಸಬಲೀಕರಿಸುವಲ್ಲಿ ಎಷ್ಟರ ಮಟ್ಟಿಗೆ ಪಾತ್ರವಹಿಸಿವೆ ಎಂಬುದನ್ನು ಮೌಲ್ಯಮಾಪನ

ಮಾಡುವುದು ಅಗತ್ಯವಾಗುತ್ತದೆ. ನಾಗರೀಕ ಸಮಾಜದಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಗಿದೆ.[೨೨] ಮುಸ್ಲಿಮರು ಶೈಕ್ಷಣಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ನಿರ್ಲಕ್ಷಿತ ಸ್ಥಿತಿಯಲ್ಲಿರಲು ನಾಗರೀಕ ಸಮಾಜಗಳ ಮಧ್ಯ ಪ್ರವೇಶಿಕೆ ಇಲ್ಲದಿರುವುದೇ ಒಂದು ಪ್ರಮುಖ ಕಾರಣವೆಂದು ಗುರುತಿಸಲಾಗುತ್ತಿದೆ. ಅಸ್ತಿತ್ವದಲ್ಲಿರುವ ಕೆಲವೇ ಕೆಲವು ಮುಸ್ಲಿಂ ನಾಗರೀಕ ಸಮಾಜಗಳು ಅಭಿವೃದ್ಧಿಗೆ ಪೂರಕವಾಗಿ ಕಾರ್ಯನಿರ್ವಹಿಸುವ ಅಧಿಕಾರಿಗಳೊಂದಿಗೆ ಉತ್ತಮವಾದ ಸಂಬಂಧವನ್ನು ಹೊಂದಿಲ್ಲ, ನಂಬಿಕೆ ಮತ್ತು ಸಾಂಸ್ಕೃತಿಕ ಸೇವೆಗಳನ್ನು ಹೊರತುಪಡಿಸಿ ಇತರೆ ಸಮಸ್ಯೆಗಳೊಂದಿಗೆ ಅವರ ಸಂಬಂಧಗಳು ಅತೀ ಕಡಿಮೆಯಾಗಿದ್ದು ಅವರಲ್ಲಿರುವ ವೈರತ್ವದ ಮನೋಭಾವನೆ ಮುಸ್ಲಿಂ ಮತ್ತು ಇಸ್ಲಾಂ ಧರ್ಮವನ್ನು ನಿರ್ಲಕ್ಷಿಸುವಂತೆ ಮಾಡಿವೆ.[೨೬] ಈ ಎಲ್ಲಾ ವಾದಗಳು ಮತ್ತು ಚರ್ಚೆಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಅಗತ್ಯವಾಗಿರುವ ನಾಗರೀಕ ಸಮಾಜದ ಪರಿಕಲ್ಪನೆಯನ್ನು ನಿರ್ದಿಷ್ಟವಾಗಿ ಪರಿಭಾವಿಸಿಕೊಳ್ಳಲಾಗಿದೆ. ವಿವಿಧ ವ್ಯಾಖ್ಯಾನಗಳು ಪರಿಭಾವಿಸುವಂತೆ ನಾಗರೀಕ ಸಮಾಜ ರಾಜ್ಯದಿಂದ ಪ್ರತ್ಯೇಕವಾಗಿದ್ದು, ಸ್ವಾಯತ್ತತೆಯನ್ನು ಹೊಂದಿರುತ್ತವೆ. ಆದರೂ ಇವುಗಳನ್ನು ಸಂಪೂರ್ಣವಾಗಿ ಪ್ರತ್ಯೇಕಿಸುವುದು ಕಷ್ಟಕರವಾದ ಸಂಗತಿ ಅಧ್ಯಯನಗಳು ಗುರುತಿಸುವ ಪ್ರಕಾರ ಸರ್ಕಾರದಿಂದ ಅನುದಾನವನ್ನು ಪಡೆಯುವ ಮತ್ತು ಅನುದಾನವನ್ನು ಪಡೆಯದಿರುವ ಸರ್ಕಾರೇತರ ಸಂಸ್ಥೆಗಳು ಇಂದು ಸಮಾಜದಲ್ಲಿ ಕ್ರಿಯಾಶೀಲವಾಗಿವೆ. ನಾಗರೀಕರು ಸ್ವ ಇಚ್ಛೆಯಿಂದ ಸಂಘಟಿತಗೊಂಡು ತಮ್ಮ ಅಥವಾ ಇತರರ ಹಿತಾಸಕ್ತಿಯನ್ನು ರಕ್ಷಿಸುವ, ಸಾರ್ವತ್ರಿಕ ಇಚ್ಛೆಗೆ ವಿರುದ್ಧವಲ್ಲದ, ರಾಜ್ಯ, ಕುಟುಂಬ ಹಾಗೂ ಸಮುದಾಯಗಳ ನಡುವೆ ಸಮನ್ವಯತೆ ತರುವ ಸರ್ಕಾರೇತರ ಸಂಸ್ಥೆ ಎಂದು ವ್ಯಾಖ್ಯಾನಿಸಲಾಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನಕ್ಕೆ ಸಾರ್ವಜನಿಕ ಒಳಿತಿಗಾಗಿ ಕಾರ್ಯನಿರ್ವಹಿಸುವ, ವಿವಿಧ ವಿಧಾನಗಳ ಮೂಲಕ ಸಮುದಾಯಗಳ ಸಬಲೀಕರಣಕ್ಕೆ ಹಾಗೂ ಒಟ್ಟಾರೆ ಸಮಾಜದ ಒಳಿತಿಗಾಗಿ ಕೆಲಸ ಮಾಡುವ ಸರ್ಕಾರೇತ ಸಂಸ್ಥೆ ಎಂದು ಪರಿಭಾವಿಸಿಕೊಳ್ಳಲಾಗಿದೆ. ಸರ್ಕಾರದಿಂದ ಅನುದಾನ ಪಡೆಯುವ ಅಥವಾ ಅನುದಾನ ಪಡೆಯದಿರುವ ವರ್ಗೀಕರಣವನ್ನು ಇಲ್ಲಿ ಅನ್ವಯಿಸಲಾಗಿಲ್ಲ.

### ೫.೧೪. ಬೆಳಗಾವಿ ನಗರದ ನಾಗರೀಕ ಸಮಾಜಗಳು ಮತ್ತು ಆಯ್ಕೆ

ಬೆಳಗಾವಿ ನಗರದಲ್ಲಿ ೧೧ ನಾಗರೀಕ ಸಂಘಟನೆಗಳು ಕ್ರಿಯಾಶಿಲವಾಗಿವೆ ಈ ಸಂಘಟನೆಗಳಲ್ಲಿ ವಿವಿಧ ಸಮುದಾಯದವರು ಸದಸ್ಯರಾಗಿದ್ದಾರೆ. ಈ ನಾಗರೀಕ ಸಂಘಟನೆಗಳು ಧರ್ಮ ಪ್ರಚಾರವನ್ನು ಹೊರತುಪಡಿಸಿ ನಗರದ ನಾಗರೀಕರ ಮೂಲಭೂತ ಸೌಕರ್ಯಗಳಿಗಾಗಿ, ವಿವಿಧ ಸಮುದಾಯಗಳ ನಾಗರೀಕ ಹಕ್ಕುಗಳಿಗಾಗಿ ಮತ್ತು ಸರ್ಕಾರಿ ಯೋಜನೆಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಹೋರಾಡುತ್ತವೆ. ನಗರದಲ್ಲಿ ೧೦ ವಿದ್ಯಾರ್ಥಿ ಸಂಘಟನೆಗಳಿದ್ದು ಅವುಗಳಲ್ಲಿ ವಿವಿಧ ಸಮುದಾಯ

ಗಳಿಗೆ ಸೇರಿದ ಸದಸ್ಯರಿದ್ದಾರೆ. ಈ ಸಂಘಟನೆಗಳು ವಿವಿಧ ಶೈಕ್ಷಣಿಕ ಸೌಲಭ್ಯಗಳಿಗಾಗಿ, ಶಾಲೆಗಳ ಮೂಲಭೂತ ಸೌಕರ್ಯಗಳಿಗಾಗಿ ಹೋರಾಡುವುದರ ಜೊತೆಗೆ ಸರ್ಕಾರಗಳ ಶಿಕ್ಷಣ ವಿರೋಧಿ ನೀತಿಗಳ ವಿರುದ್ಧ ಆಂದೋಲನಗಳನ್ನು ರೂಪಿಸುತ್ತವೆ. ಬೆಳಗಾವಿ ನಗರದಲ್ಲಿ ೨೫೦ ಪ್ರಾಥಮಿಕ ಶಾಲೆಗಳಿದ್ದು ಪ್ರತಿಯೊಂದು ಶಾಲೆಯೂ ನಿರ್ವಹಣಾ ಸಮಿತಿಯನ್ನು ಹೊಂದಿವೆ. ಇವುಗಳು ಶಾಲಾ ದಾಖಲಾತಿ, ವಿದ್ಯಾರ್ಥಿಗಳ ಮತ್ತು ಶಾಲೆಗಳ ಶೈಕ್ಷಣಿಕ ಅಭಿವೃದ್ಧಿಗೆ ಕ್ರಮ ಕೈಗೊಳ್ಳುತ್ತವೆ. ನಾಗರೀಕ ಸಂಘಟನೆಗಳು, ವಿದ್ಯಾರ್ಥಿ ಸಂಘಟನೆಗಳು ಮತ್ತು ಶಾಲಾ ನಿರ್ವಹಣಾ ಸಮಿತಿಗಳು ಶೈಕ್ಷಣಿಕ ಅಭಿವೃದ್ಧಿಯಲ್ಲಿ ತಮ್ಮದೇ ಪಾತ್ರ ನಿರ್ವಹಿಸುತ್ತವೆ. ಬೆಳಗಾವಿ ನಗರದ ಈ ಮೂರು ಸಂಘಟನೆಗಳಲ್ಲಿ ವಿವಿಧ ಸಮುದಾಯದವರು ಇವುಗಳ ಸದಸ್ಯರಾಗಿರುವುದರಿಂದ ಇವುಗಳನ್ನು ಅಧ್ಯಯನದಲ್ಲಿ ಜಾತ್ಯತೀತ ನಾಗರೀಕ ಸಮಾಜಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಅದೇ ಪ್ರಕಾರ ಬೆಳಗಾವಿ ನಗರದಲ್ಲಿ ೯ ಮುಸ್ಲಿಂ ನಾಗರೀಕ ಸಂಘಟನೆಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳು ಮುಸ್ಲಿಂ ಸಮುದಾಯ ಎದುರಿಸುತ್ತಿರುವ ವಿವಿಧ ಸಮಸ್ಯೆಗಳನ್ನು ಪರಿಹರಿಸುವುದು, ಮುಸ್ಲಿಮರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಮತ್ತು ಮುಸ್ಲಿಂ ನಾಗರೀಕ ಹಕ್ಕುಗಳ ರಕ್ಷಣೆಗಾಗಿ ಹೋರಾಡುವುದರಲ್ಲಿ ಕ್ರಿಯಾಶೀಲವಾಗಿವೆ. ಇದರ ಜೊತೆಗೆ ೭ ಮುಸ್ಲಿಂ ಧಾರ್ಮಿಕ ಸಂಘಟನೆಗಳು ಕ್ರಿಯಾಶೀಲವಾಗಿವೆ. ಇವುಗಳ ಮುಖ್ಯ ಉದ್ದೇಶ ಮುಸ್ಲಿಂ ಸಮುದಾಯದಲ್ಲಿ ಇಸ್ಲಾಂ ಧರ್ಮದ ಅರಿವು ಮೂಡಿಸುವುದಾಗಿದೆ. ಇದರ ಜೊತೆಗೆ ಮುಸ್ಲಿಂ ಸಮುದಾಯದ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ಕಾರ್ಯಗಳನ್ನು ನಿರ್ವಹಿಸುತ್ತವೆ. ಬೆಳಗಾವಿ ನಗರದಲ್ಲಿ ೭೮ ಮಸೀದಿಗಳಿದ್ದು ಪ್ರತಿಯೊಂದು ಮಸೀದಿಯು ನಿರ್ವಹಣ ಸಮಿತಿಯನ್ನು ಒಳಗೊಂಡಿದೆ. ಇವುಗಳು ಮಸೀದಿಗೆ ಸಂಬಂಧಿಸಿದ ಮೂಲಭೂತ ಸೌಕರ್ಯಗಳನ್ನು ಕ್ರೂಢೀಕರಿಸುವುದು, ಮಸೀದಿಗಳಲ್ಲಿರುವ ಮದರಸಾಗಳನ್ನು ನಿರ್ವಹಿಸುವುದು ಮುಂತಾದ ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುತ್ತವೆ. ಮೇಲಿನ ಮೂರು ಸಂಘಟನೆಗಳಲ್ಲಿ ಕೇವಲ ಮುಸ್ಲಿಮರು ಮಾತ್ರ ಸದಸ್ಯರಾಗಿದ್ದು, ಇವುಗಳು ಕೇವಲ ಮುಸ್ಲಿಮರಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಮಾತ್ರ ಸ್ಪಂಧಿಸುತ್ತವೆ. ಅದ್ದರಿಂದ ಈ ನಾಗರೀಕ ಸಂಘಟನೆಗಳು ಧರ್ಮಾಧಾರಿತ ನಾಗರೀಕ ಸಂಘಟನೆ ಗಳೆಂದು ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

ಬೆಳಗಾವಿ ನಗರದಲ್ಲಿ ಕ್ರಿಯಾಶೀಲವಾಗಿರುವ ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಂಘಟನೆಗಳು ಸಂಖ್ಯೆಯಲ್ಲಿ ಸಮಾನವಾಗಿಲ್ಲ. ಕೆಲವು ನಾಗರೀಕ ಸಮಾಜಗಳು ಸಂಖ್ಯೆಯಲ್ಲಿ ಹೆಚ್ಚಾಗಿದ್ದರೆ ಇನ್ನೂ ಕೆಲವು ನಾಗರೀಕ ಸಮಾಜಗಳು ಸಂಖ್ಯೆಯಲ್ಲಿ ಕಡಿಮೆ ಇವೆ. ಅದ್ದರಿಂದ ಲಭ್ಯವಿರುವ ನಾಗರೀಕ ಸಮಾಜಗಳ ಪಟ್ಟಿಯನ್ನು ತಯಾರಿಸಿ ಸರಳ ಯಾದೃಚ್ಛಿಕ ವಿಧಾನದ

ಮೂಲಕ ಎಲ್ಲಾ ನಾಗರೀಕ ಸಮಾಜಗಳಿಂದ ಸಮಾನವಾಗಿ ತಲಾ ಮೂರು ನಾಗರೀಕ ಸಮಾಜಗಳನ್ನು ಆಯ್ದುಕೊಳ್ಳಲಾಗಿದೆ. ಇದರ ಪ್ರಕಾರ ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಮೂರು ನಾಗರೀಕ ಸಂಘಟನೆಗಳು, ಮೂರು ವಿದ್ಯಾರ್ಥಿ ಸಂಘಟನೆಗಳು ಮತ್ತು ಮೂರು ಶಾಲಾ ನಿರ್ವಹಣಾ ಸಮಿತಿಗಳನ್ನು ಆಯ್ದುಕೊಳ್ಳಲಾಗಿದೆ. ಅದೇ ಪ್ರಕಾರ ಧರ್ಮಾಧಾರಿತ ನಾಗರೀಕ ಸಮಾಜಗಳಿಂದ ಮೂರು ಮುಸ್ಲಿಂ ನಾಗರೀಕ ಸಂಘಟನೆಗಳು, ಮೂರು ಮುಸ್ಲಿಂ ಧಾರ್ಮಿಕ ಸಂಘಟನೆಗಳು ಮತ್ತು ಮೂರು ಮಸೀದಿ ನಿರ್ವಹಣಾ ಸಮಿತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗಾಗಿ ನಾಗರೀಕ ಸಮಾಜಗಳ ಆಯ್ಕೆಯಲ್ಲಿ ಶೇ.೧೦ ರಷ್ಟು ನಮೂನೆ ಆಯ್ಕೆಯ ವಿಧಾನವನ್ನು ಅನುಸರಿಸಿಲ್ಲ. ನಾಗರೀಕ ಸಮಾಜಗಳ ಸಂಖ್ಯೆಗಳಂತೆಯೇ ನಾಗರೀಕ ಸಮಾಜದಲ್ಲಿರುವ ಪದಾಧಿಕಾರಿಗಳು ಮತ್ತು ಸದಸ್ಯರ ಸಂಖ್ಯೆ ಸಮಾನವಾಗಿಲ್ಲ ಅದ್ದರಿಂದ ಪ್ರತಿಯೊಂದು ನಾಗರೀಕ ಸಮಾಜದಿಂದ ಸಮಾನವಾಗಿ ೧೫ ಪದಾಧಿಕಾರಿಗಳಂತೆ ಆಯ್ಕೆ ಮಾಡಿಕೊಂಡ ಒಟ್ಟು ೬ ನಾಗರೀಕ ಸಮಾಜಗಳ ಒಟ್ಟು ೯೦ ಪದಾಧಿಕಾರಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಲಾಗಿದೆ. ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳ ಪದಾಧಿಕಾರಿಗಳ ಸಂದರ್ಶನದ ಮೂಲಕ ವಿವಿಧ ಸರ್ಕಾರಗಳು ಅಲ್ಪಸಂಖ್ಯಾತರು, ವಿಶೇಷವಾಗಿ ಮುಸ್ಲಿಮರ ಶಿಕ್ಷಣಕ್ಕಾಗಿ ಜಾರಿಗೊಳಿಸಿರುವ ಕಾರ್ಯಕ್ರಮಗಳ ಅರಿವಿನ ಮಟ್ಟವನ್ನು ಪರೀಕ್ಷಿಸಲಾಗಿದೆ ಒಂದರಿಂದ ಮೂರು ಶೈಕ್ಷಣಿಕ ಕಾರ್ಯಕ್ರಮಗಳ ಅರಿವು ಇರುವವರನ್ನು ಸಾಧಾರಣ ಅರಿವು ಹೊಂದಿದವರೆಂದು, ನಾಲ್ಕರಿಂದ ಆರು ಕಾರ್ಯಕ್ರಮಗಳ ಅರಿವು ಹೊಂದಿದವರನ್ನು ಮಧ್ಯಮ ಮಟ್ಟದ ಅರಿವು ಹೊಂದಿದವರೆಂದು ಮತ್ತು ಏಳಕ್ಕಿಂತ ಹೆಚ್ಚು ಶೈಕ್ಷಣಿಕ ಕಾರ್ಯಕ್ರಮಗಳ ಅರಿವು ಹೊಂದಿರುವವರನ್ನು ಉತ್ತಮ ಮಟ್ಟದ ಅರಿವು ಹೊಂದಿದವರೆಂದು ಅಧ್ಯಯನದಲ್ಲಿ ಪರಿಗಣಿಸಲಾಗಿದೆ.ಜಾತ್ಯಾತೀತ ನಾಗರೀಕ ಸಮಾಜಗಳು ಮುಸ್ಲಿಮರ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳನ್ನು ಹಾಗೂ ಸಮಾಜೋ–ಆರ್ಥಿಕ ಅನನ್ಯತೆಗಳನ್ನು ಜಾತ್ಯಾತೀತ ಮತ್ತು ಧರ್ಮಧಾರಿತ ನಾಗರೀಕ ಸಮಾಜಗಳು ಹೇಗೆ ಗ್ರಹಿಸುತ್ತಾರೆ ಎಂಬುದನ್ನು ಸಂದರ್ಶನದ ಮೂಲಕ ಕಂಡುಕೊಳ್ಳಲಾಗಿದೆ. ಅದೇ ಪ್ರಕಾರ ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ತೊಂದರೆಗಳನ್ನು ಯಾವ ವಿಧಾನಗಳ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತಾರೆ ಎಂಬುದನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು, ದತ್ತಾಂಶಗಳ ವಿಶ್ಲೇಷಣೆಯನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ. ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರಗಳು ವಿವಿಧ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದು, ಸಾಕಷ್ಟು ಅನುದಾನವನ್ನು ಬಿಡುಗಡೆ ಮಾಡಿವೆ. ಇವುಗಳ ಅರಿವನ್ನು ವ್ಯಕ್ತಿ, ಸಮುದಾಯಗಳು ಮತ್ತು ನಾಗರೀಕ ಸಮಾಜಗಳು ಹೊಂದಿರಬೇಕಾಗುತ್ತದೆ. ಸರ್ಕಾರದ ಕಾರ್ಯಕ್ರಮಗಳ ಅರಿವು ಹೊಂದಿರದಿದ್ದಲ್ಲಿ ಯಾವುದೇ ಸಮುದಾಯದ ಅಭಿವೃದ್ಧಿ

ಸಾಧ್ಯವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಜಾತ್ಯಾತೀತ ನಾಗರೀಕ ಸಮಾಜ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಹೊಂದಿರುವ ಅರಿವನ್ನು ಕಂಡುಕೊಳ್ಳಲಾಗಿದ್ದು, ದತ್ತಾಂಶಗಳನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

### ೫.೧೫. ನಾಗರೀಕ ಸಮಾಜಗಳು ಮತ್ತು ಶೈಕ್ಷಣಿಕ ಕಾರ್ಯಕ್ರಮಗಳ ಅರಿವಿನ ಮಟ್ಟ

ಅಲ್ಪಸಂಖ್ಯಾತರು ವಿಶೇಷವಾಗಿ ಮುಸ್ಲಿಮರ ಶೈಕ್ಷಣಿಕ ಕಾರ್ಯಕ್ರಮಗಳ ಅರಿವಿನ ಮಟ್ಟವನ್ನು ಕಂಡುಕೊಳ್ಳಲಾಗಿದೆ. ಕೋಷ್ಟಕ-೪೨ ರಲ್ಲಿ ಕಂಡುಬರುವಂತೆ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಶೇ.೧೬.೬ ರಷ್ಟು ನಾಗರೀಕ ಸಮಾಜಗಳ ಪದಾಧಿಕಾರಿಗಳು ಕನಿಷ್ಟ ಮಟ್ಟದ ಅರಿವನ್ನು ಹೊಂದಿದ್ದಾರೆ. ಶೇ.೩೪.೪ ರಷ್ಟು ನಾಗರೀಕ ಸಮಾಜಗಳ ಪದಾಧಿಕಾರಿಗಳು ಮಧ್ಯಮ ಮಟ್ಟದ ಅರಿವನ್ನು ಹೊಂದಿದ್ದಾರೆ. ಅದೇ ಪ್ರಕಾರ ಶೇ.೪೯ ರಷ್ಟು ನಾಗರೀಕ ಸಮಾಜಗಳ ಪದಾಧಿಕಾರಿಗಳು ಉನ್ನತ ಮಟ್ಟದ ಅರಿವನ್ನು ಹೊಂದಿದ್ದಾರೆ. ಸಮಾದಾನಕರವಾದ ಅಂಶವೆಂದರೆ ಬೆಳಗಾವಿ ನಗರದ ನಾಗರೀಕ ಸಮಾಜಗಳ ಬಹುಸಂಖ್ಯಾತ ಪದಾಧಿಕಾರಿಗಳು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಉತ್ತಮ ಅರಿವನ್ನು ಹೊಂದಿದ್ದಾರೆ. ಆದರೇ ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳ ನೆಲೆಯಲ್ಲಿ ಅರಿವಿನ ಮಟ್ಟದಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ.

### ೫.೧೬. ಜ್ಯಾತ್ಯಾತೀತ ನಾಗರೀಕ ಸಮಾಜದ ಅರಿವಿನ ಮಟ್ಟ

ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಶೇ.೧೧.೧ ರಷ್ಟು ಕನಿಷ್ಟ ಮಟ್ಟದ ಅರಿವನ್ನು, ಶೇ.೨೨.೨ ರಷ್ಟು ಮಧ್ಯಮ ಮಟ್ಟದ ಅರಿವನ್ನು ಮತ್ತು ಶೇ.೬೬.೭ ರಷ್ಟು ಉತ್ತಮ ಮಟ್ಟದ ಅರಿವನ್ನು ಹೊಂದಿರುವವರು ಕಂಡುಬರುತ್ತಾರೆ. ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳ ಬಗ್ಗೆ ಶಾಲಾ ನಿರ್ವಹಣಾ ಸಮಿತಿಯ ಪದಾಧಿಕಾರಿಗಳು ಇತರರಿಗಿಂತ ಉತ್ತಮ ಮಟ್ಟದ ಅರಿವು ಹೊಂದಿರುವುದು ಕಂಡುಬರುತ್ತದೆ. ನಂತರದ ಸ್ಥಾನದಲ್ಲಿ ನಾಗರೀಕ ಸಂಘಟನೆಗಳಲ್ಲಿ ಮತ್ತು ಕೊನೆಯ ಸ್ಥಾನದಲ್ಲಿ ವಿದ್ಯಾರ್ಥಿ ಸಂಘಟನೆಗಳ ಪದಾಧಿಕಾರಿಗಳು ಉತ್ತಮ ಅರಿವು ಹೊಂದಿದ್ದಾರೆ.

### ೫.೧೭. ಧರ್ಮಾಧಾರಿತ ನಾಗರೀಕ ಸಮಾಜದ ಅರಿವಿನ ಮಟ್ಟ

ಜಾತ್ಯಾತೀತ ನಾಗರೀಕ ಸಮಾಜಕ್ಕೆ ಹೋಲಿಸಿದರೆ ಧರ್ಮಾಧಾರಿತ ನಾಗರೀಕ ಸಮಾಜದಲ್ಲಿ ಉತ್ತಮ ಅರಿವಿನ ಮಟ್ಟದ ಪ್ರಮಾಣ ಕಡಿಮೆ ಕಂಡುಬರುತ್ತದೆ. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ

ಸರ್ಕಾರಗಳು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಧರ್ಮಾಧಾರಿತ ನಾಗರೀಕ ಸಮಾಜದಲ್ಲಿ ಶೇ.೨೨.೨ ರಷ್ಟು ಕನಿಷ್ಟ ಮಟ್ಟದ ಅರಿವನ್ನು ಹೊಂದಿರುವವರು, ಶೇ.೪೬.೭ ರಷ್ಟು ಮಧ್ಯಮ ಮಟ್ಟದ ಅರಿವು ಹೊಂದಿರುವವರು ಮತ್ತು ಕೇವಲ ಶೇ.೩೧.೧ ರಷ್ಟು ಉತ್ತಮ ಮಟ್ಟದ ಅರಿವು ಹೊಂದಿರುವವರು ಕಂಡುಬರುತ್ತಾರೆ.ಧರ್ಮಾಧಾರಿತ ನಾಗರೀಕ ಸಮಾಜಗಳಲ್ಲಿ ಮುಸ್ಲಿಂ ಸಮುದಾಯ ಸಂಘಟನೆಗಳು ಮಾತ್ರ ಉತ್ತಮ ಮಟ್ಟದ ಅರಿವನ್ನು ಹೊಂದಿದ್ದು, ಮುಸ್ಲಿಂ ಧಾರ್ಮಿಕ ಸಂಘಟನೆಗಳು ಮತ್ತು ಮಸೀದಿ ನಿರ್ವಹಣಾ ಸಮಿತಿಗಳು ಕನಿಷ್ಟ ಮತ್ತು ಮಧ್ಯಮ ಮಟ್ಟದ ಅರಿವನ್ನು ಮಾತ್ರ ಹೊಂದಿರುವುದು ಕಂಡುಬರುತ್ತದೆ.

ದತ್ತಾಂಶಗಳು ಅತ್ಯಂತ ಕುತೂಹಲಕಾರಿಯಾದ ಸಂಗತಿಗಳನ್ನು ಸ್ಪಷ್ಟಪಡಿಸುತ್ತವೆ. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಯ ಬಗ್ಗೆ ಮುಸ್ಲಿಂ ಧರ್ಮಾಧಾರಿತ ನಾಗರೀಕ ಸಮಾಜಗಳಲ್ಲಿ ಶೇ.೩೧.೧ ರಷ್ಟು ಮಾತ್ರ ಉತ್ತಮ ಮಟ್ಟದ ಅರಿವು ಹೊಂದಿರುವವರು ಕಂಡುಬಂದರೆ, ಜಾತ್ಯಾತೀತ ನಾಗರೀಕ ಸಮಾಜಗಳಲ್ಲಿ ಉತ್ತಮ ಮಟ್ಟದ ಅರಿವು ಹೊಂದಿರುವವರು ಶೇ.೬೬.೭ ರಷ್ಟು ಕಂಡುಬರುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ಧರ್ಮಾಧಾರಿತ ನಾಗರೀಕ ಸಮಾಜಗಳಿಗೆ ತಮ್ಮ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಉತ್ತಮ ಅರಿವು ಹೊಂದಿಲ್ಲ. ಮುಸ್ಲಿಮರು ಸರ್ಕಾರಗಳ ಕಾರ್ಯಕ್ರಮಗಳ ಬಗ್ಗೆ ಉತ್ತಮ ಅರಿವು ಹೊಂದಿಲ್ಲದೇ ಇರುವುದರಿಂದ ಅವುಗಳ ಸದುಪಯೋಗ ಪಡೆಯುವಲ್ಲಿ ವಿಫಲರಾದಂತೆ ಕಂಡುಬರುತ್ತದೆ. ಇತ್ತೀಚಿನ ದಿನಗಳ ಸಮಾಜ ವಿಜ್ಞಾನಗಳಲ್ಲಿ ಮುಸ್ಲಿಮರ ಅನನ್ಯತೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಹೆಚ್ಚು ಸಂಶೋಧನೆ ಕೈಗೊಳ್ಳಲಾಗುತ್ತಿದೆ. ಈ ಸಂಶೋಧನೆಗಳು ಮುಸ್ಲಿಮರನ್ನು ಕುರಿತ ಸಂಗತಿಗಳ ಬಗ್ಗೆ ಏಕತಾನತೆಯನ್ನುಂಟು ಮಾಡಿದ್ದು. ಮುಸ್ಲಿಮರ ಆರ್ಥಿಕ, ರಾಜಕೀಯ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ವಿವಿಧ ಮಜಲುಗಳನ್ನು ಕಡೆಗಣಿಸಲಾಗಿದೆ. ಉದಾಹರಣೆಗೆ ೨೦ ರ ದಶಕಗಳ ಸಾಮಾಜಿಕ ವಿಜ್ಞಾನಗಳ ಜರ್ನಲ್‌ಗಳನ್ನು ಗಮನಿಸಿದರೆ ಬಹುತೇಕ ಲೇಖನಗಳು ಮದರಸಾ ಶಿಕ್ಷಣದ ಬಗ್ಗೆ ಬೆಳಕು ಚೆಲ್ಲುತ್ತವೆ. ಸರ್ಕಾರ ಮತ್ತು ಮಾಧ್ಯಮಗಳಲ್ಲಿ ಇಸ್ಲಾಂ ಧರ್ಮ, ಮದರಸಾ ಮತ್ತು ಭಯೋತ್ಪಾದನೆ ಹೆಚ್ಚಾಗಿ ಚರ್ಚೆಯಾಗುತ್ತಿರುವ ಹಿನ್ನೆಲೆಯಲ್ಲಿ ಈ ಬೆಳವಣಿಗೆ ಕಂಡು ಬರುತ್ತಿರಬಹುದು.[೫೭] ಆದರೆ ಈ ವಾದವು ಏಕಮುಖವಾಗಿದ್ದು, ಪರಿಪೂರ್ಣ ವಾದುದ್ದಲ್ಲ. ಇಸ್ಲಾಂ ಧರ್ಮ, ಮದರಸ ಮತ್ತು ಭಯೋತ್ಪಾದನೆಗಳು ಮಾತ್ರ ಮುಸ್ಲಿಮರ ಅನನ್ಯತೆಗಳಾಗಿ ಉಳಿದುಕೊಂಡಿಲ್ಲ, ಇವುಗಳ ಜೊತೆಗೆ ಮುಸ್ಲಿಮರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಸಮುದಾಯವಾಗಿಯೂ ದಾಖಲುಗೊಂಡಿದೆ. ಐವತ್ತು ದಶಕಗಳ ನಂತರವೂ ಮುಸ್ಲಿಂ ಮಹಿಳೆಯರು ಅಶಿಕ್ಷಿತ, ಸಾಮಾಜಿಕವಾಗಿ ಹಿಂದುಳಿದ ಮತ್ತು ರಾಜಕೀಯವಾಗಿ ನಿರ್ಲಕ್ಷಿತ ಸಮುದಾಯವಾಗಿಯೇ ಮುಂದುವರೆದಿದ್ದಾರೆ.[೫೮]ವಿವಿಧ ಚಾರಿತ್ರಿಕ, ಸಾಮಾಜಿಕ ಮತ್ತು ರಾಜಕೀಯ

ಕಾರಣಗಳಿಗಾಗಿ ವಿವಿಧ ಸಮುದಾಯಗಳ ಮಧ್ಯೆ ವೈಷಮ್ಯಗಳು ಹೆಚ್ಚಾಗುತ್ತಿವೆ. ಇದಕ್ಕೆ ಹಿಂದು ಮತ್ತು ಮುಸ್ಲಿಂ ಸಮುದಾಯಗಳು ಹೊರತಾಗಿಲ್ಲ. ಇಂದು ರಾಜಕೀಯ ಕಾರಣಗಳಿಗಾಗಿ ಮುಸ್ಲಿಮರ ಕೇವಲ ಭಾವನಾತ್ಮಕ ಸಂಗತಿಗಳನ್ನು ಮಾತ್ರ ಹೆಚ್ಚಾಗಿ ಚರ್ಚಿಸುತ್ತಿದ್ದು, ಅವರ ಸಮಾಜೋ-ಆರ್ಥಿಕ ಸಂಗತಿಗಳನ್ನು ಹೆಚ್ಚಾಗಿ ಚರ್ಚೆಗೆ ಒಳಪಡಿಸುತ್ತಿಲ್ಲ. ಇಂತಹ ಕಾಲಘಟ್ಟದಲ್ಲಿ ಜಾತ್ಯಾತೀತ ನಾಗರೀಕ ಸಮಾಜ ಮುಸ್ಲಿಂ ಸಮುದಾಯವನ್ನು ಹೇಗೆ ಗ್ರಹಿಸುತ್ತದೆ ಎನ್ನುವುದು ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗುತ್ತದೆ. ಮುಸ್ಲಿಂ ಸಮುದಾಯದ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳನ್ನು ಕ್ಷೇತ್ರ ಕಾರ್ಯದ ಮೂಲಕ ಕಂಡುಕೊಳ್ಳಲಾಗಿದ್ದು, ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

### ೫.೧೮. ಮುಸ್ಲಿಮರ ಸಾಂಸ್ಕೃತಿಕ ಅನನ್ಯತೆ ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

ಮುಸ್ಲಿಮರ ಸಾಂಸ್ಕೃತಿಕ ಅನನ್ಯತೆಗೆ ಮೂರು ಸೂಚಿಗಳನ್ನು ಬಳಸಲಾಗಿದೆ. ಅವುಗಳಲ್ಲಿ ಮುಸ್ಲಿಮರು ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗೆ ಒತ್ತು ನೀಡುತ್ತಾರೆ, ಮುಸ್ಲಿಂ ಮಕ್ಕಳು ಹೆಚ್ಚಾಗಿ ಮದರಸಾಗಳಲ್ಲಿ ಓದುತ್ತಾರೆ ಮತ್ತು ಮುಸ್ಲಿಮರು ಸಾಮಾನ್ಯ ಸಮಾಜಗಳಲ್ಲಿ ಬೆರೆಯುವುದಿಲ್ಲ. ಈ ಮೂರು ಸೂಚಿಗಳ ಮೂಲಕ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳನ್ನು ಕಂಡುಕೊಳ್ಳಲಾಗಿದೆ. ಕೋಷ್ಟಕ-೪೩ರಲ್ಲಿ ಕಂಡುಬರುವಂತೆ ಜಾತ್ಯಾತೀತ ನಾಗರೀಕ ಸಮಾಜದ ಒಟ್ಟು ಪದಾಧಿಕಾರಿಗಳಲ್ಲಿ ಶೇ.೮೦ ರಷ್ಟು ಗ್ರಹಿಸುವ ಪ್ರಕಾರ ಮುಸ್ಲಿಮರು ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುತ್ತಾರೆ. ಶೇ.೬೪.೪ ರಷ್ಟು ಪದಾಧಿಕಾರಿಗಳು ಗ್ರಹಿಸುವ ಪ್ರಕಾರ ಮುಸ್ಲಿಂ ಸಮುದಾಯ ಇತರೆ ಸಾಮಾನ್ಯ ಸಮುದಾಯಗಳಲ್ಲಿ ಮುಕ್ತವಾಗಿ ಬೆರೆಯುವುದಿಲ್ಲ. ಆದರೆ ಸಮಾದಾನಕರ ಸಂಗತಿಯಂದರೆ ಶೇ.೬೪.೬ ರಷ್ಟು ಪದಾಧಿಕಾರಿಗಳು ಗ್ರಹಿಸುವ ಪ್ರಕಾರ ಮುಸ್ಲಿಂ ಸಮುದಾಯದ ಮಕ್ಕಳು ಹೆಚ್ಚಾಗಿ ಮದರಸಾಗಳಲ್ಲಿ ವ್ಯಾಸಾಂಗ ಮಾಡುವುದಿಲ್ಲ. ಆದರೆ ಬಹುಸಂಖ್ಯಾತ ನಾಗರೀಕ ಸಮಾಜದ ಪದಾಧಿಕಾರಿಗಳಿಗೆ ಮುಸ್ಲಿಮರು ತಮ್ಮ ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುತ್ತಾರೆ ಮತ್ತು ಅವರು ಸಾಮಾನ್ಯ ಸಮಾಜಗಳಲ್ಲಿ ಬೆರೆಯುವುದಿಲ್ಲ ಎನ್ನುವ ನಕಾರಾತ್ಮಕ ಗ್ರಹಿಕೆಗಳಿವೆ. ಮುಸ್ಲಿಮರು ಇತರೆ ಸಮುದಾಯಗಳಿಗೆ ಹೋಲಿಸಿದರೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಸಾಚಾರ್ ವರದಿ ಈ ಅಂಶಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸಿದೆ. ಮುಸ್ಲಿಮರ ಈ ಅನನ್ಯತೆಗಳು ಹೆಚ್ಚು ಚರ್ಚೆಗೆ ಒಳಗಾಗುವುದಿಲ್ಲ. ಮುಸ್ಲಿಮರ ಈ ಅನನ್ಯತೆಗಳನ್ನು ಜಾತ್ಯಾತೀತ ನಾಗರೀಕ ಸಮಾಜ ಹೇಗೆ ಗ್ರಹಿಸುತ್ತದೆ ಎನ್ನುವುದು ಮುಖ್ಯವಾಗುತ್ತದೆ. ಜಾತ್ಯಾತೀತ ನಾಗರೀಕ ಸಮಾಜದ ಈ ಗ್ರಹಿಕೆಗಳನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

## ೫.೧೯. ಮುಸ್ಲಿಂ ಸಮುದಾಯದ ಸಮಾಜೋ-ಆರ್ಥಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗೆ ಮೂರು ಸೂಚಿಗಳನ್ನು ಬಳಸಲಾಗಿದೆ. ಅವುಗಳೆಂದರೆ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ, ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ ಮತ್ತು ಮುಸ್ಲಿಮರು ಆರ್ಥಿಕವಾಗಿ ಹಿಂದುಳಿದ್ದಾರೆ. ಕೋಷ್ಟಕ-೪೪ ರಲ್ಲಿ ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವಂತೆ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳಲ್ಲಿ ಅತ್ಯಂತ ಸಕಾರಾತ್ಮಕ ಮನೋಭಾವನೆ ಕಂಡುಬರುತ್ತದೆ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದ್ದಾರೆ ಎಂಬುದನ್ನು ಶೇ.೭೭.೮ ರಷ್ಟು ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಒಪ್ಪುತ್ತಾರೆ. ಶೇ.೬೦ ರಷ್ಟು ಪದಾಧಿಕಾರಿಗಳು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ ಎಂಬುದನ್ನು ಒಪ್ಪುತ್ತಾರೆ. ಅದೇ ಪ್ರಕಾರ ಶೇ.೬೬.೭ ರಷ್ಟು ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಮುಸ್ಲಿಮರು ಆರ್ಥಿಕವಾಗಿ ಹಿಂದುಳಿದಿರುವುದನ್ನು ಸ್ವೀಕರಿಸುತ್ತಾರೆ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಮರ ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜಕ್ಕೆ ನಕಾರಾತ್ಮಕ ಗ್ರಹಿಕೆಗಳಿವೆ. ಆದರೆ ಸಮಾದಾನಕರ ಸಂಗತಿಯಂದರೆ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜಕ್ಕೆ ಸಕಾರಾತ್ಮಕ ಗ್ರಹಿಕೆಗಳಿವೆ.ಸರ್ಕಾರಿ ಶಾಲೆಗಳು ಮುಖ್ಯವಾಗಿ ಉರ್ದು ಮಾಧ್ಯಮ ಸರ್ಕಾರಿ ಶಾಲೆಗಳು ಇಂದು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿವೆ. ಶಿಕ್ಷರಿಲ್ಲ, ಮಹಿಳಾ ಶಿಕ್ಷಕಿಯರಿಲ್ಲ, ಕೊಠಡಿಗಳಿಲ್ಲ, ಉರ್ದು ಮಾಧ್ಯಮದಲ್ಲಿ ತಿಳಿ ಹೇಳುವ ಕನ್ನಡ ಶಿಕ್ಷಕರಿಲ್ಲ, ಶೌಚಾಲಯ ಮತ್ತು ಕುಡಿಯುವ ನೀರಿಲ್ಲ, ಬಾಲಕೀಯರಿಗೆ ಪ್ರತ್ಯೇಕ ಶೌಚಾಲಯಗಳಿಲ್ಲ, ಪಠ್ಯಪುಸ್ತಕಗಳಿಲ್ಲ ಮುಂತಾದ ಕನಿಷ್ಟ ಭೌತಿಕ ಮೂಲಭೂತ ಸೌಕರ್ಯಗಳ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬೆಳಗಾವಿ ನಗರದ ಶಾಲೆಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರು ಇಂತಹ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದರ ಜೊತೆಗೆ ಶಿಕ್ಷಣಕ್ಕೆ ಸಂಬಂಧಿಸಿದ ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹಿಂದಿನ ಅಧ್ಯಾಯದಲ್ಲಿ ಕಂಡುಕೊಂಡಿರುವಂತೆ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರು ಆರ್ಥಿಕ ಹಾಗೂ ಕುಟುಂಬದ ಜೀವನದ ಮಟ್ಟ ಮುಂತಾದವುಗಳು ಬಾಲಕಿಯರ ಶಿಕ್ಷಣಕ್ಕೆ ಪ್ರಮುಖ ಅಡ್ಡಿಗಳಾಗಿವೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವಸಮಸ್ಯೆಗಳನ್ನುಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಹೇಗೆ ಗುರುತಿಸುತ್ತವೆ ಎಂಬುದನ್ನು ಕಂಡುಕೊಳ್ಳುವುದು ಅಗತ್ಯವಾಗುತ್ತದೆ. ಬೆಳಗಾವಿ

ನಗರದ ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಎದುರಿಸುತ್ತಿರುವ ಯಾವ ಸಮಸ್ಯೆಗಳನ್ನು ಗುರುತಿಸುತ್ತಾರೆ ಎಂಬುದನ್ನು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದ್ದು, ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

### ೫.೨೦. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

ಕೋಷ್ಟಕ-೪೫ರಲ್ಲಿ ಕಂಡುಬರುವಂತೆ ಜಾತ್ಯಾತೀತ ನಾಗರೀಕ ಸಮಾಜದ ಶೇ.೮೯ ರಷ್ಟು ಪದಾಧಿಕಾರಿಗಳು ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಕರ ಕೊರತೆಯನ್ನು ಎದುರಿಸುತ್ತಿದ್ದಾರೆ ಎಂದು ಗುರುತಿಸುತ್ತಾರೆ. ಅದೆ ಪ್ರಕಾರ ಶೇ.೪.೪ ರಷ್ಟು ಮಹಿಳಾ ಶಿಕ್ಷಕಿಯರ ಕೊರತೆಯನ್ನು, ಶೇ.೬.೭ ರಷ್ಟು ಕನ್ನಡ ಶಿಕ್ಷಕರ ಕೊರತೆಯನ್ನು, ಶೇ.೨.೨ ರಷ್ಟು ಶೌಚಾಲಯ ಮತ್ತು ಕುಡಿಯುವ ನೀರಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಎಂದು ಗುರುತಿಸಿದ್ದಾರೆ. ಅದೆ ಪ್ರಕಾರ ಶೇ೧೫.೫ ರಷ್ಟು ಪಠ್ಯ ಪುಸ್ತಕಗಳ ಕೊರತೆಯನ್ನು, ಶೇ.೧೧.೧ ರಷ್ಟು ಬಡತನದ ಸಮಸ್ಯೆಯನ್ನು, ಶೇ.೩೧.೧ರಷ್ಟು ಪೋಷಕರ ಅಸಹಾಕಾರವನ್ನು ಮತ್ತು ಶೇ.೨೦ರಷ್ಟು ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಗುರುತಿಸುವಂತೆ ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುವಲ್ಲಿ ಸಮುದಾಯದ ಅಸಹಾಕಾರವನ್ನು ಎದುರಿಸುತ್ತಿದ್ದಾರೆ ಎಂದು ಗುರುತಿಸುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳ ಗ್ರಹಿಕೆಯ ಪ್ರಕಾರ ಮುಸ್ಲಿಂ ಹೆಣ್ಣು ಮಕ್ಕಳಿಗೆ ಮೊದಲನೆಯದಾಗಿ ತಮ್ಮ ಪೋಷಕರೇ ಸಹಕಾರವನ್ನು ನೀಡುತ್ತಿಲ್ಲ. ಎರಡನೆಯದಾಗಿ ಮುಸ್ಲಿಂ ಸಮುದಾಯ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಕಾರಾತ್ಮಕವಾಗಿ ಸ್ಪಂದಿಸುತ್ತಿಲ್ಲ. ಮೂರನೆಯದಾಗಿ ಮುಸ್ಲಿಂ ಸಮುದಾಯದಲ್ಲಿರುವ ಬಡತನ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರಮುಖವಾಗಿ ಅಡ್ಡಿಯಾಗಿದೆ ಯಂದು ಗುರುತಿಸುತ್ತಾರೆ. ಸಾಚಾರ್ ವರದಿ ಗುರುತಿಸುವಂತೆ ಕೇವಲ ಶೇ.೪ ರಷ್ಟು ಮುಸ್ಲಿಂ ಮಕ್ಕಳು ಮಾತ್ರ ಮದರಸಾಗಳಲ್ಲಿ ಓದುತ್ತಿದ್ದಾರೆ. ಮುಸ್ಲಿಂ ಪೋಷಕರಿಗೆ ತಮ್ಮ ಮಕ್ಕಳನ್ನು ಉತ್ತಮ ಶಾಲೆಗಳಲ್ಲಿ ಓದಿಸುವ ಆಸಕ್ತಿ ಹೊಂದಿದ್ದಾರೆ. ಆದರೆ ಅವುಗಳು ದುಬಾರಿ ವೆಚ್ಚ ಎನ್ನುವ ಕಾರಣಕ್ಕಾಗಿ ಓದಿಸಲು ಸಾಧ್ಯವಾಗುತ್ತಿಲ್ಲ ಎನ್ನುವುದು ಸಾಚಾರ್ ವರದಿಯ ಸ್ಪಷ್ಟ ಅಭಿಪ್ರಾಯ. ಹಿಂದಿನ ಅಧ್ಯಾಯದಲ್ಲಿ ಕಂಡುಕೊಂಡಿರುವಂತೆ ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಪೋಷಕರು ತಮ್ಮ ಬಡತನದ ಕಾರಣಕ್ಕಾಗಿ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಆಸಕ್ತಿ ವಹಿಸುತ್ತಿಲ್ಲ. ಈ ಅಂಶವನ್ನು ಜಾತ್ಯಾತೀತ ನಾಗರೀಕ ಸಮಾಜ ಸರಿಯಾಗಿಯೇ ಗುರುತಿಸಿದೆ. ಧರ್ಮಾಧಾರಿತ ನಾಗರೀಕ ಸಮಾಜ ಬೆಳಗಾವಿ ನಗರದ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಗುರುತಿಸುವಿಕೆಯನ್ನು ಕಂಡುಕೊಳ್ಳಲಾಗಿದ್ದು, ಮುಂದಿನ ಭಾಗದಲ್ಲಿ ಚರ್ಚಿಸಿದೆ.

## ೫.೨೧. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಧರ್ಮಾಧಾರಿತ ನಾಗರೀಕ ಸಮಾಜದ ಗ್ರಹಿಕೆಗಳು

ಕೋಷ್ಟಕ–೪೬ ರಲ್ಲಿ ಕಂಡುಬರುವಂತೆ ಧರ್ಮಾಧಾರಿತ ನಾಗರೀಕ ಸಮಾಜದ ಶೇ.೪.೪ ರಷ್ಟು ಪದಾಧಿಕಾರಿಗಳು ಗುರುತಿಸುವಂತೆ ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಕರ ಸಮಸ್ಯೆಯನ್ನು, ಶೇ.೧೧.೧ ರಷ್ಟು ಮಹಿಳಾ ಶಿಕ್ಷಕಿಯರ ಕೊರತೆಯನ್ನು, ಶೇ.೧೫.೫ ರಷ್ಟು ಪ್ರತ್ಯೇಕ ಶೌಚಾಲಯದ ಸಮಸ್ಯೆಯನ್ನು, ಶೇ.೪.೪ ರಷ್ಟು ಪಠ್ಯಪುಸ್ತಕಗಳ ಸಮಸ್ಯೆಯನ್ನು, ಶೇ.೮.೯ ರಷ್ಟು ಲೈಂಗಿಕ ದೌರ್ಜನ್ಯದ ಭಯದ ಸಮಸ್ಯೆ, ಅದೆ ಪ್ರಕಾರ ಶೇ.೩೫.೫ ರಷ್ಟು ಪದಾಧಿಕಾರಿಗಳು ಗುರುತಿಸುವಂತೆ ಬಡತನದ ಸಮಸ್ಯೆಯನ್ನು ಮತ್ತು ಶೇ.೨೦ ರಷ್ಟು ಗುರುತಿಸುವಂತೆ ಹೆಣ್ಣು ಮಕ್ಕಳು ತಮ್ಮ ಶಿಕ್ಷಣಕ್ಕೆ ಪೋಷಕರ ಅಸಹಾಕಾರವನ್ನು ಎದುರಿಸುತ್ತಿದ್ದಾರೆ. ದತ್ತಾಂಶಗಳು ಸ್ಪಷ್ಟಪಡಿಸುವಂತೆ ಮುಸ್ಲಿಂ ಹೆಣ್ಣು ಮಕ್ಕಳು ಶೈಕ್ಷಣಿಕವಾಗಿ ಎದುರಿಸುತ್ತಿರುವ ಸಮಸ್ಯೆಗಳನ್ನು ಮುಸ್ಲಿಂ ನಾಗರೀಕ ಸಮಾಜ ಸರಿಯಾಗಿಯೇ ಗುರುತಿಸುತ್ತವೆ. ಹಿಂದಿನ ಅಧ್ಯಾಯದಲ್ಲಿ ಕಂಡುಕೊಂಡಿರುವಂತೆ ಬಹುಸಂಖ್ಯಾತ ಹೆಣ್ಣು ಮಕ್ಕಳು ಕುಟುಂಬದ ಬಡತನದಿಂದಾಗಿ ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಮುಸ್ಲಿಂ ನಾಗರೀಕ ಸಮಾಜವು ಗುರುತಿಸುವಂತೆ ಪೋಷಕರು ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣವನ್ನು ಪ್ರೋತ್ಸಾಹಿಸುತ್ತಿಲ್ಲ. ಅಧ್ಯಯನ ಕಂಡುಕೊಂಡಿರುವಂತೆ ಬಡತನ, ವಿವಾಹ ಮಾಡುವ ಜವಾಬ್ದಾರಿ, ಲೈಗಿಂಕ ದೌರ್ಜನ್ಯ ಮತ್ತು ಉತ್ತಮ ವರ ಸಿಗದಿರುವ ಅತಂಕಗಳು ತಮ್ಮ ಹೆಣ್ಣು ಮಕ್ಕಳ ಉನ್ನತ ಶಿಕ್ಷಣವನ್ನು ಪ್ರೋತ್ಸಾಹಿಸಲು ಪೋಷಕರಿಗೆ ಕಾಡುತ್ತಿರುವ ಅಡ್ಡಿಗಳಾಗಿವೆ. ಸಮಸ್ಯೆಗಳನ್ನು ಸ್ಪಷ್ಟವಾಗಿ ಗುರುತಿಸುವುದು ಮಾತ್ರ ಒಂದು ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ಸಾಕಾಗುವುದಿಲ್ಲ. ತಾವು ಎದುರಿಸುತ್ತಿರುವ ಸಮಸ್ಯೆಗಳನ್ನು ಹೇಗೆ ಮತ್ತು ಯಾರ ಮೂಲಕ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ ಎಂಬುದು ಪ್ರಮುಖ ವಿಷಯವಾಗುತ್ತದೆ. ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಬೆಳಗಾವಿ ನಗರದ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕೆ ಹೇಗೆ ಮತ್ತು ಯಾರ ಮೂಲಕ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಮುಂದಿನ ಭಾಗದಲ್ಲಿ ಇವುಗಳನ್ನು ಚರ್ಚಿಸಲಾಗಿದೆ.

ಜಾತ್ಯಾತೀತ ನಾಗರೀಕ ಸಮಾಜ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ವಿವಿಧ ಮಾರ್ಗಗಳನ್ನು ಮತ್ತು ಅಧಿಕಾರ ಮೂಲಗಳನ್ನು ಅವಲಂಬಿಸುವುದು ಕಂಡುಬರುತ್ತದೆ. ಅವುಗಳೆಂದರೆ ಸಂಸದರ ಮೂಲಕ, ಶಾಸಕರ ಮೂಲಕ, ಇಲಾಖಾ ಅಧಿಕಾರಿಗಳ ಮೂಲಕ, ಜಿಲ್ಲಾಧಿಕಾರಿಗಳ ಮೂಲಕ, ಪಾಲಿಕೆ ಸದಸ್ಯರ ಮೂಲಕ, ಸಮುದಾಯದ ನಾಯಕರ ಮೂಲಕ, ಹೋರಾಟಗಳ ಮೂಲಕ,

ಸಮುದಾಯದಲ್ಲಿ ಅರಿವು ಮೂಡಿಸುವ ಮೂಲಕ ಮತ್ತು ಮುಸ್ಲಿಂ ಬಾಲಕೀಯರ ಪೋಷಕರಲ್ಲಿ ಅರಿವು ಮೂಡಿಸುವ ಮೂಲಕ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಡ್ಡಿ ಆತಂಕಗಳನ್ನು ನಿವಾರಿಸಿಕೊಳ್ಳುವುದು ಕಂಡುಬರುತ್ತದೆ. ಆದರೆ ಸಮಸ್ಯೆಗಳ ಪರಿಹಾರಕ್ಕಾಗಿ ನಾಗರೀಕ ಸಮಾಜಗಳು ಅನುಸರಿಸುವ ವಿಧಾನಗಳು ಬೇರೆ ಬೇರೆ ರೀತಿಯಾಗಿವೆ.

### ೫.೨೨. ಜಾತ್ಯಾತೀತ ನಾಗರೀಕ ಸಮಾಜ ಮತ್ತು ಪರಿಹಾರ ಮಾರ್ಗಗಳು

ಕೋಷ್ಟಕ ೪೭ರಲ್ಲಿ ಕಂಡುಬರುವಂತೆ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ನಿರ್ವಹಣೆಗಾಗಿ ಜಾತ್ಯಾತೀತ ನಾಗರೀಕ ಸಮಾಜಗಳು ಒಟ್ಟು ಆರು ವಿಧಾನಗಳ ಮೂಲಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಿವೆ. ದತ್ತಾಂಶಗಳು ಹೇಳುವ ಪ್ರಕಾರ ಶೇ.೮೯ ರಷ್ಟು ಪದಾಧಿಕಾರಿಗಳು ಶಾಸಕರ ಭೇಟಿಯ ಮೂಲಕ ಶೇ.೧೭.೮ ರಷ್ಟು ಇಲಾಖಾ ಅಧಿಕಾರಿಗಳ ಭೇಟಿಯ ಮೂಲಕ, ಶೇ.೨೬.೭ ರಷ್ಟು ಜಿಲ್ಲಾಧಿಕಾರಿಗಳ ಮೂಲಕ ಸಮಸ್ಯೆಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಅದೆ ಪ್ರಕಾರ ಶೇ.೨೦ ರಷ್ಟು ಪದಾಧಿಕಾರಿಗಳು ಪಾಲಿಕೆಯ ಸದಸ್ಯರ ಮೂಲಕ, ಶೇ,೪.೪ ರಷ್ಟು ಸಮುದಾಯದ ನಾಯಕರ ಮೂಲಕ ಮತ್ತು ಶೇ.೨೨.೨ ರಷ್ಟು ಹೋರಾಟಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಜಿಲ್ಲಾಧಿಕಾರಿಗಳ ಭೇಟಿಯ ಮೂಲಕ ಪರಿಹಾರಗಳನ್ನು ಕಂಡುಕೊಳ್ಳುವುದರ ಬಗ್ಗೆ ಮೊದಲ ಆಧ್ಯತೆ ನೀಡುತ್ತಾರೆ. ಎರಡನೆಯದಾಗಿ, ಅತೀ ಹೆಚ್ಚು ಪದಾಧಿಕಾರಿಗಳು ಹೋರಾಟಗಳ ಮೂಲಕ ಮತ್ತು ಮೂರನೆಯದಾಗಿ, ಇಲಾಖಾ ಅಧಿಕಾರಿಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಆದರೆ ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಭಿನ್ನವಾದ ಮಾರ್ಗಗಳನ್ನು ಅನುಸರಿಸುವುದು ಕಂಡುಬರುತ್ತದೆ.

### ೫.೨೩. ಧರ್ಮಾಧಾರಿತ ನಾಗರೀಕ ಸಮಾಜ ಮತ್ತು ಪರಿಹಾರ ಮಾರ್ಗಗಳು

ಕೋಷ್ಟಕ-೪೮ರಲ್ಲಿ ಕಂಡುಬರುವಂತೆ ಧರ್ಮಾಧಾರಿತ ನಾಗರೀಕ ಸಮಾಜದ ಪದಾಧಿಕಾರಿಗಳು ಕೇವಲ ಐದು ಮಾರ್ಗಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ ಶೇ.೧೭.೮ ರಷ್ಟು ಪದಾಧಿಕಾರಿಗಳು ಇಲಾಖಾ ಅಧಿಕಾರಿಗಳ ಮೂಲಕ, ಶೇ.೮.೮ ರಷ್ಟು ಜಿಲ್ಲಾಧಿಕಾರಿಗಳ ಮೂಲಕ, ಶೇ.೩೧ ರಷ್ಟು ಪಾಲಿಕೆ ಸದಸ್ಯರ ಮೂಲಕ, ಶೇ.೩೭.೮ ರಷ್ಟು ಸಮುದಾಯದ ನಾಯಕರ ಮೂಲಕ ಮತ್ತು ಶೇ.೪.೪

ರಷ್ಟು ಪದಾಧಿಕಾರಿಗಳು ಪೋಷಕರಲ್ಲಿ ಅರಿವು ಮೂಡಿಸುವುದರ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಧರ್ಮಾಧಾರಿತ ನಾಗರೀಕ ಸಮಾಜ ಸಮಸ್ಯೆಗಳ ಪರಿಹಾರಕ್ಕಾಗಿ ಸಮುದಾಯದ ನಾಯಕರನ್ನು ಹೆಚ್ಚಾಗಿ ಅವಲಂಬಿಸುವುದು ಕಂಡುಬರುತ್ತದೆ. ಎರಡನೆಯದಾಗಿ, ಪಾಲಿಕೆ ಸದಸ್ಯರ ಮೂಲಕ ಮತ್ತು ಮೂರನೆಯದಾಗಿ, ಇಲಾಖಾ ಅಧಿಕಾರಿಗಳ ಮೂಲಕ ಸಮಸ್ಯೆಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಮಾರ್ಗಗಳು ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳ ನೆಲೆಯಲ್ಲಿ ಭಿನ್ನವಾಗುತ್ತವೆ. ಜ್ಯಾತ್ಯಾತೀತ ನಾಗರೀಕ ಸಮಾಜ ಔಪಚಾರಿಕ ಮಾರ್ಗಗಳನ್ನು ಹೆಚ್ಚಾಗಿ ಅನುಸರಿಸಿದರೆ ಧರ್ಮಾಧಾರಿತ ನಾಗರೀಕ ಸಮಾಜ ಅನೌಪಚಾರಿಕ ಮಾರ್ಗಗಳನ್ನು ಹೆಚ್ಚಾಗಿ ಅನುಸರಿಸಿರುವುದು ಕಂಡುಬರುತ್ತದೆ. ತಕ್ಕ ಮಟ್ಟಿಗೆ ಪೋಷಕರ ಮನವೊಲಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಆದರೆ ಅದರ ಪ್ರಮಾಣ ಕನಿಷ್ಟವಾಗಿದೆ. ಇಂದಿಗೂ ಮುಸ್ಲಿಂ ಸಮುದಾಯದ ಪ್ರಜಾಸತ್ತಾತ್ಮಕ ಮಾರ್ಗಗಳನ್ನು ಅನುಸರಿಸದೆ ಅನೌಪಚಾರಿಕ ಮಾರ್ಗಗಳನ್ನು ಅನುಸರಿಸುತ್ತಿದೆ. ಇಂದಿಗೂ ಸಮುದಾಯದ ನಾಯಕರನ್ನೇ ಅವಲಂಬಿಸುವುದು ಹೆಚ್ಚಾಗಿ ಕಂಡುಬರುತ್ತಿದೆ. ಇಂದಿಗೂ ಮುಸ್ಲಿಮರು ತಮ್ಮಿಂದ ಆಯ್ಕೆಯಾದ ನಾಯಕರಿಂದ ಮತ್ತು ಚಳುವಳಿಗಳ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮುಂದಾಗದಿರುವುದು ಸೋಜಿಗದ ಸಂಗತಿಯಾಗಿದೆ.

ಒಟ್ಟಾರೆ ಅಧ್ಯಾಯದ ಫಲಿತಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ನಾಗರೀಕ ಸಮಾಜವು ಹೆಚ್ಚು ಕ್ರಿಯಾಶೀಲವಾಗಿಲ್ಲ. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಜಾರಿಗೊಳಿಸಿರುವ ಕಾರ್ಯಕ್ರಮಗಳ ಬಗ್ಗೆ ಉತ್ತಮ ಮಟ್ಟದ ಅರಿವನ್ನು ಹೊಂದಿಲ್ಲ. ಇದರ ಜೊತೆಗೆ ಹೆಣ್ಣು ಮಕ್ಕಳು ಶೈಕ್ಷಣಿಕವಾಗಿ ಎದುರಿಸುತ್ತಿರುವ ಸಮಸ್ಯೆಗಳ ಅರಿವು ತೀಕ್ಷ್ಣವಾಗಿಲ್ಲ. ಇಂದಿಗೂ ಮುಸ್ಲಿಮರು ತಮ್ಮ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಸ್ಥಳೀಯ ಮತ್ತು ಸಮುದಾಯದ ನಾಯಕರನ್ನೇ ಅವಲಂಬಿಸುವುದು ಕಂಡುಬರುತ್ತಿದೆ. ತಮ್ಮ ಸಮುದಾಯದ ಸಮಸ್ಯೆಗಳ ಪರಿಹಾರಕ್ಕಾಗಿ ಇತರೆ ಸಮಾಜದೊಂದಿಗೆ ಬೆರೆಯುವ ಮತ್ತು ಅವರ ಸಹಕಾರವನ್ನು ಪಡೆಯುವ ನಿಟ್ಟಿನಲ್ಲಿ ಮುಸ್ಲಿಮರು ಪ್ರಜಾಸತ್ತಾತ್ಮಕಗೊಳ್ಳುವ ಪ್ರಕ್ರಿಯೆಗೆ ಹೆಚ್ಚು ಒತ್ತು ನೀಡುವುದು ಇಂದಿನ ಅಗತ್ಯವಾಗಿದೆ. ಪ್ರಸ್ತುತ ಅಧ್ಯಯನವು ಕಂಡುಕೊಂಡ ಫಲಿತಗಳನ್ನು ಮತ್ತು ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ ಸುಧಾರಣೆಗೆ ಸೂಕ್ತ ಶಿಫಾರಸ್ಸುಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಕೋಷ್ಟಕ– 42

### ಮುಸ್ಲಿಂ ಸಮುದಾಯದ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ನಾಗರೀಕ ಸಮಾಜಗಳ ಅರಿವಿನ ಮಟ್ಟ

| ನಾಗರೀಕ ಸಮಾಜಗಳ ಸ್ವರೂಪ | ನಾಗರೀಕ ಸಮಾಜಗಳ ಹೆಸರು | ಪದಾಧಿಕಾರಿ ಗಳಸಂಖ್ಯೆ | ಕನಿಷ್ಠ ಅರಿವು | ಮಧ್ಯಮ ಮಟ್ಟದ ಅರಿವು | ಉನ್ನತ ಮಟ್ಟದ ಅರಿವು |
|---|---|---|---|---|---|
| ಜಾತ್ಯಾತೀತ ನಾಗರೀಕ ಸಮಾಜಗಳು | ನಾಗರೀಕ ಸಂಘಟನೆಗಳು | 15 | 02(13.3%) | 03(20%) | 10(66.7%) |
| | ವಿದ್ಯಾರ್ಥಿ ಸಂಘಟನೆಗಳು | 15 | 02(13.3%) | 04(26.7%) | 09(60%) |
| | ಶಾಲಾ ನಿರ್ವಹಣಾ ಸಮಿತಿಗಳು | 15 | 01(6.7%) | 03(20%) | 11(73.3%) |
| | ಒಟ್ಟು | 45 | 05 (11.1%) | 10(22.2%) | 30(66.7%) |
| ಧರ್ಮಾಧಾರಿತ ನಾಗರೀಕ ಸಮಾಜಗಳು | ಮುಸ್ಲಿಂ ಧಾರ್ಮಿಕ ಸಂಘಟನೆಗಳು | 15 | 04(26.7%) | 08(53.3%) | 03(20%) |
| | ಮುಸ್ಲಿಂ ಸಮುದಾಯ ಸಂಘಟನೆಗಳು | 15 | 01(6.6%) | 04(26.7%) | 10(66.7%) |
| | ಮಸೀದಿ ನಿರ್ವಹಣಾ ಸಮಿತಿಗಳು | 15 | 05(33.3%) | 09(60%) | 01(6.7%) |
| | ಒಟ್ಟು | 45 | 10(22.2%) | 21(46.7%) | 14(31.1%) |
| | **ಒಟ್ಟು** | **90** | **15(16.6%)** | **31(34.4%)** | **44(49%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಆವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–43

### ಮುಸ್ಲಿಂ ಸಮುದಾಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

| ನಾಗರೀಕ ಸಮಾಜಗಳ ಸ್ವರೂಪ | ನಾಗರೀಕ ಸಮಾಜಗಳ ಹೆಸರು | ಪದಾಧಿಕಾರಿ ಗಳಸಂಖ್ಯೆ | ಮುಸ್ಲಿಂ ಸಮುದಾಯದ ಬಗ್ಗೆ ಗ್ರಹಿಕೆಗಳು | | | | | |
|---|---|---|---|---|---|---|---|---|
| | | | ಸಾಂಸ್ಕೃತಿಕ & ಧಾರ್ಮಿಕ ಅನನ್ಯತೆಗೆ ಒತ್ತು ನೀಡುವವರು | | ಮದರಸಗಳಲ್ಲಿ ಓದುವವರು | | ಸಾಮಾನ್ಯ ಸಮಾಜಗಳಲ್ಲಿ ಬೆರೆಯುವುದಿಲ್ಲ | |
| | | | ಹೌದು | ಇಲ್ಲಾ | ಹೌದು | ಇಲ್ಲಾ | ಹೌದು | ಇಲ್ಲಾ |
| ಜಾತ್ಯಾತೀತ ನಾಗರೀಕ ಸಮಾಜಗಳು | ನಾಗರೀಕ ಸಂಘಟನೆಗಳು | 15 | 13(86.7%) | 02(13.3%) | 09(60%) | 06 (40%) | 08 (53.3%) | 07(46.7%) |
| | ವಿದ್ಯಾರ್ಥಿ ಸಂಘಟನೆಗಳು | 15 | 12(80%) | 03(20%) | 03(20%) | 12 (80%) | 10 (66.7%) | 05(33.3%) |
| | ಶಾಲಾ ನಿರ್ವಹಣಾ ಸಮಿತಿಗಳು | 15 | 11(73.3%) | 04(26.7%) | 04(26.7%) | 11 (73.3%) | 11 (73.3%) | 04(26.7%) |
| | **ಒಟ್ಟು** | **45 (100%)** | **36(80%)** | **09(20%)** | **16 (35.6%)** | **29 (64.4%)** | **29 (64.4%)** | **16(35.6%)** |

**ಮಾಹಿತಿಯ ಮೂಲ:** 1.ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಆವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಕೋಷ್ಟಕ–44

### ಮುಸ್ಲಿಂ ಸಮುದಾಯದ ಸಮಾಜೋ- ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು

| ನಾಗರೀಕ ಸಮಾಜಗಳ ಸ್ವರೂಪ | ನಾಗರೀಕ ಸಮಾಜಗಳ ಹೆಸರು | ಪದಾಧಿಕಾರಿಗಳಸಂಖ್ಯೆ | ಮುಸ್ಲಿಂ ಸಮುದಾಯದ ಬಗ್ಗೆ ಗ್ರಹಿಕೆಗಳು | | | | | |
|---|---|---|---|---|---|---|---|---|
| | | | ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ | | ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ | | ಆರ್ಥಿಕವಾಗಿ ಬಡವರಾಗಿದ್ದಾರೆ | |
| | | | ಹೌದು | ಇಲ್ಲಾ | ಹೌದು | ಇಲ್ಲಾ | ಹೌದು | ಇಲ್ಲಾ |
| ಜಾತ್ಯಾತೀತ ನಾಗರೀಕ ಸಮಾಜಗಳು | ನಾಗರೀಕ ಸಂಘಟನೆಗಳು | 15 | 11(73.3%) | 04(26.7%) | 13(86.7%) | 02(13.3%) | 08(53.3%) | 07(46.7%) |
| | ವಿದ್ಯಾರ್ಥಿ ಸಂಘಟನೆಗಳು | 15 | 10(66.7%) | 05(33.3%) | 09(60%) | 06(40%) | 09(60%) | 06(40%) |
| | ಶಾಲಾ ನಿರ್ವಹಣಾ ಸಮಿತಿಗಳು | 15 | 14(93.3%) | 01(6.7%) | 05(100%) | – | 13(86.7%) | 02(13.3%) |
| | ಒಟ್ಟು | 45 | 35(77.8%) | 10(22.2%) | 27(60%) | 08(17.8%) | 30(66.7%) | 15(33.3%) |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಆವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

**ಕೋಷ್ಟಕ–45**

**ಜಾತ್ಯಾತೀತ ನಾಗರೀಕ ಸಮಾಜಗಳು ಗುರುತಿಸುವ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳು**

| ನಾಗರೀಕ ಸಮಾಜಗಳು | ನಾಗರೀಕ ಸಮಾಜಗಳ | ಪ.ಸಂ | ಶಿಕ್ಷಕರಿಲ್ಲ | ಮಹಿಳಾ ಶಿಕ್ಷಕಿಯರ ಕೊರತೆ | ಕನ್ನಡ ಶಿಕ್ಷಕರಿಲ್ಲ | ಶೌಚಾಲಯ ಮತ್ತು ಕುಡಿಯುವ ನೀರು | ಪ್ರತ್ಯೇಕ ಶೌಚಾಲಯ | ಪಠ್ಯಪುಸ್ತಕ | ಲೈಂಗಿಕ ದೌರ್ಜನ್ಯ | ಬಡತನ | ಪೋಷಕರ ಅಸಹಕಾರ | ಸಮುದಾಯದ ಅಸಹಕಾರ |
|---|---|---|---|---|---|---|---|---|---|---|---|---|
| ಜಾತ್ಯಾತೀತ ನಾಗರೀಕ | ಸಮಾಜಗಳು ನಾಗರೀಕ ಸಂಘಟನೆಗಳು | 15 (6.7%) | 00 | 01 (6.7%) | 01 (6.7%) | 00 | 01 (26.7%) | 04 – | – | – | 05 (33.3%) | 03 (20%) |
| | ವಿದ್ಯಾರ್ಥಿ ಸಂಘಟನೆಗಳು | 15 (13.3%) | 02 – | | 01 (6.7%) | – | – | 02 (13.3%) | – | 02 (13.3%) | 04 (26.7%) | 04 (26.7%) |
| | ಶಾಲಾ ನಿರ್ವಹಣಾ ಸಮಿತಿಗಳು | 15 | 01 (6.7%) | 02 (13.3%) | 01 (6.7%) | – | – | 01 (6.7%) | – | 03 (20%) | 05 (33.3%) | 02 (13.3%) |
| | **ಒಟ್ಟು** | **4504** | **02 (8.9%)** | **03 (4.4%)** | **01 (6.7%)** | **01 (2.2)** | – | **07 (15.5%)** | | **05 (11.1%)** | **14 (31.1%)** | **09 (20%)** |

**ಮಾಹಿತಿಯ ಮೂಲ:** 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ

## ಕೋಷ್ಟಕ–46

### ಧರ್ಮಾಧಾರಿತ ನಾಗರೀಕ ಸಮಾಜಗಳು ಗುರುತಿಸುವ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳು

| ನಾಗರೀಕ ಸಮಾಜಗಳು | ನಾಗರೀಕ ಸಮಾಜಗಳ | ಪ.ಸಂ | ಶಿಕ್ಷಕರಿಲ್ಲ | ಮಹಿಳಾ ಶಿಕ್ಷಕಿಯರ ಕೊರತೆ | ಕನ್ನಡ ಶಿಕ್ಷಕರಿಲ್ಲ | ಶೌಚಾಲಯ ಮತ್ತು ಕುಡಿಯುವ ನೀರು | ಪ್ರತ್ಯೇಕ ಶೌಚಾಲಯ | ಪಠ್ಯಪುಸ್ತಕ | ಲೈಂಗಿಕ ದೌರ್ಜನ್ಯ | ಬಡತನ | ಪೋಷಕರ ಅಸಹಕಾರ | ಸಮುದಾಯದ ಅಸಹಕಾರ |
|---|---|---|---|---|---|---|---|---|---|---|---|---|
| ಧರ್ಮಾಧಾರಿತ ನಾಗರೀಕ ಸಮಾಜಗಳು | ಮುಸ್ಲಿಂ ಧಾರ್ಮಿಕ ಸಂಘಟನೆಗಳು | 15 | 01 (6.7%) | 02 (13.3%) | – (20%) | – | 03 (6.7%) | 01 (40%) | 01 (6.7%) | 06 – | 01 – | – |
| | ಮುಸ್ಲಿಂ ಸಮುದಾಯ ಸಂಘಟನೆಗಳು | 15 | 00 | 01 (6.7%) | – – | – | 02 (13.7%) | 01 (6.7%) | 01 (6.7%) | 05 (33.3%) | 05 (33.3%) | – – |
| | ಮಸೀದಿ ನಿರ್ವಹಣಾ ಸಮಿತಿಗಳು | 15 | 01 (6.7%) | 02 (13.3%) | – – | – – | 02 (13.3%) | – | 02 (13.3%) | 05 (33.5%) | 03 (20%) | – – |
| | ಒಟ್ಟು | 45 | 02 (4.4%) | 05 (11.1%) | 00 | 00 | 07 (15.5%) | 02 (4.4%) | 04 (8.9%) | 16 (35.5%) | 09 (20%) | – |
| | **ಒಟ್ಟು** | **90** | **06** (6.7%) | **07** (7.8%) | **03** (3.3%) | **01** (1.1%) | **07** (7.5%) | **09** (10%) | **04** (4.4%) | **21** (23.3%) | **23** (25.5%) | **09** 10%) |

ಮಾಹಿತಿಯ ಮೂಲ: 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ

## ಕೋಷ್ಟಕ–47

### ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಜಾತ್ಯಾತೀತ ನಾಗರೀಕ ಸಮಾಜಗಳು ಅನುಸರಿಸುವ ಮಾರ್ಗಗಳು

| ನಾಗರೀಕ ಸಮಾಜಗಳು | ನಾಗರೀಕ ಸಮಾಜಗಳ | ಪದಾಧಿಕಾರಿಗಳ ಸಂಖ್ಯೆ | ಸಂಸದರ ಭೇಟಿ | ಶಾಸಕರ ಭೇಟಿ | ಇಲಾಖಾ ಅಧಿಕಾರಿಗಳ | ಜಿಲ್ಲಾಧಿಕಾರಿಗಳ ಭೇಟಿ | ಪಾಲಿಕೆ ಸದಸ್ಯರ ಭೇಟಿ | ಸಮುದಾಯದ ನಾಯಕರ ಭೇಟಿ | ಹೋರಾಟಗಳು | ಸಮುದಾಯದಲ್ಲಿ ಅರಿವು ಮೂಡಿಸುವುದು | ಪೋಷಕರಲ್ಲಿ ಅರಿವು ಮೂಡಿಸುವುದು |
|---|---|---|---|---|---|---|---|---|---|---|---|
| ಜಾತ್ಯಾತೀತ ನಾಗರೀಕ ಸಮಾಜಗಳು | ನಾಗರೀಕ ಸಂಘಟನೆಗಳು | 15 | – | 01 (6.7%) | 02 (13.3%) | 04 (26.7%) | 03 (20%) | 01 (6.7%) | 04 (26.7%) | – | – |
| | ವಿದ್ಯಾರ್ಥಿ ಸಂಘಟನೆಗಳು | 15 | – | – | 02 (13.3%) | 04 (26.7%) | 03 (20%) | – | 6 (40%) | – | – |
| | ಶಾಲಾ ನಿರ್ವಹಣಾ ಸಮಿತಿಗಳು | 15 | – | 03 (20%) | 04 (26.7%) | 04 (26.7%) | 03 (20%) | 01 (6.7%) | – – | – – | – – |
| ಒಟ್ಟು | | **45** (8.9%) | **00** (17.8%) | **04** (26.7%) | **08** (20%) | **12** (4.4%) | **09** (22.2%) | **02** – | **10** – | – | – |

ಮಾಹಿತಿಯ ಮೂಲ: 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ

## ಕೋಷ್ಟಕ–48

### ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಧರ್ಮಾಧಾರಿತ ನಾಗರೀಕ ಸಮಾಜಗಳು ಅನುಸರಿಸುವ ಮಾರ್ಗಗಳು

| ನಾಗರೀಕ ಸಮಾಜಗಳು | ನಾಗರೀಕ ಸಮಾಜಗಳ | ಪದಾಧಿಕಾರಿಗಳ ಸಂಖ್ಯೆ | ಸಂಸದರ ಭೇಟಿ | ಶಾಸಕರ ಭೇಟಿ | ಇಲಾಖಾ ಅಧಿಕಾರಿಗಳ | ಜಿಲ್ಲಾಧಿಕಾರಿಗಳ ಭೇಟಿ | ಪಾಲಿಕೆ ಸದಸ್ಯರ ಭೇಟಿ | ಸಮುದಾಯದ ನಾಯಕರ ಭೇಟಿ | ಹೋರಾಟಗಳು | ಸಮುದಾಯದಲ್ಲಿ ಅರಿವು ಮೂಡಿಸುವುದು | ಪೋಷಕರಲ್ಲಿ ಅರಿವು ಮೂಡಿಸುವುದು |
|---|---|---|---|---|---|---|---|---|---|---|---|
| ಧರ್ಮಾಧಾರಿತ ನಾಗರೀಕ ಸಮಾಜಗಳು | ಮುಸ್ಲಿಂ ಧಾರ್ಮಿಕ ಸಂಘಟನೆಗಳು | 15 | – | – | 04 (26.7%) | – | 05 (33.3%) | 06 (40%) | – | – | – |
| | ಮುಸ್ಲಿಂ ಸಮುದಾಯ ಸಂಘಟನೆಗಳು | 15 | – | – | 04 (26.7%) | 04 (26.7%) | 04 (26.7%) | 03 (20%) | – – | – – | – – |
| | ಮಸೀದಿ ನಿರ್ವಹಣಾ ಸಮಿತಿಗಳು | 15 | – | – | 00 (33.3%) | – | 05 (53.3%) | 08 (13.3%) | – | – | 02 |
| | ಒಟ್ಟು | 45 (17.8%) | 00 (8.8%) | 00 (31.0%) | 08 (37.8%) | 04 | 14 | 17 | 00 | 00 | 02 (4.4%) |
| | **ಒಟ್ಟು** | **90** | **00** | **04** (4.4%) | **16** (17.8%) | **16** (17.8%) | **23** (25.5%) | **19** (21.2%) | **10** (11.1%) | **00** | **02** (2.2%) |

ಮಾಹಿತಿಯ ಮೂಲ: 1. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಅಂಕಿ ಅಂಶಗಳು. 2. ಅವರಣದಲ್ಲಿ ಶೇಕಡವಾರು ಅಂಕಿಗಳನ್ನು ತೋರಿಸಲಾಗಿದೆ.

## ಪರಾಮರ್ಶನ ಗ್ರಂಥಗಳು


೧. ಡಾ. ಟಿ.ಆರ್ ಚಂದ್ರಶೇಖರ, *ಕರ್ನಾಟಕದ ಅಭಿವೃದ್ಧಿಯ ಆಕೃತಿ*, ಚೆನ್ನಪಟ್ಟಣ, ೨೦೦೭, ಪಲ್ಲವ ಪ್ರಕಾಶನ, ಪು.ಸಂ ೧೧೦-೧೧೭

೨. ಸಾಹಿಬ್ ಸಿಂಗ್ ಭಯಾನ, *ಡೆವಲಪ್‌ಮೆಂಟ್ ಅಂಡ್ ಅಡ್‌ಮಿನಿಸ್ಟ್ರೇಷನ್*, ಜಲಂದರ್, ನ್ಯೂ ಅಕಾಡೆಮಿಕ್ ಪಬ್ಲಿಷಿಂಗ್ ಕಂಪನಿ, ೨೦೦೭, ಪು.ಸಂ ೧೦೫-೧೧೬

೩. ಮಾರ್ಕೆಜ್ ಕೆಲ್ಲಾರ್, *ಏಮಿಂಗ್ ಅಟ್ ದ ಫ್ಯೂಚರ್ ಇನ್ ಡೇವಿಡ್ ಮ್ಯಾಕ್ ಕೋನ್ಕೆ*, ಎಜುಕೇಷನ್ ಡಿಪಾರ್ಟ್‌ಮೆಂಟ್, ಯುನೈಟೆಡ್ ಮಿಷನ್, ಕಠ್ಮಂಡು, ೧೯೯೨, ಉಲ್ಲೇಖ: ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ೪೨

೪. ಮನೀಷ್ ಸೇನ್ ಗುಪ್ತ ಅಂಡ್ ನಾನ್ ಈ ಜಾನ್ ಸನ್, *ಡಜ್ ಎಜುಕೇಷನಲ್ ಸುಪಿರಿಯಾರಿಟಿ ಆಟೋಮೈಜ್ ಡಾಟರ್ಸ್ ಇನ್‌ಲಾ ಹು ಲಿವ್ ವಿತ್ ದೇರ್ ಮದರ್ ಇನ್‌ಲಾ ಇನ್ ಇಂಡಿಯಾ?* ಎ ಟೆಸ್ಟ ಅಫ್ ಕಾಲ್ಡ್‌ವೆಲ್ಸ್ ಥಿಸಿಸ್ ಅನಿವಲ್ ಮೀಟಿಂಗ್ ಅಫ್ ದ ಪಾಪುಲೇಷನ್ ಆಸೋಷಿಯೇಷನ್ ಅಫ್ ಅಮೇರಿಕ, ಮೀನಿಯಾಪೋಲಿಸ್, ಮಿನ್ನಿಸೋಟ, ೨೦೦೩ ಉಲ್ಲೇಖ : ಟಿ.ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೧೨

೫. ದಬೋರ ಬಲ್ಕ್, *ಡಿಫೈನಿಂಗ್ ಜೆಂಡರ್‌ನಾರ್ಮ್ಸ್ ಇನ್ ಬಾಂಗ್ಲಾದೇಶ್: ಎ ಸೋಷಿಯಲ್ ಡೆಮೋಗ್ರಾಫಿಕ್ ಎನಾಲಿಸಿಸ್*, ಪಾಪುಲೇಷನ್ ಸ್ಟಡೀಸ್, ೧೯೯೭, ವಾ.ಸಂ.೫೧, ಸಂ.೨, ಪು.ಸಂ.೧೫೩-೧೭೨

೬. ಶೇಲಾ ಎಸ್. ಬ್ಲೂಮ್, *ಡೈಮೆನ್‌ಷನ್ಸ್ ಅಫ್ ವಿಮೆನ್ಸ್ ಅಟಾನಮಿ ಅಂಡ್ ದ ಇನ್‌ಫ್ಲೂಯನ್ಸ್ ಅನ್ ಹೇಲ್ತ್ ಕೇರ್ ಯುಟಿಲೈಜೇಷನ್ ಇನ್ ಎ ನಾರ್ತ ಇಂಡಿಯನ್ ಸಿಟಿ*, ಡೆಮೋಗ್ರಾಫಿ, ವಾ.ಸಂ.೩೮.ಸಂ. ೧, ಪು.ಸಂ.೬೭.೭೮ ಮತ್ತು ಮರಿಡಾ ಹೋಲೋಸ್, ೧೯೯೮, *ದ ಸ್ಟೆಟಸ್ ಅಫ್ ವಿಮೆನ್ ಇನ್ ಸದರನ್ ನೈಜೀರಿಯ: ಈಜ್ ಎಜುಕೇಷನ್ ಹೆಲ್ಪ್ ಆರ್ ಎ ಹಿಂಡ್ರೆನ್ಸ್?* ಕೊಲೋರಾಡೂ, ಲಿನ್‌ರಿನ್ನರ್ಸ್ ಪಬ್ಲೀಷರ್ಸ್, ೨೦೦೧, ಪು.ಸಂ.೨೪೭-೨೭೬

೭. ಕ್ಯಾರೂನ್ ವ್ಯಾಸೋಫ್, *ಫ್ರಮ್ ರಗ್ಸ್ ಟು ರಿಚ್ಚೆಸ್: ದ ಇಂಪ್ಯಾಕ್ಟ್ ಆಫ್ ರೂರಲ್ ಡೆವಲಪ್‌ಮೆಂಟ್ ಅನ್ ವಿಮೆನ್ಸ್ ಸ್ಟೇಟಸ್ಸ್ ಇನ್ ಎನ್ ಇಂಡಿಯನ್ ವಿಲೇಜ್*, ವರ್ಲ್ಡ್ ಡೆವಲೆಪ್‌ಮೆಂಟ್, ವಾ. ಸಂ.೨೨ ಸಂ.೫, ೧೯೯೪, ಪು.ಸಂ.೭೦೭-೭೧೯

೮. ಅಮರ್ತ್ಯಸೇನ್ *ಜೆಂಡರ್ ಅಂಡ್ ಕೋ-ಅಪರೇಟಿವ್ ಕಾನಪ್ಲಿಕ್ಟ್ಸ್ ಇನ್ ಪರ್ಸಿಸ್ಟೆಂಟ್ ಇನ್ ಇಕ್ವಾಲಿಟಿಸ್*, ಐರನ್ ಟಿಂಕರ್(ಸಂ)ವಿಮೆನ್ ಅಂಡ್ ಡೆವಲಪ್‌ಮೆಂಟ್, ಲಂಡನ್, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ಉಲ್ಲೇಖ ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಆಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೪೪

೯. ಪಾವಲವಲ್ಲಿ ಗೋವಿಂದಸ್ವಾಮಿ ಅಂಡ್ ಬಿ ಎಂ. ರಮೇಶ್, *ಮಟಿರೀಲ್ ಎಜುಕೇಷನ್ ಅಂಡ್ ಜೆಂಡರ್ ಚಾಯ್ಸ್ ಇನ್ ಚೈಲ್ಡ್‌ಕೇರ್ ಪ್ರಾಕ್ಟಿಸೆಸ್ ಇನ್ ಇಂಡಿಯಾ*, ಅನಿವಲ್ ಮೀಟಿಂಗ್ಸ್ ಅಫ್ ದ ಪಾಪುಲೇಷನ್ ಅಸೋಸಿಯೇಷನ್ ಅಫ್ ಅಮೇರಿಕ, ನ್ಯೂ ಓರ್ಲಿನ್ಸ್, ೧೯೯೬, ಉಲ್ಲೇಖ: ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೪೫

೧೦. ಅಮರ್ತ್ಯಸೇನ್ ಅಂಡ್ ಜೀನ್‌ಡ್ರಿಜ್, *ಎನ್ ಅನ್‌ಸರ್ಟೆನ್ ಗ್ಲೋರಿ ಇಂಡಿಯ ಅಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್*, ನ್ಯೂಡೆಲ್ಲಿ, ಪೆಂಗ್ವಿನ್ ಬುಕ್ಸ್, ೨೦೧೨, ಪು.ಸಂ ೩೯-೫೮

೧೧. ಐನಾ.ಟಿ.ಎ, *ಕ್ವಾಲಿಟಿ ಅಂಡ್ ರಿಲವೆನ್ಸ್ ಆಫ್ ಆಫ್ರಿಕನ್ ಯುನಿವರ್ಸಿಟಿಸ್ ಇನ್ ಟ್ವೆಂಟಿಯತ್ ಸೇಂಚುರಿ* ಲೆಸೋತೊ, ಎಎಯು, ೧೯೯೮, ಪು.ಸಂ ೭೦-೭೨.

೧೨. ಡಾ. ಶಕೀಲ್ ಅಹಮದ್ ಅಂಡ್ ಡಾ. ಮಲಿಕಾ ಮಿಸ್ತ್ರಿ, *ಮಾಡರ್ನ್ ಎಜುಕೇಷನ್ ಅಂಡ್ ಸೋಶಿಯೋ-ಎಕನಾಮಿಕ್ ಚೇಂಜ್*, ಎ ಕೇಸ್ ಸ್ಟಡಿ ಆಫ್ ಮುಸ್ಲಿಂ ವುಮೆನ್ ಇನ್ ಪುಣೆ ಸಿಟಿ, ಇಂಡಿಯ, ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾರ್ಮಸ್ಸ್, ವಾ.ಸಂ.೧, ಸಂ.೧, ಆಕ್ಟೋಬರ್ ೨೦೧೦, ಪು.ಸಂ ೧೩೯-೧೪೯.

೧೩. ಯೋಗೇಂದ್ರ.ಎಸ್.ಸಿಕಂದ್, *ಮುಸ್ಲಿಂ ಎಜುಕೇಷನ್ ಇನ್ ಕಾನ್‌ಟೆಂಪರರಿ ಇನ್ ಇಂಡಿಯ, ಗುರ್‌ಗಾಂವ್*, ಹೋಪ್ ಇಂಡಿಯಾ ಪಬ್ಲಿಕೇಷನ್ಸ್, ೨೦೦೮, ಪು-೨೫೧-೨೯೧

೧೪. ಶ್ರೀಧರ ಬೋರಣ್ಣ, *ಡೆವಲಪ್ ಮೆಂಟ್ ಆಫ್ ಎಜುಕೇಷನ್ ಇನ್ ಹೈದ್ರಾಬಾದ್-ಕರ್ನಾಟಕ ರೀಜನ್: ಎ ಸ್ಟಡಿ. ಥೀಸಿಸ್ ಸಬ್ಮಿಟೆಡ್ ಟು ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್*. ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ, ೨೦೦೫, ಪು.ಸಂ ೫೨-೮೦.

೧೫. ಅಮರ್ತ್ಯಸೇನ್, *ಕ್ಲಾಸ್.ಜೆಂಡರ್ ಅಂಡ್ ಅದರ ಗ್ರೂಪ್ಸ್ ಎನ್ ಇನ್ ಇಕ್ವಾಲಿಟಿ ರಿಎಕ್ಸಾಮೃನ್ಡ್* ಆಕ್ಸಫರ್ಡ್ ಕೇರ್ಡನ್ ಪ್ರಸ್, ೧೯೯೨, ಉಲ್ಲೇಖ: ಸುಧಾ.ಟಿ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೮-೩೧

೧೬. ಡಾ.ದುರ್ಗದಾಸ್ ಬಸು, *ಇಂಟ್ರೊಡಕ್ಷನ್ ಟು ದ ಕಾನ್‌ಸ್ಟಿಟ್ಯೂಷನ್ ಅಫ್ ಇಂಡಿಯಾ*, ನ್ಯೂಡೆಲ್ಲಿ, ವಾಡ್ವಾ ಅಂಡ್ ಕಂಪನಿ ಲಾ ಪಬ್ಲಿಷರ್ಸ್, ೨೦೦೭, ಪು.ಸಂ ೭೯-೧೪೩ ಮತ್ತು ೧೪೪-೧೫೩

೧೭. ಜಾವಿದ್ ಅಲಂ ಅಂಡ್ ಪೂಜಾ ಪಾರ್ವತಿ *ಗವರ್ನಮೆಂಟ್ ಕಮಿಟ್ಮೆಂಟ್ ಟುವರ್ಡ್ಸ್ ಡೆವಲಪ್‌ಮೆಂಟ್ ಆಫ್ ಮುಸ್ಲಿಮ್ಸ್ : ಎಪೋಸ್ಟ್ ಸಾಚಾರ್ ಅಸೆಸ್‌ಮೆಂಟ್ ಆಫ್ ಉತ್ತರ ಪ್ರದೇಶ್ ಅಂಡ್ ಹರ್ಯಾಣ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್* ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೧೨-೨೨೧, ಪು-೨೫೪

೧೮. ಅಜೀಜ್ ಅಹಮದ್, *ಸ್ಟಡೀಸ್ ಇನ್ ಇಸ್ಲಾಮಿಕ್ ಕಲ್ಚರ್ ಇನ್ ಇಂಡಿಯನ್ ಎನ್ವಿರಾನ್‌ಮೆಂಟ್*, ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೯೯, ಪು.ಸಂ.೩೦೧-೩೩೩

೧೯. ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಸೆಂಟರ್ ಫಾರ್ ಸ್ಟಡಿ ಆಫ್ ಸಿವಿಲ್ ಸೂಸೈಟಿ , ಉಲ್ಲೇಖ: *ಸ್ಟಡಿ ಆನ್ ದ ಬೆಸ್ಟ್ ಪ್ರಾಕ್ಟೀಸೆಸ್ ಇನ್ ಕೋ-ಆಪರೇಷನ್ ಬಟ್‌ವೀನ್ ಅಥಾರಿಟೀಸ್ ಅಂಡ್ ಸಿವಿಲ್ ಸೂಸೈಟಿ ವಿತ್ ಎ ವ್ಹೀವ್ ಟು ದ ಪ್ರಿವೆನ್ಷನ್ ಅಂಡ್ ಟು ವೈಯಲೆಂಟ್ ರ್‍ಯಾಡಿಕ್ಯಾಲೈಜೇಷನ್*, ಎ ರಿಪೋರ್ಟ ಬೈ ದ ಥೇಂಜ್ ಇನ್ಸ್ಟಿಟ್ಯೂಟ್, ಜುಲೈ ೨೦೦೮, ಎ ಸ್ಟಡಿ ಕಮಿಷನ್ಡ್ ಬೈ ಡಿಜಿಜೆಎಲ್‌ಎಸ್ ಆಫ್ ದ ಯುರೋಪಿಯನ್ ಕಮಿಷನ್, ಲಂಡನ್, ೨೦೦೪, ಪು. ೧-೧೩೪

೨೦. ಡೊರೊಟ.ಎಲ್ ಪೀಟ್ರಿಕ್, *ಡೆಮಾಕ್ರಸಿ ಆರ್ ಸಿವಿಲ್ ಸೂಸೈಟಿ? ಪೂಲಿಟಿಕ್ಸ್*, ೨೦೦೩, ವಾ.ನಂ ೨೩, ಸಂ ೧, ಪು ೩೮-೪೫ ಉಲ್ಲೇಖ ಮುನ್ನಿ ಪು.ಸಂ ೮೧

೨೧. ರಜನಿಕೂಠಾರಿ, *ಸ್ಟೆನ್ ಆಗೇನ್ಸ್ಟ್ ಡೆಮಾಕ್ರಸಿ: ಇನ್ ಸರ್ಚ್ ಆಫ್ ಹ್ಯೂಮೆನ್ ಗವರ್ನೆನ್ಸ್*, ನ್ಯೂಡೆಲ್ಲಿ ಅಜಂತಾ ಪಬ್ಲಿಕೇಷನ್ಸ್, ೧೯೯೮, ಪು.೦೩

೨೨. ನೀರಾ ಚಂದೋಕೆ, *ದಿ ಸಿವಿಲ್ ಅಂಡ್ ದ ಪೊಲಿಟಿಕಲ್ ಇನ್ ಸಿವಿಲ್ ಸೊಸೈಟಿ*, ಇನ್ ಸಿ. ಎಂ. ಎಲಿಯೇಟ(ಸಂ) ಸಿವಿಲ್ ಸೂಸೈಟಿ: ಎ ರೀಡರ್, ಆಕ್ಸ್ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ ಪು-೨೩೮-೬೨

೨೩. ಸುರೇಂದ್ರ ಮುನ್ಶಿ, *ದಿ ಕಾನ್ಸೆಪ್ಟ್ ಆಫ್ ಸಿವಿಲ್ ಸೂಸೈಟಿ:ಎ ಪ್ರಿಲಿಮನರಿ ಎನಾಲಿಸಿಸ್*, ಅಪ್ರಕಟಿತ, ೧೯೯೫, ಪು-೧೫

೨೪. ಬೌಲಿಂಗ್ ಅಲೋನ್: *ದಿ ಕೊಲ್ಯಾಪ್ಸ್ ಅಂಡ್ ರಿವೈವಲ್ ಆಫ್ ಅಮೇರಿಕ್ ಕಮ್ಯುನಿಟಿ* ನ್ಯೂಯರ್ಕ್.೨೦೦೦ ಟಚ್‌ಸ್ಟೋನ್ ಉಲ್ಲೇಖ: ಮುನ್ಶಿ ಪು-೯೦

೨೫. ಅಜೀಜ್ ಅಹಮದ್, *ಸ್ಟಡೀಸ್ ಇನ್ ಇಸ್ಲಾಮಿಕ್ ಕಲ್ಚರ್ ಇನ್ ಇಂಡಿಯನ್ ಎನ್ವಿರಾನ್‌ಮೆಂಟ್*, ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೯೯, ಪು.ಸಂ.೩೦೧-೩೩೩

೨೬. ಜೆರೆಮಿಕ್ ಬಿ. *ಸಿವಿಲ್ ಸೂಸೈಟಿ ದೆನ್ ಅಂಡ್ ನೌ ಜರ್ನಲ್ ಆಫ್ ಡೆಮೋಕ್ರಸಿ*, ವಾ.ಸಂ ೩ ಸಂ.೨, ಪು ೩-೧೨, ಉಲ್ಲೇಖ ಮುನ್ಶಿ : ಪು ಸಂ ೯೪.

೨೭. ಫ್ರಾನ್ಸೆಸ್ಕೂ ಅಮೋರೆಟ್ಟಿ, *ಇಂಟರ್ ನ್ಯಾಷನಲ್ ಆರ್ಗನೈಜೇಷನ್ಸ್ ಫಾರ್ ಪಾಲಿಸೀಸ್:ಇ-ಡೆಮೋಕ್ರಸಿ ಅಂಡ್ ಇ-ಗವರ್ನನ್ಸ್ ಫಾರ್ ಪೊಲಿಟಿಕಲ್ ಡೆವೆಲಪ್‌ಮೆಂಟ್*, ರಿವ್ಯೂವ್ ಆಫ್ ಪಾಲಿಸಿ ಸ್ಟಡಿಸ್, ೨೦೦೭, ವಾ.ಸಂ ೨೪ ಸಂ ೪, ಪು-೩೩೧-೩೩೪ ಉಲ್ಲೇಖ ಮುನ್ಶಿ ಪು.೧೦೨

೨೮. ಮಾರ್ಕೆಲ್ ಅಂಡ್ ಲೌತ್, ಉಲ್ಲೇಖ: ಸುರೇಂದ್ರ ಮುನ್ಶಿ, *ದಿ ಕಾನ್ಸೆಪ್ಟ್ ಆಫ್ ಸಿವಿಲ್ ಸೂಸೈಟಿ:ಎ ಪ್ರಿಲಿಮನರಿ ಎನಾಲಿಸಿಸ್*, ಅಪ್ರಕಟಿತ, ೧೯೯೫, ಪು-೧೫

೨೯. ರಾಜೇಶ್ ಟಂಡನ್ ಅಂಡ್ ರಂಜಿತ ಮೊಹಂತಿ, ಸೂಸೈಟಿ ಫಾರ್ ಪಾರ್ಟಿಸಿಪೇಟರಿ ರೀಸರ್ಚ್ ಇನ್ ಏಷ್ಯ, *ಸಿವಿಲ್ ಸೂಸೈಟಿ ಅಂಡ್ ಗವರ್ನನ್ಸ್ ಎ ರೀಸರ್ಚ್ ಸ್ಟಡಿ ಇನ್* ಇಂಡಿಯ, ಡ್ರಾಫ್ಟೆಡ್ ಸಿಂಥೆಸಿಸ್ ರಿಪೋರ್ಟ್, ಜೂನ್ ೨೦೦೦, ನ್ಯೂಡೆಲ್ಲಿ.ಪು-೧೬೮

೩೦. ಗುರ್‌ಪ್ರೀತ್ ಮಹಾಜನ್, *ಸಿವಿಲ್ ಸೂಸೈಟಿ ಅಂಡ್* ಇಟ್ಸ್ ಅವತಾರ್ಸ್, ಇಕನಾಮಿಕ್ ಅಂಡ್ ಪೊಲಿಟಿಕ್ ವೀಕ್ಲಿ, ಮೇ.೧೫-೨೧-೧೯೯೯ ಉಲ್ಲೇಖ ಹೆನ್ರಿಕ್ ಬರ್ಲ್‌ಗುಂಡ್: ಪು.ಸಂ ೨೫

೩೧. ಮಾರ್ಕೆಲ್ ಅಂಡ್ ಲೌತ್ ಉಲ್ಲೇಖ: ಸುರೇಂದ್ರ ಮುನ್ಶಿ, *ದಿ ಕಾನ್ಸೆಪ್ಟ್ ಆಫ್ ಸಿವಿಲ್ ಸೂಸೈಟಿ:ಎ ಪ್ರಿಲಿಮನರಿ ಎನಾಲಿಸಿಸ್*, ಅಪ್ರಕಟಿತ, ಪು-೧೫ ಉಲ್ಲೇಖ ಲೇಖಕರು: ಪು.೯

೩೨. ವರ್ಲ್ಡ್‌ಬ್ಯಾಂಕ್, *ಎನ್‌ಜೇಂಡರಿಂಗ್ ಡೆವಲಪ್‌ಮೆಂಟ್-ಥ್ರೂ ಜೆಂಡರ್ ಇಕ್ವಾಲಿಟಿ ಇನ್ ರೈಟ್ಸ್, ರಿಸೋರ್ಸ್‌ಸ್ ಅಂಡ್ ವಾಯ್ಸ್*, ನ್ಯೂಯಾರ್ಕ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೨೦೦೧, ಉಲ್ಲೇಖ: ಸುಧಾ.ಟಿ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ.೧೨

೩೩. ಬೈಜ್‌ನಾಥ್ ಸಿಂಗ್, *ಎಕನಾಮಿಕ್ ಅಫ್ ವಿಮೆನ್ ಎಜುಕೇಷನ್ ಆಂಡ್ ಎಂಪವರ್‌ಮೆಂಟ್*, ಅಭಿಜೀತ್ ಪಬ್ಲಿಕೇಷನ್ ಡೆಲ್ಲಿ, ೨೦೧೧ ಪು.ಸಂ೧೩-೧೪

೩೪. ನೈಲಾ ಕಬೀರ್, *ರಿಫ್ಲಕ್ಷನ್ಸ್ ಆನ್ ದ ಮುಷರ್‌ಮೆಂಟ್ ಆಫ್ ವುಮೆನ್ಸ್ ಎಂಪವರ್ಮೆಂಟ್ ಇನ್ ಡಿಸ್‌ಕಷನ್ ವುಮೆನ್ಸ್ ಎಂಪವರ್ಮೆಂಟ್ ಥಿಯರಿ ಅಂಡ್ ಪ್ರಾಕ್ಟೀಸ್ ಸಿ ದಾ ಸ್ಟಡಿಸ್*, ನಂ ೩ ನೂವುಮ್ ಗ್ರಾಫಷ್ಕ ಎ.ಬಿ. ಸ್ಟಾಕ್‌ಹೋಮ್ ಉಲ್ಲೇಖ ಟಿ ಸುಧಾ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು-೦೪

೩೫. ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು.ಸಂ ೦೨

೩೬. ಅಸಿತಾಬ್ಯಾನರ್ಜಿ, *ಜೆಂಡರ್ ಅಂಡ್ ಲಾ-ಎನ್ ಇಕನಾಮಿಕ್ ಡೈಮೆನ್‌ಷ್‌ನ್*, ವುಮೆನ್ ಅಂಡ್ ಇಕನಾಮಿಕ್ ಡೆವಲಪ್‌ಮೆಂಟ್ ನ್ಯೂಡೆಲ್ಲಿ, ದೀಪ್ ಅಂಡ್ ದೀಪ್ ಪಬ್ಲಿಕೇಷನ್, ೨೦೦೦, ಪು.ಶಂ ೨೧೭

೩೭ ಸುಧಾ *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧, ಪು ೧೭-೧೮

೩೮. ಅಂಜಲಿ ಬಾಜಪೈ, ಅಂಡ್ ಕೃಷ್ಣಕಾಂತ್ ತ್ರಿಪಾಠಿ, "ವಿಮೆನ್ಸ್ ಎಜುಕೇಷನ್ ಇನ್ ದ ಇಂಡಿಯನ್ ಸೀನಾರಿಯೊ: ಆ್ಯನ್ ಎನಾಲಿಸಿಸ್" ಇನ್ ಶ್ವೇತಾಪ್ರಸಾದ್ (ಸಂ) ವಿಮೆನ್ *ಇನ್ ಇಂಡಿಯ. ಟ್ರೈಯಲ್ ಅಂಡ್ ಟ್ರಂಪ್ಸ್*, ನ್ಯೂಡೆಲ್ಲಿ, ವೀವಾ ಬುಕ್ಸ್ ಪ್ರೈ.ಲಿ. ೨೦೧೧, ಪು.೧೮

೩೯. ಬೈಜನಾಥ್ *ಎಕನಾಮಿಕ್ ಅಫ್ ವಿಮೆನ್ ಎಜುಕೇಷನ್ ಆಂಡ್ ಎಂಪವರ್‌ಮೆಂಟ್*, ಅಭಿಜೀತ್ ಪಬ್ಲಿಕೇಷನ್ ಡೆಲ್ಲಿ, ೨೦೧೧, ಪು.ಸಂ ೬೭

೪೦. *ಬೈಜನಾಥ್ ಎಕನಾಮಿಕ್ ಆಫ್ ವಿಮೆನ್ ಎಜುಕೇಷನ್ ಅಂಡ್ ಎಂಪವರ್‌ಮೆಂಟ್*, ಅಭಿಜೀತ್ ಪಬ್ಲಿಕೇಷನ್ ಡೆಲ್ಲಿ, ೨೦೧೧, ಪು.ಸಂ ೬೭

೪೧. ಅರ್ಷದ್ ಅಲಂ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು.ಸಂ ೨೧೨-೨೨೧

೪೨. ಡಾ. ನಜೀರುದ್ದಿನ್, *ಮುಸ್ಲಿಂ ಮೈನಾರಿಟಿ ಎಕ್ಸ್‌ಕ್ಲೂಷನ್ ಅಂಡ್ ಡೆವಲಪ್‌ಮೆಂಟ್ ಮೆಜರ್ಸ್: ನೀಡ್ ಫಾರ್ ಇನ್‌ಕ್ಲೂಷಿವ್ ಪಾಲಿಸಿ ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಮಲ್ಟಿಡಿಸಿಪ್ಲಿನರಿ ರೀಸರ್ಚ್*, ವಾ.ಸ.೨, ಸಂ.೧, ಜನವರಿ ೨೦೧೨, ಪು-೭-೩೯

೪೩. ಡಾ. ನಜೀರುದ್ದಿನ್, *ಮುಸ್ಲಿಂ ಮೈನಾರಿಟಿ ಎಕ್ಸ್‌ಕ್ಲೂಷನ್ ಅಂಡ್ ಡೆವಲಪ್‌ಮೆಂಟ್ ಮೆಜರ್ಸ್: ನೀಡ್ ಫಾರ್ ಇನ್‌ಕ್ಲೂಷಿವ್ ಪಾಲಿಸಿ ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಮಲ್ಟಿಡಿಸಿಪ್ಲಿನರಿ ರೀಸರ್ಚ್*, ವಾ.ಸ.೨, ಸಂ.೧, ಜನವರಿ ೨೦೧೨, ಪು-೭-೩೯

೪೪. ಜೋಯಾ ಹಸನ್ ಅಂಡ್ ಮುಷಿರುಲ್ ಹಸನ್, *ಅಸೆಸ್ಸಿಂಗ್ ಯುಪಿಎ ಗವರ್ನಮೆಂಟ್ ರೆಸ್ಪಾನ್ಸ್ ಟು ಮುಸ್ಲಿಂ ಡಿಪ್ರಿವೇಷನ್*, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೪೨

೪೫. ಜೋಯಾ ಹಸನ್ ಅಂಡ್ ಮುಷಿರುಲ್ ಹಸನ್, *ಅಸೆಸ್ಸಿಂಗ್ ಯುಪಿಎ ಗವರ್ನಮೆಂಟ್ ರೆಸ್ಪಾನ್ಸ್ ಟು ಮುಸ್ಲಿಂ ಡಿಪ್ರಿವೇಷನ್*, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೪೨

೪೬. ಅರ್ಷದ್ ಅಲಂ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೧೨-೨೨೧

೪೭. ಅರ್ಷದ್ ಅಲಂ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೧೨-೨೨೧

೪೮. ಸರ್ಕಾರದ ಆದೇಶ ಸಂಖ್ಯೆ ಆರ್‌ಡಬ್ಲುಎಡಿ:ಸಿ ೯೪ ದಿನಾಂಕ:೧೭-೦೯-೧೯೯೪ರ ಆದೇಶದ ಪ್ರಕಾರ ಸಂವಿಧಾನದ ಅನುಚ್ಛೇದ ೧೫(೪) ಮತ್ತು ೧೬(೪)ರ ಉಲ್ಲೇಖ: ನಿರ್ದೇಶಕರು ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, ಕ್ರಿಯಾ ಯೋಜನೆ ೨೦೧೫-೧೬, ಬೆಂಗಳೂರು ಪು-೧

೪೯. ನಿರ್ದೇಶಕರು ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, ಕ್ರಿಯಾ ಯೋಜನೆ ೨೦೧೧-೧೨, ಬೆಂಗಳೂರು ಪು-೧-೪೬

೫೦. ಅರ್ಷದ್ ಅಲಂ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೧೨-೨೨೧

೫೧. ಅರ್ಷದ್ ಅಲಂ, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೧೨-೨೨೧

೫೨. ಜೋಯಾ ಹಸನ್, *ಅಸೆಸ್ಸಿಂಗ್ ಯುಪಿಎ ಗವರ್ನಮೆಂಟ್ ರೆಸ್ಪಾನ್ಸ್ ಟು ಮುಸ್ಲಿಂ ಡಿಪ್ರಿವೇಷನ್*, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೪೩

೫೩. ಜೋಯಾ ಹಸನ್, *ಅಸೆಸ್ಸಿಂಗ್ ಯುಪಿಎ ಗವರ್ನಮೆಂಟ್ ರೆಸ್ಪಾನ್ಸ್ ಟು ಮುಸ್ಲಿಂ ಡಿಪ್ರಿವೇಷನ್*, ಮದರಸಾ ಅಂಡ್ ಎಜುಕೇಷನಲ್ ಕಂಡಿಷನ್ಸ್ ಆಫ್ ಮುಸ್ಲಿಮ್ಸ್, ಇಂಡಿಯಾ, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು-೨೪೩

೫೪. ಬೇಗ್ ಎಂ. ಆರ್.ಎ ವಾಟ್ ಎಲ್ಸ್ ಎಜುಕೇಷನ್, ಮುಸ್ಲಿಂ ಡೈಲೆಮಾ ಇನ್ ಇಂಡಿಯ. ಡೆಲ್ಲಿ, ವಿಕಾಸ್ ಪಬ್ಲಿಷಿಂಗ್ ಹೌಸ್, ಪು. ೨೦೮

೫೫. ಡೇಬಿಯಲ್ ಅಂಡ್ ಸ್ಟಿಚ್, ಟುವರ್ಡ್ಸ್ ಎ ನ್ಯೂ, ಡೆವೆಲಪ್‌ಮೆಂಟ್, ಹ್ಯುಮ್ಯಾನಿಟೇರಿಯನ್, ಅಂಡ್ ಕಾನ್ಫ್ಲಿಕ್ಟ್ ರೆಸಲ್ಯೂಷನ್ ಎನ್‌ಜಿಓಸ್ ಇನ್ ದ ಏಜ್ ಆಫ್ ಗ್ಲೋಬಲೈಸೇಷನ್, ಇನ್ಸ್ಟಿಟ್ಯೂಟ್ ಫಾರ್, ಡೆವೆಲಪ್‌ಮೆಂಟ್ ಅಂಡ್ ಪೀಸ್, ಐಎನ್‌ಇಎಫ್, ರಿಪೋರ್ಟ ನಂ.೭೯, ಡ್ಯೂಸ್‌ಬರ್ಗ್, ೨೦೦೫, ಪು.೧೧ಪು.ಸಂ.೭೮

೫೬. ಡೇಬಿಯಲ್ ಅಂಡ್ ಸ್ಟಿಚ್, ಟುವರ್ಡ್ಸ್ ಎ ನ್ಯೂ, ಡೆವೆಲಪ್‌ಮೆಂಟ್, ಹ್ಯುಮ್ಯಾನಿಟೇರಿಯನ್, ಅಂಡ್ ಕಾನ್ಫ್ಲಿಕ್ಟ್ ರೆಸಲ್ಯೂಷನ್ ಎನ್‌ಜಿಓಸ್ ಇನ್ ದ ಏಜ್ ಆಫ್ ಗ್ಲೋಬಲೈಸೇಷನ್, ಇನ್ಸ್ಟಿಟ್ಯೂಟ್ ಫಾರ್, ಡೆವೆಲಪ್‌ಮೆಂಟ್ ಅಂಡ್ ಪೀಸ್, ಐಎನ್‌ಇಎಫ್, ರಿಪೋರ್ಟ ನಂ.೭೯, ಡ್ಯೂಸ್‌ಬರ್ಗ್, ೨೦೦೫, ಪು.೧೧ಪು.ಸಂ.೭೮

೫೭. ಪ್ರಶಾಂತ್ ಕೆ. ತ್ರಿವೇದಿ, ರೂರಲ್ ಪವರ್ ಸ್ಟ್ರಕ್ಚರ್, ಸ್ಟೇಟ್ ಇನಿಶಿಯೇಟಿವ್ ಅಂಡ್ ದ ಮುಸ್ಲಿಂ ಡೈವರ್‌ಜೆಂಟ್ ಎಕ್ಸ್‌ಪಿರಿಯನ್ಸ್ ಇನ್ ಫೋರ್ ಸ್ಟೇಟ್ಸ್, ಸೋಶೀಯಲ್ ಡೆವಲಪ್‌ಮೆಂಟ್ ರಿಪೋರ್ಟ್,೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್,ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಸ್, ೨೦೧೩, ಪು–೨೧೨–೨೨೧

೫೮. ಪರ್‌ಸೆಪ್ಷನ್ ಆಫ್ ಮುಸ್ಲಿಂ ವುಮೆನ್ : ದೇರ್ ರೈಟ್ಸ್ ಅಂಡ್ ಸ್ಟೇಟಸ್ ಇನ್ ದ ಸ್ಟೇಟ ಆಫ್ ಆಂಧ್ರ ಪ್ರದೇಶ್, ರೀಸರ್ಚ್ ಸ್ಪಾನ್ಸರ್ಡ್ ಬೈ ಮಿನಿಸ್ಟ್ರಿ ಆಫ್ ವುಮೆನ್ ಅಂಡ್ ಚೈಲ್ಡ್ ಡೆವಲಪ್‌ಮೆಂಟ್, ಗವರ್ನಮೆಂಟ್ ಆಫ್ ಇಂಡಿಯ, ನ್ಯೂಡೆಲ್ಲಿ, ಕಂಡಕ್ಟೆಡ್ ಬೈ ನೊಬೆಲ್ ಸೋಶಿಯಲ್ ಅಂಡ್ ಎಜುಕೇಷನ್ ಸೊಸೈಟಿ, ತಿರುಪತಿ, ೨೦೦೬, ಪು.ಸಂ ೧೧೧–೧೨೫

## ಅಧ್ಯಾಯ: ಆರು

# ಅಧ್ಯಯನದ ಫಲಿತಗಳು ಮತ್ತು ಮುಸ್ಲಿಂ ಮಹಿಳೆಯರ ಶಿಕ್ಷಣದ ಸುಧಾರಣೆಗೆ ಶಿಫಾರಸ್ಸುಗಳು

ಒಟ್ಟಾರೆ ಐದು ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವ ಸಂಗತಿಗಳನ್ನು ಮೂರು ಭಾಗಗಳಲ್ಲಿ ಮಂಡಿಸಲಾಗಿದೆ. ಮೊದಲನೆ ಭಾಗದಲ್ಲಿ ಅಧ್ಯಯನದ ಫಲಿತಗಳನ್ನು ಮಂಡಿಸಲಾಗಿದೆ. ಎರಡನೆಯ ಭಾಗದಲ್ಲಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸುಧಾರಣೆಗೆ ಶಿಫಾರಸ್ಸುಗಳನ್ನು ಮಂಡಿಸಲಾಗಿದೆ. ಮೂರನೆಯ ಭಾಗದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಮುಸ್ಲಿಂ ನಾಗರೀಕ ಸಮಾಜ ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ಮಂಡಿಸಲಾಗಿದೆ.

### ಭಾಗ: ಒಂದು

ಬೆಳಗಾವಿ ನಗರದ ಮುಸ್ಲಿಂ ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಅಧ್ಯಯನವನ್ನು ಕೈಗೊಳ್ಳಲಾಯಿತು. ಸಮಾಜಗಳು ಪುರುಷ ಮತ್ತು ಮಹಿಳೆಯರಿಂದ ನೀರಿಕ್ಷಿಸುವ ನಿರ್ದಿಷ್ಟವಾದ ಅರ್ಹತೆಗಳು, ಮತ್ತು ವರ್ತನೆಗಳನ್ನು 'ಲಿಂಗ' ಎಂದು ಪರಿಭಾವಿಸಲಾಗುತ್ತದೆ. ವ್ಯಕ್ತಿಯ ಸಾಮಾಜಿಕ ಅನನ್ಯತೆಗಳು ಇಂತಹ ನೀರಿಕ್ಷೆಯಿಂದ ರೂಪುಗೊಳ್ಳುತ್ತವೆ. ಈ ನೀರಿಕ್ಷೆಗಳು ನಿರ್ದಿಷ್ಟ ಅರ್ಹತೆಗಳು ವರ್ತನೆ ಮತ್ತು ನಿರ್ದಿಷ್ಟ ಲಕ್ಷಣಗಳಿಂದ ಪಡೆಯಲಾಗುತ್ತದೆ. ಭಾರತೀಯ ಸಮಾಜ ಪಿತೃ ಪ್ರಧಾನವಾದ ವ್ಯವಸ್ಥೆಯಾದ್ದರಿಂದ, ಅದರ ಸಾಮಾಜಿಕ ಪ್ರಕ್ರಿಯೆಯ ಮೂಲಕ ಮಹಿಳೆಯರು ನಿರ್ವಹಿಸಬೇಕಾದ ಪಾತ್ರವನ್ನು ನಿರ್ಧರಿಸಿದೆ. ಶ್ರೇಣೀಕೃತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ನಿಗದಿತವಾದ ಸ್ಥಾನವನ್ನು ರೂಪಿಸಿದ್ದು, ಅವರ ದೇಹಕ್ಕೆ ಸಂಬಂಧಿಸಿದ, ಸಂಪನ್ಮೂಲಗಳಿಗೆ ಸಂಬಂಧಿಸಿದ ಸಂಗತಿಗಳ ಮೇಲೆ ಯಾವುದೇ ಅಧಿಕಾರವಿಲ್ಲದಂತೆ ರೂಪಿಸಿದೆ. ಜೈವಿಕ ಆಧಾರದ ಮೇಲೆ ಅಥವಾ ಲಿಂಗ ಬೇಧದ ನೆಲೆಯಲ್ಲಿ ಮಾನವ ಜನಾಂಗವನ್ನು ಸ್ತ್ರಿಯರು ಮತ್ತು ಪುರುಷರು

ಎಂದು ವರ್ಗೀಕರಿಸುವ ಕ್ರಮವಿದೆ. ಸಾಮಾಜೀಕರಣದ ಪ್ರಕ್ರಿಯೆಗಳು ಅವರಿಬ್ಬರ ನಡುವೆ ಹಲವಾರು ವ್ಯತ್ಯಾಸ ಮತ್ತು ಅಸಮಾನತೆಗಳನ್ನು ಸೃಷ್ಟಿಸಿವೆ. ಇದು ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿಫಲ. ಹಾಗಾಗಿ ಲಿಂಗತ್ವವು ಸಂಪೂರ್ಣವಾಗಿ ಜೈವಿಕ ಅಂಶವೆಂದು ಪರಿಗಣಿಸಲಾಗುತ್ತದೆ. ಆದರೆ ಮಹಿಳೆಯನ್ನು ಸಾಮಾಜಿಕ ಘಟಕವನ್ನಾಗಿ ಅಭಿವೃದ್ಧಿ ನೆಲೆಯಲ್ಲಿ ಪ್ರಜ್ಞಾ ಪೂರ್ವಕವಾಗಿ ಗುರುತಿಸುವುದಿಲ್ಲ.

ಅಭಿವೃದ್ಧಿಯು ಇಂದು ಲಿಂಗಸ್ಪಂಧಿ ವಿಚಾರವಾಗಿದೆ. ಆದರೆ ಇಂದು ಪ್ರಜ್ಞಾ ಪೂರ್ವಕವಾಗಿ ಇದನ್ನು ನಿರ್ಲಕ್ಷಿಸಲಾಗುತ್ತಿದೆ. ಇಂತಹ ಲಿಂಗಸಂಬಂಧಿ ಅಸಮಾನತೆಯನ್ನು ದೂರ ಮಾಡಲು ವ್ಯವಸ್ಥೆಯನ್ನು ಪುನರ್ ರೂಪಿಸುವ ಮೂಲಕ ಸಾಧ್ಯವಾಗಿಸಬೇಕು ಎನ್ನುವ ಚರ್ಚೆಗಳು ತೀವ್ರಗೊಂಡಿವೆ. ಬಡತನ, ಮನುಷ್ಯ ನಿರ್ಮಿತ ಅಸಮಾನತೆ ಮತ್ತು ಅಧೀನತೆಯ ಸಂಚಿನಿಂದ ಕೂಡಿದ್ದು, ಇಂದು ಮಹಿಳೆ ಅಕ್ಷರ ದಕ್ಕಿಸಿಕೊಂಡ್ಡಿದ್ದರೂ ಅಜ್ಞಾನದಿಂದ ಹೊರ ಬಂದಿಲ್ಲವಾದ್ದರಿಂದ ಅದಕ್ಕೆ ಪ್ರತಿ ಸಂಚನ್ನು ರೂಪಿಸಿ ತನ್ನ ಬದುಕನ್ನು ರೂಪಿಸಿಕೊಳ್ಳುವಲ್ಲಿ ಅಸಮರ್ಥಳಾಗಿದ್ದಾಳೆ. ಲೋಹಿಯಾರವರ ಪ್ರಕಾರ ಪುರುಷ ಮತ್ತು ಮಹಿಳೆಯರ ಮಧ್ಯೆ ಅಸಮಾನತೆ ಇರಕೂಡದು. ಅವರು ಪ್ರತಿಪಾದಿಸಿದ ಕ್ರಾಂತಿಯ ಏಳು ತತ್ವಗಳಲ್ಲಿ ಇದು ಪ್ರಮುಖವಾದುದು. ನಮ್ಮದು ಪಾರಂಪರಿಕವಾದ ಅಸಮಾನ ಸಮಾಜ. ಎಲ್ಲರಿಗೂ ಸಮಾನ ಅವಕಾಶ ನೀಡುವ ಮೂಲಕ ಸಮಾನತೆ ತರಲು ಸಾಧ್ಯವಿಲ್ಲ. ಸಮಾಜದಲ್ಲಿ ಸಮಾನತೆ ತರಲು ಹಿಂದುಳಿದ ವರ್ಗಗಳು, ಮಹಿಳೆ, ಹರಿಜನ, ಆದಿವಾಸಿ ಹಾಗೂ ಧಾರ್ಮಿಕ ಅಲ್ಪಸಂಖ್ಯಾತರಲ್ಲಿ ದಮನಕ್ಕೊಳಗಾದವರಿಗೆ ವಿಶೇಷ ಅವಕಾಶಗಳನ್ನು ಶೇ.೬೦ ರಷ್ಟು ಮೀಸಲಾತಿ ನೀಡುವ ಮೂಲಕ ಸಾಧ್ಯವಾಗಿಸಬೇಕೆಂದು ಪ್ರತಿಪಾದಿಸುತ್ತಾರೆ. ಹಿಂದೆ ಅಭಿವೃದ್ಧಿ ಎಂದರೆ ವರಮಾನದ ಹೆಚ್ಚಳವೆಂದು ಪರಿಭಾವಿಲಾಗುತ್ತಿತ್ತು. ಅಭಿವೃದ್ಧಿಯ ಈ ಪರಿಕಲ್ಪನೆ ದುಡಿಮೆ, ವೇತನ, ವರಮಾನ ಮುಂತಾದ ಸಂಗತಿಗಳನ್ನು ಒಳಗೊಂಡಿತ್ತು. ಆದರೆ ಈ ಅಭಿವೃದ್ಧಿ ಪರಿಕಲ್ಪನೆ ಸಂಪೂರ್ಣವಾಗಿ ಸಾಮಾಜಿಕ ನೆಲೆಗಳನ್ನು ನಿರ್ಲಕ್ಷಿಸಿತ್ತು. ಸಾಮಾಜಿಕ ಅಭಿವೃದ್ಧಿಯ ಹೊರತಾಗಿ ಸಮಗ್ರ ಅಭಿವೃದ್ಧಿಯನ್ನು ಉಹಿಸಿಕೊಳ್ಳುವುದು ಸಾಧ್ಯವಿಲ್ಲ. ಸಾಮಾಜಿಕ ಅಭಿವೃದ್ಧಿಯು ಆರೋಗ್ಯ, ಸಾಕ್ಷರತೆ, ಶಾಲಾ ದಾಖಲೀಕರಣ ಮುಂತಾದ ಅಂಶಗಳನ್ನು ಒಳಗೊಂಡಿದೆ. ಈ ಎರಡು ಆಯಾಮಗಳು ಪ್ರಮಾಣಾನುಗುಣವಾಗಿ ಬೆರೆತುಕೊಂಡಾಗ ಸಮಗ್ರ ಅಭಿವೃದ್ಧಿ ಸಾಧ್ಯವಾಗುತ್ತದೆ. ಆದರೆ ಅಭಿವೃದ್ಧಿಯು ತನ್ನಷ್ಟಕ್ಕೆ ತಾನೆ ಸಮಾಜದಲ್ಲಿರುವ ಬಡವರು, ಶ್ರೀಮಂತರು, ಪರಿಶಿಷ್ಟರು, ಅಲ್ಪಸಂಖ್ಯಾತರು ಮತ್ತು ಮಹಿಳೆಯರು ಮುಂತಾದ ವರ್ಗಗಳನ್ನು ಸಮಾನವಾಗಿ ಒಳಗೊಳ್ಳುವುದಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯು ಇಂತಹ ಒಳಗೊಳ್ಳುವಿಕೆಯನ್ನು ಸಾಧ್ಯವಾಗಿಸುವ ಒಂದು ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯೆಂದು ಭಾವಿಸಲಾಗುತ್ತಿದೆ. ಇದರೊಂದಿಗೆ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಜೊತೆಯಾಗಿರಲು

ಸಾಧ್ಯವಿಲ್ಲವೆಂದು ವಾದ ಮಂಡಿಸಲಾಗುತ್ತಿದೆ. ಆದರೆ ವಿವಿಧ ಅಧ್ಯಯನಗಳ ಫಲಿತಗಳು ಈ ವಾದವನ್ನು ಒಪ್ಪುವುದಿಲ್ಲ. ಅವುಗಳ ಪ್ರಕಾರ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಒಂದಕ್ಕೊಂದು ಪೂರಕವಾದ ಸಂಗತಿಗಳೇ ಹೊರತು ಪ್ರತ್ಯೇಕವಾದವುಗಳಲ್ಲ. ಆದರೆ ಪ್ರಜಾಪ್ರಭುತ್ವವು ತನ್ನಷ್ಟಕ್ಕೆ ತಾನೆ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುತ್ತದೆ ಎಂಬ ಗ್ರಹಿಕೆ ಸರಿಯಲ್ಲ. ಇಂದಿಗೂ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಮೂಲಭೂತ ಸಂಗತಿಗಳಲ್ಲಿ ಅಸಮಾನತೆಗಳು ತೀವ್ರಗೊಂಡಿರುವುದು ಈ ವಾದಕ್ಕೆ ಪುಷ್ಠಿ ನೀಡುತ್ತದೆ.

ಜಗತ್ತಿನ ಬಹಳಷ್ಟು ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಗಟ್ಟಿಗೊಳ್ಳದಿರಲು ಲಿಂಗ ಅಸಮಾನತೆಯು ಪ್ರಮುಖವಾದ ಕಾರಣವೆಂದು ಗ್ರಹಿಸಲಾಗುತ್ತಿದೆ. ಸಾಮಾಜಿಕವಾಗಿ ಹೊರಗಣದ ಸಮುದಾಯಗಳಿಗೆ ಇತರರಿಗೆ ಲಭ್ಯವಾಗುವ ಆದಾಯ ಮತ್ತು ಸಂಪತ್ತು ಲಭ್ಯವಾಗುವುದಿಲ್ಲ. ದೇಶದ ಆರ್ಥಿಕತೆ ಮತ್ತು ಸಂಪತ್ತು ಹೆಚ್ಚಾದಾಗಲೂ ಈ ಸಮುದಾಯಗಳು ಹಿಂದುಳಿದು ಬಡತನದಲ್ಲಿಯೇ ಮುಂದುವರಿಯುತ್ತವೆ. ಇಂತಹ ಸಮಸ್ಯೆಗಳನ್ನು ಮುಸ್ಲಿಂ ಸಮುದಾಯ ಎದುರಿಸುತ್ತಿದೆ. ಅಲ್ಪ ಸಂಖ್ಯಾತರು ಎನ್ನುವ ಅಂಶವೇ ರಾಜಕೀಕರಣಗೊಂಡು ಅವರ ಅಭಿವೃದ್ಧಿಗಾಗಿ ರೂಪಿಸುವ ಅಭಿವೃದ್ಧಿ ಯೋಜನೆಗಳು ಮತ್ತು ಕಾರ್ಯಕ್ರಮಗಳು ತುಷ್ಟೀಕರಣದ ಅರೋಪಗಳನ್ನು ಪಡೆದುಕೊಳ್ಳುತ್ತಿವೆ. ಮುಸ್ಲಿಮರು ಇಂದು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದು, ಈ ಸಮುದಾಯದ ಮಹಿಳೆಯರ ಸ್ಥಿತಿ ಶ್ರೇಣೀಕರಣ, ಪುರುಷ ಪ್ರಧಾನ ವ್ಯವಸ್ಥೆ, ಸಾಂಸ್ಕೃತಿಕ ಹಾಗೂ ಧಾರ್ಮಿಕ ನೆಲೆಗಟ್ಟಿನ ಆಧಾರದಲ್ಲಿ ಅತ್ಯಂತ ಚಿಂತಾಜನಕವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಮುಸ್ಲಿಂ ಮಹಿಳೆಯನ್ನು ಜೈವಿಕ ನೆಲೆಗಟ್ಟಿನ ಜೊತೆಗೆ ಸಾಮಾಜಿಕ ಘಟಕವನ್ನಾಗಿ ಪರಿಭಾವಿಸಿಕೊಳ್ಳಲಾಗಿತ್ತು. ಅದೇ ಪ್ರಕಾರ ಮುಸ್ಲಿಂ ಮಹಿಳೆಯರ ಶಿಕ್ಷಣದ ಸಾಮಾಜಿಕ ನೆಲೆಗಳನ್ನು ಅವರು ಜೀವಿಸುತ್ತಿರುವ ಶೈಕ್ಷಣಿಕ ಪರಿಸರ, ಲಭ್ಯವಿರುವ ಶೈಕ್ಷಣಿಕ ಅವಕಾಶಗಳು, ಅವರ ಶಿಕ್ಷಣಕ್ಕೆ ಅಡ್ಡಿಯಾಗಿರುವ ಅಂಶಗಳು, ಅವರ ಶೈಕ್ಷಣಿಕ ಅಭಿವೃದ್ಧಿಗೆ ಪೋಷಕರು, ಸಮುದಾಯ ಮತ್ತು ನಾಗರೀಕ ಸಮಾಜಗಳು ಹೇಗೆ ಸ್ಪಂಧಿಸುತ್ತವೆ ಎಂಬ ಸಂಗತಿಗಳನ್ನು ಸಾಮಾಜಿಕ ನೆಲೆಗಳೆಂದು ಪರಿಭಾವಿಸಿಕೊಳ್ಳಲಾಗಿತ್ತು. ಸಮಕಾಲೀನ ಭಾರತದ ಅಲ್ಪಸಂಖ್ಯಾತ ಅಭಿವೃದ್ಧಿ ಪ್ರಕ್ರಿಯೆಯಲ್ಲಿ, ಮುಖ್ಯವಾಗಿ ಮುಸ್ಲಿಮರ ಸಬಲೀಕರಣದ ಪ್ರಕ್ರಿಯೆಯಲ್ಲಿ ಶಿಕ್ಷಣವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಮುಸ್ಲಿಮರು ಮುಖ್ಯವಾಹಿನಿಯಿಂದ ದೂರಕ್ಕೆ ತಳ್ಳಲ್ಪಡಲು ಶೈಕ್ಷಣಿಕ ಹಿಂದುಳಿಯುವಿಕೆಯೇ ಪ್ರಧಾನ ಕಾರಣವೆಂದು ಗುರುತಿಸಲಾಗಿದೆ. ಸಾಚಾರ್ ವರದಿಯು ಮುಸ್ಲಿಮರ ಸಬಲೀಕರಣಕ್ಕೆ ಆದ್ಯತೆ ನೀಡಬೇಕಾದ ಕ್ಷೇತ್ರವೆಂದರೆ ಶಿಕ್ಷಣವೆಂದು ಅಭಿಪ್ರಾಯಪಟ್ಟಿದೆ. ಅದರೊಂದಿಗೆ ಎಲ್ಲರನ್ನೂ ಒಳಗೊಳ್ಳುವ ಶಿಕ್ಷಣವು ಇಂದಿನ ಅಗತ್ಯವಾಗಿದೆ ಎಂದು ಗುರುತಿಸಲಾಗಿದೆ. ಭಾರತದಲ್ಲಿ ಉನ್ನತ ಶಿಕ್ಷಣವನ್ನು ಉತ್ತಮ ಗೊಳಿಸಬೇಕಾದರೆ ಶಾಲಾ ಶಿಕ್ಷಣವನ್ನು ಸಮಗ್ರವಾಗಿ

ಸುಧಾರಣೆ ಮಾಡುವ ಅಗತ್ಯವಿದೆ. ಜಾಗತಿಕ ಆರ್ಥಿಕತೆಯು ಜ್ಞಾನಕೇಂದ್ರಿತ ಆಯಾಮದಿಂದ ಉತ್ಪಾದನ ಕೇಂದ್ರಿತವಾಗಿ ಪರಿವರ್ತನೆಗೊಂಡಿದೆ. ಶಿಕ್ಷಣವನ್ನು ಸಾಮಾಜೀಕರಣದ, ಸಾಮಾಜಿಕ ಮರು ಉತ್ಪಾದನೆಯ ಮತ್ತು ಭೌತಿಕ ಉತ್ಪಾದನೆಯ ಶಕ್ತಿಯುತ ಮಾಧ್ಯಮವೆಂದು ಪರಿಗಣಿಸಲಾಗಿದೆ. ಆದರೆ ಶಿಕ್ಷಣವು ವೈವಿಧ್ಯತೆಯಿಂದ ಕೂಡಿದ್ದು, ಅದು ಮುಸ್ಲಿಮರ ಅನನ್ಯತೆಯನ್ನು ಪ್ರತಿಬಿಂಬಿಸುವಂತಿರಬೇಕೇ ಹೊರತು ಅದು ಮುಸ್ಲಿಂ ಸಮುದಾಯವನ್ನು ಹೊರಗಣಗೊಳಿಸುವಂತಿರಬಾರದು. ಇಂದು ಬಹುಸಂಖ್ಯಾತ ಮುಸ್ಲಿಮರು ಇದೇ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಮುಸ್ಲಿಂ ಸಮುದಾಯ ಬಹುರೂಪಿ ಸಮುದಾಯವೆಂಬುದು ಸತ್ಯಾಂಶವಾಗಿದ್ದರೂ, ಏಕರೂಪಿ ಸಮುದಾಯವೆಂಬ ಚಾರಿತ್ರಿಕ ಮಿಥ್ಯೆಯನ್ನು ಹೊತ್ತುಕೊಳ್ಳುವ ಅನಿವಾರ್ಯತೆಯನ್ನು ಹೊಂದಿದೆ.

ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಮರ ಶೈಕ್ಷಣಿಕ ಪ್ರಗತಿಯು ಅತ್ಯಂತ ನಿರಾಶದಾಯಕವಾಗಿದೆ. ೮೦ ರ ದಶಕದ ನಂತರ ಅದರ ಅಂತರ ಹೆಚ್ಚಾಗಿದೆ. ೨೦೦೧ ರ ಜನ ಗಣತಿಯ ಪ್ರಕಾರ ಮುಸ್ಲಿಮರ ಸಾಕ್ಷರತೆ ಪ್ರಮಾಣ ಶೇ ೫೯.೧೧ ರಷ್ಟಿದೆ (ರಾಷ್ಟ್ರೀಯ ಸರಾಸರಿ ಶೇ.೬೪.೮) ಅರ್ಧದಷ್ಟು ಗ್ರಾಮೀಣ ಮುಸ್ಲಿಂ ಮಕ್ಕಳು ಮತ್ತು ೧/೩ ನಗರವಾಸಿ ಮುಸ್ಲಿಂ ಮಕ್ಕಳು ಅನಕ್ಷರಸ್ಥರಾಗಿದ್ದರೆ. ೧೦ ಮುಸ್ಲಿಂ ಮಕ್ಕಳಲ್ಲಿ ಒಂದು ಮಗು ಶಾಲೆಯಿಂದ ಹೊರಗುಳಿದಿದೆ. ಅಂದರೆ ಮುಸ್ಲಿಮರಲ್ಲಿ ಹೊರಗುಳಿದ ಮಕ್ಕಳ ಸಂಖ್ಯೆ ಅರ್ಧದಷ್ಟಿದೆ ೬-೧೪ ವಯೋಮಾನದ, ಶೇ.೨೫% ರಷ್ಟು ಮುಸ್ಲಿಂ ಮಕ್ಕಳು ಶಾಲೆಗೆ ಸೇರಿಲ್ಲ ಅಥವಾ ಅರ್ಧದಲ್ಲೇ ಶಾಲೆ ಬಿಟ್ಟವರಾಗಿದ್ದಾರೆ. ಇತರೆ ಎಲ್ಲಾ ಸಮುದಾಯದವರಿಗೆ ಹೋಲಿಸಿದರೆ ಪ್ರಾಥಮಿಕ ಶಿಕ್ಷಣದಿಂದಲೂ ಮುಸ್ಲಿಮರು ವಂಚಿತರಾಗಿದ್ದಾರೆ. ಬೆಳಗಾವಿ ನಗರವನ್ನು ಮೂಲ ನೆಲೆಯನ್ನಾಗಿಸಿಕೊಂಡು ಈ ನಗರದ ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಕಂಡುಕೊಳ್ಳಲಾಗಿದೆ. ಅಧ್ಯಯನವು ಕಂಡುಕೊಂಡಿರುವ ಫಲಿತಗಳನ್ನು ಒಂದೊಂದಾಗಿ ಚರ್ಚಿಸಲಾಗಿದೆ.

## ೬.೧. ಬೆಳಗಾವಿ ನಗರದ ಮುಸ್ಲಿಮರ ಸಾಮಾಜಿಕ ಸ್ಥಿತಿ

ಭಾರತೀಯ ಸಮಾಜದಲ್ಲಿ ಅವಿಭಕ್ತ ಕುಟುಂಬಗಳ ಸಂಖ್ಯೆ ಇಳಿಮುಖವಾಗುತ್ತಿದೆ. ಆರ್ಥಿಕ ಅಭಿವೃದ್ಧಿಯೇ ಇದಕ್ಕೆ ಕಾರಣವೆಂದು ಗುರುತಿಸಲಾಗುತ್ತಿದೆ. ಕರ್ನಾಟಕ ರಾಜ್ಯದ ಮುಸ್ಲಿಮರಲ್ಲಿ ಆರಕ್ಕಿಂತ ಹೆಚ್ಚು ಜನ ವಾಸಿಸುವ ಕುಟುಂಬಗಳ ಪ್ರಮಾಣ ಶೇ.೪೯.೫೭ ರಷ್ಟಿದೆ. ಆದರೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೪೧ ರಷ್ಟು ಕುಟುಂಬಗಳಲ್ಲಿ ಆರಕ್ಕಿಂತ ಹೆಚ್ಚು ಜನ ವಾಸಿಸುವುದು ಕಂಡುಬರುತ್ತದೆ. ರಾಜ್ಯದ ಪ್ರಮಾಣಕ್ಕೆ ಹೋಲಿಸಿದರೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಇದರ ಪ್ರಮಾಣ ಕಡಿಮೆ ಕಂಡುಬರುತ್ತದೆ. ರೆಹಮಾನ್‌ಖಾನ್ ವರದಿಯ ಪ್ರಕಾರ ಕರ್ನಾಟಕ ರಾಜ್ಯದ ಮುಸ್ಲಿಮರ ಸಾಕ್ಷರತೆ ಪ್ರಮಾಣ ಶೇ.೫೩ ರಷ್ಟಿದೆ. ಬೆಳಗಾವಿ ನಗರದ ಮುಸ್ಲಿಮರ ಒಟ್ಟು ಸಾಕ್ಷರತೆ

ಶೇ.೬೮ ರಷ್ಟಿದೆ. ಕಳೆದ ಎರಡು ದಶಕಗಳಲ್ಲಿ ಬೆಳಗಾವಿ ನಗರದ ಮುಸ್ಲಿಮರ ಸಾಕ್ಷರತೆ ಪ್ರಮಾಣ ಬೆಳವಣಿಗೆಯಾಗಿದೆ. ಆದರೆ ಕರ್ನಾಟಕ ರಾಜ್ಯದ ಒಟ್ಟಾರೆ ಸಾಕ್ಷರತೆ ಬೆಳವಣಿಗೆಗೆ ಹೋಲಿಸಿದರೆ ಮುಸ್ಲಿಮರ ಸಾಕ್ಷರತೆ ಪ್ರಗತಿ ಆಶಾದಾಯಕವಾಗಿಲ್ಲ. ಬೆಳಗಾವಿ ಮುಸ್ಲಿಮರ ಪುರುಷರು ಮತ್ತು ಮಹಿಳೆಯರಲ್ಲಿ ಸಾಕ್ಷರತೆಯ ಅಸಮಾನತೆಗಳು ತೀವ್ರವಾಗಿವೆ. ಬೆಳಗಾವಿ ನಗರದ ಮುಸ್ಲಿಮರ ಒಟ್ಟು ಸಾಕ್ಷರತೆ ಶೇ.೬೮ ರಷ್ಟಿದ್ದು, ಅದರಲ್ಲಿ ಪುರುಷರ ಸಾಕ್ಷರತೆ ಶೇ.೫೮.೧ ರಷ್ಟು ಮತ್ತು ಶೇ.೪೨ ರಷ್ಟು ಮಹಿಳೆಯರ ಸಾಕ್ಷರತೆ ಇದೆ. ಇಂದಿಗೂ ಮುಸ್ಲಿಂ ಸಮುದಾಯದ ಪುರುಷರು ಮತ್ತು ಮಹಿಳೆಯರ ನಡುವಿನ ಸಾಕ್ಷರತೆಯ ಅಂತರಗಳು ಹೆಚ್ಚಾಗುತ್ತಿವೆ.

## ೬.೨. ಬೆಳಗಾವಿ ನಗರದ ಮುಸ್ಲಿಮರ ಆರ್ಥಿಕ ಸ್ಥಿತಿ

ಇಂದು ಮಾನವ ಅಭಿವೃದ್ಧಿ ವರದಿಗಳು ಜಿಲ್ಲೆ ಮತ್ತು ರಾಜ್ಯದ ಜನತೆಯ ವಲಯವಾರು ಉದ್ಯೋಗದ ಭಾಗವಹಿಸುವಿಕೆಯನ್ನು ಅಂದಾಜು ಮಾಡುತ್ತಿವೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೨೯ ರಷ್ಟು ಕೂಲಿ ಕಾರ್ಮಿಕರು, ಶೇ.೯.೪ ರಷ್ಟು ಸಣ್ಣ ವ್ಯಾಪಾರಿಗಳು, ಶೇ.೧೯ ರಷ್ಟು ಸ್ವಯಂ ಉದ್ಯೋಗದಲ್ಲಿ ನಿರತರಾಗಿರುವವರು, ಶೇ,೩೫ ರಷ್ಟು ಖಾಸಗಿ ಉದ್ಯೋಗದಲ್ಲಿ ನಿರತರಾಗಿರುವವರು ಮತ್ತು ಕೇವಲ ಶೇ.೭.೮ ರಷ್ಟು ಮುಸ್ಲಿಮರು ಸರ್ಕಾರಿ ನೌಕರಿಗಳಲ್ಲಿ ನಿರತರಾಗಿರುವುದು ಕಂಡುಬರುತ್ತದೆ.ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದಲೂ ಮುಸ್ಲಿಮರು ಕೂಲಿ ಕಾರ್ಮಿಕರಾಗಿ, ಸಣ್ಣ ವ್ಯಾಪಾರಿಗಳಾಗಿಯೇ ಮುಂದುವರೆದಿದ್ದಾರೆ, ಕೈಗಾರಿಕೆಗಳ ಮಾಲಿಕತ್ವ, ಸರ್ಕಾರದ ಉದ್ಯೋಗಳು ಇಂದಿಗೂ ಮುಸ್ಲಿಮರಿಗೆ ಲಭ್ಯವಾಗುತ್ತಿಲ್ಲ. ಹಾಗಾಗಿ ಮುಸ್ಲಿಮರಿಗೆ ಆರ್ಥಿಕವಾಗಿ ಚೇತರಿಸಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಇದರೊಂದಿಗೆ ಮುಸ್ಲಿಂ ಸಮುದಾಯದಲ್ಲಿ ನಿರುದ್ಯೋಗದ ಪ್ರಮಾಣ ಹೆಚ್ಚಾಗುತ್ತಿದ್ದು ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೯ ರಷ್ಟು ಪುರುಷರು ಮತ್ತು ಶೇ.೩೭ ರಷ್ಟು ಮಹಿಳೆಯರು ನಿರುದ್ಯೋಗಿಗಳಾಗಿದ್ದಾರೆ. ೧೯೯೫ ರ ಕರ್ನಾಟಕದ ರೆಹಮಾನ್ ಖಾನ್ ವರದಿಯಪ್ರಕಾರ ಕರ್ನಾಟಕದ ಒಟ್ಟು ಶೇ.೩೧ ರಷ್ಟು ಮುಸ್ಲಿಂ ಕುಟುಂಬಗಳು ಕೇವಲ ೩,೬೦೦ ರೂ.ಗಳ ವಾರ್ಷಿಕ ಆದಾಯವನ್ನು, ಶೇ.೨೪ ರಷ್ಟು ಕುಟುಂಬಗಳು ೬೦೦೧ ರೂ.ರಿಂದ ೧೦,೦೦೦ ರೂ. ವರೆಗೆ ಆದಾಯವನ್ನು ಹೊಂದಿದ್ದಾರೆ ಮತ್ತು ಕೇವಲ ಶೇ.೨೯ ರಷ್ಟು ಮುಸ್ಲಿಂ ಕುಟುಂಬಗಳು ಮಾತ್ರ ೧೦,೦೦೦ ರೂ. ಗಳಿಗಿಂತ ಹೆಚ್ಚು ವಾರ್ಷಿಕ ಆದಾಯವನ್ನು ಹೊಂದಿದ್ದಾರೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಮೂರು ವರ್ಗದ ಆದಾಯಗಳನ್ನು ಹೊಂದಿರುವವರು ಕಂಡುಬರುತ್ತಾರೆ. ೧೧,೦೦೦ ರೂ ದಿಂದ ೭೦,೦೦೦ ರೂ ವರೆಗೆ ಆದಾಯ ಹೊಂದಿರುವ ಶೇ.೭೭ ರಷ್ಟು ಕುಟುಂಬಗಳು ಕಂಡುಬರುತ್ತವೆ. ೭೦,೦೦೦ ರೂ ಗಳಿಂದ ೧,೩೦,೦೦೦ ರೂ ಆದಾಯ ಹೊಂದಿರುವ ಶೇ.೧೯.೬ ರಷ್ಟು ಕುಟುಂಬಗಳು ಕಂಡುಬರುತ್ತವೆ. ೧,೩೦,೦೦೦ ರೂ ಗಳಿಂದ ೨,೫೦,೦೦೦ ರೂ ಆದಾಯ

ಹೊಂದಿರುವ ಶೇ.೩.೪ ರಷ್ಟು ಕುಟುಂಬಗಳು ಕಂಡುಬರುತ್ತಾರೆ. ಇಂದಿಗೂ ಬೆಳಗಾವಿ ನಗರದಲ್ಲಿ ಬಡವರ ಪ್ರಮಾಣವೇ ಹೆಚ್ಚಾಗಿ ಕಂಡುಬರುತ್ತಿದೆ. ಎಪ್ಪತ್ತು ದಶಕಗಳಲ್ಲಿ ವಿವಿಧ ಸರ್ಕಾರಗಳು ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳು ಮುಸ್ಲಿಮರನ್ನು ಪ್ರಭಾವಿಸಿಲ್ಲ. ಮುಸ್ಲಿಮರು ಇಂದಿಗೂ ಬಡವರಾಗಿಯೇ ಮುಂದುವರಿದಿದ್ದಾರೆ.

## ೬.೩. ಬೆಳಗಾವಿ ನಗರದ ಮುಸ್ಲಿಮರ ಮೂಲಭೂತ ಸೌಕರ್ಯಗಳ ಕೊರತೆ

ಬೆಳಗಾವಿ ನಗರದ ಮುಸ್ಲಿಮರು ವಿವಿಧ ಮೂಲಭೂತ ಸೌಕರ್ಯಗಳ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಂದಿಗೂ ಬೆಳಗಾವಿ ನಗರದ ಮುಸ್ಲಿಮರಲ್ಲಿ ಶೇ.೧೪.೫ ರಷ್ಟು ಕುಟುಂಬಗಳಿಗೆ ಸ್ವಂತ ಮನೆಗಳಿಲ್ಲ ಶೇ.೧೮.೮ ರಷ್ಟು ಮುಸ್ಲಿಮರು ಇಂದಿಗೂ ಕೊಳೆಗೇರಿ ಪ್ರದೇಶಗಳಲ್ಲಿ ಜೀವಿಸುತ್ತಿದ್ದಾರೆ. ಮತ್ತು ಶೇ.೫೨.೧ ರಷ್ಟು ಕುಟುಂಬಗಳಿಗೆ ನಲ್ಲಿ ನೀರಿನ ಸಂಪರ್ಕ ಲಭ್ಯವಾಗಿಲ್ಲ ಮತ್ತು ಶೇ.೧೨.೮ ರಷ್ಟು ಮುಸ್ಲಿಂ ಕುಟುಂಬಗಳು ಒಳಚರಂಡಿ ವ್ಯವಸ್ಥೆಯನ್ನು ಹೊಂದಿಲ್ಲ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಮರು ಮನುಷ್ಯನಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜೀವನಕ್ಕೂ ಮುಸ್ಲಿಮರ ಬದುಕಿಗೂ ಯಾವುದೇ ವ್ಯತ್ಯಾಸಗಳಿಲ್ಲ.

## ೬.೪. ಬೆಳಗಾವಿ ನಗರದ ಪರಿಸರ ಮತ್ತು ಶಿಕ್ಷಣ

ಮೊದಲನೆಯದಾಗಿ, ಪರಿಸರವು ತನ್ನೊಳಗೆ ಜೀವಿಸುತ್ತಿರುವ ಸಮುದಾಯಗಳನ್ನು ವಿವಿಧ ನೆಲೆಗಳಲ್ಲಿ ಪ್ರಭಾವ ಬೀರುತ್ತದೆ ಎಂದು ವಾದ ಮಂಡಿಸಲಾಗುತ್ತಿದೆ. ಅಧ್ಯಯನದ ಫಲಿತಗಳು ಹೇಳುವಂತೆ ಕರ್ನಾಟಕದ ಮಹಾರಾಷ್ಟ್ರದ ಗಡಿಭಾಗದ ಜಿಲ್ಲೆಯಾದ ಬೆಳಗಾವಿಯು ಭಾಷಾ ಮತ್ತು ಸಾಂಸ್ಕೃತಿಕ ವೈವಿದ್ಯತೆಯನ್ನು ಹೊಂದಿದೆ. ಬೆಳಗಾವಿ ಹೆಸರನ್ನು ಉಲ್ಲೇಖಿಸುವ ವಿವಿಧ ಶಾಸನಗಳು ಇಲ್ಲಿ ಲಭ್ಯವಾಗಿವೆ. ರಾಜ್ಯದ ಒಟ್ಟು ರಾಜ್ಯಗಳಲ್ಲಿ ಬೆಳಗಾವಿಯು ಅತೀ ವಿಸ್ತಾರವಾದ ಜಿಲ್ಲೆಯಾಗಿದ್ದು, ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನವನ್ನು ಪಡೆದುಕೊಂಡಿದೆ. ಬೆಳಗಾವಿ ನಗರವು ೨೦೧೧ ರ ಜನಗಣತಿಯ ಪ್ರಕಾರ ಒಟ್ಟು ೪,೮೮,೧೫೭ ರಷ್ಟು ಜನಸಂಖ್ಯೆಯನ್ನು ಹೊಂದಿದ್ದು ಅದರಲ್ಲಿ ೨,೪೫,೫೪೫ ಪುರುಷರು, ಮತ್ತು ೨,೪೨,೬೧೨ ರಷ್ಟು ಮಹಿಳೆಯರನ್ನು ಒಳಗೊಂಡಿದೆ. ೨೦೦೧ ರಿಂದ ೨೦೧೧ ರವರೆಗಿನ ದಶವಾರ್ಷಿಕ ಜನಸಂಖ್ಯಾ ಬೆಳವಣಿಗೆಯು ಶೇ.೧೩.೪೧ ರಷ್ಟಿದೆ. ಜಿಲ್ಲೆಯ ಜನಸಂಖ್ಯೆಯನ್ನು ಧರ್ಮವಾರು ವಿಶ್ಲೇಷಿಸಿದಾಗ ಅತೀ ಹೆಚ್ಚು ಹಿಂದೂ ಧರ್ಮದ ಜನಸಂಖ್ಯೆ ಶೇ. ೭೩.೨೪ ರಷ್ಟಿದ್ದು, ಮುಸ್ಲಿಂ ಜನಸಂಖ್ಯೆ ಶೇ. ೨೦.೬೨ ರಷ್ಟಿದೆ. ಒಟ್ಟಾರೆ ಸಾಕ್ಷರತೆ ಪ್ರಮಾಣಕ್ಕೆ ಹೋಲಿಸಿದರೆ ಮುಸ್ಲಿಮರ ಸಾಕ್ಷರತೆ ಪ್ರಮಾಣ ಕಡಿಮೆಯಾಗಿದೆ.

## ೬.೫. ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಪರಿಸರ

ಮುಸ್ಲಿಮರು ಜೀವಿಸುತ್ತಿರುವ ಪ್ರದೇಶವು ಒಂದು ಪ್ರಮುಖ ಸಾಮಾಜಿಕ ನೆಲೆಯಾಗಿದೆ. ಒಂದು ಪರಿಸರದ ಶೈಕ್ಷಣಿಕ ಸಂಗತಿಗಳು ಒಂದು ಸಮುದಾಯವನ್ನು ಸಕಾರಾತ್ಮಕವಾಗಿ ಪ್ರಭಾವಿಸುತ್ತವೆ. ಸಾಕ್ಷರತೆಯು ಒಂದು ಪ್ರದೇಶದ ಶೈಕ್ಷಣಿಕ ಸ್ಥಿತಿಯನ್ನು ನಿರ್ಧರಿಸುವ ಸೂಚಿಯಾಗಿದ್ದು, ಸಾಕ್ಷರತೆಯು ಉಪಕರಣವಾದಿ ಹಾಗೂ ಅಂತಸ್ಥವಾದಿ ಗುಣಗಳನ್ನು ಹೊಂದಿರುತ್ತದೆ. ಬೆಳಗಾವಿ ಜಿಲ್ಲೆಯ ಒಟ್ಟು ಸಾಕ್ಷರತೆಯು ಶೇ.೭೩.೪೮ ರಷ್ಟಿದ್ದು ಅದರಲ್ಲಿ ಶೇ.೮೨.೨೦ ರಷ್ಟು ಪುರುಷ ಸಾಕ್ಷರತೆ ಮತ್ತು ಶೇ.೬೪.೫೮ ರಷ್ಟು ಮಹಿಳೆಯರು ಸಾಕ್ಷರರಾಗಿದ್ದಾರೆ. ಬೆಳಗಾವಿ ನಗರ ಪ್ರದೇಶದಲ್ಲಿ ಶೇ.೮೯.೮೨ ರಷ್ಟು ಸಾಕ್ಷರತೆ ಇದ್ದು, ಅದರಲ್ಲಿ ಶೇ ೯೩.೭೮ ರಷ್ಟು ಪುರುಷರ ಸಾಕ್ಷರತೆ ಮತ್ತು ಶೇ. ೮೫.೮೪ ರಷ್ಟು ಮಹಿಳೆಯರ ಸಾಕ್ಷರತೆ ಕಂಡುಬರುತ್ತದೆ. ಇತರೆ ಜಿಲ್ಲೆಗಳಿಗೆ ಹೋಲಿಸಿದರೆ, ಬೆಳಗಾವಿಯ ಸಾಮಾನ್ಯ ಸಮುದಾಯಗಳ ಸಾಕ್ಷರತೆಯ ಪ್ರಮಾಣವು ಕಡಿಮೆ ಕಂಡುಬರುತ್ತದೆ. ಇದರ ಪ್ರಮುಖ ಕಾರಣ ಮರಾಠಿ ಭಾಷೆಯ ಪ್ರಾಭಲ್ಯ. ಮರಾಠಿ ಅಧಿಕಾರಿಗಳು ಮತ್ತು ಮರಾಠಿ ಮುಖಂಡರ ಪ್ರಾಬಲ್ಯದಿಂದಾಗಿ ಕನ್ನಡ ಮಾತೃಭಾಷೆ ಸಮೃದ್ಧವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಈ ಭಾಗದಲ್ಲಿ ವೀರಶೈವ ಮಠಗಳೇ ಸ್ವಲ್ಪಮಟ್ಟಿಗೆ ಕನ್ನಡವನ್ನು ಜೀವಂತವಾಗಿಟ್ಟಿದ್ದವು. ಇಂದಿಗೂ ಈ ಭಾಗದಲ್ಲಿ ಮರಾಠಿ ಪ್ರಭಾವಿತ ಕನ್ನಡವೆಂದು, ಕನ್ನಡ ಪ್ರಭಾವಿತ ಮರಾಠಿ ಎಂದು ಗುರುತಿಸಲಾಗುತ್ತದೆ. ಅಷ್ಟರ ಮಟ್ಟಿಗೆ ಮರಾಠಿ ಭಾಷೆಯ ಪ್ರಾಭಲ್ಯ ಕನ್ನಡದಲ್ಲಿ ಅಂತರ್ಗತವಾಗಿದೆ. ಈ ಕಾರಣಕ್ಕಾಗಿಯೇ ಬೆಳಗಾವಿ ಮಹಾರಾಷ್ಟ್ರದ ಭಾಗ ಎನ್ನುವ ಸಂಘರ್ಷ ದಿನನಿತ್ಯದ ವಿದ್ಯಾಮಾನವಾಗಿದೆ. ಕನ್ನಡ ಭಾಷೆಗೆ ನೀಡಬೇಕಾದ ಆದ್ಯತೆ, ಅಭಿವೃದ್ಧಿ ಮತ್ತು ಗಡಿನಾಡ ಕನ್ನಡಿಗರು ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನ ಮಾಡಿ ಗೋಕಾಕ ವರದಿ, ಡಾ.ಹೆಚ್. ನರಸಿಂಹಯ್ಯ ವರದಿ, ಡಾ. ಸರೋಜಿನಿ ಮಹಿಷಿ ವರದಿ, ಚಂದರಗಿ ಸಮಿತಿ ವರದಿ, ರಾಜಾರಾಮಣ್ಣ ವರದಿ, ಬರಗೂರು ರಾಮಚಂದ್ರಪ್ಪ ವರದಿಗಳು ಸುಧಾರಣೆಗಾಗಿ ಶಿಫಾರಸ್ಸು ಮಾಡಿದ್ದರೂ, ಬೆಳಗಾವಿ ನಗರದ ಸಾಕ್ಷರತೆಯ ವೇಗ ತೀವ್ರತೆಯನ್ನು ಪಡೆದಂತೆ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಮತ್ತು ನಗರ ಪ್ರದೇಶದ ಸಾಕ್ಷರತೆ ಪ್ರಮಾಣ ನಿರೀಕ್ಷಿತ ಗುರಿಯನ್ನು ತಲುಪಿಲ್ಲ. ನಗರ ಮತ್ತು ಗ್ರಾಮೀಣ ಭಾಗದ ಸಾಕ್ಷರತೆಯ ನಡುವೆ ಅಂತರಗಳು ಇಂದಿಗೂ ಜೀವಂತವಾಗಿವೆ. ಗಡಿನಾಡು ಶಾಲೆಗಳು ಮತ್ತು ಶಿಕ್ಷಣಕ್ಕೆ ಸಂಬಂಧಿಸಿದಂತೆ ಸರ್ಕಾರ ವಿವಿಧ ಆಯೋಗಗಳನ್ನು ರಚಿಸಿ ಶಿಫಾರಸ್ಸುಗಳನ್ನು ಪಡೆದುಕೊಂಡಿದೆ. ಆದರೆ ಕರ್ನಾಟಕ ಸರ್ಕಾರ ಮತ್ತು ಅಲ್ಪಸಂಖ್ಯಾತ ಆಯೋಗ ಮುಸ್ಲಿಮರ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಯಾವುದೇ ವಿಶೇಷ ಆಯೋಗವನ್ನು ರಚಿಸಿಲ್ಲ. ೧೯೯೪ ರ ರೆಹಮಾನ್‌ಖಾನ್ ವರದಿ ಮುಸ್ಲಿಮರ ಸಮಾಜೋ-

ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳ ಮೇಲೆ ಬೆಳಕು ಚೆಲ್ಲಿದೆ. ೧೯೯೫ ರ ನಂತರ ಮುಸ್ಲಿಮರ ಸ್ಥಿತಿಗಳನ್ನು ಅಧ್ಯಯನ ಮಾಡಲು ಸರ್ಕಾರ ಮತ್ತು ಆಯೋಗ ಕ್ರಮಗಳನ್ನು ಕೈಗೊಂಡಿಲ್ಲ. ಇದು ಮುಸ್ಲಿಮರ ಸ್ಥಿತಿಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ದೊಡ್ಡ ಕಂದರ ಏರ್ಪಟ್ಟಿದೆ.

### ೬.೬. ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸಂಪನ್ಮೂಲಗಳು

ಒಂದು ಪ್ರದೇಶದ ಸಾಕ್ಷರತೆಯನ್ನು ನಿರ್ಧರಿಸುವಲ್ಲಿ ಶೈಕ್ಷಣಿಕ ಸೌಲಭ್ಯಗಳಾದ ಶಾಲೆಗಳು, ಶಿಕ್ಷಕರ ಲಭ್ಯತೆ, ದಾಖಲಾತಿ ಪ್ರಮಾಣ ಪ್ರಮುಖ ಪಾತ್ರವಹಿಸುತ್ತವೆ. ಬೆಳಗಾವಿ ಜಿಲ್ಲೆಯು ೧,೮೧೯ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿವೆ. ಅವುಗಳಲ್ಲಿ ಮಾಧ್ಯಮವಾರು ಶಾಲೆಗಳನ್ನು ನೋಡುವುದಾದರೆ ೨೫೬ ಕನ್ನಡ ಮಾಧ್ಯಮ, ೩೫ ಇಂಗ್ಲೀಷ್ ಮಾಧ್ಯಮ ಮತ್ತು ೫೬ ಉರ್ದು ಮಾಧ್ಯಮ ಶಾಲೆಗಳಿವೆ. ಈ ಶಾಲೆಗಳಲ್ಲಿ ಮಕ್ಕಳ ದಾಖಲಾತಿಯೂ ಉತ್ತಮವಾಗಿದೆ. ಬೆಳಗಾವಿ ನಗರದಲ್ಲಿ ಒಂದರಿಂದ ಹತ್ತನೆಯ ತರಗತಿಯವರೆಗೆ ಒಟ್ಟು ೩,೭೬,೪೨೧ವಿದ್ಯಾರ್ಥಿಗಳು ಶಾಲೆಗಳಿಗೆ ದಾಖಲಾಗಿದ್ದು, ಇವರಲ್ಲಿ ೧,೪೯,೮೬೮ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು, ೩೦,೭೦೪ ಪರಿಶಿಷ್ಟ ಜಾತಿ, ೨೫,೯೨೯ ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ೧,೦೨,೪೧೩ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದುಕೊಂಡಿದ್ದಾರೆ.ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ೭,೧೩೨ ಶಿಕ್ಷಕರು ಹಾಗೂ ಪ್ರೌಢ ಶಾಲೆಗಳಲ್ಲಿ ೧,೯೦೪ ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದಾರೆ. ಆದರೂ ೧,೦೨೮ ಶಿಕ್ಷಕರ ಕೊರತೆಯನ್ನು ಎದುರಿಸುತ್ತಿದೆ. ಬೆಳಗಾವಿ ಜಿಲ್ಲೆಯ ಶಾಲೆಗಳು ಶಿಕ್ಷಕರ ಕೊರತೆಯ ಜೊತೆಗೆ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವುದು ಕಂಡುಬರುತ್ತದೆ.ಜಿಲ್ಲೆಯ ಒಟ್ಟು ಶಾಲೆಗಳಲ್ಲಿ ೧೮ ಶಾಲೆಗಳಲ್ಲಿ ಗಂಡು ಮಕ್ಕಳ ಶೌಚಾಲಯವಿಲ್ಲ, ೧೭ ಶಾಲೆಗಳಲ್ಲಿ ಬಾಲಕಿಯರಿಗೆ ಪ್ರತ್ಯೇಕವಾದ ಶೌಚಾಲಯಗಳಿಲ್ಲ, ೧೧೬ ಶಾಲೆಗಳಲ್ಲಿ ವಿದ್ಯುತ್ ಸೌಲಭ್ಯವಿಲ್ಲ, ೪೯೮ ಶಾಲೆಗಳಿಗೆ ಆಟದ ಮೈದಾನವಿಲ್ಲ ಮತ್ತು ೩೯೩ ಶಾಲೆಗಳಿಗೆ ಶಾಲಾ ಆವರಣ ಗೋಡೆಯ ಕೊರತೆ ಇದೆ. ಭಾರತದ ಶಿಕ್ಷಣ ವ್ಯವಸ್ಥೆ ಗಟ್ಟಿಗೊಳ್ಳಬೇಕಾದರೆ ಶಾಲಾ ಶಿಕ್ಷಣವನ್ನು ಗಟ್ಟಿಗೊಳಿಸುವ ಅಗತ್ಯವಿದೆಯಂದು ವಾದಿಸಲಾಗುತ್ತಿದೆ. ಆದರೆ ಇಂದಿಗೂ ಶಾಲೆಗಳು ಕನಿಷ್ಟ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವುದು ಶೋಚನೀಯವಾಗಿದೆ.

### ೬.೭. ಬೆಳಗಾವಿ ಜಿಲ್ಲೆ ಮತ್ತು ಮುಸ್ಲಿಮರ ವಸತಿ ನಿಲಯಗಳು

ರಾಜ್ಯದಾದ್ಯಂತ ಸರ್ಕಾರ ಮುಸ್ಲಿಮರಿಗಾಗಿ ವಸತಿ ನಿಲಯಗಳನ್ನು ಸ್ಥಾಪಿಸಿದೆ. ಅದೇ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ ತಲಾ ಒಂದೊಂದು ಅಲ್ಪಸಂಖ್ಯಾತ ಬಾಲಕರ ಮತ್ತು ಬಾಲಕಿಯರ ಮೆಟ್ರಿಕ್ ಪೂರ್ವ ನಿಲಯಗಳಿವೆ. ಜಿಲ್ಲೆಯಲ್ಲಿ ಮೂರು ಮೆಟ್ರಿಕ್ ನಂತರದ ವಸತಿ ನಿಲಯಗಳಿದ್ದು,

ಎರಡು ಬಾಲಕರಿಗೆ ಮತ್ತು ಒಂದು ಬಾಲಕಿಯರಿಗೆ ಸೇರಿವೆ. ಇವುಗಳಲ್ಲಿ ನೂರು ಬಾಲಕರು ಮತ್ತು ಎಪ್ಪತ್ತೈದು ಬಾಲಕಿಯರು ವಾಸವಾಗಿದ್ದಾರೆ. ಆದರೆ ಏಳು ಅನುದಾನಿತ ನಿಲಯಗಳಲ್ಲಿ ಯಾವುದೂ ಬಾಲಕಿಯರಿಗೆ ಮೀಸಲಾಗಿಲ್ಲ. ಮುಸ್ಲಿಂ ಸಮುದಾಯದಲ್ಲಿ ಮಹಿಳಾ ಸಾಕ್ಷರತೆ ಕನಿಷ್ಠ ಮಟ್ಟದಲ್ಲಿದೆ. ಬಾಲಕಿಯರಿಗೆ ವಸತಿ ಶಾಲೆಗಳಂತಹ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡದಿದ್ದಲ್ಲಿ ಅವರ ಶೈಕ್ಷಣಿಕ ಜೀವನದ ಮೇಲೆ ನಕಾರಾತ್ಮಕ ಪರಿಣಾಮ ಬೀರುವ ಸಾಧ್ಯತೆಗಳಿವೆ.

### ೬.೮. ಬೆಳಗಾವಿಯ ಮುಸ್ಲಿಮರು ಮತ್ತು ಶಿಕ್ಷಣ ಪರಿಸರ

ಬೆಳಗಾವಿಯ ಮುಸ್ಲಿಮರ ಪರಿಸರದಲ್ಲಿ ಒಟ್ಟು ೪೪,೫೮೨ ಮುಸ್ಲಿಂ ವಿದ್ಯಾರ್ಥಿಗಳು ವಿವಿಧ ಶಾಲೆ ಮತ್ತು ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು, ಅದರಲ್ಲಿ ೨೨,೩೨೧ ಬಾಲಕರು, ೨೨,೨೬೧ ಬಾಲಕಿಯರಾಗಿದ್ದಾರೆ. ದುರಂತವೆಂದರೆ ಮುಸ್ಲಿಂ ಬಾಲಕಿಯರ ಸಂಖ್ಯೆ ಬಾಲಕರಿಗಿಂತ ಕಡಿಮೆಯಾಗಿದೆ. ಇಂದಿಗೂ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣ ಕಡಿಮೆಯಾಗುತ್ತಿರಲು ಇದು ಪ್ರಮುಖವಾದ ಕಾರಣವಾಗಿದೆ. ಮಾತೃಭಾಷೆಯಲ್ಲಿ ಶಿಕ್ಷಣ ದೊರೆಯಬೇಕೆಂಬ ಹಿನ್ನೆಲೆಯಲ್ಲಿ ಸರ್ಕಾರ ಉರ್ದು ಮಾಧ್ಯಮ ಶಾಲೆಗಳನ್ನು ಸ್ಥಾಪಿಸಿದೆ. ಉರ್ದು ಶಾಲೆಯಗಳಲ್ಲಿ ಒಟ್ಟು ೧೨,೧೩೭ ಮುಸ್ಲಿಂ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ, ಅದರಲ್ಲಿ ೮,೪೮೬ ಬಾಲಕಿಯರಿದ್ದಾರೆ. ಅನುದಾನಿತ ಶಾಲೆಗಳಲ್ಲಿ ಒಟ್ಟು ೩,೪೬೫ ಮುಸ್ಲಿಂ ವಿದ್ಯಾರ್ಥಿಗಳಿದ್ದು ಅವರಲ್ಲಿ ೨,೪೭೬ ಮುಸ್ಲಿಂ ಬಾಲಕಿಯರು, ಉರ್ದು ಅನುದಾನಿತ ಶಾಲೆಗಳಲ್ಲಿ ಒಟ್ಟು ೨,೯೫೬ ಮುಸ್ಲಿಂ ವಿದ್ಯಾರ್ಥಿಗಳಿದ್ದು ಅದರಲ್ಲಿ ೧,೮೮೧ ಬಾಲಕೀಯರು ವ್ಯಾಸಾಂಗ ಮಾಡುತ್ತಿದ್ದಾರೆ. ಇಂಗ್ಲೀಷ್ ಮಾಧ್ಯಮ ಶಾಲೆಗಳಲ್ಲಿ ಮುಸ್ಲಿಂ ಬಾಲಕರೇ ಹೆಚ್ಚಾಗಿ ಅಧ್ಯಯನ ಮಾಡುತ್ತಿದ್ದು, ಉರ್ದು ಮಾಧ್ಯಮ ಶಾಲೆಗಳಲ್ಲಿ ಮಾತ್ರ ಮುಸ್ಲಿಂ ಬಾಲಕಿಯರೇ ಅಧಿಕ ಸಂಖ್ಯೆಯಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಇಂದು ಇಂಗ್ಲೀಷ್ ಮಾಧ್ಯಮದ ಶಿಕ್ಷಣ ದುಬಾರಿಯಾಗುತ್ತಿದೆ. ದುಬಾರಿ ಶಿಕ್ಷಣ ಬಾಲಕಿಯರಿಗೆ ಅಗತ್ಯವಿಲ್ಲವೆನ್ನುವ ನಿಲುವಿನ ಹಿನ್ನೆಲೆಯಲ್ಲಿ ಮುಸ್ಲಿಂ ಪೋಷಕರು ಬಾಲಕರನ್ನು ಹೆಚ್ಚಾಗಿ ಇಂಗ್ಲೀಷ್ ಮಾಧ್ಯಮದಲ್ಲಿ ಬಾಲಕಿಯರನ್ನು ಉರ್ದು ಮಾಧ್ಯಮ ಶಾಲೆಗಳಿಗೆ ಕಳುಹಿಸುತ್ತಿರುವ ಸಾಧ್ಯತೆಗಳಿವೆ.

### ೬.೯. ಶಿಕ್ಷಣ ಮತ್ತು ದುಡಿಮೆಯ ಬಗ್ಗೆ ಮುಸ್ಲಿಂ ಬಾಲಕಿಯರ ಸಕಾರಾತ್ಮಕ ನಿಲುವುಗಳು

ಅಧ್ಯಯನ ಕಂಡುಕೊಂಡಿರುವಂತೆ ಶೇ.೯೦ ರಷ್ಟು ಮುಸ್ಲಿಂ ಬಾಲಕಿಯರು ಪದವಿ ಮತ್ತು ಸ್ನಾತಕೋತ್ತರ ಪದವಿ ಪಡೆಯುವ ಹಂಬಲ ವ್ಯಕ್ತಪಡಿಸುತ್ತಾರೆ. ಶೇ.೮೫.೨ ರಷ್ಟು ಬಾಲಕಿಯರು ವಿದ್ಯಾಭ್ಯಾಸದ ನಂತರ ಉದ್ಯೋಗ ಪಡೆಯುವ ಮತ್ತು ಹೊರಗಡೆ ದುಡಿಮೆಯಲ್ಲಿ ಆಸಕ್ತಿ

ವ್ಯಕ್ತಪಡಿಸುತ್ತಾರೆ. ಮುಸ್ಲಿಂ ಮಹಿಳೆಯರು ಉನ್ನತ ಶಿಕ್ಷಣ ಪಡೆಯುವುದಿಲ್ಲ, ಮುಖ್ಯವಾಹಿನಿಗೆ ಸೇರ್ಪಡೆಗೊಳ್ಳುವುದಿಲ್ಲ ಎಂಬ ವಾದವನ್ನು ಅಧ್ಯಯನದ ಫಲಿತಗಳು ಬೆಂಬಲಿಸುವುದಿಲ್ಲ.

## ೬.೧೦. ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ಉದ್ಯೋಗದ ಬಗ್ಗೆ ಮುಸ್ಲಿಂ ಬಾಲಕಿಯರ ಬದಲಾಗುತ್ತಿರುವ ಮನೋಭಾವನೆಗಳು

ಹೆಣ್ಣು ಮಕ್ಕಳ ಸಾಕ್ಷರತೆ ಮತ್ತು ಶಿಕ್ಷಣದ ಮಟ್ಟ ಹೆಚ್ಚಾಗಲು ಬಾಲಕಿಯರಲ್ಲಿ ಶಿಕ್ಷಣದ ಅಪೇಕ್ಷೆ ಮುಖ್ಯವಾಗುತ್ತದೆ. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಶಿಕ್ಷಣದ ಅಪೇಕ್ಷೆ, ಉನ್ನತ ಶಿಕ್ಷಣದ ಬಗ್ಗೆ ಅವರ ಅಭಿಪ್ರಾಯ, ಉದ್ಯೋಗ ಮತ್ತು ಹೊರಗಡೆ ದುಡಿಮೆಯ ಬಗ್ಗೆ ನಿಲುವುಗಳು ಕಂಡುಕೊಳ್ಳಲಾಗಿದೆ. ಅಧ್ಯಯನದ ಫಲಿತಗಳು ಹೇಳುವಂತೆ ಪಿಯುಸಿ ವ್ಯಾಸಾಂಗ ಮಾಡುತ್ತಿರುವ ಒಟ್ಟು ೩೦ ಬಾಲಕಿಯರಲ್ಲಿ ಶೇ.೯೦ ರಷ್ಟು ಶಿಕ್ಷಣ ಪಡೆಯುವ ಬಗ್ಗೆ, ಶೇ.೮೩.೩ ರಷ್ಟು ಬಾಲಕಿಯರು ಉನ್ನತ ವ್ಯಾಸಾಂಗದ ಬಗ್ಗೆ ಮತ್ತು ಶೇ.೭೦ ರಷ್ಟು ವಿದ್ಯಾರ್ಥಿನಿಯರು ಹೊರಗಡೆ ಉದ್ಯೋಗ ನಿರ್ವಹಿಸುವ ಬಗ್ಗೆ ಒಲವು ವ್ಯಕ್ತಪಡಿಸುತ್ತಾರೆ. ಪದವಿ ಅಧ್ಯಯನ ಮಾಡುತ್ತಿರುವ ಒಟ್ಟು ೨೦ ಬಾಲಕಿಯರಲ್ಲಿ ಶೇ.೯೦ ರಷ್ಟು ಶಿಕ್ಷಣ ಪಡೆಯುವ ಬಗ್ಗೆ, ಶೇ.೯೫ ರಷ್ಟು ಉನ್ನತ ಶಿಕ್ಷಣ ಪಡೆಯುವ ಬಗ್ಗೆ ಮತ್ತು ಶೇ.೯೫ ರಷ್ಟು ಮನೆಯ ಹೊರಗಿನ ದುಡಿಮೆಯಲ್ಲಿ ನಿರತರಾಗುವ ಬಗ್ಗೆ ಒಲವು ವ್ಯಕ್ತಪಡಿಸುತ್ತಾರೆ. ತಾಂತ್ರಿಕ ಶಿಕ್ಷಣ ಪಡೆಯುತ್ತಿರುವ ೧೨ ಮಹಿಳೆಯರಲ್ಲಿ ಶೇ.೯೧.೬ ರಷ್ಟು ಶಿಕ್ಷಣದ ಬಗ್ಗೆ, ಶೇ.೯೧.೬ ರಷ್ಟು ಉನ್ನತ ಶಿಕ್ಷಣ ಪಡೆಯುವ ಬಗ್ಗೆ ಮತ್ತು ಶೇ.೧೦೦ ರಷ್ಟು ಮಹಿಳೆಯರು ಉದ್ಯೋಗದ ಬಗ್ಗೆ ಒಲವು ವ್ಯಕ್ತಪಡಿಸುತ್ತಾರೆ. ಅದೇ ಪ್ರಕಾರ ಸ್ನಾತಕೋತ್ತರ ಶಿಕ್ಷಣ ಪಡೆಯುತ್ತಿರುವ ೬ ಮಹಿಳೆಯರಲ್ಲಿ ಶೇ.೧೦೦ ರಷ್ಟು ಮಹಿಳೆಯರು ಮುಂದಿನ ಶಿಕ್ಷಣ ಪಡೆಯುವ ಅಪೇಕ್ಷೆ, ಶೇ.೧೦೦ ರಷ್ಟು ಮಹಿಳೆಯರು ಉನ್ನತ ಶಿಕ್ಷಣದ ಅಪೇಕ್ಷೆ, ಶೇ.೧೦೦ ರಷ್ಟು ಮಹಿಳೆಯರು ಹೊರಗಡೆ ದುಡಿಮೆಯ ಬಗ್ಗೆ ಒಲವು ವ್ಯಕ್ತಪಡಿಸುತ್ತಾರೆ. ಬೆಳಗಾವಿಯ ಮುಸ್ಲಿಂ ಮಹಿಳೆಯರಲ್ಲಿ ಶೇ.೯೧.೨ ರಷ್ಟು ಮಹಿಳೆಯರು ಶಿಕ್ಷಣದ ಬಗ್ಗೆ, ಶೇ.೯೦ ರಷ್ಟು ಮಹಿಳೆಯರು ಉನ್ನತ ಶಿಕ್ಷಣ ಪಡೆಯುವ ಬಗ್ಗೆ ಮತ್ತು ಶೇ.೮೫.೨ ರಷ್ಟು ಮಹಿಳೆಯರು ಹೊರಗಡೆ ಉದ್ಯೋಗದ ಮೂಲಕ ಸ್ವಾವಲಂಬಿಗಳಾಗಬೇಕೆಂದು ಬಯಸುತ್ತಾರೆ. ಬೆಳಗಾವಿಯ ಬಹುತೇಕ ಮಹಿಳೆಯರು ಶಿಕ್ಷಣ, ಉನ್ನತ ಶಿಕ್ಷಣ, ಮತ್ತು ದುಡಿಮೆಯ ಬಗ್ಗೆ ಸಕಾರಾತ್ಮಕ ಮನೋಭಾವನೆ ಹೊಂದಿದ್ದಾರೆ.

## ೬.೧೧. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ನಿಲುವುಗಳು

ಅಧ್ಯಯನದ ಫಲಿತಗಳು ಕಂಡುಕೊಂಡಿರುವಂತೆ ಶೇ.೭೮.೮ ರಷ್ಟು ಪೋಷಕರು ಹೆಣ್ಣು ಮಕ್ಕಳ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಕನಿಷ್ಟ ಸಂಖ್ಯೆಯ ಅಂದರೆ ಶೇ.೨೨.೨ ರಷ್ಟು ಪೋಷಕರು

ಮಾತ್ರ ಹೆಣ್ಣು ಮಕ್ಕಳ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಅಂದರೆ ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಮರು ಹೆಣ್ಣು ಮಕ್ಕಳ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮುಸ್ಲಿಂ ಸಮುದಾಯದಲ್ಲಿ ಪೋಷಕರು ಹೆಣ್ಣು ಮಕ್ಕಳ ಶಿಕ್ಷಣವನ್ನು ಬೆಂಬಲಿಸುವುದಿಲ್ಲ ಎನ್ನುವ ವಾದವನ್ನು ಅಧ್ಯಯನ ತಳ್ಳಿಹಾಕುತ್ತದೆ.

### ೬.೧೨. ಪೋಷಕರ ಶೈಕ್ಷಣಿಕ ನೆಲೆಯಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಬೆಂಬಲ

ಬೆಳಗಾವಿ ನಗರದ ಪ್ರಾಥಮಿಕ ಶಿಕ್ಷಣವನ್ನು ಪಡೆದ ಒಟ್ಟು ಮುಸ್ಲಿಂ ಪೋಷಕರಲ್ಲಿ ಶೇ.೮೦ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಆದರೆ ಶೇ.೨೦ ರಷ್ಟು ಕುಟುಂಬದ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಪ್ರೌಢ ಶಿಕ್ಷಣವನ್ನು ಪಡೆದ ಒಟ್ಟು ಕುಟುಂಬಗಳಲ್ಲಿ ಶೇ.೮೫.೭ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸಿದರೆ ಶೇ.೧೪.೩ ರಷ್ಟು ಪೋಷಕರು ಬೆಂಬಲಿಸುವುದಿಲ್ಲ. ಬೆಳಗಾವಿ ನಗರದ ಪದವಿ ಪಡೆದ ಒಟ್ಟು ಮುಸ್ಲಿಂ ಪೋಷಕರಲ್ಲಿ ಶೇ.೯೪.೧ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸಿದರೆ ಕೇವಲ ಶೇ.೫.೯ ರಷ್ಟು ಪೋಷಕರು ಮಾತ್ರ ಮಹಿಳಾ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಆದರೆ ಸ್ನಾತಕೋತ್ತರ ಶಿಕ್ಷಣ ಪಡೆದ ಪೋಷಕರಲ್ಲಿ ಶೇ.೧೦೦ ರಷ್ಟು ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಾರೆ. ಕ್ಷೇತ್ರ ಅಧ್ಯಯನದ ಫಲಿತಗಳು ಹೇಳುವ ಪ್ರಕಾರ ಬೆಳಗಾವಿ ನಗರದ ಅತ್ಯಧಿಕ ಮುಸ್ಲಿಂ ಪೋಷಕರು ಮಹಿಳಾ ಶಿಕ್ಷಣವನ್ನು ಬೆಂಬಲಿಸುತ್ತಿದ್ದಾರೆ. ಶೈಕ್ಷಣಿಕ ನೆಲೆಯಲ್ಲಿ ಕಂಡುಬರುವ ಅತ್ಯಂತ ಕುತೂಹಲಕಾರಿ ಸಂಗತಿಯಂದರೆ ಕಡಿಮೆ ಶೈಕ್ಷಣಿಕ ಮಟ್ಟ ಹೊಂದಿರುವ ಪೋಷಕರು ಮಹಿಳಾ ಶಿಕ್ಷಣವನ್ನು ಕಡಿಮೆ ಬೆಂಬಲಿಸುತ್ತಾರೆ. ಅತೀ ಹೆಚ್ಚು ಶೈಕ್ಷಣಿಕ ಮಟ್ಟ ಹೊಂದಿರುವ ಪೋಷಕರು ಮಹಿಳಾ ಶಿಕ್ಷಣವನ್ನು ಹೆಚ್ಚಾಗಿ ಬೆಂಬಲಿಸುವುದು ಕಂಡುಬಂದಿದೆ. ಅಂದರೆ ಬೆಳಗಾವಿ ನಗರದ ಮುಸ್ಲಿಂ ಕುಟುಂಬದ ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಮಹಿಳಾ ಶಿಕ್ಷಣವನ್ನು ಬೆಂಬಲಿಸುವವರ ಪ್ರಮಾಣವೂ ಹೆಚ್ಚಾಗುತ್ತದೆ. ಪೋಷಕರ ಶೈಕ್ಷಣಿಕ ನೆಲೆಗಳು ಮಹಿಳಾ ಶಿಕ್ಷಣಕ್ಕೆ ಸಕಾರಾತ್ಮಕವಾಗಿ ಪರಿವರ್ತನೆಯಾಗುತ್ತಿವೆ.

### ೬.೧೩. ಬೆಳಗಾವಿ ನಗರದ ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ ಮತ್ತು ಇಸ್ಲಾಂ ಧರ್ಮ

ಬೆಳಗಾವಿ ನಗರದ ಒಟ್ಟು ಮುಸ್ಲಿಮರಲ್ಲಿ ಶೇ.೧೧.೧ ರಷ್ಟು ಪೋಷಕರು ಇಸ್ಲಾಂ ಧರ್ಮವು ಮಹಿಳೆಯರಿಗೆ ಶಿಕ್ಷಣವನ್ನು ನಿರ್ಬಂಧಿಸಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಒಟ್ಟು ಪೋಷಕರಲ್ಲಿ ಶೇ.೫೯ ರಷ್ಟು ಪೋಷಕರು ನಿರ್ಬಂಧಿಸಿಲ್ಲ ಎನ್ನುವ ಖಚಿತ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಕನಿಷ್ಠ ಸಂಖ್ಯೆಯ ಶೇ.೮.೫ ರಷ್ಟು ಪೋಷಕರು ಗೊತ್ತಿಲ್ಲ ಎನ್ನುವ

ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಶೇ.೭.೭ ರಷ್ಟು ಪೋಷಕರು ಇಸ್ಲಾಂ ಧರ್ಮವು ಮಹಿಳೆಯರಿಗೆ ಆಧುನಿಕ ಶಿಕ್ಷಣ ಪಡೆಯಲು ಮಾತ್ರ ನಿರ್ಬಂಧ ವಿಧಿಸಿದೆ ಎಂದು ಮತ್ತು ಶೇ.೧೩.೭ ರಷ್ಟು ಪೋಷಕರು ಮಹಿಳೆಯರಿಗೆ ಉನ್ನತ ಶಿಕ್ಷಣವನ್ನು ಮಾತ್ರ ನಿರ್ಬಂಧಿಸಿದೆ ಎಂದು ಅಭಿಪ್ರಾಯಪಡುತ್ತಾರೆ. ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಪೋಷಕರಿಗೆ ಇಸ್ಲಾಂ ಧರ್ಮವು ಮಹಿಳಾ ಶಿಕ್ಷಣವನ್ನು ನಿಷೇಧಿಸಿಲ್ಲ ಎನ್ನುವ ಅರಿವು ಇದೆ. ಆದರೆ ಕಡಿಮೆ ಸಂಖ್ಯೆಯಷ್ಟು ಮುಸ್ಲಿಮರು ಮಾತ್ರ ಇಸ್ಲಾಂ ಧರ್ಮವು ಮಹಿಳೆಯರಿಗೆ ಆಧುನಿಕ ಮತ್ತು ಉನ್ನತ ಶಿಕ್ಷಣವನ್ನು ನಿಷೇಧಿಸಿದೆ ಎನ್ನುವ ತಪ್ಪು ಗ್ರಹಿಕೆಯಲ್ಲಿ ಉಳಿದುಕೊಂಡಿದ್ದಾರೆ. ಇಂದಿನ ಸಾರ್ವತ್ರಿಕ ಶಿಕ್ಷಣದಿಂದಾಗಿ ಮುಸ್ಲಿಂ ಸಮುದಾಯದಲ್ಲೂ ಸಾಕ್ಷರತೆ ಪ್ರಮಾಣ ಹೆಚ್ಚಾಗುತ್ತಿದೆ. ಸಾಕ್ಷರತೆ ಪ್ರಮಾಣದ ಹೆಚ್ಚಳದಿಂದಾಗಿ ಕಂದಾಚಾರಗಳು, ಮೂಢನಂಬಿಕೆಗಳು ಮತ್ತು ಪೂರ್ವಗ್ರಹಗಳು ದೂರವಾಗುತ್ತವೆ ಎಂದು ಗ್ರಹಿಸಲಾಗುತ್ತಿದೆ. ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಣ ಮತ್ತು ಇಸ್ಲಾಂ ಧರ್ಮದ ನಡುವಿನ ತಪ್ಪು ಗ್ರಹಿಕೆಯನ್ನು ಕಂಡುಕೊಳ್ಳಲಾಗಿದೆ. ಅಧ್ಯಯನದ ಫಲಿತಗಳು ಹೇಳುವಂತೆ ಬೆಳಗಾವಿ ನಗರದ ಮುಸ್ಲಿಮರಲ್ಲಿ ಶಿಕ್ಷಣದ ಮಟ್ಟ ಹೆಚ್ಚಾದಂತೆ ಶಿಕ್ಷಣ ಮತ್ತು ಇಸ್ಲಾಂ ಧರ್ಮದ ನಡುವಿನ ತಪ್ಪು ಗ್ರಹಿಕೆಗಳು ದೂರವಾಗುತ್ತಿವೆ.

### ೬.೧೪. ಬೆಳಗಾವಿ ಮುಸ್ಲಿಂ ಕುಟುಂಬದ ಮುಖ್ಯಸ್ಥನ ಶಿಕ್ಷಣ ಮಟ್ಟ ಮತ್ತು ಪ್ರಭಾವ

ಕುಟುಂಬದ ಮುಖ್ಯಸ್ಥನು ಶಿಕ್ಷಣ ಪಡೆದರೆ ಅದು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಪ್ರಭಾವ ಬೀರುತ್ತದೆ ಎನ್ನುವುದು ಒಂದು ವಾದ. ಅಧ್ಯಯನದ ಫಲಿತಗಳು ಹೇಳುವಂತೆ ಬೆಳಗಾವಿ ನಗರದಲ್ಲಿ ೬೮ ಮುಸ್ಲಿಂ ಬಾಲಕಿಯರು ಪ್ರಾಥಮಿಕ ಶಿಕ್ಷಣದ ನಂತರ ವಿವಿಧ ವರ್ಗಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದಾರೆ. ಅನಕ್ಷರಸ್ಥ ಕುಟುಂಬಗಳಿಗೆ ಸೇರಿದ ೦೯ ಬಾಲಕಿಯರಲ್ಲಿ ಶೇ.೬೬.೭ ರಷ್ಟು ಬಾಲಕಿಯರು ಮತ್ತು ಶೇ.೩೩.೩ ರಷ್ಟು ಬಾಲಕಿಯರು ಕ್ರಮವಾಗಿ ಪಿಯುಸಿ ಮತ್ತು ಪದವಿ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿದ್ದು, ತಾಂತ್ರಿಕ ಮತ್ತು ಸ್ನಾತಕ ತರಗತಿಗಳಲ್ಲಿ ಓದುವ ಬಾಲಕಿಯರು ಕಂಡುಬರುವುದಿಲ್ಲ. ಪ್ರಾಥಮಿಕ ಹಂತದ ಶಿಕ್ಷಣ ಪಡೆದ ಕುಟುಂಬಗಳ ೧೨ ಬಾಲಕಿಯರಲ್ಲಿ ಶೇ.೫೮.೩ ರಷ್ಟು ಪಿಯುಸಿ, ಶೇ.೩೩.೪ ರಷ್ಟು ಪದವಿ ತರಗತಿಗಳಲ್ಲಿ ಮತ್ತು ಶೇ.೮.೩ ರಷ್ಟು ಬಾಲಕಿಯರು ತಾಂತ್ರಿಕ ಶಿಕ್ಷಣವನ್ನು ಪಡೆಯುತ್ತಿದ್ದು, ಸ್ನಾತಕ ಪದವಿ ಓದುವ ಬಾಲಕಿಯರು ಕಂಡುಬರುವುದಿಲ್ಲ.

ಪ್ರೌಢ ಶಿಕ್ಷಣ ಪಡೆದ ಕುಟುಂಬಗಳ ೧೫ ಬಾಲಕಿಯರಲ್ಲಿ ಶೇ.೫೩.೩ ರಷ್ಟು ಪಿಯುಸಿ, ಶೇ.೨೬.೭ ರಷ್ಟು ಪದವಿ ತರಗತಿಗಳಲ್ಲಿ, ಶೇ.೧೩.೩ ರಷ್ಟು ತಾಂತ್ರಿಕ ಶಿಕ್ಷಣದಲ್ಲಿ ಮತ್ತು ಶೇ.೬.೭ ರಷ್ಟು ಸ್ನಾತಕ ಪದವಿಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಪದವಿ ಹಂತದ ಶಿಕ್ಷಣ ಪಡೆದ

ಕುಟುಂಬಗಳ ೨೩ ಬಾಲಕಿಯರಲ್ಲಿ ಶೇ.೩೪.೮ ರಷ್ಟು ಪಿಯುಸಿ, ಶೇ.೩೪.೮ ರಷ್ಟು ಪದವಿ, ಶೇ.೨೧.೭ ರಷ್ಟು ತಾಂತ್ರಿಕ ಶಿಕ್ಷಣ ಮತ್ತು ಶೇ.೮.೭ ರಷ್ಟು ಬಾಲಕಿಯರು ಸ್ನಾತಕ ಪದವಿಗಳನ್ನು ಪಡೆಯುತ್ತಿದ್ದಾರೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ಸ್ನಾತಕೋತ್ತರ ಪದವಿ ಪಡೆದ ಕುಟುಂಬಗಳ ೯ ಬಾಲಕಿಯರಲ್ಲಿ ಶೇ.೧೧.೧ ರಷ್ಟು ಪಿಯುಸಿ, ಶೇ.೧೧.೧ ರಷ್ಟು ಪದವಿ, ಶೇ.೪೪.೫ ರಷ್ಟು ತಾಂತ್ರಿಕ ಶಿಕ್ಷಣ ಮತ್ತು ಶೇ.೩೩.೩ ರಷ್ಟು ಬಾಲಕಿಯರು ಸ್ನಾತಕ ಪದವಿ ಪಡೆಯುತ್ತಿರುವುದು ಕಂಡುಬರುತ್ತದೆ. ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಅನಕ್ಷರಸ್ಥ ಮತ್ತು ಪ್ರಾಥಮಿಕ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಬಾಲಕಿಯರು ಕಂಡುಬರುವುದಿಲ್ಲ. ಆದರೆ ಪ್ರೌಢ ಶಿಕ್ಷಣದಿಂದ ಸ್ನಾತಕೋತ್ತರ ಪದವಿ ಪಡೆದ ಕುಟುಂಬಗಳಲ್ಲಿ ಉನ್ನತ ಹಂತದ ತಾಂತ್ರಿಕ ಮತ್ತು ಸ್ನಾತಕೋತ್ತರ ಪದವಿ ಪಡೆಯುತ್ತಿರುವ ಬಾಲಕಿಯರು ಕಂಡುಬರುತ್ತಾರೆ. ಬೆಳಗಾವಿ ನಗರದ ಕನಿಷ್ಠ ಶಿಕ್ಷಣ ಪಡೆದ ಮುಸ್ಲಿಂ ಕುಟುಂಬಗಳಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ಬಾಲಕಿಯರ ಸಂಖ್ಯೆ ಕಡಿಮೆ ಇದ್ದು, ಉನ್ನತ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಉನ್ನತ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರು ಹೆಚ್ಚಾಗಿ ಕಂಡುಬರುತ್ತಾರೆ. ದತ್ತಾಂಶಗಳು ಹೇಳುವ ಪ್ರಕಾರ ಕುಟುಂಬಗಳ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಉನ್ನತ ವ್ಯಾಸಾಂಗದಲ್ಲಿ ತೊಡಗಿರುವ ಬಾಲಕಿಯರ ಪ್ರಮಾಣ ಹೆಚ್ಚಾಗುತ್ತಿದೆ.

### ೬.೧೫. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರ ಸ್ಫೂರ್ತಿಯ ನೆಲೆಗಳು

ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳಲ್ಲಿ ಪೋಷಕರ ಶೈಕ್ಷಣಿಕ ಮಟ್ಟ ಹೆಚ್ಚಾದಂತೆ ಆ ಕುಟುಂಬಗಳಲ್ಲಿ ಪ್ರಾಥಮಿಕ ಶಿಕ್ಷಣದ ನಂತರ ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಮುಸ್ಲಿಂ ಬಾಲಕಿಯರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಮುಸ್ಲಿಂ ಬಾಲಕಿಯರು ಉನ್ನತ ತರಗತಿಗಳಲ್ಲಿ ವ್ಯಾಸಾಂಗ ಮಾಡಲು ಯಾರಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಅನಕ್ಷರಸ್ಥ ಕುಟುಂಬಗಳಲ್ಲಿ ಶೇ.೨೨.೩ ರಷ್ಟು ಬಾಲಕಿಯರು ತಂದೆಯಿಂದ, ಶೇ.೪೪.೪ ರಷ್ಟು ಬಾಲಕಿಯರು ತಾಯಿಯಿಂದ ಮತ್ತು ಶೇ.೩೩.೩ ರಷ್ಟು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಪ್ರಾಥಮಿಕ ಶಿಕ್ಷಣ ಪಡೆದ ಪೋಷಕರ ಕುಟುಂಬಗಳಲ್ಲಿ ಶೇ.೫೮.೩ ರಷ್ಟು ಬಾಲಕಿಯರು ತಂದೆಯಿಂದ, ಶೇ.೧೬.೭ ರಷ್ಟು ತಾಯಿಯಿಂದ, ಶೇ.೨೫ ರಷ್ಟು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಅದೇ ಪ್ರಕಾರ ಪ್ರೌಢ ಶಿಕ್ಷಣ ಪಡೆದ ಪೋಷಕರ ಕುಟುಂಬಗಳಲ್ಲಿ ಶೇ.೮೩.೪ ರಷ್ಟು ಬಾಲಕಿಯರು ತಂದೆಯಿಂದ, ಶೇ.೮.೩ ರಷ್ಟು ತಾಯಿಯಿಂದ ಮತ್ತು ಶೇ.೮.೩ ರಷ್ಟು ಶಿಕ್ಷಕರಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ. ಪದವಿ ಹಂತದ ಶಿಕ್ಷಣ ಪಡೆದ ಕುಟುಂಬದಲ್ಲಿ ಶೇ.೭೨ ರಷ್ಟು ಬಾಲಕಿಯರು ತಂದೆಯಿಂದ, ಶೇ.೧೨ ರಷ್ಟು

ತಾಯಿಯಿಂದ ಮತ್ತು ಶೇ.೧೬ ರಷ್ಟು ಶಿಕ್ಷಕರಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ. ಸ್ನಾತಕೋತ್ತರ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಶೇ.೭೦ ರಷ್ಟು ತಂದೆಯಿಂದ, ಶೇ.೩೦ ರಷ್ಟು ತಾಯಿಯಿಂದ ತಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ಸ್ಫೂರ್ತಿ ಪಡೆದಿದ್ದಾರೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಹೇಳುವ ಪ್ರಕಾರ ಒಟ್ಟು ಬಾಲಕಿಯರಲ್ಲಿ ಶೇ.೬೪.೭ ರಷ್ಟು ಬಾಲಕಿಯರು ತಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ತಂದೆಯಿಂದಲೇ ಸ್ಫೂರ್ತಿ ಪಡೆಯುತ್ತಾರೆ. ಶೇ.೧೯.೧ ರಷ್ಟು ತಾಯಿಯಿಂದ ಸ್ಫೂರ್ತಿ ಪಡೆಯುತ್ತಾರೆ ಮತ್ತು ಉಳಿದಂತೆ ಶೇ.೧೬.೨ ರಷ್ಟು ಬಾಲಕಿಯರು ಶಿಕ್ಷಕರಿಂದ ತಮ್ಮ ವಿದ್ಯಾಭ್ಯಾಸಕ್ಕೆ ಸ್ಫೂರ್ತಿ ಪಡೆಯುತ್ತಾರೆ. ಅಂದರೆ ಬೆಳಗಾವಿ ನಗರದ ಬಹುತೇಕ ಬಾಲಕಿಯರಿಗೆ ತಮ್ಮ ಉನ್ನತ ವಿದ್ಯಾಭ್ಯಾಸಕ್ಕೆ ತಂದೆಯ ಶಿಕ್ಷಣದ ಮಟ್ಟವೇ ಸ್ಫೂರ್ತಿಯಾಗಿದೆ. ಕ್ಷೇತ್ರ ಅಧ್ಯಯನದ ದತ್ತಾಂಶಗಳು ಹೇಳುವ ಮತ್ತೊಂದು ಅಸಕ್ತಿಕರ ಸಂಗತಿಯಂದರೆ ಅನಕ್ಷರಸ್ಥ ಮತ್ತು ಪ್ರಾಥಮಿಕ ಶಿಕ್ಷಣ ಪಡೆದ ಕುಟುಂಬಗಳಲ್ಲಿ ಪೋಷಕರ ಶಿಕ್ಷಣದ ಮಟ್ಟ ಉತ್ತಮವಾಗಿಲ್ಲವಾದ್ದರಿಂದ ಈ ಕುಟುಂಬದ ಬಾಲಕಿಯರು ಹೆಚ್ಚಾಗಿ ತಮ್ಮ ತಾಯಿ ಮತ್ತು ಶಿಕ್ಷಕರಿಂದ ತಮ್ಮ ಶಿಕ್ಷಣಕ್ಕೆ ಸ್ಫೂರ್ತಿ ಪಡೆಯುತ್ತಿದ್ದಾರೆ. ಆದರೆ ಪ್ರೌಢಶಿಕ್ಷಣ, ಪದವಿ ಶಿಕ್ಷಣ ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದ ಕುಟುಂಬಗಳಲ್ಲಿ ತಂದೆಯ ಶಿಕ್ಷಣದ ಉತ್ತಮವಾಗಿರುವುದರಿಂದ ತಂದೆಯೇ ಮುಸ್ಲಿಂ ಬಾಲಕಿಯರ ಶಿಕ್ಷಣಕ್ಕೆ ಸ್ಫೂರ್ತಿಯಾಗಿದ್ದಾರೆ. ಒಟ್ಟಾರೆ ದತ್ತಾಂಶಗಳು ಹೇಳುವ ಪ್ರಕಾರ ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ಉನ್ನತ ವ್ಯಾಸಾಂಗ ಪಡೆಯಲು ತಂದೆಯ ಶಿಕ್ಷಣವೇ ಪ್ರಮುಖ ಪ್ರಭಾವದ ಅಂಶವಾಗಿದೆ.

### ೬.೧೬. ಬೆಳಗಾವಿ ನಗರದ ಮುಸ್ಲಿಂ ಪೋಷಕರ ವೃತ್ತಿ ಮತ್ತು ಪ್ರಭಾವ

ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ತಂದೆಯ ವೃತ್ತಿಯೂ ಪ್ರಭಾವವನ್ನು ಬೀರಿದೆ. ಬೆಳಗಾವಿ ನಗರದ ಮುಸ್ಲಿಮರಲ್ಲಿ ೬೮ ಬಾಲಕಿಯರು ಉನ್ನತ ವ್ಯಾಸಾಂಗವನ್ನು ಮಾಡುತ್ತಿದ್ದು. ಅವರಲ್ಲಿ ಶೇ.೪.೪ರಷ್ಟು ಕೂಲಿ ಕಾರ್ಮಿಕರ ಕುಟುಂಬಗಳಿಗೆ ಸೇರಿದವರು, ಶೇ.೮.೮ ರಷ್ಟು ಸಣ್ಣ ವ್ಯಾಪಾರಿಗಳ ಕುಟುಂಬಕ್ಕೆ ಸೇರಿದವರು, ಶೇ.೨೦.೬ ಸ್ವಯಂ ಉದ್ಯೋಗ, ಕೈಗೊಂಡಿರುವ ಕುಟುಂಬಗಳಿಗೆ, ಶೇ.೩೮.೨ ರಷ್ಟು ಖಾಸಗಿ ಉದ್ಯೋಗ ಮಾಡುತ್ತಿರುವ ಕುಟುಂಬಗಳಿಗೆ ಮತ್ತು ಶೇ.೨೮ ರಷ್ಟು ಬಾಲಕಿಯರು ಸರ್ಕಾರಿ ಉದ್ಯೋಗ ಮಾಡುತ್ತಿರುವ ಕುಟುಂಬಗಳಿಗೆ ಸೇರಿದ್ದಾರೆ. ಅಧ್ಯಯನದ ಫಲಿತಗಳು ಹೇಳುವಂತೆ, ಬೆಳಗಾವಿ ನಗರದ ಮುಸ್ಲಿಂ ಕುಟುಂಬಗಳಲ್ಲಿ ಕೂಲಿ ಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಸ್ವಯಂ ಉದ್ಯೋಗ ಹಾಗೂ ಸರ್ಕಾರಿ ಉದ್ಯೋಗವನ್ನು ನಿರ್ವಹಿಸುತ್ತಿರುವವರಿಗೆ ಹೋಲಿಸಿದರೆ, ಖಾಸಗಿ ಉದ್ಯೋಗ ಮಾಡುತ್ತಿರುವ ಕುಟುಂಬಗಳಲ್ಲಿ ಉನ್ನತ ವ್ಯಾಸಾಂಗ ಮಾಡುತ್ತಿರುವ ಬಾಲಕಿಯರ ಸಂಖ್ಯೆ ಹೆಚ್ಚು (ಶೇ.೩೮.೨ರಷ್ಟು)ಕಂಡುಬಂದಿದ್ದು,

ನಂತರದ ಸ್ಥಾನದಲ್ಲಿ ಸರ್ಕಾರಿ ಉದ್ಯೋಗ ನಿರ್ವಹಿಸುತ್ತಿರುವ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಬೆಳಗಾವಿ ನಗರದ ಮುಸ್ಲಿಂ ಬಾಲಕಿಯರಿಗೆ ಅವರ ಕುಟುಂಬದ ಮುಖ್ಯಸ್ಥನ ವೃತ್ತಿಯು ಸಕಾರಾತ್ಮಕ ಪರಿಣಾಮ ಬೀರಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

## ೬.೧೭. ಬೆಳಗಾವಿ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಮುಂದುವರಿಯುವಿಕೆ ಮತ್ತು ಕುಟುಂಬಗಳ ಪಾತ್ರ

ಭಾರತೀಯ ಸಮಾಜ ಪಿತೃಪ್ರಧಾನ ವ್ಯವಸ್ಥೆಯನ್ನು ಆಧರಿಸಿದ್ದು, ಕುಟುಂಬದ ಯಜಮಾನನು ತಮ್ಮ ಮಕ್ಕಳ ಭವಿಷ್ಯವನ್ನು ನಿರ್ಧರಿಸುತ್ತಾನೆ. ಲಿಂಗಸಂಬಂಧಿತ ಮತ್ತು ಸಾಮಾಜಿಕ ಅಂದಾಜು ಅಧ್ಯಯನಗಳು ಮಹಿಳಾ ಶಿಕ್ಷಣಕ್ಕೆ ಅಡ್ಡಿಯಾಗಿರುವ ಮೂರು ಪ್ರಕಾರಗಳ ಅಡ್ಡಿಗಳನ್ನು ಗುರುತಿಸಿವೆ. ಅವುಗಳೆಂದರೆ ಸಾರ್ವತ್ರಿಕ ಉಲ್ಲೇಖಿತ ಅಡ್ಡಿಗಳು, ಸಾಂದರ್ಭಿಕ ಅಡ್ಡಿಗಳು ಮತ್ತು ಸ್ಥಳೀಯವಾದ ನಿರ್ದಿಷ್ಟ ಅಡ್ಡಿಗಳಾಗಿವೆ. ಅಧ್ಯಯನದ ಫಲಿತಗಳು ಹೇಳುವಂತೆ ಶೇ.೧೨.೧ ರಷ್ಟು ಬಾಲಕಿಯರಿಗೆ ಕುಟುಂಬದ ನಿರ್ವಹಣೆ, ಶೇ.೫.೪ ರಷ್ಟು ಬಾಲಕಿಯರಿಗೆ ಲೈಂಗಿಕ ದೌರ್ಜನ್ಯದ ಭಯ, ಶೇ.೮.೧ ರಷ್ಟು ಬಾಲಕಿಯರಿಗೆ ಮನೆಯ ಸಂಪ್ರದಾಯಗಳು ಉನ್ನತ ಶಿಕ್ಷಣ ಮುಂದುವರೆಸಲು ಅಡ್ಡಿಯಾಗಿವೆ. ಖೇದಕರವಾದ ಸಂಗತಿ ಎಂದರೆ ಶೇ.೫೨.೭ ರಷ್ಟು ಮುಸ್ಲಿಂ ಬಾಲಕಿಯರಿಗೆ ಮನೆಯ ಬಡತನ, ಕನಿಷ್ಟ ಆರ್ಥಿಕ ಮಟ್ಟ ಮತ್ತು ಆರ್ಥಿಕ ದುಸ್ಥಿತಿ ಮುಂತಾದವುಗಳು ಉನ್ನತ ಶಿಕ್ಷಣ ಮುಂದುವರೆಸಲು ಅಡ್ಡಿಯಾಗಿವೆ. ಉಳಿದಂತೆ ಶೇ.೧೧ ರಷ್ಟು ಬಾಲಕಿಯರಿಗೆ ಬಾಲ್ಯವಿವಾಹ, ಶೇ.೪ ರಷ್ಟು ಬಾಲಕಿಯರಿಗೆ ಧಾರ್ಮಿಕ ಶಿಕ್ಷಣ, ಶೇ.೪. ರಷ್ಟು ಬಾಲಕಿಯರಿಗೆ ಪರದಾ ಪದ್ದತಿ ಶೇ.೨.೭ ರಷ್ಟು ಕುಟುಂಬಗಳಿಗೆ ಉತ್ತಮ ಗಂಡು ಸಿಗುವ ಆತಂಕದ ಕಾರಣಕ್ಕಾಗಿ ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಾರೆ.

## ೬.೧೮. ಬಡತನ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ

ಬೆಳಗಾವಿ ನಗರದ ಒಟ್ಟು ಬಡ ಮುಸ್ಲಿಂ ಪೋಷಕರಲ್ಲಿ ಶೇ.೪೮ ರಷ್ಟು ಬಡವರು ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವ ಸ್ಥಿತಿಯಲ್ಲಿ ಇಲ್ಲ. ಬಾಲಕಿಯರಿಗೆ ಉನ್ನತ ಶಿಕ್ಷಣ ನೀಡದಿರಲು ವಿವಿಧ ಕಾರಣಗಳು ಕಂಡುಬರುತ್ತವೆ. ಶೇ.೧೪.೨ ರಷ್ಟು ಬಡವರು ತಮ್ಮ ಕುಟುಂಬದ ನಿರ್ವಹಣೆಯ ಕಾರಣಕ್ಕಾಗಿ, ಶೇ.೫.೩ ರಷ್ಟು ಲೈಂಗಿಕ ದೌರ್ಜನ್ಯಗಳಾಗುವ ಭಯದಿಂದಾಗಿ, ಶೇ.೭.೨ ರಷ್ಟು ಮನೆಯ ಸಂಪ್ರದಾಯಗಳ ಕಾರಣದಿಂದಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ಸಾಧ್ಯವಿಲ್ಲ ಎನ್ನುತ್ತಾರೆ. ಆದರೆ ಇದಕ್ಕಿಂತ ಹೆಚ್ಚಾಗಿ ಶೇ.೫೯ ರಷ್ಟು ಬಡವರು ತಮ್ಮ ಬಡತನದ ಕಾರಣದಿಂದಾಗಿ,

ಶೇ.೭.೨ ರಷ್ಟು ಹೆಣ್ಣು ಮಕ್ಕಳಿಗೆ ಶೀಘ್ರ ವಿವಾಹ ಮಾಡುವ ಕಾರಣಕ್ಕಾಗಿ, ಶೇ.೩.೫ ರಷ್ಟು ಪರದಾ ಪದ್ಧತಿಯ ಕಾರಣಕ್ಕಾಗಿ, ಶೇ.೧.೮ ರಷ್ಟು ಧಾರ್ಮಿಕ ಶಿಕ್ಷಣ ನೀಡುವ ಕಾರಣಕ್ಕಾಗಿ ಮತ್ತು ಶೇ.೧.೮ ರಷ್ಟು ಉನ್ನತ ಶಿಕ್ಷಣ ಪಡೆದರೆ ಉತ್ತಮ ವರ ಸಿಗುವುದು ಕಷ್ಟ ಎನ್ನುವ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಿಲ್ಲವೆಂದು ಅಭಿಪ್ರಾಯಪಡುತ್ತಾರೆ. ಕ್ಷೇತ್ರ ಅಧ್ಯಯನದ ಫಲಿತಗಳು ಸ್ಪಷ್ಟಪಡಿಸುವ ಪ್ರಕಾರ ಬಹುಸಂಖ್ಯಾತ ಬಡವರಿಗೆ ತಮ್ಮ ಬಡತನ ಮತ್ತು ಹೆಣ್ಣು ಮಕ್ಕಳು ಮನೆಯ ನಿರ್ವಹಣೆಗೆ ಅಗತ್ಯ ಎನ್ನುವ ಕಾರಣಕ್ಕೆ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ.

### ೬.೧೯. ಮಧ್ಯಮ ವರ್ಗದ ಜೀವನ ಮಟ್ಟ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ

ಬೆಳಗಾವಿ ನಗರದ ಬಡವರು ಮತ್ತು ಮಧ್ಯಮ ವರ್ಗದ ನಿಲುವುಗಳಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುವುದಿಲ್ಲ. ಮಧ್ಯಮ ವರ್ಗದವರಲ್ಲಿ ಶೇ.೬.೭ ರಷ್ಟು ಕುಟುಂಬದ ನಿರ್ವಹಣೆಗಾಗಿ, ಶೇ.೬.೭ ರಷ್ಟು ಲೈಂಗಿಕ ದೌರ್ಜನ್ಯಗಳಾಗುವ ಭಯದಿಂದಾಗಿ, ಶೇ.೧೩.೨ ರಷ್ಟು ಮನೆಯ ಸಂಪ್ರದಾಯಗಳ ಕಾರಣಕ್ಕಾಗಿ ಉನ್ನತ ಶಿಕ್ಷಣವನ್ನು ಬೆಂಬಲಿಸುವುದಿಲ್ಲ. ಅದೇ ಪ್ರಕಾರ ಶೇ.೪೦ ರಷ್ಟು ಮಧ್ಯಮ ವರ್ಗದವರಿಗೆ ತಮ್ಮ ಬಡತನದ ಸ್ಥಿತಿಯಿಂದಾಗಿ, ಶೇ.೨೦ ರಷ್ಟು ವಿವಾಹ ಮಾಡಬೇಕೆನ್ನುವ ಕಾರಣಕ್ಕಾಗಿ, ಶೇ.೬.೭ ರಷ್ಟು ಪರದಾ ಪದ್ಧತಿ, ಶೇ.೬.೭ ರಷ್ಟು ಧಾರ್ಮಿಕ ಶಿಕ್ಷಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಸಾಧ್ಯವಾಗುವುದಿಲ್ಲ ಎನ್ನುವ ಅಸಹಾಯಕತೆ ವ್ಯಕ್ತಪಡಿಸುತ್ತಾರೆ. ಮಧ್ಯಮ ವರ್ಗದವರಲ್ಲಿ ಬಹುಸಂಖ್ಯಾತರು ತಮ್ಮ ಆರ್ಥಿಕ ದುಸ್ಥಿತಿಯಿಂದಾಗಿ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ. ಈ ಸಂಗತಿಯಲ್ಲಿ ಬಡವರು ಮತ್ತು ಶ್ರೀಮಂತರ ನಡುವೆ ವ್ಯತ್ಯಾಸಗಳಿಲ್ಲ.

### ೬.೨೦. ಉತ್ತಮ ಜೀವನ ಮಟ್ಟ ಮತ್ತು ಮುಸ್ಲಿಂ ಬಾಲಕಿಯರ ಉನ್ನತ ಶಿಕ್ಷಣ

ಬಡವರು ಮತ್ತು ಮಧ್ಯಮ ವರ್ಗದವರಿಗೆ ಹೋಲಿಸಿದರೆ ಶ್ರೀಮಂತರ ಅಭಿಪ್ರಾಯಗಳು ಭಿನ್ನವಾಗಿವೆ. ಶ್ರೀಮಂತರಿಗೆ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವಲ್ಲಿ ಬಡತನ, ಮನೆಯ ಸಂಪ್ರದಾಯಗಳು, ಲೈಗಿಂಕ ದೌರ್ಜನ್ಯದ ಆತಂಕಗಳು ಮತ್ತು ಕುಟುಂಬದ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ ಎನ್ನುವ ಸಂಗತಿಗಳು ಅಡ್ಡಿಯಾಗುತ್ತಿಲ್ಲ. ಆದರೆ ಶೇ.೩೩.೩ ರಷ್ಟು ಮಕ್ಕಳಿಗೆ ವಿವಾಹ ಮಾಡುವ ಕಾರಣಕ್ಕಾಗಿ, ಶೇ.೩೩.೩ ರಷ್ಟು ಧಾರ್ಮಿಕ ಶಿಕ್ಷಣದ ಅಗತ್ಯಕ್ಕಾಗಿ ಮತ್ತು ಶೇ.೩೩.೩ ರಷ್ಟು ಉತ್ತಮ ವರ ಸಿಗದಿರುವ ಕಾರಣಕ್ಕಾಗಿ ತಮ್ಮ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುತ್ತಿಲ್ಲ.

## ೬.೨೧. ಸರ್ಕಾರದ ವರದಿಗಳು ಮತ್ತು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿ

೧೯೮೩ರ ಗೋಪಾಲಸಿಂಗ್ ವರದಿ, ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ಸಾಚಾರ್ ವರದಿಯ ಶಿಫಾರಸ್ಸುಗಳಿಂದಾಗಿ ಮುಸ್ಲಿಮರ ಪ್ರಾಥಮಿಕ ಶಿಕ್ಷಣ ಹಾಗೂ ಮದರಸಾಗಳ ಸುಧಾರಣೆಗಾಗಿ ಸರ್ಕಾರ ಹಲವಾರು ಕ್ರಮಗಳನ್ನು ಕೈಗೊಂಡಿದೆ. ೨೦೦೪ರಲ್ಲಿ ನ್ಯಾಷನಲ್ ಕಮಿಷನ್ ಫಾರ್ ಮೈನಾರಿಟಿ ಎಜುಕೇಷನ್ ಇನ್‌ಸ್ಟಿಟ್ಯೂಷನ್ ಸ್ಥಾಪನೆ ಮೌಲಾನ ಆಜಾದ್ ಎಜುಕೇಷನ್ ಪೌಡೇಶನ್ ಮೂಲಕ ೬೨.೭೨ ಲಕ್ಷ ವಿದ್ಯಾರ್ಥಿಗಳಿಗೆ ರೂ.೨೫೬ ಕೋಟಿ ಹಣವನ್ನು ಶಿಷ್ಯ ವೇತನವನ್ನಾಗಿ ಬಿಡುಗಡೆ ಮಾಡಿದೆ. ಆದರೆ ಇಂದಿಗೂ ಸರ್ಕಾರಗಳು ನಿಗದಿ ಮಾಡಿರುವ ಹಣ ಸರಿಯಾದ ರೀತಿಯಲ್ಲಿ ಉಪಯೋಗವಾಗದಿರುವುದು ಶೋಚನೀಯ ಸಂಗತಿಯಾಗಿದೆ. ಇದರ ಜೊತೆಗೆ ಸರ್ಕಾರಗಳು ಎಲ್ಲಾ ಸಮುದಾಯಗಳಿಗಾಗಿ ಮತ್ತು ವಿಶೇಷವಾಗಿ ಮಹಿಳಾ ಶಿಕ್ಷಣದ ಸಬಲೀಕರಣಕ್ಕಾಗಿ ಹಲವಾರು ಶೈಕ್ಷಣಿಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ೧೯೮೭–೮೮ರ ಕಪ್ಪುಹಲಗೆ ಕಾರ್ಯಕ್ರಮದ ಮೂಲಕ ಹಿಂದುಳಿದ ವಲಯಗಳಿಗೆ ಮಹಿಳಾ ಶಿಕ್ಷಕಿಯರನ್ನು ಒದಗಿಸಿದೆ. ೧೯೮೬ರ ಶಿಕ್ಷಣ ನೀತಿಯ ಮೂಲಕ ಶೈಕ್ಷಣಿಕವಾಗಿ ಗ್ರಾಮೀಣ ಮಹಿಳೆಯರನ್ನು ಸಂಘಟಿಸಿದೆ. ೧೯೯೪ರಲ್ಲಿ ಡಿಪಿಇಪಿ ಕಾರ್ಯಕ್ರಮದ ಮೂಲಕ ಕಸ್ತೂರಿ ಬಾ ಗಾಂಧಿ ಬಾಲಿಕ ವಿದ್ಯಾಲಯಗಳನ್ನು ಸ್ಥಾಪಿಸಿ ದೂರದ ಗ್ರಾಮೀಣ ಭಾಗದ ಬಾಲಕಿಯರಿಗೆ ಶಿಕ್ಷಣ ನೀಡುವ ಕ್ರಮ ಕೈಗೊಳ್ಳಲಾಯಿತು. ೨೦೦೩ರ ಕಾರ್ಯಕ್ರಮದ ಮೂಲಕ ಹಿಂದುಳಿದ ಹಾಗೂ ನಿರ್ಲಕ್ಷಿತ ಸಮುದಾಯದ ಮಕ್ಕಳಿಗೆ ಶಿಕ್ಷಣ ನೀಡುವ ಕ್ರಮವನ್ನು ಕೈಗೊಳ್ಳಲಾಯಿತು. ಇದರ ಜೊತೆಗೆ ಲಿಂಗಸಂಬಂಧಿ ಆಯವ್ಯಯ ಕೋಶವನ್ನು ಸ್ಥಾಪಿಸಿ ಲಿಂಗಸಂಬಂಧಿ ವಿತರಣೆ, ಮಹಿಳಾ ಅಭಿವೃದ್ಧಿ ಯೋಜನೆಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಕ್ರಮಕೈಗೊಳ್ಳಲಾಯಿತು.

ಈ ಎಲ್ಲಾ ರಾಷ್ಟ್ರೀಯ ಪ್ರಯತ್ನಗಳ ಜೊತೆಗೆ ಕರ್ನಾಟಕ ಸರ್ಕಾರವು ಅಲ್ಪಸಂಖ್ಯಾತರ ಶೈಕ್ಷಣಿಕ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಅಲ್ಪಸಂಖ್ಯಾತರಿಗಾಗಿ ಕೌಶಲ್ಯ ಯೋಜನೆ, ಜಿ.ಎನ್.ಎಂ ಮತ್ತು ಬಿ.ಎಸ್ಸಿ ನರ್ಸಿಂಗ್ ತರಬೇತಿ, ಅಲ್ಪಸಖ್ಯಾತರ ಶಾಲೆಗಳಿಗೆ ಕಲಿಕೆ ಮತ್ತು ಬೋಧನಾ ಸಾಮಾಗ್ರಿ ಪೂರೈಕೆ, ಉತ್ತೇಜನ ವೇತನ ಹೊಸ ಅಲ್ಪಸಂಖ್ಯಾತರ ಮೂರಾರ್ಜಿ ದೇಸಾಯಿ ಶಾಲೆಗಳ ಸ್ಥಾಪನೆ, ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ, ಯೋಜನೆ ಬೋಧನಾ ಶುಲ್ಕ ಯೋಜನೆ, ಹಾಸ್ಟಲ್‌ಗಳ ನಿರ್ಮಾಣ ಮತ್ತು ವಿದೇಶದಲ್ಲಿ ಉನ್ನತ ವ್ಯಾಸಾಂಗ ಯೋಜನೆ ಕಾರ್ಯಕ್ರಮಗಳನ್ನು ರಾಜ್ಯಾದ್ಯಂತ ಜಾರಿಗೊಳಿಸಿದೆ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಜಿಲ್ಲಾ ಮಟ್ಟದಲ್ಲಿ ಕಾನೂನು ಪದವಿಧರರಿಗೆ ತರಬೇತಿ ಭತ್ಯೆ ನೀಡಿಕೆ, ಮೆಟ್ರಿಕ್ ನಂತರದ ಬಾಲಕಿಯರಿಗೆ ವಿದ್ಯಾರ್ಥಿ ನಿಲಯಗಳು, ಖಾಸಗಿ ವಿದ್ಯಾರ್ಥಿ ನಿಲಯಗಳಿಗೆ ಅನುದಾನ, ಐ.ಟಿ.ಐ

ಹಾಗೂ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಶಿಷ್ಯವೇತನ, ವೃತ್ತಿ ತರಬೇತಿ ಮತ್ತು ಅನಾಥಾಲಯಗಳಿಗೆ ಅನುದಾನವನ್ನು ನೀಡುವ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ.ಸಾರ್ವತ್ರಿಕ ಶಿಕ್ಷಣದ ಅಭಿವೃದ್ಧಿ ಮತ್ತು ಮುಸ್ಲಿಮರ ಶೈಕ್ಷಣಿಕ ಸಬಲೀಕರಣಕ್ಕೆ ಕೇಂದ್ರ ಮತ್ತು ಕರ್ನಾಟಕ ಸರ್ಕಾರಗಳು ಕೈಗೊಂಡಿರುವ ಪ್ರಯತ್ನಗಳು ಕಡಿಮೆಯಲ್ಲ. ಆದರೂ ಇಂದಿಗೂ ಮುಸ್ಲಿಮರು ಶೈಕ್ಷಣಿಕವಾಗಿ ನಿರೀಕ್ಷಿತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ.

### ೬.೨೨. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ನಾಗರೀಕ ಸಮಾಜಗಳ ಅರಿವು

ಸರ್ಕಾರಗಳು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ವಿವಿಧ ನಾಗರೀಕ ಸಮಾಜಗಳಲ್ಲಿ ವಿಭಿನ್ನವಾದ ಅರಿವು ಕಂಡುಬಂದಿದೆ. ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಶೇ.೧೧.೧ ರಷ್ಟು ಕನಿಷ್ಟ ಮಟ್ಟದ ಅರಿವನ್ನು, ಶೇ.೨೨.೨ ರಷ್ಟು ಮಧ್ಯಮ ಮಟ್ಟದ ಅರಿವನ್ನು ಮತ್ತು ಶೇ.೬೬.೭ ರಷ್ಟು ಉತ್ತಮ ಮಟ್ಟದ ಅರಿವನ್ನು ಹೊಂದಿರುವವರು ಕಂಡುಬರುತ್ತಾರೆ. ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳ ಬಗ್ಗೆ ಶಾಲಾ ನಿರ್ವಹಣಾ ಸಮಿತಿಯ ಪದಾಧಿಕಾರಿಗಳು ಇತರರಿಗಿಂತ ಉತ್ತಮ ಮಟ್ಟದ ಅರಿವು ಹೊಂದಿರುವುದು ಕಂಡುಬರುತ್ತದೆ. ನಂತರದ ಸ್ಥಾನದಲ್ಲಿ ನಾಗರೀಕ ಸಂಘಟನೆಗಳಲ್ಲಿ ಮತ್ತು ಕೊನೆಯ ಸ್ಥಾನದಲ್ಲಿ ವಿದ್ಯಾರ್ಥಿ ಸಂಘಟನೆಗಳ ಪದಾಧಿಕಾರಿಗಳು ಉತ್ತಮ ಅರಿವು ಹೊಂದಿದ್ದಾರೆ. ಜಾತ್ಯಾತೀತ ನಾಗರೀಕ ಸಮಾಜಕ್ಕೆ ಹೋಲಿಸಿದರೆ ಧರ್ಮಾಧಾರಿತ ನಾಗರೀಕ ಸಮಾಜದಲ್ಲಿ ಉತ್ತಮ ಅರಿವಿನ ಮಟ್ಟದ ಪ್ರಮಾಣ ಕಡಿಮೆ ಕಂಡುಬರುತ್ತದೆ. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಧರ್ಮಾಧಾರಿತ ನಾಗರೀಕ ಸಮಾಜದಲ್ಲಿ ಶೇ.೨೨.೨ ರಷ್ಟು ಕನಿಷ್ಟ ಮಟ್ಟದ ಅರಿವನ್ನು ಹೊಂದಿರುವವರು, ಶೇ.೪೬.೭ ರಷ್ಟು ಮಧ್ಯಮ ಮಟ್ಟದ ಅರಿವು ಹೊಂದಿರುವವರು ಮತ್ತು ಕೇವಲ ಶೇ.೩೧.೧ ರಷ್ಟು ಉತ್ತಮ ಮಟ್ಟದ ಅರಿವು ಹೊಂದಿರುವವರು ಕಂಡುಬರುತ್ತಾರೆ. ಧರ್ಮಾಧಾರಿತ ನಾಗರೀಕ ಸಮಾಜಗಳಲ್ಲಿ ಮುಸ್ಲಿಂ ಸಮುದಾಯ ಸಂಘಟನೆಗಳು ಮಾತ್ರ ಉತ್ತಮ ಮಟ್ಟದ ಅರಿವನ್ನು ಹೊಂದಿದ್ದು, ಮುಸ್ಲಿಂ ಧಾರ್ಮಿಕ ಸಂಘಟನೆಗಳು ಮತ್ತು ಮಸೀದಿ ನಿರ್ವಹಣಾ ಸಮಿತಿಗಳು ಕನಿಷ್ಟ ಮತ್ತು ಮಧ್ಯಮ ಮಟ್ಟದ ಅರಿವನ್ನು ಮಾತ್ರ ಹೊಂದಿರುವುದು ಕಂಡುಬರುತ್ತದೆ.

ದತ್ತಾಂಶಗಳು ಅತ್ಯಂತ ಕುತೂಹಲಕಾರಿಯಾದ ಸಂಗತಿಗಳನ್ನು ಸ್ಪಷ್ಟಪಡಿಸುತ್ತವೆ. ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಯ ಬಗ್ಗೆ ಮುಸ್ಲಿಂ ಧರ್ಮಾಧಾರಿತ ನಾಗರೀಕ ಸಮಾಜಗಳಲ್ಲಿ ಶೇ.೩೧.೧

ರಷ್ಟು ಮಾತ್ರ ಉತ್ತಮ ಮಟ್ಟದ ಅರಿವು ಹೊಂದಿರುವವರು ಕಂಡುಬಂದರೆ, ಜಾತ್ಯಾತೀತ ನಾಗರೀಕ ಸಮಾಜಗಳಲ್ಲಿ ಉತ್ತಮ ಮಟ್ಟದ ಅರಿವು ಹೊಂದಿರುವವರು ಶೇ.೬೬.೭ ರಷ್ಟು ಕಂಡುಬರುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ಧರ್ಮಾಧಾರಿತ ನಾಗರೀಕ ಸಮಾಜಗಳಿಗೆ ತಮ್ಮ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಉತ್ತಮ ಅರಿವು ಹೊಂದಿಲ್ಲ.

**೬.೨೩. ಬೆಳಗಾವಿ ಮುಸ್ಲಿಮರ ಸಾಂಸ್ಕೃತಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು**

ನಾಗರೀಕ ಸಮಾಜಗಳು ಮುಸ್ಲಿಮರ ಸಮಸ್ಯೆಗಳನ್ನು ಹೇಗೆ ಗ್ರಹಿಸುತ್ತಾರೆ ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಜಾತ್ಯಾತೀತ ನಾಗರೀಕ ಸಮಾಜದ ಒಟ್ಟು ಪದಾಧಿಕಾರಿಗಳಲ್ಲಿ ಶೇ.೮೦ ರಷ್ಟು ಗ್ರಹಿಸುವ ಪ್ರಕಾರ ಮುಸ್ಲಿಮರು ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುತ್ತಾರೆ. ಶೇ.೬೪.೪ ರಷ್ಟು ಪದಾಧಿಕಾರಿಗಳು ಗ್ರಹಿಸುವ ಪ್ರಕಾರ ಮುಸ್ಲಿಂ ಸಮುದಾಯ ಇತರೆ ಸಾಮಾನ್ಯ ಸಮುದಾಯಗಳಲ್ಲಿ ಮುಕ್ತವಾಗಿ ಬೆರೆಯುವುದಿಲ್ಲ. ಆದರೆ ಸಮಾದಾನಕರ ಸಂಗತಿಯಂದರೆ ಶೇ.೬೪.೬ ರಷ್ಟು ಪದಾಧಿಕಾರಿಗಳು ಗ್ರಹಿಸುವ ಪ್ರಕಾರ ಮುಸ್ಲಿಂ ಸಮುದಾಯದ ಮಕ್ಕಳು ಹೆಚ್ಚಾಗಿ ಮದರಸಾಗಳಲ್ಲಿ ವ್ಯಾಸಾಂಗ ಮಾಡುವುದಿಲ್ಲ. ಆದರೆ ಬಹುಸಂಖ್ಯಾತ ನಾಗರೀಕ ಸಮಾಜದ ಪದಾಧಿಕಾರಿಗಳಿಗೆ ಮುಸ್ಲಿಮರು ತಮ್ಮ ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುತ್ತಾರೆ ಮತ್ತು ಅವರು ಸಾಮಾನ್ಯ ಸಮಾಜಗಳಲ್ಲಿ ಬೆರೆಯುವುದಿಲ್ಲ ಎನ್ನುವ ನಕಾರಾತ್ಮಕ ಗ್ರಹಿಕೆಗಳಿವೆ.

**೬.೨೪. ಬೆಳಗಾವಿ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳು.**

ಕ್ಷೇತ್ರ ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವಂತೆ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜದ ಗ್ರಹಿಕೆಗಳಲ್ಲಿ ಅತ್ಯಂತ ಸಕಾರಾತ್ಮಕ ಮನೋಭಾವನೆ ಕಂಡುಬರುತ್ತದೆ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ ಎಂಬುದನ್ನು ಶೇ.೭೭.೮ ರಷ್ಟು ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಒಪ್ಪುತ್ತಾರೆ. ಶೇ.೬೦ ರಷ್ಟು ಪದಾಧಿಕಾರಿಗಳು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ ಎಂಬುದನ್ನು ಒಪ್ಪುತ್ತಾರೆ. ಅದೇ ಪ್ರಕಾರ ಶೇ.೬೬.೭ ರಷ್ಟು ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಮುಸ್ಲಿಮರು ಆರ್ಥಿಕವಾಗಿ ಹಿಂದುಳಿದಿರುವುದನ್ನು ಸ್ವೀಕರಿಸುತ್ತಾರೆ. ಕ್ಷೇತ್ರ

ಕಾರ್ಯದ ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಮರ ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜಕ್ಕೆ ನಕಾರಾತ್ಮಕ ಗ್ರಹಿಕೆಗಳಿವೆ. ಆದರೆ ಸಮಾದಾನಕರ ಸಂಗತಿಯಂದರೆ ಮುಸ್ಲಿಮರ ಸಮಾಜೋ–ಆರ್ಥಿಕ ಅನನ್ಯತೆಗಳ ಬಗ್ಗೆ ಜಾತ್ಯಾತೀತ ನಾಗರೀಕ ಸಮಾಜಕ್ಕೆ ಸಕಾರಾತ್ಮಕ ಗ್ರಹಿಕೆಗಳಿವೆ.

### ೬.೨೫. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಜಾತ್ಯಾತೀತ ನಾಗರೀಕ ಸಮಾಜ ಗ್ರಹಿಕೆಗಳು

ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳ ಗ್ರಹಿಕೆಯ ಪ್ರಕಾರ ಮುಸ್ಲಿಂ ಹೆಣ್ಣು ಮಕ್ಕಳಿಗೆ ಮೊದಲನೆಯದಾಗಿ ತಮ್ಮ ಪೋಷಕರೇ ಸಹಕಾರವನ್ನು ನೀಡುತ್ತಿಲ್ಲ. ಎರಡನೆಯದಾಗಿ ಮುಸ್ಲಿಂ ಸಮುದಾಯ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಕಾರಾತ್ಮಕವಾಗಿ ಸ್ಪಂದಿಸುತ್ತಿಲ್ಲ. ಮೂರನೆಯದಾಗಿ ಮುಸ್ಲಿಂ ಸಮುದಾಯದಲ್ಲಿರುವ ಬಡತನ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರಮುಖವಾಗಿ ಅಡ್ಡಿಯಾಗಿದೆ ಯಂದು ಗುರುತಿಸುತ್ತಾರೆ. ಸಾಚಾರ್ ವರದಿ ಗುರುತಿಸುವಂತೆ ಕೇವಲ ಶೇ.೪ ರಷ್ಟು ಮುಸ್ಲಿಂ ಮಕ್ಕಳು ಮಾತ್ರ ಮದರಸಾಗಳಲ್ಲಿ ಓದುತ್ತಿದ್ದಾರೆ. ಮುಸ್ಲಿಂ ಪೋಷಕರಿಗೆ ತಮ್ಮ ಮಕ್ಕಳನ್ನು ಉತ್ತಮ ಶಾಲೆಗಳಲ್ಲಿ ಓದಿಸುವ ಆಸಕ್ತಿ ಹೊಂದಿದ್ದಾರೆ. ಆದರೆ ಅವುಗಳು ದುಬಾರಿ ವೆಚ್ಚ ಎನ್ನುವ ಕಾರಣಕ್ಕಾಗಿ ಓದಿಸಲು ಸಾಧ್ಯವಾಗುತ್ತಿಲ್ಲ ಎನ್ನುವುದು ಸಾಚಾರ್ ವರದಿಯ ಸ್ಪಷ್ಟ ಅಭಿಪ್ರಾಯ. ಹಿಂದಿನ ಅಧ್ಯಾಯದಲ್ಲಿ ಕಂಡುಕೊಂಡಿರುವಂತೆ ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಂ ಪೋಷಕರು ತಮ್ಮ ಬಡತನದ ಕಾರಣಕ್ಕಾಗಿ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಆಸಕ್ತಿ ವಹಿಸುತ್ತಿಲ್ಲ. ಈ ಅಂಶವನ್ನು ಜಾತ್ಯಾತೀತ ನಾಗರೀಕ ಸಮಾಜ ಸರಿಯಾಗಿಯೇ ಗುರುತಿಸಿದೆ.

### ೬.೨೬. ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು ಮತ್ತು ಧರ್ಮಾಧಾರಿತ ನಾಗರೀಕ ಸಮಾಜ ಗ್ರಹಿಕೆಗಳು

ಧರ್ಮಾಧಾರಿತ ನಾಗರೀಕ ಸಮಾಜದ ಶೇ.೪.೪ ರಷ್ಟು ಪದಾಧಿಕಾರಿಗಳು ಗುರುತಿಸುವಂತೆ ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಕರ ಸಮಸ್ಯೆಯನ್ನು, ಶೇ.೧೧.೧ ರಷ್ಟು ಮಹಿಳಾ ಶಿಕ್ಷಕಿಯರ ಕೊರತೆಯನ್ನು, ಶೇ.೧೫.೫ ರಷ್ಟು ಪ್ರತ್ಯೇಕ ಶೌಚಾಲಯದ ಸಮಸ್ಯೆಯನ್ನು, ಶೇ.೪.೪ ರಷ್ಟು ಪಠ್ಯಪುಸ್ತಕಗಳ ಸಮಸ್ಯೆಯನ್ನು, ಶೇ.೮.೯ ರಷ್ಟು ಲೈಂಗಿಕ ದೌರ್ಜನ್ಯದ ಭಯದ ಸಮಸ್ಯೆ, ಅದೆ ಪ್ರಕಾರ ಶೇ.೩೫.೫ ರಷ್ಟು ಪದಾಧಿಕಾರಿಗಳು ಗುರುತಿಸುವಂತೆ ಬಡತನದ ಸಮಸ್ಯೆಯನ್ನು ಮತ್ತು ಶೇ.೨೦ ರಷ್ಟು ಗುರುತಿಸುವಂತೆ ಹೆಣ್ಣು ಮಕ್ಕಳು ತಮ್ಮ ಶಿಕ್ಷಣಕ್ಕೆ ಪೋಷಕರ ಅಸಹಕಾರವನ್ನು ಎದುರಿಸುತ್ತಿದ್ದಾರೆ.

## ೬.೨೭. ಬೆಳಗಾವಿ ನಗರದ ಜಾತ್ಯಾತೀತ ನಾಗರೀಕ ಸಮಾಜಗಳು ಮತ್ತು ಮುಸ್ಲಿಮರ ಸಮಸ್ಯೆ ನಿವಾರಣಾ ಮಾರ್ಗೋಪಾಯಗಳು

ದತ್ತಾಂಶಗಳು ಹೇಳುವ ಪ್ರಕಾರ ಶೇ.೮.೯ ರಷ್ಟು ಪದಾಧಿಕಾರಿಗಳು ಶಾಸಕರ ಭೇಟಿಯ ಮೂಲಕ ಶೇ.೧೭.೮ ರಷ್ಟು ಇಲಾಖಾ ಅಧಿಕಾರಿಗಳ ಭೇಟಿಯ ಮೂಲಕ, ಶೇ.೨೬.೭ ರಷ್ಟು ಜಿಲ್ಲಾಧಿಕಾರಿಗಳ ಮೂಲಕ ಸಮಸ್ಯೆಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಅದೆ ಪ್ರಕಾರ ಶೇ.೨೦ ರಷ್ಟು ಪದಾಧಿಕಾರಿಗಳು ಪಾಲಿಕೆಯ ಸದಸ್ಯರ ಮೂಲಕ, ಶೇ,೪.೪ ರಷ್ಟು ಸಮುದಾಯದ ನಾಯಕರ ಮೂಲಕ ಮತ್ತು ಶೇ.೨೨.೨ ರಷ್ಟು ಹೋರಾಟಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಜಾತ್ಯಾತೀತ ನಾಗರೀಕ ಸಮಾಜದ ಪದಾಧಿಕಾರಿಗಳು ಜಿಲ್ಲಾಧಿಕಾರಿಗಳ ಭೇಟಿಯ ಮೂಲಕ ಪರಿಹಾರಗಳನ್ನು ಕಂಡುಕೊಳ್ಳುವುದರ ಬಗ್ಗೆ ಮೊದಲ ಆಧ್ಯತೆ ನೀಡುತ್ತಾರೆ. ಎರಡನೆಯದಾಗಿ, ಅತೀ ಹೆಚ್ಚು ಪದಾಧಿಕಾರಿಗಳು ಹೋರಾಟಗಳ ಮೂಲಕ ಮತ್ತು ಮೂರನೆಯದಾಗಿ, ಇಲಾಖಾ ಅಧಿಕಾರಿಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಆದರೆ ಧರ್ಮಾಧಾರಿತ ನಾಗರೀಕ ಸಮಾಜಗಳು ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕಾಗಿ ಭಿನ್ನವಾದ ಮಾರ್ಗಗಳನ್ನು ಅನುಸರಿಸುವುದು ಕಂಡುಬರುತ್ತದೆ.

## ೬.೨೮. ಬೆಳಗಾವಿ ನಗರದ ಧರ್ಮಾಧಾರಿತ ನಾಗರೀಕ ಸಮಾಜಗಳು ಮತ್ತು ಮುಸ್ಲಿಮರ ಸಮಸ್ಯೆ ನಿವಾರಣಾ ಮಾರ್ಗೋಪಾಯಗಳು

ಧರ್ಮಾಧಾರಿತ ನಾಗರೀಕ ಸಮಾಜದ ಪದಾಧಿಕಾರಿಗಳು ಕೇವಲ ಐದು ಮಾರ್ಗಗಳ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ ಶೇ.೧೭.೮ ರಷ್ಟು ಪದಾಧಿಕಾರಿಗಳು ಇಲಾಖಾ ಅಧಿಕಾರಿಗಳ ಮೂಲಕ, ಶೇ.೮.೮ ರಷ್ಟು ಜಿಲ್ಲಾಧಿಕಾರಿಗಳ ಮೂಲಕ, ಶೇ.೩೧ರಷ್ಟು ಪಾಲಿಕೆ ಸದಸ್ಯರ ಮೂಲಕ, ಶೇ.೩೭.೮ ರಷ್ಟು ಸಮುದಾಯದ ನಾಯಕರ ಮೂಲಕ ಮತ್ತು ಶೇ.೪.೪ ರಷ್ಟು ಪದಾಧಿಕಾರಿಗಳು ಪೋಷಕರಲ್ಲಿ ಅರಿವು ಮೂಡಿಸುವುದರ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಧರ್ಮಾಧಾರಿತ ನಾಗರೀಕ ಸಮಾಜ ಸಮಸ್ಯೆಗಳ ಪರಿಹಾರಕ್ಕಾಗಿ ಸಮುದಾಯದ ನಾಯಕರನ್ನು ಹೆಚ್ಚಾಗಿ ಅವಲಂಬಿಸುವುದು ಕಂಡುಬರುತ್ತದೆ. ಎರಡನೆಯದಾಗಿ, ಪಾಲಿಕೆ ಸದಸ್ಯರ ಮೂಲಕ ಮತ್ತು ಮೂರನೆಯದಾಗಿ, ಇಲಾಖಾ ಅಧಿಕಾರಿಗಳ ಮೂಲಕ ಸಮಸ್ಯೆಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ದತ್ತಾಂಶಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ

ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಮಾರ್ಗಗಳು ಜಾತ್ಯಾತೀತ ಮತ್ತು ಧರ್ಮಾಧಾರಿತ ನಾಗರೀಕ ಸಮಾಜಗಳ ನೆಲೆಯಲ್ಲಿ ಭಿನ್ನವಾಗುತ್ತವೆ. ಜ್ಯಾತ್ಯಾತೀತ ನಾಗರೀಕ ಸಮಾಜ ಔಪಚಾರಿಕ ಮಾರ್ಗಗಳನ್ನು ಹೆಚ್ಚಾಗಿ ಅನುಸರಿಸಿದರೆ ಧರ್ಮಾಧಾರಿತ ನಾಗರೀಕ ಸಮಾಜ ಅನೌಪಚಾರಿಕ ಮಾರ್ಗಗಳನ್ನು ಹೆಚ್ಚಾಗಿ ಅನುಸರಿಸಿರುವುದು ಕಂಡುಬರುತ್ತದೆ. ತಕ್ಕ ಮಟ್ಟಿಗೆ ಪೋಷಕರ ಮನವೊಲಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಆದರೆ ಅದರ ಪ್ರಮಾಣ ಕನಿಷ್ಟವಾಗಿದೆ. ಇಂದಿಗೂ ಮುಸ್ಲಿಂ ಸಮುದಾಯದ ಪ್ರಜಾಸತ್ತಾತ್ಮಕ ಮಾರ್ಗಗಳನ್ನು ಅನುಸರಿಸದೆ ಅನೌಪಚಾರಿಕ ಮಾರ್ಗಗಳನ್ನು ಅನುಸರಿಸುತ್ತಿದೆ. ಇಂದಿಗೂ ಸಮುದಾಯದ ನಾಯಕರನ್ನೇ ಅವಲಂಬಿಸುವುದು ಹೆಚ್ಚಾಗಿ ಕಂಡುಬರುತ್ತಿದೆ. ಇಂದಿಗೂ ಮುಸ್ಲಿಮರು ತಮ್ಮಿಂದ ಆಯ್ಕೆಯಾದ ನಾಯಕರಿಂದ ಮತ್ತು ಚಳುವಳಿಗಳ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮುಂದಾಗದಿರುವುದು ಸೋಜಿಗದ ಸಂಗತಿಯಾಗಿದೆ. ಒಟ್ಟಾರೆ ಅಧ್ಯಾಯದ ಫಲಿತಗಳು ಸ್ಪಷ್ಟಪಡಿಸುವ ಪ್ರಕಾರ ಮುಸ್ಲಿಂ ನಾಗರೀಕ ಸಮಾಜವು ಹೆಚ್ಚು ಕ್ರಿಯಾಶೀಲವಾಗಿಲ್ಲ.

## ಭಾಗ: ಎರಡು

## ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗೆ ಅಧ್ಯಯನ ಆಧಾರಿತ ಶಿಫಾರಸ್ಸುಗಳು

ಸ್ವಾತಂತ್ರ್ಯದ ೭೦ ದಶಕಗಳ ನಂತರವೂ ಭಾರತದಲ್ಲಿ ಅಭಿವೃದ್ಧಿಯ ಫಲಗಳು ಎಲ್ಲಾ ಸಮುದಾಯದವರಿಗೆ ಸಮಾನವಾಗಿ ಹಂಚಿಕೆಯಾಗಿಲ್ಲ. ವಿವಿಧ ಸಮುದಾಯಗಳ ನಡುವಿನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಭಿವೃದ್ಧಿಯ ಅಂತರಗಳು ಹೋಲಿಕೆಗೆ ನಿಲುಕುವುದಿಲ್ಲ. ಮುಸ್ಲಿಮರು ಇಂದಿಗೂ ವಿವಿಧ ವಲಯಗಳಲ್ಲಿ ಅವಕಾಶ ವಂಚಿತತೆಯನ್ನು ಎದುರಿಸುತ್ತಿದ್ದಾರೆ. ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿದಿರುವುದು, ಆರ್ಥಿಕವಾಗಿ ಬಡವರಾಗೇ ಮುಂದುವರಿದಿರುವುದು ಮತ್ತು ರಾಜಕೀಯವಾಗಿ ಮತದಾರರಾಗಿ ಮಾತ್ರ ಉಳಿದಿರುವುದು ಇಂತಹ ವಾದಗಳನ್ನು ಗಟ್ಟಿಗೊಳಿಸುತ್ತದೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದು, ಎಲ್ಲಾ ಸಮುದಾಯಗಳು ಎದುರಿಸುತ್ತಿರುವ ಸಾಮಾನ್ಯ ಸಮಸ್ಯೆಗಳನ್ನು, ಮತ್ತು ಶೈಕ್ಷಣಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಧಾರಿತ ಕೆಲವು ವಿಶಿಷ್ಟ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಂತಹ ಸಮಸ್ಯೆಗಳ ನಿವಾರಣೆಗೆ ಅಧ್ಯಯನವು ನಿರ್ದಿಷ್ಟ ಶಿಫಾರಸ್ಸುಗಳನ್ನು ಮಂಡಿಸುತ್ತಿದೆ.

### ೧. ಮುಸ್ಲಿಮರಿಗೆ ವಿಶೇಷ ಮೀಸಲಾತಿ ಕಲ್ಪಿಸುವುದು

ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ವಿವಿಧ ಅಧ್ಯಯನಗಳು ರಾಜ್ಯದ ಉನ್ನತ ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ನೀಡುವ ಅಗತ್ಯವನ್ನು ಒತ್ತಿ ಹೇಳಿವೆ. ಕರ್ನಾಟಕದ ರಾಜ್ಯದಲ್ಲಿ

೧೯೯೫ ರಿಂದಲೇ ಮುಸ್ಲಿಮರಿಗೆ ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಶೇ.೪ ರಷ್ಟು ಮೀಸಲಾತಿಯನ್ನು ನೀಡಲಾಗಿದೆ. ಸಾಮಾನ್ಯ ಮತ್ತು ಸಾಂಪ್ರದಾಯಿಕ ಪದವಿಗಳಿಗಿಂತ ತಾಂತ್ರಿಕ ಮತ್ತು ವೃತ್ತಿಪರ ಪದವಿಗಳಲ್ಲಿ ಮುಸ್ಲಿಮರಿಗೆ ಈಗ ಜಾರಿಯಲ್ಲಿರುವ ಮೀಸಲಾತಿ ಪ್ರಮಾಣವನ್ನು ಶೇ.೪ ರಿಂದ ಕನಿಷ್ಟ ಶೇ.೮ ಕ್ಕೆ ನಿಗದಿಪಡಿಸುವ ಅಗತ್ಯವಿದೆ. ೧೯೯೪ ರ ಕರ್ನಾಟಕ ರೆಹಮಾನ್‌ಖಾನ್ ವರದಿ ಗುರುತಿಸಿರುವಂತೆ ಮುಸ್ಲಿಮರು ಇಂಜನಿಯರ್ ಮತ್ತು ವೈದ್ಯರ ಪ್ರಮಾಣ ಕನಿಷ್ಟ ಸಂಖ್ಯೆಯಲ್ಲಿದೆ. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ ಮುಸ್ಲಿಮರ ಶೈಕ್ಷಣಿಕ ಮತ್ತು ಉದ್ಯೋಗ ಮೀಸಲಾತಿಯನ್ನು ಹೆಚ್ಚಿಸುವ ಕುರಿತು ಗಂಭೀರವಾಗಿ ಪರಿಶೀಲಿಸಬೇಕಾಗಿದೆ.

**೨. ಮುಸ್ಲಿಂ ಸಮುದಾಯದ ಬಡತನವನ್ನು ನಿವಾರಿಸುವುದು.**

ಭಾರತದ ವಿವಿಧ ಅಧ್ಯಯನಗಳು ನಿರೂಪಿಸಿರುವಂತೆ ಮುಸ್ಲಿಮರಿಗೆ ಬಡತನವೇ ಶಿಕ್ಷಣಕ್ಕೆ ಪ್ರಮುಖ ಅಡ್ಡಿಯಾಗಿದೆ. ಪ್ರಸ್ತುತ ಬೆಳಗಾವಿ ಮುಸ್ಲಿಮರ ಅಧ್ಯಯನವು ಈ ಅಂಶವನ್ನು ದೃಢೀಕರಿಸಿದೆ. ಮುಸ್ಲಿಂ ಮಹಿಳೆಯರು ಕನಿಷ್ಟ ಪ್ರಾಥಮಿಕ ಶಿಕ್ಷಣವನ್ನು ಪಡೆಯುವುದೇ ದುಸ್ತರವಾದ ಸಂಗತಿಯಾಗಿದೆ. ಇದರ ಮೂಲ ಮುಸ್ಲಿಂ ಸಮುದಾಯ ಎದುರಿಸುತ್ತಿರುವ ಬಡತನದಲ್ಲಿದೆ. ಬೆಳಗಾವಿ ನಗರದ ಬಹುಸಂಖ್ಯಾತ ಮುಸ್ಲಿಮರು ಬಡವರಾಗಿದ್ದು, ಆ ಕಾರಣಕ್ಕಾಗಿಯೇ ತಮ್ಮ ಹೆಣ್ಣುಮಕ್ಕಳನ್ನು ಉನ್ನತ ವ್ಯಾಸಂಗಕ್ಕೆ ಕಳುಹಿಸಲು ಸಾಧ್ಯವಾಗುತ್ತಿಲ್ಲ. ಸರ್ಕಾರಗಳು ಬಡ ಮುಸ್ಲಿಂ ಕುಟುಂಬಗಳನ್ನು ಗುರುತಿಸಿ, ಆ ಕುಟುಂಬದ ಹೆಣ್ಣು ಮಕ್ಕಳಿಗೆ ಬೋಧನಾ ಶುಲ್ಕ ರಿಯಾಯಿತಿ, ಸಮವಸ್ತ್ರ, ಬಿಸಿಯೂಟ ನೀಡುವುದರ ಜೊತೆಗೆ ಬಡಕುಟುಂಬದ ಬಾಲಕಿಯರು ಉನ್ನತ ವ್ಯಾಸಂಗ ಮುಂದುವರೆಸಲು ಸರ್ಕಾರಗಳು ಅವರ ಸಂಪೂರ್ಣ ವೆಚ್ಚವನ್ನು ಭರಿಸುವ ಜವಾಬ್ದಾರಿಯನ್ನು ಹೊರಬೇಕಾಗಿದೆ.

**೩. ಶೈಕ್ಷಣಿಕ ಮಂಡಳಿ ಹಾಗೂ ಆಯೋಗಗಳಲ್ಲಿ ಮುಸ್ಲಿಮರ ಪಾತಿನಿಧ್ಯ**

ಕರ್ನಾಟಕ ಸರ್ಕಾರ ಇದುವರೆಗೆ ರಾಜ್ಯದ ಶಿಕ್ಷಣದ ಸುಧಾರಣೆಗೆ ವಿವಿಧ ಸಮಿತಿಗಳು ಮತ್ತು ಆಯೋಗಗಳನ್ನು ರಚಿಸಿದೆ. ಕನ್ನಡ ಭಾಷೆ, ಗಡಿನಾಡು ಶಾಲೆಗಳ ಸುಧಾರಣೆ, ಶಾಲಾ ಕಲಿಕೆಯ ಗುಣಮಟ್ಟವನ್ನು ಹೆಚ್ಚಿಸುವ ಕುರಿತು ಸುಧಾರಣೆ ನೀಡಲು ಸಮಿತಿಗಳನ್ನು ರಚಿಸಲಾಗಿದೆ. ಆದರೆ ಈ ಸಮಿತಿ ಮತ್ತು ಆಯೋಗಗಳಲ್ಲಿ ಮುಸ್ಲಿಮರ ಪ್ರಾತಿನಿಧ್ಯ ಕೊರತೆ ಕಂಡುಬರುತ್ತದೆ. ಕರ್ನಾಟಕದಲ್ಲಿ ಅಲ್ಪಸಂಖ್ಯಾತ ಆಯೋಗ ಅಸ್ತಿತ್ವದಲ್ಲಿದ್ದು, ಇದರ ಮೂಲಕ ಮುಸ್ಲಿಮರ ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಕಂಡುಕೊಳ್ಳಲಾಗಿದೆ. ಇಂದಿಗೂ ಮುಸ್ಲಿಂ ಸಮುದಾಯದ ಮಕ್ಕಳು ಮದರಸಾ ಮತ್ತು ಉರ್ದು ಮಾಧ್ಯಮ ಶಾಲೆಗಳಲ್ಲೇ ವ್ಯಾಸಾಂಗ ಮಾಡುತ್ತಾರೆನ್ನುವ ಗ್ರಹಿಕೆ ಇದ್ದಂತಿದೆ. ಇದು ಸಂಪೂರ್ಣ ಸರಿಯಲ್ಲ. ಇತರೆ ಭಾಷಾ ಮಾಧ್ಯಮದಲ್ಲೂ ಮುಸ್ಲಿಮರು

ವ್ಯಾಸಾಂಗ ಮಾಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸಾರ್ವತ್ರಿಕ ಶಿಕ್ಷಣ ಸಮಿತಿ ಮತ್ತು ಆಯೋಗಗಳಲ್ಲಿ ಮುಸ್ಲಿಂ ಪ್ರಾತಿನಿಧ್ಯಕ್ಕೆ ಕ್ರಮ ಕೈಗೊಳ್ಳಬೇಕಾಗಿದೆ.

**೪. ಶಿಕ್ಷಣ ಮತ್ತು ಉದ್ಯೋಗದ ನಡುವೆ ಸಂಬಂಧ ಕಲ್ಪಿಸುವುದು.**

ಇಂದಿಗೂ ಮದರಸಾ ಶಿಕ್ಷಣ ಮತ್ತು ಸಾಮಾನ್ಯ ಶಿಕ್ಷಣದ ನಡುವೆ ಸೌಹಾರ್ದಯುತವಾದ ಸಂಬಂಧವನ್ನು ಏರ್ಪಡಿಸುವುದು ಸಾಧ್ಯವಾಗುತ್ತಿಲ್ಲ. ಕರ್ನಾಟಕದ ಉರ್ದು ಶಾಲೆಗಳ ಅಧ್ಯಯನಗಳು ಹೇಳುವಂತೆ ಉರ್ದು ಮಾಧ್ಯಮ ಶಾಲೆಗಳಿಂದ ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆದ ಮುಸ್ಲಿಂ ಮಕ್ಕಳು ಪಠ್ಯಪುಸ್ತಕ, ಬೋಧನಾ ಮಾಧ್ಯಮದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಂತಹ ಸಮಸ್ಯೆಗಳನ್ನು ಎದುರಿಸುವ ಮಕ್ಕಳು ಕಲಿಕೆಯಲ್ಲಿ ನಿರಾಸಕ್ತಿಯನ್ನು ಹೊಂದಿ, ಮಧ್ಯದಲ್ಲೇ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುವ ಪ್ರಕರಣಗಳು ಹೆಚ್ಚಾಗುತ್ತಿವೆ. ಹಾಗಾಗಿ ಮುಸ್ಲಿಮರು ಉನ್ನತ ಪದವಿ ಮತ್ತು ಉದ್ಯೋಗದಿಂದ ವಂಚಿತರಾಗುತ್ತಿದ್ದಾರೆ. ಅದ್ದರಿಂದ ಮುಸ್ಲಿಮರ ಶಿಕ್ಷಣ ಮತ್ತು ಉದ್ಯೋಗದ ನಡುವೆ ಸಂಪರ್ಕವನ್ನು ಏರ್ಪಡಿಸಿ ಅವರ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಸುಧಾರಣೆಯನ್ನು ತರುವ ಅಗತ್ಯವಿದೆ.

**೫. ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರಿ ನಿಯಮಾವಳಿಗಳನ್ನು ಸರಳೀಕರಿಸುವುದು**

ವಿವಿಧ ಅಧ್ಯಯನಗಳು ಗುರುತಿಸಿರುವಂತೆ ಅಲ್ಪಸಂಖ್ಯಾತ ಸಮುದಾಯದ ಶೈಕ್ಷಣಿಕ ಸಂಸ್ಥೆಗಳು ಸರ್ಕಾರಿ ನಿಯಮಾವಳಿಗಳ ಅನ್ವಯಿಕೆಯಲ್ಲಿ ತಾರತಮ್ಯವನ್ನು ಎದುರಿಸುತ್ತಿವೆ. ಶಿಕ್ಷಣ ಸಂಸ್ಥೆಗಳ ಸ್ಥಾಪನೆಗೆ ಅನುಮೋದನೆ ನೀಡುವಲ್ಲಿ, ಶಿಕ್ಷಕರ ನೇಮಕಾತಿಗೆ ಅನುಮೋದನೆ ನೀಡುವಲ್ಲಿ ಮತ್ತು ಅನುದಾನವನ್ನು ಬಿಡುಗಡೆ ಮಾಡುವಲ್ಲಿ ಸರ್ಕಾರದ ಇಲಾಖೆಗಳು ತಾರತಮ್ಯ ನೀತಿಯನ್ನು ಅನುಸರಿಸುತ್ತಿವೆ. ಈ ಎಲ್ಲಾ ಸಂಗತಿಗಳು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ನಕಾರಾತ್ಮಕ ಪರಿಣಾಮವನ್ನು ಬೀರಿವೆ. ಈ ಹಿನ್ನೆಲೆಯಲ್ಲಿ ಸಾರ್ವಜನಿಕ ಶಿಕ್ಷಣ ಮಂಡಳಿಯು ಮುಸ್ಲಿಮರ ಶೈಕ್ಷಣಿಕ ಪ್ರಗತಿಗೆ ಸರಳೀಕೃತ ಪ್ರಕ್ರಿಯೆಗಳನ್ನು ಅಳವಡಿಸಿಕೊಳ್ಳುವ ಅಗತ್ಯವಿದೆ. ಅಧಿಕಾರಶಾಹಿ ವರ್ಗಗಳು ಮುಸ್ಲಿಮರ ಶೈಕ್ಷಣಿಕ ಸಮಸ್ಯೆಗಳಿಗೆ ಜಾತ್ಯಾತೀತವಾಗಿ ಸ್ಪಂಧಿಸುವ ಅಗತ್ಯವಿದೆ.

**೬. ಮುಸ್ಲಿಂ ಶಿಕ್ಷಣ ಸಂಸ್ಥೆಗಳ ಮೇಲ್ವಿಚಾರಣೆಗೆ ಅಧಿಕಾರಿಯನ್ನು ನೇಮಕ ಮಾಡುವುದು.**

ಸಾರ್ವಜನಿಕ ಶಿಕ್ಷಣ ಮಂಡಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವತಿಯಿಂದ ಒಬ್ಬ ಅಧಿಕಾರಿಯನ್ನು ನೇಮಕ ಮಾಡಬೇಕಿದೆ. ಈ ಅಧಿಕಾರಿಗೆ ಮುಸ್ಲಿಂ ಸಮುದಾಯದ ಶಿಕ್ಷಣ ಸಂಸ್ಥೆಗಳನ್ನು ಮೇಲ್ವಿಚಾರಣೆ ಮಾಡುವ ಅಧಿಕಾರವನ್ನು ನೀಡತಕ್ಕದ್ದು. ಈ ಅಧಿಕಾರಿಯು

ಅಲ್ಪಸಂಖ್ಯಾತ ಸಮುದಾಯದ ಪ್ರತಿನಿಧಿಗಳು, ಶಿಕ್ಷಣ ತಜ್ಞರು ಮತ್ತು ಸಾಮಾಜಿಕ ಕಾರ್ಯಕರ್ತರ ಸಲಹೆಗಳನ್ನು ಪಡೆಯುವ ವ್ಯವಸ್ಥೆ ರೂಪಿಸತಕ್ಕದ್ದು.

**೭. ಪರಿಶಿಷ್ಟರ ಯೋಜನೆಗಳನ್ನು ಅಲ್ಪಸಂಖ್ಯಾತರಿಗೆ ವಿಸ್ತರಿಸುವುದು**

ರಾಷ್ಟ್ರೀಯ ಮಟ್ಟದ ರಾಜೇಂದರ್ ಸಾಚಾರ್ ಸಮಿತಿ, ಕರ್ನಾಟಕದ ಗೂಡ್ವಾಲ ಸಮಿತಿ ಮತ್ತು ರೆಹಮಾನ್‌ಖಾನ್ ಸಮಿತಿಯ ವರದಿಗಳು ಗುರುತಿಸಿರುವಂತೆ, ವಿವಿಧ ಸಂಗತಿಗಳಲ್ಲಿ ಪರಿಶಿಷ್ಟರು ಮತ್ತು ಮುಸ್ಲಿಮರ ನಡುವೆ ಯಾವುದೇ ವ್ಯತ್ಯಾಸಗಳಿಲ್ಲ. ಸಮಾಜೋ–ಆರ್ಥಿಕ ಸಂಗತಿಗಳಲ್ಲಿ ಪರಿಶಿಷ್ಟರು ಮತ್ತು ಮುಸ್ಲಿಮರು ಒಂದೇ ರೀತಿಯಲ್ಲಿ ಕಂಡುಬರುತ್ತಾರೆ. ಆದ್ದರಿಂದ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗಾಗಿ ಪರಿಶಿಷ್ಟರ ಯೋಜನೆಗಳನ್ನು ಮುಸ್ಲಿಮರಿಗೂ ವಿಸ್ತರಿಸುವ ಅಗತ್ಯವಿದೆ.

**೮. ಉತ್ತಮ ಗುಣಮಟ್ಟದ ಸರ್ಕಾರಿ ಶಾಲೆಗಳನ್ನು ಸ್ಥಾಪಿಸುವುದು.**

ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿರುವ ಪ್ರದೇಶಗಳಲ್ಲಿ ಉತ್ತಮ ಗುಣಮಟ್ಟದ ಸರ್ಕಾರಿ ಶಾಲೆಗಳನ್ನು ಸ್ಥಾಪಿಸುವ ಅಗತ್ಯವಿದೆ. ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯಿದೆಯನ್ವಯ ಮುಸ್ಲಿಂ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಸಿಗುವುದನ್ನು ಖಾತ್ರಿಪಡಿಸುವ ಅಗತ್ಯವಿದೆ. ಕರ್ನಾಟಕದ ಉರ್ದು ಶಾಲೆಗಳ ಅಧ್ಯಯನಗಳು ಗುರುತಿಸಿರುವಂತೆ ಬಹುತೇಕ ಸರ್ಕಾರಿ ಉರ್ದು ಮಾಧ್ಯಮ ಶಾಲೆಗಳು ಕನಿಷ್ಟ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿವೆ. ಕುಡಿಯುವ ನೀರು, ಶೌಚಾಲಯಗಳು ಹಾಗೂ ಗೋಡೆಗಳಿಗೆ ಕನಿಷ್ಟ ಸುಣ್ಣ ಬಣ್ಣದ ಸೌಕರ್ಯ ಒದಗಿಸುವುದು ಸಾಧ್ಯವಾಗುತ್ತಿಲ್ಲ. ಇಂತಹ ಕುಂದು ಕೊರತೆಗಳನ್ನು ನಿವಾರಿಸಿ, ಶಾಲೆಗಳನ್ನು ಆಕರ್ಷಿತ ಕೇಂದ್ರಗಳನ್ನಾಗಿ ರೂಪಿಸಲು ಸರ್ಕಾರ ಶೀಘ್ರ ಕ್ರಮ ಕೈಗೊಳ್ಳುವ ಅಗತ್ಯವಿದೆ.

**೯. ಸರ್ಕಾರದ ಶೈಕ್ಷಣಿಕ ಅಭಿವೃದ್ಧಿ ಯೋಜನೆಗಳು ಮತ್ತು ಕಾರ್ಯಕ್ರಮಗಳು ಒಳಗೊಳ್ಳುವಿಕೆ ಸ್ವರೂಪ ಪಡೆಯುವ ಅಗತ್ಯವಿದೆ.**

ಸರ್ಕಾರ ಇಂದು ಶಿಕ್ಷಣದ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳನ್ನು ಮತ್ತು ಕಾರ್ಯ ಕ್ರಮಗಳನ್ನು ರೂಪಿಸಿದೆ. ಈ ಕಾರ್ಯಕ್ರಮಗಳು ಮುಸ್ಲಿಮರನ್ನು ಒಳಗೊಳಿಸಿಕೊಳ್ಳುವ ಅಗತ್ಯವಿದೆ. ಶೈಕ್ಷಣಿಕ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಆಯವ್ಯಯವನ್ನು ನಿಗದಿಪಡಿಸುವಾಗ ಮುಸ್ಲಿಮರ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಹಣವನ್ನು ಒದಗಿಸುವ ಅಗತ್ಯವಿದೆ. ಇಂತಹ ಕ್ರಮಗಳನ್ನು ಕೈಗೊಂಡಾಗ ಮಾತ್ರ ಮುಸ್ಲಿಮರ ಶೈಕ್ಷಣಿಕ ಸ್ಥಿತಿ ಸಾಮಾನ್ಯ ಸಮುದಾಯಗಳ ಸ್ಥಿತಿಯನ್ನು ತಲುಪುವುದು ಸಾಧ್ಯವಾಗುತ್ತದೆ.

### ೧೦. ಕನಿಷ್ಠ ಮಟ್ಟದ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ತೆರೆಯುವುದು

ಕರ್ನಾಟಕದ ಅಲ್ಪಸಂಖ್ಯಾತರ ಆಯೋಗದ ಸಮಿತಿಗಳು ಗುರುತಿಸಿರುವಂತೆ ಮುಸ್ಲಿಮರಲ್ಲಿ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಪದವಿಗಳನ್ನು ಪಡೆದಿರುವವರ ಸಂಖ್ಯೆ ಕನಿಷ್ಠ ಪ್ರಮಾಣದಲ್ಲಿದೆ. ಇಂದು ಜಾರಿಯಲ್ಲಿರುವ ಶಿಕ್ಷಣ ವೈಟ್‌ಕಾಲರ್ ಉದ್ಯೋಗಿಗಳನ್ನು ಸೃಷ್ಟಿಸುವ ಸ್ವರೂಪವನ್ನು ಹೊಂದಿದೆ. ಆದರೆ, ಇಂದು ಮುಸ್ಲಿಂ ಸಮುದಾಯದಲ್ಲಿ ವೈಟ್‌ಕಾಲರ್ ಉದ್ಯೋಗದ ಅಕಾಂಕ್ಷೆ ಹೊಂದಿರುವವರ ಪ್ರಮಾಣ ಕಡಿಮೆ ಇದೆ. ಬಹುತೇಕ ಮುಸ್ಲಿಮರು ಇಂದು ಕನಿಷ್ಠ ತಾಂತ್ರಿಕ ಜ್ಞಾನದ ಅಗತ್ಯವಿರುವ ಮೋಟಾರ್ ಮೆಕ್ಯಾನಿಕ್, ವೆಲ್ಡಿಂಗ್, ಲೇಥಿಂಗ್ ಮತ್ತು ಟಿಂಕರಿಂಗ್ ಮುಂತಾದ ವೃತ್ತಿಯಲ್ಲಿ ತೊಡಗಿದ್ದಾರೆ. ಅದ್ದರಿಂದ ಸರ್ಕಾರ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿರುವ ಪ್ರದೇಶಗಳಲ್ಲಿ ಹೆಚ್ಚು ಐಟಿಐ ಕಾಲೇಜುಗಳನ್ನು ಸ್ಥಾಪಿಸುವ ಕ್ರಮ ಕೈಗೊಳ್ಳಬೇಕಿದೆ.

### ೧೧. ಉರ್ದು ಭಾಷೆಯ ರಕ್ಷಣೆಗೆ ಕ್ರಮ ಕೈಗೊಳ್ಳುವುದು

ಉರ್ದು ಕೇವಲ ಮುಸ್ಲಿಮರ ಭಾಷೆಯಲ್ಲ. ಬಹುತೇಕ ಮುಸ್ಲಿಂ ಕುಟುಂಬಗಳು ಉರ್ದು ಭಾಷೆಯನ್ನು ಮಾತನಾಡುತ್ತಿರುವುದರಿಂದ ಉರ್ದು ಭಾಷೆ ಮುಸ್ಲಿಮರ ಭಾಷೆಯಾಗಿ ಬಿಂಬಿತವಾಗಿದೆ. ಬೆಳಗಾವಿ ನಗರದ ಅಧ್ಯಯನದಲ್ಲಿ ಕಂಡುಕೊಂಡಿರುವಂತೆ ಬಹುಸಂಖ್ಯಾತ ಮುಸ್ಲಿಂ ಹೆಣ್ಣು ಮಕ್ಕಳು ಉರ್ದು ಮಾಧ್ಯಮ ಶಾಲೆಗಳಲ್ಲೇ ವ್ಯಾಸಾಂಗ ಮಾಡುತ್ತಿದ್ದಾರೆ. ಅದ್ದರಿಂದ ಸರ್ಕಾರ ಮತ್ತು ಉರ್ದು ಅಕಾಡೆಮಿ ಉರ್ದು ಭಾಷೆಯನ್ನು ರಕ್ಷಿಸುವ ಬದ್ಧತೆಯನ್ನು ಪ್ರದರ್ಶಿಸಬೇಕಿದೆ. ಇಲ್ಲವಾದಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ಸಾಕ್ಷರತೆ ಪ್ರಮಾಣ ಇನ್ನಷ್ಟೂ ಕೆಳದರ್ಜೆಗೆ ಇಳಿಯುವ ಸಾಧ್ಯತೆ ಇದೆ.

### ೧೨. ಉರ್ದು ಶಾಲೆಗಳ ಗುಣಮಟ್ಟವನ್ನು ಎತ್ತರಿಸುವುದು

ಕರ್ನಾಟಕ ರಾಜ್ಯದ ಉರ್ದು ಶಾಲೆಗಳ ವಿವಿಧ ಅಧ್ಯಯನಗಳು ಗುರುತಿಸಿರುವಂತೆ ಉರ್ದು ಶಾಲೆಗಳು ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಕನಿಷ್ಠ ಮೂಲಭೂತ ಸೌಕರ್ಯಗಳು, ಶಿಕ್ಷಕರ ಉತ್ತೇಜನ ಇಲ್ಲದಿರುವುದು, ಪಠ್ಯಪುಸ್ತಕಗಳು ಕೊರತೆ ಮುಂತಾದ ಸಮಸ್ಯೆಗಳಿಂದ ಶಾಲೆಗಳು ವಂಚಿತವಾಗಿವೆ. ಬೆಳಗಾವಿ ನಗರದ ಕ್ಷೇತ್ರ ಅಧ್ಯಯನದಲ್ಲಿ ಕಂಡುಬಂದಿರುವಂತೆ ಮುಸ್ಲಿಮ ಬಾಲಕಿಯರು ವ್ಯಾಸಾಂಗ ಮಾಡುತ್ತಿರುವ ಸರ್ಕಾರಿ ಉರ್ದು ಮತ್ತು ಕನ್ನಡ ಮಾಧ್ಯಮ ಶಾಲೆಗಳಲ್ಲಿ ಒಟ್ಟು ಐದು ಶಿಕ್ಷಕರ ಕೊರತೆ ಇದೆ. ಕೆಲವು ಶಾಲೆಗಳಲ್ಲಿ ಕನ್ನಡ ಶಿಕ್ಷಕರಿಲ್ಲ ಮತ್ತು ಬಾಲಕಿಯರಿಗೆ ಸುಸಜ್ಜಿತವಾದ ಶೌಚಾಲಯಗಳಿಲ್ಲ. ಆದರೆ, ಸರ್ಕಾರಿ ಶಾಲೆಗಳಿಗೆ ಹೋಲಿಸಿದರೆ ಅನುದಾನಿತ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಉತ್ತಮ ಸ್ಥಿತಿಯಲ್ಲಿವೆ. ಉರ್ದು ಮಾಧ್ಯಮ

ಶಾಲೆಗಳಲ್ಲಿ ಇಂಗ್ಲೀಷ್ ವಿಷಯವನ್ನು ಕಡ್ಡಾಯಗೊಳಿಸಬೇಕು. ಈ ಶಾಲೆಗಳಲ್ಲಿ ವಿಜ್ಞಾನ ಮತ್ತು ಗಣಿತವನ್ನು ಇಂಗ್ಲೀಷ್ ಮಾಧ್ಯಮದಲ್ಲಿ ಬೋಧಿಸಬೇಕು. ಇಲ್ಲವಾದಲ್ಲಿ ಮುಸ್ಲಿಂ ವಿದ್ಯಾರ್ಥಿಗಳು ಉತ್ತಮ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ಪಡೆಯುವುದು ಮತ್ತು ಮಾರುಕಟ್ಟೆಯಲ್ಲಿ ಉದ್ಯೋಗ ಪಡೆಯುವುದು ಸಾಧ್ಯವಾಗುವುದಿಲ್ಲ.

### ೧೩. ಪಠ್ಯಪುಸ್ತಕಗಳ ಕೇಸರೀಕರಣ ತಡೆಯಬೇಕು

ಇತರೆ ಸಮುದಾಯಗಳಿಗೆ ಹೋಲಿಸಿದರೆ, ಮುಸ್ಲಿಮರು ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುವವರಾಗಿದ್ದಾರೆ. ಮುಸ್ಲಿಮರು ಸಾಮಾನ್ಯ ಸಂಗತಿಗಳಿಗಿಂತ ಭಾವನಾತ್ಮಕ ಸಂಗತಿಗಳಿಗೆ ಹೆಚ್ಚು ಸ್ಪಂದಿಸುತ್ತಾರೆ. ಭಾರತದ ವಿವಿಧ ಪ್ರದೇಶಗಳ ಅಧ್ಯಯನಗಳು ನಿರೂಪಿಸಿರುವಂತೆ ಪಠ್ಯಪುಸ್ತಕಗಳಲ್ಲಿ ಹೆಚ್ಚಾಗಿ ತಮ್ಮದಲ್ಲದ ಧರ್ಮ, ಸಂಸ್ಕೃತಿ ಮತ್ತು ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಗಳು ಹೆಚ್ಚಾಗಿರುವುದರಿಂದ ಮುಸ್ಲಿಂ ವಿದ್ಯಾರ್ಥಿಗಳಿಗೆ ಪಠ್ಯಗಳು ಆಕರ್ಷಿತವಾಗುತ್ತಿಲ್ಲ. ಭಾರತ ಸಂವಿಧಾನದ ಆಶಯದಂತೆ ಶಾಲೆ ಮತ್ತು ಪಠ್ಯಗಳು ಹೆಚ್ಚು ಧರ್ಮನಿರಪೇಕ್ಷಗೊಳ್ಳುವ ಅಗತ್ಯವಿದೆ.

### ೧೪. ಮದರಸಾಗಳು ಮತ್ತು ಸಮಾಜದ ನಡುವೆ ಸಾಮರಸ್ಯವನ್ನು ತರುವುದು

ಮದರಸಾಗಳನ್ನು ಭಯೋತ್ಪಾದಕರ ನೆಲೆಗಳನ್ನಾಗಿ ಗುರುತಿಸಲಾಗುತ್ತಿದೆ. ಸ್ವಾತಂತ್ರ್ಯ ಹೋರಾಟಗಳಲ್ಲಿ, ಏಕೀಕೃತ ಭಾರತದ ಬೇಡಿಕೆಯಲ್ಲಿ, ದೇಶದ ವೈವಿಧ್ಯತೆಯನ್ನು ಉಳಿಸಿಕೊಳ್ಳುವಲ್ಲಿ ಅಸಂಖ್ಯಾತ ಮದರಸಾಗಳು ಭಾಗವಹಿಸಿರುವುದನ್ನು ಇಂದು ಗುರುತಿಸಲಾಗುತ್ತಿಲ್ಲ ಮದರಸಾಗಳು ರಾಷ್ಟ್ರ ವಿರೋಧಿ ಸಂಸ್ಥೆಗಳಲ್ಲ. ಇಂತಹ ಅನುಮಾನಗಳು ಮತ್ತು ತಪ್ಪು ಕಲ್ಪನೆಗಳನ್ನು ದೂರ ಮಾಡಲು ಮದರಸಾಗಳು ಮತ್ತು ಸಮಾಜದ ನಡುವೆ ಮುಕ್ತ ಸಂವಾದ ಏರ್ಪಡಿಸುವ ಅಗತ್ಯವಿದೆ. ಇದರ ಜೊತೆಗೆ ಮದರಸಾಗಳು ಅಧುನಿಕ ಪಠ್ಯಗಳನ್ನು ಅಳವಡಿಸಿಕೊಂಡು ಮುಸ್ಲಿಂ ವಿದ್ಯಾರ್ಥಿಗಳ ಉನ್ನತ ವ್ಯಾಸಾಂಗ ಮತ್ತು ಉದ್ಯೋಗ ಪಡೆಯುವಲ್ಲಿ ಇರುವ ಸಮಸ್ಯೆಗಳನ್ನು ನಿವಾರಿಸುವ ಅಗತ್ಯವಿದೆ. ಬೆಳಗಾವಿ ನಗರದಲ್ಲಿ ಕೇವಲ ೫ ರಿಂದ ೬ ಮದರಸಾಗಳು ಕಾರ್ಯನಿರ್ವಹಿಸುತ್ತಿದ್ದು ಅವುಗಳಲ್ಲಿ ಕನಿಷ್ಠ ಸಂಖ್ಯೆಯ ಬಾಲಕರು ಮಾತ್ರ ವ್ಯಾಸಾಂಗ ಮಾಡುತ್ತಿದ್ದಾರೆ.

### ೧೫. ಶೈಕ್ಷಣಿಕವಾಗಿ ಪ್ರಾದೇಶಿಕ ಅಸಮತೋಲನವನ್ನು ನಿವಾರಿಸುವುದು

ಅಭಿವೃದ್ಧಿ ರಾಷ್ಟ್ರಗಳು ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಪ್ರಾದೇಶಿಕ ಅಸಮಾನತೆಯೂ ಒಂದು. ಪ್ರಾದೇಶಿಕ ಅಸಮಾನತೆಗಳಿಗೆ ಒಳಗಾಗಿರುವ ಪ್ರದೇಶಗಳಲ್ಲಿ ನಿರ್ಲಕ್ಷಿತ, ಪರಿಶಿಷ್ಟ ಮತ್ತು ಅಲ್ಪಸಂಖ್ಯಾತ ಸಮುದಾಯಗಳು ತೀವ್ರ ಅಸಮಾನತೆಗೆ ಒಳಗಾಗಿರುತ್ತವೆ. ಪ್ರಾದೇಶಿಕ ಅಸಮತೋಲನ

ನಿವಾರಣಾ ಸಮಿತಿಯ ಶಿಫಾರಸ್ಸಿನ ಪ್ರಕಾರ ಬೆಳಗಾವಿ ಜಿಲ್ಲೆಯು ವರಮಾನದಲ್ಲಿ ಕೆಳಮಟ್ಟದಲ್ಲಿದ್ದು, ಮಾನವಾಭಿವೃದ್ಧಿಯಲ್ಲಿ ಉತ್ತಮ ಸ್ಥಿತಿಯಲ್ಲಿದೆ. ಆದರೆ ಸಮುದಾಯವಾರು ಮಾನವಾಭಿವೃದ್ಧಿಯ ಅಸಮತೋಲನ ಮುಂದುವರೆದಿದೆ. ರಾಜ್ಯದ ಪುರುಷರ ಸಾಕ್ಷರತೆ ಶೇ.೭೫.೬೦ ರಷ್ಟು ಇದ್ದು ಅದರಲ್ಲಿ ಶೇ.೮೨.೮೨ ರಷ್ಟು ಪುರುಷರ ಸಾಕ್ಷರತೆ ಮತ್ತು ಶೇ.೬೮.೧೩ ರಷ್ಟು ಮಹಿಳೆಯರ ಸಾಕ್ಷರತೆ ಕಂಡುಬರುತ್ತದೆ. ಬೆಳಗಾವಿ ಜಿಲ್ಲೆಯ ಸಾಕ್ಷರತೆ ಶೇ.೭೩.೪೮ ರಷ್ಟಿದ್ದು ಅದರಲ್ಲಿ ಪುರುಷರದ್ದು ಶೇ.೭೯.೧೨ ರಷ್ಟು ಮತ್ತು ಮಹಿಳಾ ಸಾಕ್ಷರತೆ ಶೇ.೫೯.೨೦ ರಷ್ಟು ದಾಖಲಾಗಿದೆ. ಈ ದತ್ತಾಂಶಗಳಿಗೆ ಹೋಲಿಸಿದರೆ ಮುಸ್ಲಿಮರ ಒಟ್ಟು ಸಾಕ್ಷರತಾ ಮತ್ತು ವಿಶೇಷವಾದ ಮುಸ್ಲಿಂ ಮಹಿಳೆಯರ ಸಾಕ್ಷರತೆ ಕಡಿಮೆ ಕಂಡುಬರುತ್ತದೆ. ಕ್ಷೇತ್ರ ಅಧ್ಯಯನದ ಮೂಲಕ ಕಂಡುಬರುವಂತೆ ಬೆಳಗಾವಿ ನಗರದಲ್ಲಿ ಪುರುಷರ ಸಾಕ್ಷರತೆ ಶೇ.೫೮ ರಷ್ಟಿದ್ದು, ಮಹಿಳೆಯರ ಸಾಕ್ಷರತೆ ಶೇ.೩೯ ರಷ್ಟು ದಾಖಲಾಗಿದೆ. ಅಂದರೆ ಇತರೆ ಸಮುದಾಯಗಳಿಗೆ ಹೋಲಿಸಿದರೆ ಬೆಳಗಾವಿ ನಗರದ ಮುಸ್ಲಿಂ ಪುರುಷರ ಮತ್ತು ಮಹಿಳೆಯರ ಸಾಕ್ಷರತ ಅತ್ಯಂತ ಕಡಿಮೆ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಮಾನವಾಭಿವೃದ್ಧಿಯನ್ನು ಸ್ಥೂಲವಾಗಿ ಗ್ರಹಿಸುವುದು ಸರಿಯಲ್ಲ. ಮುಸ್ಲಿಮರು ಇಂದಿಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಸರ್ಕಾರ ಬೆಳಗಾವಿ ನಗರದ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ವಿಶೇಷ ಪ್ರಯತ್ನಗಳನ್ನು ಕೈಗೊಳ್ಳುವ ಅಗತ್ಯವಿದೆ.

### ೧೬. ಸಮುದಾಯವಾರು ಶೈಕ್ಷಣಿಕ ಸಂಪನ್ಮೂಲಗಳ ಅಸಮಾನತೆಗಳನ್ನು ನಿವಾರಿಸುವುದು

ಬೆಳಗಾವಿ ನಗರದಲ್ಲಿ ಇತರೆ ಸಮುದಾಯಗಳ ಶೈಕ್ಷಣಿಕ ಅಭಿವೃದ್ಧಿಗೆ ಲಭ್ಯವಿರುವ ಸೌಲಭ್ಯಗಳಿಗೆ ಹೋಲಿಸಿದರೆ, ಮುಸ್ಲಿಂ ಸಮುದಾಯಗಳಿಗೆ ನೀಡಿರುವ ಶೈಕ್ಷಣಿಕ ಸೌಲಭ್ಯಗಳು ಕಡಿಮೆಯಾಗಿವೆ. ಮುಸ್ಲಿಂ ಬಾಲಕಿಯರಿಗೆ ಸರ್ಕಾರಿ ವಸತಿ ನಿಲಯಗಳು ಲಭ್ಯವಿದ್ದು, ಅನುದಾನಿತ ಬಾಲಕಿಯರ ವಸತಿ ನಿಲಯಗಳು ಲಭ್ಯವಿರುವುದಿಲ್ಲ. ಅತ್ಯಂತ ಬಡತನದಿಂದ ನರಳುತ್ತಿರುವ, ಮಹಿಳಾ ಸಾಕ್ಷರತೆಯ ದೃಷ್ಟಿಯಿಂದ ಹೀನಾಯವಾದ ಸ್ಥಿತಿಯಲ್ಲಿರುವ ಮುಸ್ಲಿಂ ಬಾಲಕಿಯರಿಗೆ ಶೈಕ್ಷಣಿಕ ಅಭಿವೃದ್ಧಿಗೆ ಪ್ರಮುಖ ಅಡ್ಡಿಯಾಗಿದೆ. ಈ ಹಿನ್ನಲೆಯಲ್ಲಿ ಸರ್ಕಾರ ಮುಸ್ಲಿಂ ಮಹಿಳೆಯರಿಗೆ ಪ್ರತ್ಯೇಕ ಶಾಲೆಗಳು, ಕಾಲೇಜುಗಳು, ತರಬೇತಿ ಕೇಂದ್ರಗಳು ಮತ್ತು ಪ್ರತ್ಯೇಕ ಅನುದಾನಿತ ಬಾಲಕಿಯರ ವಸತಿ ನಿಲಯಗಳನ್ನು ಸ್ಥಾಪಿಸುವ ಕ್ರಮಕೈಗೊಳ್ಳುವ ಅಗತ್ಯವಿದೆ.

### ೧೭. ಕರ್ನಾಟಕ ಅಲ್ಪಸಂಖ್ಯಾತ ಸಮಿತಿಗಳ ಶಿಫಾರಸ್ಸುಗಳನ್ನು ಶೀಘ್ರ ಜಾರಿಗೆ ತರುವುದು

ಕರ್ನಾಟಕ ಸರ್ಕಾರ ೧೯೯೫ ರಲ್ಲಿ ನೇಮಕವಾಗಿದ್ದ ರೆಹಮಾನ್ ಖಾನ್ ವರದಿಯು ಮುಸ್ಲಿಂ ಸಾಮಾಜಿಕವಾಗಿ, ಅರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದನ್ನು ಬಹಿರಂಗವಾಗಿದೆ. ಅತೀ ಹೆಚ್ಚು ಮುಸ್ಲಿಂ ಮಕ್ಕಳು ಮಧ್ಯದಲ್ಲೇ ಶಾಲೆಯನ್ನು ತೊರೆದು

ಬಾಲಕಾರ್ಮಿಕರಾಗಿ ಸೇರ್ಪಡೆಗೊಳ್ಳುತ್ತಿರುವ ಸಂಗತಿಗಳ ಮೇಲೆ ಬೆಳಕು ಚೆಲ್ಲಿದೆ. ಆದ್ದರಿಂದ ಮುಸ್ಲಿಮರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗಾಗಿ ವರದಿ ಬಹಿರಂಗಪಡಿಸಿದ ಅಂಶಗಳ ಬಗ್ಗೆ ಕ್ರಮಕೈಗೊಳ್ಳಬೇಕಾಗಿದೆ.

### ೧೮. ಗಡಿನಾಡು ಸಮಿತಿಗಳ ಶಿಫಾರಸ್ಸುಗಳನ್ನು ಜಾರಿಗೊಳಿಸುವುದು.

ಬೆಳಗಾವಿ ಜಿಲ್ಲೆಯು ಮಹಾರಾಷ್ಟ್ರದ ಗಡಿಗೆ ಹೊಂದಿಕೊಂಡಿದೆ. ಸ್ವಾತಂತ್ರ್ಯ ಮತ್ತು ಏಕೀಕರಣ ಪೂರ್ವದಿಂದಲೂ ಜಿಲ್ಲೆಯು ಮರಾಠಿ ಭಾಷೆಯ ಪ್ರಾಬಲ್ಯಕ್ಕೆ ಒಳಗಾಗಿದೆ. ಮರಾಠಿ ಭಾಷೆಯ ಪ್ರಾಬಲ್ಯ ಮತ್ತು ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕೆನ್ನುವ ಸಂಘರ್ಷ ಇಂದಿಗೂ ದೂರವಾಗಿಲ್ಲ. ಈ ಭಾಗದ ಶಿಕ್ಷಣ ಇಂದಿಗೂ ದ್ವಿಭಾಷಿ ಸಂಘರ್ಷದಿಂದ ಮುಕ್ತವಾಗಿಲ್ಲ. ಈ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರಗಳು ಗೋಕಾಕ್ ಸಮಿತಿ, ನರಸಿಂಗಯ್ಯ ಸಮಿತಿ, ಸರೋಜಿನಿ ಮಹಿಷಿ ಸಮಿತಿ, ಚಂದರಗಿ ಸಮಿತಿ, ರಾಜಾರಾಮಣ್ಣ ಸಮಿತಿ ಮತ್ತು ಬರಗೂರು ರಾಮಚಂದ್ರಪ್ಪ ಸಮಿತಿಗಳನ್ನು ನೇಮಕ ಮಾಡಿತ್ತು. ಸಮಿತಿಗಳು ಅಧ್ಯಯನ ಮಾಡಿ ಶೈಕ್ಷಣಿಕ ಮತ್ತು ಗಡಿಭಾಗಗಳ ಅಭಿವೃದ್ಧಿಗೆ ಸೂಕ್ತ ಶಿಫಾರಸ್ಸುಗಳನ್ನು ನೀಡಿವೆ. ಈ ಶಿಫಾರಸ್ಸುಗಳನ್ನು ಸರ್ಕಾರಗಳು ಪ್ರಾಮಾಣಿಕವಾಗಿ ಜಾರಿಗೊಳಿಸುವ ಅಗತ್ಯ ಹೆಚ್ಚಾಗಿದೆ.

### ೧೯. ಮುಸ್ಲಿಮರ ಸ್ಥಿತಿಗಳನ್ನು ಅರಿಯಲು ಹೊಸ ಸಮಿತಿ ನೇಮಕದ ಅಗತ್ಯ

ರೆಹಮಾನ್‌ಖಾನ್ ವರದಿಯ ನಂತರ ಇಪ್ಪತ್ತು ವರ್ಷಗಳಾದರೂ, ಇಂದಿಗೂ ಸರ್ಕಾರಗಳು ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಯನ್ನು ಅಧ್ಯಯನ ಮಾಡಲು ವಿಶೇಷ ಮತ್ತು ಉನ್ನತಾಧಿಕಾರ ಸಮಿತಿಯನ್ನು ರಚಿಸಿರುವುದಿಲ್ಲ. ಸರ್ಕಾರಗಳು ಮುಸ್ಲಿಮರಿಗೆ ಮದುವೆಯೇ ದೊಡ್ಡ ಸಮಸ್ಯೆಯೆಂದು ಭಾವಿಸಿದಂತಿದೆ. ಈ ಹಿನ್ನಲೆಯಲ್ಲಿ ಸಮುದಾಯಕ್ಕೆ ಅಗತ್ಯವಿಲ್ಲದ 'ಶಾದಿಭಾಗ್ಯ' ಯೋಜನೆಯನ್ನು ರೂಪಿಸಿ ಸಾರ್ವತ್ರಿಕ ಟೀಕೆಗೆ ಗುರಿಯಾಗುತ್ತಿದೆ. ಸರ್ಕಾರ ಮುಸ್ಲಿಮರ ತುಷ್ಟೀಕರಣ ಮಾಡುತ್ತಿದೆ ಎನ್ನುವ ಆರೋಪಕ್ಕೆ ಗುರಿಯಾಗುತ್ತಿದೆ. ಸರ್ಕಾರಗಳು ಇಂತಹ ಮತ ಸೆಳೆಯುವ ಕಾರ್ಯಕ್ರಮಗಳನ್ನು ಬಿಟ್ಟು, ಮುಸ್ಲಿಮರನ್ನು ಸ್ವಾವಲಂಬಿಯನ್ನಾಗಿಸುವ ಮತ್ತು ಸಬಲೀಕರಣಗೊಳಿಸುವ 'ವಿಶೇಷ ಶೈಕ್ಷಣಿಕ ಭಾಗ್ಯದಂಥ' ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ. ಮುಸ್ಲಿಮರ ಇಂದಿನ ಸ್ಥಿತಿಗಳನ್ನು ಅರಿಯಲು ಹೊಸ ಸಮಿತಿಯನ್ನು ನೇಮಕ ಮಾಡುವ ಅಗತ್ಯವಿದೆ.

### ೨೦. ಮುಸ್ಲಿಂ ಮಕ್ಕಳನ್ನು ಸಾರ್ವತ್ರಿಕ ಶಿಕ್ಷಣದ ಮುಖ್ಯವಾಹಿನಿಗೆ ತರುವುದು

ಮುಸ್ಲಿಮರು ಹೆಚ್ಚಾಗಿ ಮದರಸಾಗಳಲ್ಲೇ ಓದುತ್ತಾರೆ ಎನ್ನುವ ವಾದಕ್ಕೆ ಯಾವುದೇ ಆಧಾರಗಳಿಲ್ಲ. ಸಾಚಾರ್ ವರದಿಯು ಈ ಅಂಶವನ್ನು ದೃಢೀಕರಿಸಿದೆ. ಬೆಳಗಾವಿ ನಗರದ ಮುಸ್ಲಿಮರ ಅಧ್ಯಯನವೂ ಈ ಅಂಶವನ್ನು ಸರಿ ಎಂದು ನಿರೂಪಿಸುತ್ತದೆ. ಇಸ್ಲಾಂ ಧರ್ಮವು

ಮಹಿಳೆಯರ ಶಿಕ್ಷಣವನ್ನು ನಿರ್ಬಂಧಿಸುವುದಿಲ್ಲ ಎಂಬ ಅರಿವು ಮುಸ್ಲಿಮರಲ್ಲಿ ಮೂಡಿದೆ. ಈ ಹಿನ್ನಲೆಯಲ್ಲಿ ಅವರನ್ನು ಸಾರ್ವತ್ರಿಕ ಶಿಕ್ಷಣದ ಮುಖ್ಯವಾಹಿನಿಗೆ ತರುವ ಪ್ರಯತ್ನಗಳನ್ನು ಸರ್ಕಾರಗಳು ಮಾಡಬೇಕಿದೆ.

**೨೧. ಮುಸ್ಲಿಂ ಮಹಿಳೆಯರಿಗೆ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಉದ್ಯೋಗದ ತರಬೇತಿ ನೀಡುವುದು.**

ಬೆಳಗಾವಿ ನಗರ ಮುಸ್ಲಿಂ ಬಾಲಕಿಯರು ಮತ್ತು ಮಹಿಳೆಯರಿಗೆ ಶಿಕ್ಷಣ, ಉನ್ನತ ವ್ಯಾಸಂಗ ಮತ್ತು ಉದ್ಯೋಗಗಳ ಬಗ್ಗೆ ಸಕಾರಾತ್ಮಕ ಮನೋಭಾವನೆಯನ್ನು ರೂಢಿಸಿಕೊಂಡಿದ್ದಾಳೆ. ಇಂತಹ ಮಹಿಳೆಯರನ್ನು ಮುಖ್ಯವಾಹಿನಿಗೆ ತರುವುದು ಸರ್ಕಾರಗಳಿಗೆ ಕಷ್ಟವಲ್ಲ. ಉನ್ನತ ವ್ಯಾಸಂಗವನ್ನು ಹೊಂದಿರುವ ಮುಸ್ಲಿಂ ಕನಿಷ್ಟ ಪ್ರಮಾಣದ ಮಹಿಳೆಯರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡಿ, ಮಹಿಳೆಯರಿಗೆ ವಿಶೇಷ ಮೀಸಲಾತಿಯನ್ನು ಕಲ್ಪಿಸಿ ಉದ್ಯೋಗ ದೊರೆಯುವಂತೆ ಮಾಡಿ ಅವರನ್ನು ಸ್ವಾವಲಂಬಿಗಳನ್ನಾಗಿ ರೂಪಿಸುವ ಕಾರ್ಯವನ್ನು ಸರ್ಕಾರ ಕೈಗೊಳ್ಳಬೇಕಾದ ಅಗತ್ಯವಿದೆ.

**೨೨. ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಬದಲಾಗಬೇಕಾದ ಮುಸ್ಲಿಂ ಮನೋಭಾವನೆಗಳು**

ಇಂದು ಜಾತ್ಯಾತೀತ ನಾಗರೀಕ ಸಮಾಜಗಳು ಮುಸ್ಲಿಮರನ್ನು ಧಾರ್ಮಿಕ ಸಾಂಸ್ಕೃತಿಕ ಅನನ್ಯತೆಯ ದೃಷ್ಟಿಕೋನದಿಂದ ಮಾತ್ರ ನೋಡುವ ಮನೋಭಾವನೆಯನ್ನು ಬದಲಾಯಿಸಿಕೊಳ್ಳ ಬೇಕಿದೆ. ಮುಸ್ಲಿಮರು ಬಡವರು, ಶೈಕ್ಷಣಿಕವಾಗಿ ಹಿಂದುಳಿದವರು ಮತ್ತು ರಾಜಕೀಯವಾಗಿ ಕೇವಲ ಮತದಾರರು ಎನ್ನುವ ಗ್ರಹಿಕೆಗಳು ಜಾತ್ಯಾತೀತ ನಾಗರೀಕ ಸಮಾಜದಲ್ಲಿ ಗಟ್ಟಿಗೊಳ್ಳಬೇಕಾದ ಅಗತ್ಯವಿದೆ.

**೨೩. ಮುಸ್ಲಿಂ ಮಹಿಳಾ ಶಿಕ್ಷಣದ ಬಗ್ಗೆ ಬದಲಾಗಬೇಕಾದ ಪೋಷಕರ ಮನೋಭಾವನೆಗಳು**

ಇದರೊಂದಿಗೆ, ಮುಸ್ಲಿಮರು ಕೂಡ ಈ ದೇಶದ ನಾಗರೀಕರು ಎನ್ನುವ ಮನೋವೈಶಾಲ್ಯವನ್ನು ರೂಢಿಸಿಕೊಂಡು ಮುಖ್ಯವಾಹಿನಿಯೊಂದಿಗೆ ಮುಕ್ತವಾಗಿ ಬೆರೆಯುವ, ತಮ್ಮ ಹೆಣ್ಣು ಮಕ್ಕಳನ್ನು ಉನ್ನತ ವ್ಯಾಸಂಗಕ್ಕೆ ಪ್ರೋತ್ಸಾಹಿಸುವ ಹಾಗೂ ತಮ್ಮ ಸಮುದಾಯದ ಮಹಿಳಾ ಶಿಕ್ಷಣದ ಬಗ್ಗೆ ಇರುವ ಸಕಾರಾತ್ಮಕ ಮನೋಭಾವನೆಯನ್ನು ದೂರಮಾಡಿ, ಮಹಿಳಾ ಶಿಕ್ಷಣವನ್ನು ಪ್ರೋತ್ಸಾಹಿಸಿ ಅವರನ್ನು ಸಬಲೀಕರಿಸುವ ನಿಟ್ಟಿನಲ್ಲಿ ಶ್ರಮಿಸಬೇಕಿದೆ.

## ಭಾಗ: ಮೂರು

## ಹೆಣ್ಣುಮಕ್ಕಳ ಶಿಕ್ಷಣದ ಅಭಿವೃದ್ಧಿಗಾಗಿ ಮುಸ್ಲಿಂ ಸಮುದಾಯ ನಿರ್ವಹಿಸಬೇಕಾದ ಜವಾಬ್ದಾರಿಗಳು

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮುಸ್ಲಿಮರು ಮತ್ತು ವಿಶೇಷವಾಗಿ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ.

ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣ ಪಡೆಯಲು ವಿವಿಧ ಪ್ರೋತ್ಸಾಹದಾಯಕ ಕ್ರಮಗಳನ್ನು ಕೈಗೊಂಡಿವೆ. ಆದರೂ ಮುಸ್ಲಿಂ ಹೆಣ್ಣು ಮಕ್ಕಳ ಸಾಕ್ಷರತೆ ಪ್ರಮಾಣ ನಿರೀಕ್ಷಿತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ನಾಗರೀಕ ಸಮಾಜಗಳು ಕೂಡ ಮಧ್ಯಪ್ರವೇಶ ಮಾಡುವುದು ಅಗತ್ಯವೆಂದು ಭಾವಿಸಲಾಗಿದೆ. ಈ ಹಿನ್ನಲೆಯಲ್ಲಿ ಮುಸ್ಲಿಂ ಸಮುದಾಯ ನಿರ್ವಹಿಸಬೇಕಾದ ಕಾರ್ಯಗಳನ್ನು ಗುರುತಿಸಲಾಗಿದೆ. ಅವುಗಳನ್ನು ಚರ್ಚಿಸಲಾಗಿದೆ.

**೧. ಜಕಾತ್ ಮತ್ತು ಸದಖಾ ಹಣದ ಸದುಪಯೋಗ:** ಮುಸ್ಲಿಂ ಸಮುದಾಯದ, ವಿಶೇಷವಾಗಿ ಮುಸ್ಲಿಂ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಲು ಸಮುದಾಯದಿಂದ 'ಜಕಾತ್' ಮತ್ತು 'ಸದಖಾ' ಹಣವನ್ನು ಸಂಗ್ರಹಿಸಲಾಗುತ್ತಿದೆ. ಸಮುದಾಯವು ಈ ಹಣವನ್ನು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಸದುಪಯೋಗ ಮಾಡುವ ಅಗತ್ಯವಿದೆ. ಇದರ ಜೊತೆಗೆ ವಕ್ಫ್ ಆಸ್ತಿಯಿಂದ ಕ್ರೋಢೀಕರಣಗೊಳ್ಳುವ ಹಣದಿಂದ ರಚನಾತ್ಮಕ ಶೈಕ್ಷಣಿಕ ಯೋಜನೆಯನ್ನು ರೂಪಿಸುವ ಅಗತ್ಯವಿದೆ.

**೨. ಆಧುನಿಕ ಶಿಕ್ಷಣಕ್ಕೆ ಆದ್ಯತೆ ನೀಡುವುದು:** ಸಮುದಾಯದ ನಾಯಕರು ಹಾಗೂ ಮುಸ್ಲಿಂ ರಾಜಕೀಯ ಪ್ರತಿನಿಧಿಗಳು ಸಮುದಾಯಕ್ಕೆ ಆಧುನಿಕ ಶಿಕ್ಷಣ ನೀಡಲು ಆದ್ಯತೆ ನೀಡಬೇಕು. ಮುಸ್ಲಿಮರ ಶಿಕ್ಷಣವೆಂದರೆ ಉರ್ದು ಮತ್ತು ಮದರಸಾಗಳಿಗೆ ಸೀಮಿತಗೊಳಿಸುವ ಕ್ರಮಗಳನ್ನು ನಿಲ್ಲಿಸಬೇಕಿದೆ. ಸಮುದಾಯ ಈ ನಿಟ್ಟಿನಲ್ಲಿ ಅಗತ್ಯ ಕ್ರಮ ಕೈಗೊಳ್ಳುವ ಅಗತ್ಯವಿದೆ.

**೩. ಪ್ರಾಥಮಿಕ ಶಿಕ್ಷಣ ಸಂಸ್ಥೆಗಳಿಗೆ ಆದ್ಯತೆ ನೀಡುವುದು.:** ಮುಸ್ಲಿಂ ಸಂಘಟನೆಗಳು ಸಾಮಾನ್ಯ ಶಿಕ್ಷಣ ಸಂಸ್ಥೆಗಳು ಮತ್ತು ವಿವಿಧ ತಾಂತ್ರಿಕ ಸಂಸ್ಥೆಗಳನ್ನು ಸ್ಥಾಪಿಸಿವೆ. ಇವುಗಳ ಜೊತೆಗೆ ಸಮುದಾಯ ಹೆಚ್ಚು ಪ್ರಾಥಮಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಬಗ್ಗೆ ಹೆಚ್ಚು ಗಮನ ನೀಡಬೇಕಾದ ಅಗತ್ಯವಿದೆ. ಭಾರತದ ಶಿಕ್ಷಣ ವ್ಯವಸ್ಥೆಯನ್ನು ಗಟ್ಟಿಗೊಳಿಸಬೇಕಾದರೆ ಮೊದಲು ಶಾಲಾ ಶಿಕ್ಷಣವನ್ನು ಗಟ್ಟಿಗೊಳಿಸುವ ಅಗತ್ಯವಿದೆ.

**೪. ಸಮುದಾಯ ಮತ್ತು ಶಾಲೆಗಳ ನಡುವೆ ಸಂಬಂಧವನ್ನು ಗಟ್ಟಿಗೊಳಿಸುವುದು:** ವಿವಿಧ ಸರ್ಕಾರೇತರ ಸಂಸ್ಥೆಗಳು ಸಮುದಾಯ ಮತ್ತು ಶಾಲೆಗಳ ನಡುವಿನ ಸಂಬಂಧಗಳನ್ನು ಗಟ್ಟಿಗೊಳಿಸುವ ಕಾರ್ಯದಲ್ಲಿ ಕ್ರಿಯಾಶೀಲವಾಗಿವೆ. ಬೆಳಗಾವಿ ನಗರದ ಅಧ್ಯಯನದಲ್ಲಿ ಕಂಡುಕೊಂಡಿರುವಂತೆ ಅನೇಕ ಜಾತ್ಯಾತೀತ ನಾಗರೀಕ ಸಮಾಜದ ಸಂಘಟನೆಗಳು ಶಾಲಾ ಸಮಸ್ಯೆಗಳನ್ನು ನಿವಾರಿಸಲು, ಮೂಲಭೂತ ಸೌಕರ್ಯಗಳನ್ನು ಒದಗಿಸಲು ಮತ್ತು ಸರ್ಕಾರದ ಶಿಕ್ಷಣದ ನೀತಿಯನ್ನು ವಿರೋಧಿಸುವಲ್ಲಿ ನಿರತವಾಗಿವೆ. ಇಂತಹ ಜಾತ್ಯಾತೀತ ಸಂಘಟನೆಗಳನ್ನು ಮುಸ್ಲಿಂ ಸಮುದಾಯ ಮುಕ್ತವಾಗಿ ಬೆಂಬಲಿಸುವ ಅಗತ್ಯವಿದೆ.

**೫. ಜಾತ್ಯತೀತ ನಾಗರೀಕ ಸಮಾಜಕ್ಕೆ ಮುಸ್ಲಿಮರ ಸಮಾಜೋ-ಆರ್ಥಿಕ ಅನನ್ಯತೆಗಳನ್ನು ಗಟ್ಟಿಗೊಳಿಸುವುದು:** ಪ್ರಸ್ತುತ ಅಧ್ಯಯನ ಕಂಡುಕೊಂಡಿರುವಂತೆ ಜಾತ್ಯಾತೀತ ನಾಗರೀಕ ಸಮುದಾಯಕ್ಕೆ ಮುಸ್ಲಿಮರ ಬಗ್ಗೆ ನಕಾರಾತ್ಮಕ ಮನೋಭಾವನೆಗಳು ಹೆಚ್ಚಾಗಿವೆ. ಮುಸ್ಲಿಮರು ಬಡವರು, ಶೈಕ್ಷಣಿಕವಾಗಿ ಹಿಂದುಳಿದವರು ಮತ್ತು ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ದಯನೀಯ ಸ್ಥಿತಿಯಲ್ಲಿರುವವರು ಎನ್ನುವ ಗ್ರಹಿಕೆಗಳಿಗಿಂತ ಮುಸ್ಲಿಮರು ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳಿಗೆ ಹೆಚ್ಚು ಒತ್ತು ನೀಡುತ್ತಾರೆ ಎನ್ನುವ ಗ್ರಹಿಕೆಗಳೇ ಹೆಚ್ಚಾಗಿವೆ. ಇಂತಹ ನಕಾರಾತ್ಮಕ ಗ್ರಹಿಕೆಗಳನ್ನು ನಿವಾರಿಸಲು ಮುಸ್ಲಿಂ ಸಮುದಾಯ ಪ್ರಯತ್ನಗಳನ್ನು ಕೈಗೊಳ್ಳಬೇಕಿದೆ.

**೬. ಮುಸ್ಲಿಂ ಪರವಾದ ಹೋರಾಟಗಳನ್ನು ಬೆಂಬಲಿಸುವುದು** : ಜಾತ್ಯಾತೀತ ನಾಗರೀಕ ಸಮಾಜಗಳು ಮುಸ್ಲಿಮರ ಶೈಕ್ಷಣಿಕ ಮತ್ತು ಇತರೆ ಸಮಸ್ಯೆಗಳ ನಿವಾರಣೆಗಾಗಿ ಹೋರಾಟಗಳನ್ನು ರೂಪಿಸುತ್ತಿವೆ. ಇಂತಹ ಹೋರಾಟಗಳಿಗೆ ಮುಸ್ಲಿಂ ಸಮುದಾಯದ ಬೆಂಬಲ ಕಡಿಮೆ. ಮುಸ್ಲಿಮರು ಕೇವಲ ಭಾವನಾತ್ಮಕ ಸಂಗತಿಗಳಿಗೆ ಮಾತ್ರ ಹೋರಾಟಗಳನ್ನು ರೂಪಿಸದೇ ಮುಸ್ಲಿಂ ಸಮುದಾಯ ಎದುರಿಸುತ್ತಿರುವ ವಾಸ್ತವಿಕ ಸಮಸ್ಯೆಗಳಿಗೂ ಹೋರಾಟಗಳನ್ನು ರೂಪಿಸಿ, ಇತರೆ ಸಂಘಟನೆಗಳ ಹೋರಾಟಗಳನ್ನು ಬೆಂಬಲಿಸುವುದು ಇಂದಿನ ಅಗತ್ಯವಾಗಿದೆ.

**೭. ಶೈಕ್ಷಣಿಕ ಸಮಸ್ಯೆಗಳಿಗೆ ಸಂಘಟಿತ ಮತ್ತು ರಚನಾತ್ಮಕ ಹೋರಾಟಗಳನ್ನು ರೂಪಿಸುವುದು.**

ಇಂದಿಗೂ ಮುಸ್ಲಿಂ ಸಮುದಾಯ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಸಮುದಾಯದ ಸಣ್ಣ ಮಟ್ಟ ನಾಯಕರನ್ನು, ಪಾಲಿಕೆಯ ಸದಸ್ಯರನ್ನು ಮತ್ತು ಸ್ವಲ್ಪ ಮಟ್ಟಿಗೆ ಸರ್ಕಾರಿ ಅಧಿಕಾರಿಗಳನ್ನು ಅವಲಂಬಿಸುವುದು ಕಂಡುಬರುತ್ತದೆ. ಈ ಮಾರ್ಗಗಳು ಸಮುದಾಯದ ಸಮಸ್ಯೆಗಳನ್ನು ತಾತ್ಕಾಲಿಕವಾಗಿ ಉಪಶಮನ ಮಾಡಬಹುದೇ ಹೊರತು ಶಾಶ್ವತವಾಗಿ ಸಮಸ್ಯೆಗಳಿಗೆ ಪರಿಹಾರ ನೀಡುವುದಿಲ್ಲ. ಅದ್ದರಿಂದ ಮುಸ್ಲಿಮರು ಸರ್ಕಾರದ ಶೈಕ್ಷಣಿಕ ನೀತಿಗಳು ಮತ್ತು ಕಾರ್ಯಕ್ರಮಗಳನ್ನು ಹಾಗೂ ಬಡತನ ನಿರ್ಮೂಲನೆ ಕಾರ್ಯಕ್ರಮಗಳನ್ನು ಬದಲಾಯಿಸುವ ನಿಟ್ಟಿನಲ್ಲಿ ಸಂಘಟಿತ ಮತ್ತು ರಚನಾತ್ಮಕ ಹೋರಾಟಗಳನ್ನು ರೂಪಿಸುವ ಅಗತ್ಯವಿದೆ. ಇಂತಹ ದೂರಗಾಮಿ ಪ್ರಯತ್ನಗಳು ಮಾತ್ರ ಮುಸ್ಲಿಮರನ್ನು ಸಬಲೀಕರಣದ ದಿಕ್ಕಿನತ್ತ ನಡೆಸಬಲ್ಲವು.

# ಸಮಾರೋಪ

ಭಾರತದ ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯರ ಅರ್ಹತೆಗಳನ್ನು ಮತ್ತು ವರ್ತನೆಗಳನ್ನು ಇಂದಿಗೂ ಪ್ರಬಲವಾಗಿ ನಿರ್ಧರಿಸುತ್ತಿದೆ. ಭಾರತದ ಶ್ರೇಣೀಕೃತ ವ್ಯವಸ್ಥೆಯು ಮಹಿಳೆಯರಿಗೆ ತಮ್ಮ ದೇಹ, ಸಂಪನ್ಮೂಲಗಳ ಮೇಲಿನ ನಿಯಂತ್ರಣದಂಥ ಸಂಗತಿಗಳಲ್ಲೂ ಸ್ವಾಯುತ್ತತೆಯನ್ನು ನೀಡುತ್ತಿಲ್ಲ. ಈ ಹಿನ್ನಲೆಯಲ್ಲಿ ಮಹಿಳೆಯರಿಗೆ ನ್ಯಾಯ ನೀಡಲು, ಅಸಮಾನತೆಯನ್ನು ತೊಡೆದು ಹಾಕಲು ಇಡೀ ವ್ಯವಸ್ಥೆಯನ್ನು ಪುನರ್‌ರೂಪಿಸಬೇಕಾದ ಅಗತ್ಯವಿದೆ ಎನ್ನುವ ಚರ್ಚೆಗಳಿದ್ದರೂ, ಮಹಿಳೆಯರಿಗೆ ಸಾಮಾಜಿಕ ನ್ಯಾಯ ಕೊಡಿಸುವುದು ಸಾಧ್ಯವಾಗಿಲ್ಲ ಮತ್ತು ಲಿಂಗಸಂಬಂಧಿ ಅಸಮಾನತೆಯನ್ನು ತೊಡೆದು ಹಾಕುವುದು ಸಾಧ್ಯವಾಗಿಲ್ಲ. ಭಾರತ ಸ್ವಾತಂತ್ರ್ಯ ಪಡೆದು ಎಪ್ಪತ್ತು ವರ್ಷಗಳ ನಂತರವೂ ಮಹಿಳೆ ಕೇವಲ ಕನಿಷ್ಠ ಅಕ್ಷರಗಳ ಒಡತಿಯಾಗಿದ್ದಾಳೆಯೇ ಹೊರತು ಜ್ಞಾನ ಮತ್ತು ಬದುಕಿನ ಒಡೆತನವನ್ನು ಸಂಪಾದಿಸಿಕೊಳ್ಳುವಲ್ಲಿ ವಿಫಲಳಾಗಿದ್ದಾಳೆ. ಒಂದು ಕಡೆ ಸಮಾನ ಅವಕಾಶಗಳನ್ನು ನೀಡಿದರೆ ಲಿಂಗಸಂಬಂಧಿ ಸಬಲೀಕರಣ ಸಾಧ್ಯವಾಗುತ್ತದೆ ಎನ್ನುವ ಚರ್ಚೆಗಳಿವೆ. ಆದರೆ, ಮತ್ತೊಂದು ಕಡೆ ಭಾರತ ಅಸಮಾನ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ್ದು, ಮಹಿಳೆಗೆ ಸಮಾನ ಅವಕಾಶ ನೀಡುವ ಮೂಲಕ ಮಾತ್ರ ಸಮಾನತೆ ತರಲು ಸಾದ್ಯವಿಲ್ಲ ಬದಲಾಗಿ ಶೇ.೬೦ ರಷ್ಟು ಮೀಸಲಾತಿ ನೀಡಿದಾಗ ಮಹಿಳಾ ಸಮಾನತೆ ಸಾಧ್ಯವಾಗುತ್ತದೆ ಎಂದು ರಾಮಮನೋಹರ ಲೋಹಿಯಾರಂಥ ಸಾಮಾಜಿಕ ಚಿಕಿತ್ಸರು ಪ್ರತಿಪಾದಿಸಿದ್ದಾರೆ.

ಇಪ್ಪತ್ತೊಂದನೆ ಶತಮಾನದ ಕಾಲಘಟ್ಟದಲ್ಲಿಯೂ ಮಹಿಳೆಯನ್ನು ಕೇವಲ ಜೈವಿಕ ನೆಲೆಗಟ್ಟಿನಲ್ಲಿ ಮಾತ್ರ ಗುರುತಿಸಲಾಗುತ್ತಿದೆ. ಇಂದಿಗೂ ಮಹಿಳೆಯರನ್ನು ತಾಯಿಯಾಗಿ, ಮಗಳಾಗಿ, ಹೆಂಡತಿಯಾಗಿ ಗುರುತಿಸಲಾಗುತ್ತಿದೆ. ಜೈವಿಕವಾಗಿ ಮಗುವಿಗೆ ಜನ್ಮ ನೀಡುವ, ಗೃಹ ಕೃತ್ಯಗಳನ್ನು ನಿರ್ವಹಿಸುವ ಮತ್ತು ಗಂಡಿನ ನೆರಳಲ್ಲೇ ತನ್ನ ಬದುಕಿನ ಅಂತ್ಯವನ್ನು ಕಂಡುಕೊಳ್ಳುವ ಅಸಹಾಯಕ ಜೀವಿಯನ್ನಾಗಿಯೇ ಹೆಣ್ಣನ್ನು ಗುರುತಿಸಲಾಗುತ್ತದೆ. ಆರ್ಥಿಕವಾಗಿಯೂ ಇವಳ ಸ್ಥಿತಿಯನ್ನು ಎರಡನೆಯ ದರ್ಜೆಯನ್ನಾಗಿ ರೂಪಿಸಲಾಗಿದೆ. ಗಂಡಸರಷ್ಟೇ ಸಮರ್ಥವಾಗಿ ಕಾರ್ಯನಿರ್ವಹಿಸುವ ಹೆಣ್ಣು, ಗಂಡಿನೊಂದಿಗೆ ಅಸಮಾನ ಕೂಲಿಯನ್ನು ಪಡೆಯುತ್ತಿದ್ದಾಳೆ. ಹೆಣ್ಣು ಸಾಮಾಜಿಕ ಘಟಕವಾಗಿ ಅಭಿವೃದ್ಧಿ ನೆಲೆಯಲ್ಲಿ ಪ್ರಜ್ಞಾಪೂರ್ವಕವಾಗಿ ಗುರುತಿಸಲ್ಪಡುತ್ತಿಲ್ಲ.

ಆದರೆ ಇಂದಿನ ಅಭಿವೃದ್ಧಿ ಪರಿಕಲ್ಪನೆ ಅಭಿವೃದ್ಧಿ ಇಂದು ಲಿಂಗಸ್ಪಂಧಿ ಆಯಾಮವನ್ನು ಪಡೆದುಕೊಂಡಿದೆ. ಇಂದು ಅಭಿವೃದ್ಧಿ ಎಂದರೆ ಕೇವಲ ವರಮಾನ, ಆದಾಯ, ಭೌತಿಕ ಸೌಕರ್ಯಗಳಷ್ಟೇ ಅಲ್ಲ. ಅಭಿವೃದ್ಧಿ ಎಂದರೆ ಮಾನವರು, ನಿರ್ಲಕ್ಷಿತರು, ಬಡವರು ಮತ್ತು ಮಹಿಳೆಯರು ಎಂಬುದಾಗಿದೆ. ಮಹಿಳೆಯರ ಆರೋಗ್ಯ, ಶಿಕ್ಷಣ, ದಾಖಲಾತಿ, ಜೀವನಮಟ್ಟ, ಸ್ವಾತಂತ್ರ್ಯ, ಸ್ವಾಯತ್ತತೆ ಮುಂತಾದವುಗಳು ಇಂದು ಅಭಿವೃದ್ಧಿಯ ಅವಿಭಾಜ್ಯ ಅಂಗಗಳೆಂದು ಪ್ರತಿಪಾದಿಸಲಾಗುತ್ತಿದೆ. ಮಹಿಳೆಯರ ಅಭಿವೃದ್ಧಿ ತನ್ನಷ್ಟಕ್ಕೆ ತಾನೇ ಸಾಧ್ಯವಾಗುವುದಿಲ್ಲ. ಎಲ್ಲರನ್ನು ಒಳಗೊಳ್ಳುವ ಅಭಿವೃದ್ಧಿಗೆ ಒಂದು ರಚನಾತ್ಮಕವಾದ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆ ಅಗತ್ಯವಾಗುತ್ತದೆ. ಇಂತಹ ವ್ಯವಸ್ಥೆ ಪ್ರಜಾಪ್ರಭುತ್ವದಲ್ಲಿ ಸಾಧ್ಯವಾಗುತ್ತದೆ ಎಂದು ಭಾವಿಸಲಾಗಿದೆ. ಆದರೆ, ಇದು ಸಂಪೂರ್ಣ ಸತ್ಯವಲ್ಲ ಎನ್ನುವ ಸಂಗತಿ ಭಾರತದಲ್ಲಿ ದೃಢಪಟ್ಟಿದೆ. ಎಪ್ಪತ್ತು ದಶಕಗಳ ನಂತರವೂ ಮಹಿಳೆಯರು ಸಾಕ್ಷರತೆಯಿಂದ, ಸಮಾನ ವೇತನದಿಂದ, ಸಾಮಾಜಿಕ ಅಮಾನತೆಯಿಂದ ಮತ್ತು ಅಭಿವೃದ್ಧಿಯಿಂದ ವಂಚಿತಳಾಗಿದ್ದಾಳೆ. ಇದರ ಅರ್ಥ ಪ್ರಜಾತಂತ್ರ ವ್ಯವಸ್ಥೆಯೇ ದೋಷಪೂರಿತವೆಂದು ಹೇಳುವಂತಿಲ್ಲ. ಕಾರಣವೆಂದರೆ ಪ್ರಜಾಪ್ರಭುತ್ವ ತನ್ನಷ್ಟಕ್ಕೆ ತಾನೇ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವುದಿಲ್ಲ. ಪ್ರಜಾಪ್ರಭುತ್ವದಲ್ಲೂ ಸಮಾನತೆಯನ್ನು ಒದಗಿಸುವ ಪ್ರಜ್ಞಾಪೂರ್ವಕವಾದ ಮಧ್ಯಪ್ರವೇಶಿಕೆಗಳು ಮತ್ತು ಪ್ರಯತ್ನಗಳು ಅಗತ್ಯವಾಗುತ್ತವೆ. ಇಂದಿಗೂ ಮುಸ್ಲಿಮರಲ್ಲಿ ನಿರುದ್ಯೋಗಿಗಳಿದ್ದಾರೆ, ಉತ್ತಮ ಆದಾಯ ಹೊಂದಿದವರಿಲ್ಲ ಮತ್ತು ಬಹುಸಂಖ್ಯಾತರು ಕೊಳೆಗೇರಿಗಳಲ್ಲಿ ಬದುಕುತ್ತಿದ್ದಾರೆ. ಭಾರತದ ಜಾತಿ ಮತ್ತು ಧರ್ಮಧಾರಿತ ಸಮಾಜದಲ್ಲಿ ಸರ್ಕಾರದ ಮಧ್ಯಪ್ರವೇಶಿಕೆಗಳು ಮತ್ತು ಸಮಾನತೆಯನ್ನು ಸಾಧಿಸಿಕೊಳ್ಳುವ ಪ್ರಯತ್ನಗಳು ಇಂದು ರಾಜಕೀಕರಣಗೊಳ್ಳುತ್ತವೆ. ಇದು ಮುಸ್ಲಿಮರ ಸಂಗತಿಯಲ್ಲಿ ಹೆಚ್ಚು ನಿಜವಾಗುತ್ತಿರುವುದು ಕಂಡುಬರುತ್ತದೆ. ಭಾರತದ ವಿಭಜನೆಯ ಕಾಲಘಟ್ಟದಿಂದ ಮೊದಲುಗೊಂಡು ಇಂದಿನವರೆಗೂ ಮುಸ್ಲಿಮರು ಆರ್ಥಿಕವಾಗಿ ಬಡವರಾಗಿದ್ದಾರೆ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ ಮತ್ತು ರಾಜಕೀಯವಾಗಿ ಮುಸ್ಲಿಮರನ್ನು ಎರಡನೆಯ ದರ್ಜೆಯ ನಾಗರೀಕರನ್ನಾಗಿ ನೆಡಸಿಕೊಳ್ಳಲಾಗುತ್ತಿದೆ. ಇವರ ಸಬಲೀಕರಣಕ್ಕೆ ಕೈಗೊಳ್ಳುವ ಎಲ್ಲಾ ಪ್ರಯತ್ನಗಳೂ ತುಷ್ಟೀಕರಣದ ಹೆಸರು ಪಡೆದುಕೊಳ್ಳುತ್ತಿವೆ. ಮುಸ್ಲಿಂ ಸಮುದಾಯವು ರಾಜಕೀಯವಾಗಿ ಅತಿಯಾದ ಒಲೈಕೆ ಮತ್ತು ಅತಿಯಾದ ದ್ವೇಷದ ನಡುವೆ ಜೀವಿಸುವಂಥ ಅನಿವಾರ್ಯತೆಗೆ ದೂಡಲ್ಪಟ್ಟಿದ್ದಾರೆ. ಇವೆಲ್ಲದರ ಜೊತೆಗೆ ಮುಸ್ಲಿಂ ಮಹಿಳೆಯರ ಬದುಕು ಅತ್ಯಂತ ದಯನೀಯವಾದ ಸ್ಥಿತಿಯನ್ನು ತಲುಪಿದೆ. ಇತರೆ ಸಮುದಾಯಗಳ ಮಹಿಳೆಯರಿಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯರ ಸ್ಥಿತಿ ಅತ್ಯಂತ ಚಿಂತಾಜನಕವಾಗಿದೆ. ಶಿಕ್ಷಣವು ಅಭಿವೃದ್ಧಿಯ ತಳಪಾಯ, ಸಾಮಾಜಿಕ ಅವಕಾಶಗಳನ್ನು ನೀಡುವ ಸಾಧನ. ಅಂತಿಮವಾಗಿ ಶಿಕ್ಷಣವು ಮಹಿಳೆಯರನ್ನು ಸಬಲೀಕರಣಗೊಳಿಸುವ ಪ್ರಬಲ ಅಸ್ತ್ರವೆಂದು ಗುರುತಿಸಲಾಗುತ್ತದೆ.

ಭಾರತದ ಸಂವಿಧಾನ ೧೪ನೇ ವಯಸ್ಸಿನವರೆಗೂ ಶಿಕ್ಷಣ ನೀಡುವುದನ್ನು ಕಡ್ಡಾಯಗೊಳಿಸಿದೆ, ಇದಕ್ಕಾಗಿ ಕಾಯಿದೆಯನ್ನು ರೂಪಿಸಿದೆ. ಆದರೂ ಈ ಕಾಯಿದೆ ಇಂದಿನವರೆಗೂ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿರುವುವು ಕಂಡುಬರುವುದಿಲ್ಲ. ಮುಸ್ಲಿಂ ಮಹಿಳೆಯರ ಸಾಕ್ಷರತೆಯ ಮಟ್ಟ ನಿರೀಕ್ಷಿತ ಪ್ರಮಾಣವನ್ನು ಮುಟ್ಟುತ್ತಿಲ್ಲ. ಬಹುಸಂಖ್ಯಾತ ಮುಸ್ಲಿಮರನ್ನು ಹೊಂದಿರುವ ಜಮ್ಮು-ಕಾಶ್ಮೀರ ರಾಜ್ಯದಿಂದ ಮೊದಲುಗೊಂಡು ಮೊನ್ನೆ ತಾನೆ ರಚನೆಗೊಂಡ ಪ್ರತ್ಯೇಕ ರಾಜ್ಯ ತೆಲಂಗಾಣದವರೆಗೂ ಇದೇ ಸನ್ನಿವೇಶ ಕಂಡುಬರುತ್ತಿದೆ. ಕರ್ನಾಟಕ ರಾಜ್ಯದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿ ಇದಕ್ಕೆ ಹೊರತಾಗಿಲ್ಲ. ಭಾರತದಲ್ಲಿ ಸಾಕ್ಷರತೆ ಜಾತಿ, ವರ್ಗ, ಮತ್ತು ಲಿಂಗಬೇಧಗಳನ್ನು ಆಧರಿಸಿ ನಿರ್ಧಾರವಾಗುತ್ತದೆ. ಇದು ಕೇವಲ ಜೈವಿಕವಲ್ಲ ಸಾಮಾಜಿಕ ಸ್ವರೂಪವೂ ಆಗಿದೆ.

ಭಾರತದ ಸಂವಿಧಾನದ ೩೫೦(ಎ) ವಿಧಿಯು ಎಲ್ಲಾ ಮಕ್ಕಳಿಗೆ ಕಡ್ಡಾಯವಾಗಿ ಮಾತೃ ಭಾಷೆಯಲ್ಲೇ ಶಿಕ್ಷಣ ನೀಡಬೇಕೆಂದು ಸ್ಪಷ್ಟಪಡಿಸಿದೆ. ಉತ್ತರ ಭಾರತದ ಮತ್ತು ದಕ್ಷಿಣ ಭಾರತದ ಬಹುತೇಕ ರಾಜ್ಯಗಳ ಮುಸ್ಲಿಮರ ಭಾಷೆ ಉರ್ದು ಆಗಿರುವುದರಿಂದ, ಉರ್ದು ಭಾಷೆಯಲ್ಲೇ ಮುಸ್ಲಿಂ ಮಗುವಿಗೆ ಶಿಕ್ಷಣ ನೀಡುವುದು ಕಡ್ಡಾಯವಾಗಿದೆ. ಆದರೆ, ಉರ್ದು ಮಾಧ್ಯಮದಲ್ಲಿ ವ್ಯಾಸಾಂಗ ಮಾಡುವವರು ಕಡಿಮೆ ಎನ್ನುವ ನೆಪ ಒಡ್ಡಿ ಉತ್ತರ ಭಾರತದಲ್ಲಿ ಉರ್ದು ಮಾಧ್ಯಮ ಶಾಲೆಗಳನ್ನು ಮುಚ್ಚುವ ಹುನ್ನರಗಳು ಸದ್ದಿಲ್ಲದೆ ನಡೆಯುತ್ತಿವೆ. ಆ ಮೂಲಕ ಬಹುತೇಕ ಮುಸ್ಲಿಮರ ಮಾತೃ ಭಾಷೆಯಾದ ಉರ್ದು ಭಾಷೆಯ ಮೂಲಕ ಕಲಿಕೆಯನ್ನು ನಿರಾಕರಿಸಲಾಗುತ್ತಿದೆ. ಇಂತಹ ಜನವಿರೋಧಿ ಕ್ರಮಗಳನ್ನು ನಿಯಂತ್ರಿಸುವುದು ಇಂದಿನ ಅಗತ್ಯವಾಗಿದೆ. ರಾಜ್ಯದ ಬಹುತೇಕ ಭಾಗಗಳು ಶಿಕ್ಷಕರ ಕೊರತೆಯನ್ನು ಎದುರಿಸುತ್ತಿವೆ. ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಿರುವ ಬಾಲಕಿಯರ ಸಂಖ್ಯೆ ಕಡಿಮೆಯಾಗುತ್ತಿರುವುದು ಸಮಾಧಾನದ ಸಂಗತಿಯಾದರೂ, ಬಾಲಕರು ಮತ್ತು ಬಾಲಕಿಯರ ದಾಖಲಾತಿ ಪ್ರಮಾಣದಲ್ಲಿ ಅಂತರ ಹೆಚ್ಚಾಗುತ್ತಿರುವುದು ಉತ್ತಮ ಬೆಳವಣಿಗೆಯಲ್ಲ. ಮುಸ್ಲಿಂ ಬಾಲಕಿಯರಿಗೆ ವಸತಿ ನಿಲಯಗಳು ಕಡಿಮೆ ಮತ್ತು ಅನುದಾನಿತ ವಸತಿ ನಿಲಯಗಳು ಒಂದೂ ಇಲ್ಲದಿರುವುದು ಸರ್ಕಾರಗಳು ಎಷ್ಟರ ಮಟ್ಟಿಗೆ ಮಹಿಳಾ ಸಬಲೀಕರಣ ಕೈಗೊಂಡಿವೆ ಎಂಬುದರ ದ್ಯೋತಕವಾಗಿದೆ. ಮುಸ್ಲಿಂ ಹೆಣ್ಣು ಮಕ್ಕಳು ಕೇವಲ ಉರ್ದು ಮಾಧ್ಯಮದಲ್ಲೇ ಅಧಿಕ ಸಂಖ್ಯೆಯಲ್ಲಿ ವ್ಯಾಸಾಂಗ ಮಾಡುತ್ತಿರುವುದರ ಹಿಂದೆ ಪೋಷಕರು ಹೆಣ್ಣು ಮಕ್ಕಳಿಗೆ ನೀಡುತ್ತಿರುವ ಎರಡನೆಯ ಆದ್ಯತೆ ಹಾಗೂ ಎಲ್ಲಾ ಮಕ್ಕಳನ್ನು ಇಂಗ್ಲೀಷ್ ಮಾಧ್ಯಮದಲ್ಲೇ ಓದಿಸಲು ಜೀವನ ಮಟ್ಟ ಅಡ್ಡಿಯಾಗಿದೆ. ಇಂದು ಮುಸ್ಲಿಂ ಕುಟುಂಬಗಳ ಮುಖ್ಯಸ್ಥರ ಶಿಕ್ಷಣವನ್ನು ಉನ್ನತ ಮಟ್ಟಕ್ಕೆ ಎತ್ತರಿಸುವುದು ಕಷ್ಟಕರವಾದ ಸಂಗತಿಯಾಗಿದೆ. ಆದರೆ, ಮುಸ್ಲಿಂ ಪೋಷಕರ ಶಿಕ್ಷಣದ ಮಟ್ಟ

ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಪೋಷಕರು ಸರ್ಕಾರದ ಸವಲತ್ತುಗಳನ್ನು ಬಳಸಿಕೊಂಡು ಮಕ್ಕಳನ್ನು ಉತ್ತಮ ಶಿಕ್ಷಕರನ್ನಾಗಿ ರೂಪಿಸುವ ಅಗತ್ಯವಿದೆ. ಬಹುತೇಕ ಮುಸ್ಲಿಂ ಪೋಷಕರು ತಮ್ಮ ಮಕ್ಕಳು ಉತ್ತಮ ಶಿಕ್ಷಣ ಪಡೆಯಬೇಕೆಂದು ಬಯಸುತ್ತಾರೆ. ತಂದೆ, ತಾಯಿ, ಶಿಕ್ಷಕರು ಯಾರೂ ಕೂಡ ಹೆಣ್ಣು ಮಕ್ಕಳನ್ನು ಶಿಕ್ಷಣವನ್ನು ಪಡೆಯುವಂತೆ ಪ್ರೋತ್ಸಾಹಿಸುವ ಸಂಗತಿಯಲ್ಲಿ ಹಿಂದುಳಿದಿಲ್ಲ. ಎಲ್ಲಾ ಸಮುದಾಯಗಳಲ್ಲಿ ಕಂಡುಬರುವಂತೆ ಮುಸ್ಲಿಂ ಸಮುದಾಯಗಳಲ್ಲಿ ಪೋಷಕರ ಶಿಕ್ಷಣ ಮತ್ತು ವೃತ್ತಿಯು ಹೆಣ್ಣು ಮಕ್ಕಳ ಶಿಕ್ಷಣವನ್ನು ಪ್ರಭಾವಿಸುತ್ತಿದೆ. ಜಾಗೃತಗೊಂಡಿರುವ ಯಾವ ಮಹಿಳೆಯರೂ ಶಿಕ್ಷಣವನ್ನು, ಉನ್ನತ ಶಿಕ್ಷಣವನ್ನು ಮತ್ತು ಹೊರಗಡೆ ದುಡಿಮೆಯ ಮೂಲಕ ಸ್ವಾವಲಂಬಿಗಳಾಗಿ ಬದುಕುವುದನ್ನು ನಿರಾಕರಿಸುವುದಿಲ್ಲ. ಬದಲಾತ್ತಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಮುಸ್ಲಿಂ ಮಹಿಳೆಯರು ಶಿಕ್ಷಣ, ಉನ್ನತ ಶಿಕ್ಷಣ ಮತ್ತು ದುಡಿಮೆಯ ಮೂಲಕ ಸ್ವಾವಲಂಬಿಗಳಾಗುವತ್ತ ಮುನ್ನೆಡೆಯುತ್ತಿದ್ದಾರೆ. ಇದು ಸ್ವಾಗತಾರ್ಹ ಮತ್ತು ಮುಸ್ಲಿಂ ಮಹಿಳೆಯರು ಪಡೆದುಕೊಳ್ಳುತ್ತಿರುವ ಹೊಸ ಆಯಾಮವಾಗಿದೆ. ಇಂದು ಭಾರತೀಯ ಪುರುಷ ಪ್ರಧಾನ ಸಮಾಜದಲ್ಲಿ ಯಾರು, ಯಾವಾಗ, ಏನನ್ನು ಮತ್ತು ಎಷ್ಟನ್ನು ಓದಬೇಕೆಂಬುದನ್ನು ಕಟುಂಬದ ಮುಖ್ಯಸ್ಥನಾದ ಪುರುಷನೇ ನಿರ್ಧರಿಸುತ್ತಾನೆ. ಕುಟುಂಬದ ಮುಖ್ಯಸ್ಥನು ಗಂಡು ಮಕ್ಕಳ ಶಿಕ್ಷಣದ ಬಗ್ಗೆ ಸಕಾರಾತ್ಮಕ ಮನೋಭಾವನೆಯನ್ನು ಪ್ರದರ್ಶಿಸಿದರೂ, ಇಂತಹ ಮನೋಭಾವನೆಯನ್ನು ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ನಿರೀಕ್ಷಿಸುವುದು ಕಷ್ಟ ಅದರಲ್ಲೂ ಭಾವನಾತ್ಮಕ ಸಂಗತಿಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುವ ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗಳಿಗೆ ಒತ್ತು ನೀಡುವ ಮತ್ತು ಪರದಾ ಪದ್ಧತಿಯನ್ನು ಕಟ್ಟುನಿಟ್ಟಾಗಿ ಅನುಸರಿಸುವ ಮುಸ್ಲಿಂ ಸಮುದಾಯದಿಂದ ನಿರೀಕ್ಷಿಸುವುದು ಸುಲಭದ ಸಂಗತಿಯಲ್ಲ. ಮುಸ್ಲಿಮರ ಧರ್ಮ, ಸಂಸ್ಕೃತಿ, ಸಂಪ್ರದಾಯಗಳು ಮತ್ತು ಆಚಾರಗಳು ಅವರನ್ನು ಶೈಕ್ಷಣಿಕವಾಗಿ ಹಿಂದುಳಿಯುವಂತೆ ಮಾಡಿವೆ ಎಂದು ಹಿಂದಿನ ಅಧ್ಯಯನಗಳು ನಿರೂಪಿಸುತ್ತಿದ್ದವು. ಆದರೆ, ಈ ವಾದ ಸಂಪೂರ್ಣವಾಗಿ ಸರಿಯಲ್ಲ ಎಂಬುದನ್ನು ಇತ್ತೀಚಿನ ಅಧ್ಯಯನಗಳು ನಿರೂಪಿಸುತ್ತಿವೆ. ಏಕೆಂದರೆ, ಮುಸ್ಲಿಂ ಸಮಾಜ ವಿಶಿಷ್ಟವಾದ ಸಮಾಜೋ-ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಬಡತನದ ಕಾರಣದಿಂದಾಗಿಯೇ ಮುಸ್ಲಿಂ ಮಹಿಳೆಯರಿಗೆ ಶಿಕ್ಷಣ ಮುಂದುವರೆಸುವುದು ಸಾಧ್ಯವಾಗುತ್ತಿಲ್ಲ. ಮುಸ್ಲಿಂ ಸಮುದಾಯಗಳ ಬಡತನವನ್ನು ಹೋಗಲಾಡಿಸಿ, ಮುಸ್ಲಿಂ ಮಹಿಳೆಯರನ್ನು ಶಿಕ್ಷಣವಂತರನ್ನಾಗಿ ರೂಪಿಸುವಲ್ಲಿ ಸರ್ಕಾರದ ಬದ್ಧತೆ ಅಗತ್ಯವಾಗಿದೆ. ಬೆಳಗಾವಿ ನಗರದಲ್ಲಿ ಶಿಕ್ಷಣ ಪಡೆಯುತ್ತಿರುವ ಮುಸ್ಲಿಂ ಮಹಿಳೆಯರು ಶಿಕ್ಷಣ, ಉನ್ನತ ಶಿಕ್ಷಣ ಮತ್ತು ಉದ್ಯೋಗದ ಬಗ್ಗೆ ಸಕಾರಾತ್ಮಕ ಮನೋಭಾವನೆಯನ್ನು ಹೊಂದಿದ್ದಾರೆ. ಮುಸ್ಲಿಂ ಮಹಿಳೆಯರಿಗೆ ಶಿಕ್ಷಣ, ಉದ್ಯೋಗ ಮತ್ತು ತರಬೇತಿ ನೀಡಲು ವಿಶೇಷ ಯೋಜನೆಗಳನ್ನು ರೂಪಿಸುವುದು ಅಗತ್ಯವಾಗಿದೆ. ಈಗಾಗಲೇ ಕರ್ನಾಟಕದಲ್ಲಿ ಮುಸ್ಲಿಮರಿಗೆ ನೀಡಿರುವ ಶೇ.೪ ರಷ್ಟು ಮೀಸಲಾತಿಯು ಜನಸಂಖ್ಯಾ

ಪ್ರಮಾಣದ ದೃಷ್ಟಿಯಿಂದ ಸಾಕಾಗುವುದಿಲ್ಲ. ಅದ್ದರಿಂದ ಮೀಸಲಾತಿ ಪ್ರಮಾಣವನ್ನು ಶೇ.೮ ಕ್ಕೆ ಏರಿಸಬೇಕಾಗಿದೆ. ಇದಕ್ಕೆ ಧಾರ್ಮಿಕ ಅಂಶ ಅಡ್ಡಿಯಾಗಬಾರದು. ಮದರಸಾ ಭಾಷೆ ಮತ್ತು ಉರ್ದು ಭಾಷೆಯ ಮೂಲಕ ಕಲಿತ ಮುಸ್ಲಿಂ ವಿದ್ಯಾರ್ಥಿಗಳಿಗೆ ಸಾರ್ವತ್ರಿಕ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದು ಮತ್ತು ಉದ್ಯೋಗ ಪಡೆಯುವುದು ಸಾಧ್ಯವಾಗಬೇಕು. ಭಾರತ ಸಂವಿಧಾನವು ಧರ್ಮನಿರಪೇಕ್ಷತೆಯನ್ನು ಅಂಗೀಕರಿಸಿದೆ. ಸರ್ಕಾರಿ ಅಧಿಕಾರಿಗಳು ಶೈಕ್ಷಣಿಕ ಕಾರ್ಯಕ್ರಮಗಳನ್ನು ಮತ್ತು ಸುಧಾರಣೆಗಳನ್ನು ಧರ್ಮಾತೀತವಾಗಿ ನಿರ್ವಹಿಸುವ ಅಗತ್ಯವಿದೆ. ಸರ್ಕಾರದ ಕಠಿಣ ನಿಯಾಮಾವಳಿಗಳು ಮುಸ್ಲಿಮರ ಶಿಕ್ಷಣಕ್ಕೆ ಅಡ್ಡಿಯಾಗಬಾರದು.

ಅಲ್ಪಸಂಖ್ಯಾತ ಸಮುದಾಯದ ಪ್ರತಿನಿಧಿಗಳು, ಶಿಕ್ಷಣ ತಜ್ಞರು ಮತ್ತು ಸಾಮಾಜಿಕ ಕಾರ್ಯಕರ್ತರು ನೀಡುವ ಸಲಹೆಗಳನ್ನು ಕಾನೂನು ಬದ್ಧವಾಗಿ ಜಾರಿಗೊಳಿಸಲು ಸರ್ಕಾರಿ ವ್ಯವಸ್ಥೆಯನ್ನು ರೂಪಿಸುವುದು ಇಂದಿನ ಅಗತ್ಯವಾಗಿದೆ. ಭಾರತದಲ್ಲಿ ಪರಿಶಿಷ್ಟರ ಸಮಾಜೋ-ಆರ್ಥಿಕ ಸ್ಥಿತಿಗಳಿಗೂ, ಮುಸ್ಲಿಮರ ಸ್ಥಿತಿಗಳಿಗೂ ಯಾವುದೇ ಭಿನ್ನತೆಗಳಿಲ್ಲ. ವಿವಿಧ ಸರ್ಕಾರಿ ಆಯೋಗಗಳು ಮತ್ತು ಅಧ್ಯಾಯನಗಳು ಈ ಅಂಶವನ್ನು ಸ್ಪಷ್ಟಪಡಿಸಿವೆ. ಸರ್ಕಾರ ಪರಿಶಿಷ್ಟರಿಗೆ ನೀಡುವ ಸವಲತ್ತುಗಳನ್ನು ಮುಸ್ಲಿಮರಿಗೂ ವಿಸ್ತರಿಸಿದರೆ ಅವರ ಸ್ಥಿತಿಗಳಲ್ಲಿ ಸುಧಾರಣೆ ಸಾಧ್ಯವಾಗುತ್ತದೆ. ದಲಿತ ಕೇರಿಗಳ ಸರ್ಕಾರಿ ಕನ್ನಡ ಮಾಧ್ಯಮ ಶಾಲೆಗಳಿಗೂ, ಮುಸ್ಲಿಂ ಮೊಹಲ್ಲಗಳ ಸರ್ಕಾರಿ ಉರ್ದು ಮಾಧ್ಯಮ ಶಾಲೆಗಳಿಗೂ ಯಾವುದೇ ವ್ಯತ್ಯಾಸಗಳಿಲ್ಲ. ಇಂತಹ ನಿರ್ಲಕ್ಷಿತ ಸಮುದಾಯಗಳ ಸ್ಥಿತಿಗಳನ್ನು ಸುಧಾರಿಸುವುದು ಸರ್ಕಾರದ ಅದ್ಯ ಕರ್ತವ್ಯವಾಗಿದೆ.

ಸರ್ಕಾರದ ಅಭಿವೃದ್ಧಿ ಯೋಜನೆಗಳನ್ನು ಎಲ್ಲಾ ಸಮುದಾಯಗಳನ್ನು ಒಳಗೊಳ್ಳುವ ದೃಷ್ಟಿಯಿಂದ ರೂಪಿಸಬೇಕಿದೆ. ಸರ್ಕಾರದ ಯೋಜನೆಗಳು ಎಲ್ಲರಿಗೂ ಅನ್ವಯವಾದಾಗ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಅನುದಾನವನ್ನು ನಿಗದಿಪಡಿಸಿದಾಗ ಸಾಮಾಜಿಕ ನ್ಯಾಯ ಲಭ್ಯಗುತ್ತದೆ. ಈ ಕ್ರಮಗಳು ಇಂದಿನ ಅಗತ್ಯವಾಗಿದೆ. ಬಹುಧರ್ಮ ಮತ್ತು ಸಂಸ್ಕೃತಿಗಳನ್ನು ಹೊಂದಿರುವ ದೇಶದಲ್ಲಿ ಬಹುಸಂಖ್ಯಾತರ ವಾದಗಳು ಒಮ್ಮೊಮ್ಮೆ ಅಲ್ಪಸಂಖ್ಯಾತರನ್ನು ಚಿಪ್ಪಿನೊಳಗೆ ಅವಿತುಕೊಳ್ಳುವಂತೆ ಮಾಡುತ್ತದೆ. ಬಹುಸಂಖ್ಯಾತರ ವಾದಗಳು ಅನೇಕ ಬಾರಿ ಅಲ್ಪಸಂಖ್ಯಾತರ ಅನನ್ಯತೆಗೆ ಅತಂಕವನ್ನು ಒಡ್ಡುತ್ತವೆ.ಇಂತಹ ಅತಂಕಗಳಲ್ಲಿ ಶಾಲಾ ಪುಸ್ತಕಗಳ ಕೇಸರಿಕರಣವೂ ಒಂದು. ವಿಶಿಷ್ಟ ಅನನ್ಯತೆಗಳನ್ನು ಹೊಂದಿರುವ ಮುಸ್ಲಿಮರು ಅತಂಕದಿಂದಾಗಿ ಅಭಿವೃದ್ಧಿ ಅವಕಾಶಗಳಿಂದ ವಂಚಿತರಾಗುತ್ತಾರೆ. ಪಠ್ಯಪುಸ್ತಕಗಳ ಕೇಸರಿಕರಣ ತಡೆಯುವ ಮೂಲಕ ಮುಸ್ಲಿಮರ ಶಿಕ್ಷಣಕ್ಕಿರುವ ಅತಂಕಗಳನ್ನು ದೂರ ಮಾಡುವುದು ಇಂದಿನ ಅಗತ್ಯವಾಗಿದೆ. ಇಂದು ಪ್ರಾದೇಶಿಕವಾರು ಮತ್ತು ಸಮುದಾಯವಾರು ಶೈಕ್ಷಣಿಕ ಸೌಲಭ್ಯಗಳು ಅಸಮಾನವಾಗಿ ಹಂಚಿಕೆಯಾಗಿವೆ. ಒಂದು

ಪ್ರದೇಶದಲ್ಲಿ ಲಭ್ಯವಾಗುವ ಶೈಕ್ಷಣಿಕ ಸೌಲಭ್ಯಗಳು, ಮತ್ತೊಂದು ಪ್ರದೇಶದಲ್ಲಿ ಲಭ್ಯಗುತ್ತಿಲ್ಲ. ಒಂದು ಸಮುದಾಯ ಪಡೆದುಕೊಳ್ಳುತ್ತಿರುವ ಸವಲತ್ತುಗಳು ಮತ್ತೊಂದು ಸಮುದಾಯಕ್ಕೆ ಮರೀಚಿಕೆಯಾಗಿವೆ. ಇಂತಹ ಭಿನ್ನತೆಗಳು ಪ್ರಾದೇಶಿಕ ಅಸಮಾನತೆಯನ್ನು ಮತ್ತು ಮುಂದುವರಿದ, ಹಿಂದುಳಿದ ಸಮುದಾಯಗಳನ್ನು ಸೃಷ್ಟಿಸುತ್ತಿವೆ. ಇಂತಹ ಅಸಮತೋಲನಗಳು ಒಂದು ಸಮುದಾಯದ ಬಗ್ಗೆ ಮತ್ತೊಂದು ಸಮುದಾಯ ನಕಾರಾತ್ಮಕ ಮನೋಭಾವನೆ ಬೆಳಸಿಕೊಳ್ಳಲು ಪ್ರೇರೇಪಿಸುತ್ತದೆ. ಇಂದಿಗೂ ಹಿಂದೂ ಸಮುದಾಯದಲ್ಲಿ ಮುಸ್ಲಿಮರ ಬಗ್ಗೆ ನಕಾರಾತ್ಮಕ ಮನೋಭಾವನೆಗಳು ಗಟ್ಟಿಗೊಳ್ಳುತ್ತಿವೆ. ಇವುಗಳ ನಿವಾರಣೆ ಇಂದಿನ ಅಗತ್ಯವಾಗಿದೆ. ಇದಕ್ಕೆ ಮುಸ್ಲಿಮರ ಸಹಕಾರವೂ ಅಗತ್ಯ. ಕೇವಲ ಭಾವನಾತ್ಮಕ ಸಂಗತಿಗಳಿಗೆ ಮುಸ್ಲಿಂ ಸಮುದಾಯ ಸ್ಪಂಧಿಸದೆ ಒಟ್ಟಾರೆ ಸಮಾಜದ ಒಳಿತಿಗಾಗಿ ರೂಪುಗೊಳ್ಳುವ ಚಳುವಳಿಗಳನ್ನು ಬೆಂಬಲಿಸಬೇಕಿದೆ. ಚಳುವಳಿಗಳು ಸಮಾಜದ ಸ್ವಾಸ್ಥ್ಯವನ್ನು ಕಾಪಾಡುತ್ತವೆ ಮತ್ತು ಪ್ರಜಾತಂತ್ರ ವ್ಯವಸ್ಥೆಯನ್ನು ಜೀವಂತವಾಗಿಡುತ್ತದೆ ಎಂದು ಗ್ರಹಿಸಲಾಗಿದೆ. ಮುಸ್ಲಿಮರು ಶಿಕ್ಷಣದ ಮೂಲಕ ಮುಖ್ಯವಾಹಿನೀಕರಣಗೊಳ್ಳುವ ಅಗತ್ಯವಿದೆ. ಶಿಕ್ಷಣ ಮತ್ತು ಮುಖ್ಯವಾಹಿನೀಕರಣ ಮುಸ್ಲಿಮರಿಗೆ ಅಭಿವೃದ್ಧಿ ಅವಕಾಶಗಳಿಗೆ ತೆರೆದುಕೊಳ್ಳುವ ಸಾಧ್ಯತೆಗಳು ಹೆಚ್ಚು

# ಪರಾಮರ್ಶನ ಗ್ರಂಥಗಳು


೧. *ಬೆಳಗಾವಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ–೨೦೧೪*, ಬೆಳಗಾವಿ, ಜಿಲ್ಲಾ ಪಂಚಾಯತ್ ಬೆಳಗಾವಿ, ೨೦೧೪.

೨. ಅಜೀಮ್ ಖಾನ್, "ಸೋಷಿಯೊ ಎಕಾನಾಮಿಕ್ ಸ್ಟೇಟಸ್ ಆಫ್ ಮುಸ್ಲಿಂ ಇನ್ ವೆಸ್ಟರ್ನ್ ಯು.ಪಿ", ದ ಇಂಡಿಯನ್ ಎಕಾನಾಮಿಕ್ ರಿವಿವ್ಯೂ, ಲಕ್ನೋ, ವಾ.ಸಂ.೦೮, ಸಂ.೦೨, ಮೇ ೨೦೦೩.

೩. ಅಸ್ಗರ್ ಅಲಿ ಇಂಜಿನಿಯರ್, *ಇಸ್ಲಾಂ ಅ್ಯಂಡ್ ಮುಸ್ಲಿಂ; ಎ ಕ್ರಿಟಿಕಲ್ ರಿ ಅಸೆಸ್‌ಮೆಂಟ್*, ಜೈಪುರ್: ಪ್ರಿಂಟ್‌ವೆಲ್ ಪಬ್ಲಿಷರ್ಸ್, ೧೯೮೫.

೪. ಅಮರ್ತ್ಯಸೇನ್ ಮತ್ತು ಜೀನ್‌ಡ್ರೀಜ್, *ಎನ್ ಅನ್‌ಸರ್ಟನ್ ಗ್ಲೋರಿ ಇಂಡಿಯ ಅಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್*, ನ್ಯೂಡೆಲ್ಲಿ, ಪೆಂಗ್ವಿನ್ ಬುಕ್ಸ್ ಇಂಡಿಯ ಪ್ರೈ.ಲಿ. ೨೦೦೯.

೫. ಅಜೀಜ್ ಅಹಮದ್, *ಸ್ಟಡೀಸ್ ಇನ್ ಇಸ್ಲಾಮಿಕ್ ಕಲ್ಚರ್ ಇನ್ ಇಂಡಿಯನ್ ಎನ್ವಿರಾನ್‌ಮೆಂಟ್*, ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೯೯.

೬. ಅಬುಸಾಲೇಹ್ ಷರೀಫ್, *ಮುಸ್ಲಿಮರನ್ನು ಸಬಲರನ್ನಾಗಿಸುವ ದಿಕ್ಕಿನಲ್ಲಿ.....* ಮಂಗ್ಳೂರ ವಿಜಯಾ (*ಸಂ*), *ಸಾಚಾರ್ ವರದಿ ಮತ್ತು ಮುಸ್ಲಿಮರ ಸ್ಥಿತಿಗತಿ*, ಬೆಂಗಳೂರು: ಸಾಮಾಜಿಕ ಕ್ರಿಯಾ ಸಮಿತಿ, ೨೦೦೭.

೭ ಅಮಾನುಲಾ ಎಸ್ಸ್., *ಮುಸ್ಲಿಂ ಗರ್ಲ್ಸ್* ಇನ್ ಎ ಫಸ್ಟ್ ಗ್ರೇಡ್ ಕಾಲೇಜು ಬೆಂಗಳೂರು ಯೂನಿವರ್ಸಿಟಿ, ಬೆಂಗಳೂರು, ೧೯೯೮.

೮. ಅಹಮದ್ .ಎಲ್, *ಎಜುಕೇಷನಲ್ ಡೆವೆಲಪ್‌ಮೆಂಟ್ ಆಫ್ ಮೈನಾರಿಟೀಸ್ ಇನ್ ಇಂಡಿಯ: ಫ್ಯೂಚರ್ ಪರ್ಸ್‌ಪೆಕ್ಟಿವ್*, ಎಜುಕೇಷನ್ ಪ್ಲಾನಿಂಗ್ ಅಂಡ್ ಅಡ್‌ಮಿನಿಸ್ಟ್ರೇಷನ್, ೧೯೮೭.

೯. ಅಹಮದ್ ಜವಾದ್. ಹೆಚ್. ರೈಟ್ಸ್ ಆಫ್ ವಿಮೆನ್ ಇನ್ ಇಸ್ಲಾಂ. ನ್ಯೂಯಾರ್ಕ್. ಸೇಂಟ್ ಮಾರ್ಟಿನ್ಸ್ ಪ್ರಸ್, ೧೯೯೮.

೧೦. ಆರ್.ಕೆ.ರಾವ್, *ವಿಮೆನ್ ಅಂಡ್ ಎಂಪವರ್‌ಮೆಂಟ್*, ನ್ಯೂಡೆಲ್ಲಿ, ಕಲ್ಪಾಜ್ ಪಬ್ಲಿಕೇಷನ್.

೧೧. ಆಯಷಾ ಜಿ. ಮತ್ತು ಹೇರೆನ್, *ವುಮನ್ ಇನ್ ಇಸ್ಲಾಂ*, ಅಲಿಘರ್, ಕ್ರಸೆಂಟ್ ಪಬ್ಲಿಕೇಷನ್ಸ್.

೧೨. ಆರೀಫ್ ಹುಸೇನ್, "ಎಜ್ಯುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ",*ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್*, ಸಂ.೫, ಸಂಖ್ಯೆ೧, ೧೯೯೩.

೧೩. ಆರೀಫ್ ಕುಲ್‌ಸುಮ್ ಜಾವಿದ್, "ಸೋಷಿಯಲ್ ಚೇಂಜ್ ಅಮಾಂಗ ದ ಮುಸ್ಲಿಮ್ಸ್ ಆಫ್ ಹೈದ್ರಾಬಾದ್", ಜರ್ನಲ್ ಅಫ್ ಸೋಶಿಯಲ್ ಸೈನ್ಸ್‌ಸ್, ಜೂನ್ ೧೯೮೮.

೧೪. ಆಶೀಶ್ ಗಾರವರ್, *ಇಂಡಿಯನ್ ಎಜುಕೇಷನ್ ಸ್ಟ್ರಕ್ಚರ್ ಅಂಡ್ ಪ್ರೊಸೆಸ್*, ನ್ಯೂಡೆಲ್ಲಿ, ರಾವತ್ ಪಬ್ಲಿಕೇಷನ್ಸ್, ೨೦೦೫.

೧೫. ಇಸ್ಮಾಯಿಲ್ ಎಂ. ಮಕಾಂದಾರ್, "ಎ ಸೊಶಿಯಾಲಾಜಿಕಲ್ ಸ್ಟಡಿ ಆಫ್ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್ ಇನ್ ಕರ್ನಾಟಕ; ಎ ಕೇಸ್‌ಸ್ಟಡಿ ಆಫ್ ಮುಸ್ಲಿಂ ಮೈನಾರಿಟಿ ಎಜುಕೇಷನಲ್ ಇನ್‌ಸ್ಟಿಟ್ಯೂಷನ್ಸ್", ಸಮಾಜಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ೨೦೦೨

೧೬. ಇಮ್ತಿಯಾಜ್ ಅಹಮದ್, "*ಎಜುಕೇಷನಲ್ ಡೆವಲಪ್‌ಮೆಂಟ್ ಆಫ್ ಮೈನಾರಿಟೀಸ್ ಇನ್ ಇಂಡಿಯಾ*", *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆ್ಯಂಡ್ ಅಡ್ಮಿನಿಸ್ಟ್ರೇಷನ್* ಸಂ.೧, ಸಂಖ್ಯೆ ೨.

೧೭. ಇಜಾರ್ ಅಹಮದ್, ಮುಸ್ಲಿಮ್ *ಪಾಟಿಸಿಪೇಷನ್ ಇನ್ ಸ್ಮಾಲ್‌ಸ್ಕೇಲ್ ಇಂಡಸ್ಟ್ರಿ ಸೆಕ್ಟರ್ ಇನ್ ಅಲಿಘಡ್ ಡಿಸ್ಟ್ರಿಕ್ಟ್*, ಮುಸ್ಲಿಂ ಇಂಡಿಯಾ, ಸಂ.೧, ಸಂಖ್ಯೆ೯, ೧೯೮೩

೧೮. ಇಸ್ತಿಯಾಕ್ ಡ್ಯಾನಿಷ್, *ರಿಸ್ಪಾರ್ಟಿಂಗ್ ಡ್ರಾಪ್‌ಔಟ್ ಮುಸ್ಲಿಂ ಗರ್ಲ್ಸ್ ಇನ್ ಎಜ್ಯುಕೇಷನ್*, ಲಕ್ನೋ ಅಪ್ರಕಟಿತ ಅಯೋಜಿತ ಕಾರ್ಯ ವರಧಿ, ಪ್ರಾಯೋಜಿತ ಯುನಿಸೆಫ್, ೨೦೦೪

೧೯. ಇಮಾಮ್ ಪರ್ವಿನ್, "ಎಕ್ಸ್‌ಕ್ಲುಜನ್ ಆಫ್ ಮುಸ್ಲಿಂ ಗರ್ಲ್ಸ್ ಫ್ರಮ್ ಸ್ಕೂಲ್ ಎ ಪಾರ್ಟರಿಸ್ಪೆಟರಿ ಎನಾಲಿಸಿಸ್ ಇನ್ ದಿ ಡಿಸ್ಟ್ರಿಕ್ಟ್ ಆಫ್ ರಾಂಪುರ್",ಪ್ರಾಜೆಕ್ಟ್ ಸ್ಪಾನ್ಸರ್‌ಡ್ ಬೈ ಸ್ಕ್ವಯರ್, ೧೯೯೯

೨೦. ಇಂದೂ ಕುಮಾರಿ ಎಂ, *ಎಜ್ಯುಕೇಶನ್ ಅಂಡ್ ಸೋಷಿಯಲ್ ಸ್ಟೇಟಸ್ ಆಫ್ ಮುಸ್ಲಿಂ ವುಮನ್ ಇನ್ ಕೇರಳ*, ನ್ಯೂಡೆಲ್ಲಿ, ಕ್ಲಾಸಿಕ್ ಪಬ್ಲಿಷರ್ಸ್, ೧೯೭೬.

೨೧. ಇಂದು ಮೆನನ್, *ಸ್ಟೆಟಸ್ ಆಫ್ ಮುಸ್ಲಿಂ ವಿಮೆನ್ ಇಂಡಿಯ*, ಉಪ್ಪಲ್ ಪಬ್ಲಿಕೇಷನ್, ೧೯೮೧, ನ್ಯೂಡೆಲ್ಲಿ.

೨೨. ಜಿಸಾಫ್ ಅಹಮದ್, *ಸೇವಿಂಗ್ ಬಿಹೇವಿಯರ್ ಇನ್ ಎ ಮೆಟ್ರೊಪಾಲಿಟಿಯನ್ ಇಕಾನಮಿ*, ನ್ಯೂಡೆಲ್ಲಿ: ಅಟ್ಲಾಂಟ ಪಬ್ಲಿಷರ್ಸ್, ೧೯೮೨.

೨೩. ಜಿಸಾಫ್ ಅಹಮದ್, *ಇಂಡಿಯನ್ ಮುಸ್ಲಿಮ್ಸ್: ಇಶ್ಯೂಸ್ ಇನ್ ಸೋಶಿಯಲ್ ಆಂಡ್ ಇಕನಾಮಿಕ್ ಡೆವಲಪ್‌ಮೆಂಟ್*, ನ್ಯೂಡೆಲ್ಲಿ, ಖಾಮಾ ಪಬ್ಲಿಷರ್.

೨೪. ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರಕಟಿಸಿದ ೨೦೧೦-೧೧ನೇ ವಿಶ್ಲೇಷಣಾ ವರದಿ.

೨೫. ಕಾಶಿಲಾಲ್ ವಾಸಿ, *ಎ ಸ್ಟಡೀ ಆಫ್ ಫ್ಯಾಕ್ಟರ್ಸ್ ಅಫೆಕ್ಟಿಂಗ್ ದ ಎಜ್ಯುಕೇಶನಲ್ ಡೆವೆಲಪ್‌ಮೆಂಟ್ ಆಫ್ ದಿ ಗರ್ಲ್ ಚೈಲ್ಡ್ ಅಂಡ್ ದೇರ್ ಟೀಚಿಂಗ್ ಲರ್ನಿಂಗ್ ಕಂಡಿಷನ್ಸ್ ಇನ್ ದ ಹರ್ಥೋಟ ಏರಯಾ*, ಕೋಟಾ, ಕೋಟಾ ಓಪನ್ ಯುನಿವರ್ಸಿಟಿ, ೨೦೦೩.

೨೬. ಕಾಮತ್ ಎ.ಆರ್. *ಸ್ಟಡೀಸ್ ಇನ್ ಎಜುಕೇಷನ್ ರಿಫಾರ್ಮ್ಸ್ ಇನ್ ಇಂಡಿಯ*, ಬಾಂಬೆ, ಹಿಮಾಲಯ ಪಬ್ಲಿಷಿಂಗ್ ಹೌಸ್, ೧೯೮೯.

೨೭. ಕೆ.ಎನ್.ಜಹಾಂಗೀರ್, *ಮುಸ್ಲಿಂ ವುಮನ್ ಇನ್ ವೆಸ್ಟ್‌ಬೆಂಗಾಲ್, ಸೋಷಿಯೊ ಎಕಾನಾಮಿಕ್ ಆಂಡ್ ಪೊಲಿಟಿಕಲ್ ಸ್ಟೇಟಸ್*, ನ್ಯೂಡೆಲ್ಲಿ, ಮಿನೆರ್ವ ಅಸೋಷಿಯೆಟ್ ಪಬ್ಲಿಕೇಷನ್ಸ್, ೧೯೯೧.

೨೮. ಕೆ.ಪದ್ಮಾವತಿ, *ಸೋಷಿಯಲ್ ಕನ್‌ಸ್ಟ್ರೇನ್ಸ್ ಆನ್ ವುಮನ್ ಎಜ್ಯುಕೇಶನ್ ಇನ್ ರೂರಲ್* ಆಂಧ್ರಪ್ರದೇಶ್, ಹೈದ್ರಾಬಾದ್, ಪೀಪಲ್ಸ್ ಪಬ್ಲಿಕೇಷನ್, ೨೦೦೦.

೨೯. ಕೆ.ಕೃಷ್ಣಮ್ಮ, "ಸೋಶಿಯಲ್ ಅಂಡ್ ಎಕನಾಮಿಕ್ ಆಸ್‌ಪೆಕ್ಟ್ಸ್ ಆಫ್ ಫೀಮೆಲ್ ಎಜ್ಯುಕೇಶನ್: ಎ ಕೇಸ್ ಸ್ಟಡಿ ಆಫ್ ರಾಯಲಸೀಮಾ", *ಎಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ*, ಜುಲೈ ೧೯೯೧.

೩೦. ಕೆ.ವೈಜಯಂತಿ, *ಎ ಸ್ಟಡಿ ಆಫ್ ಗವರ್ನಮೆಂಟ್ ಉರ್ದು ಪ್ರೈಮರಿ ಸ್ಕೂಲ್ ಇನ್ ಬೆಂಗಳೂರು*, ಬೆಂಗಳೂರು, *ಅಕ್ಷರ ಫೌಂಡೇಶನ್ಸ್*, ಜುಲೈ, ಕರ್ನಾಟಕ, ೨೦೧೧.

೩೧. ಖುಸ್ರೋ.ಎ.ಎಂ, *"ಇಂಡಿಯನ್ ಮುಸ್ಲೀಮ್ಸ್ ಟುವರ್ಡ್ಸ್ ದಿ ಟ್ವೆಂಟಿಫಸ್ಟ್ ಸೆಂಚ್ಯೂರಿ", ಜರ್ನಲ್ ಆಫ್ ಆಬ್ಜೆಕ್ಟಿವ್ ಸ್ಟಡೀಸ್*, ಸಂ.೮, ಸಂಖ್ಯೆ೧, ೧೯೯೬.

೩೨. ಗುಲ್‌ಷನ್ ಜುಬೇರ್. "ಮೊಹಮ್ಮದ್ ಎಜ್ಯುಕೇಶನಲ್ ಕಾನ್ಫರೆನ್ಸ್ ಇಟ್ಸ್ ಇಂಪ್ಯಾಕ್ಟ್ ಆನ್ ದ ಡೆವೆಲಪ್‌ಮೆಂಟ್ ಆಫ್ ಮಾರ್ಡನ್ ಎಜ್ಯುಕೇಶನ್ ಫಾರ್ ಮುಸ್ಲಿಂ ಕಮ್ಯುನಿಟಿ ಇನ್ ರಾಜಸ್ಥಾನ್ ಡ್ಯೂರಿಂಗ್ ಟ್ವೆಂಟಿಯತ್ ಸೆಂಚುರಿ", ಜರ್ನಲ್ ಆಫ್ ಹ್ಯೂಮ್ಯಾನಿಟೀಸ್ ಅಂಡ್ ಸೋಷಿಯಲ್ ಸೈನ್ಸಸ್ ವಾ.ನಂ.೧೯, ಸ-೫, ಮೇ. ೨೦೧೪.

೩೩. ಗೋಪಾಲ ಕೃಷ್ಣ, *ರಿಪೋರ್ಟ್ ಆನ್ ನ್ಯಾಷನಲ್ ಸರ್ವೆ ಆಫ್ ಮುಸ್ಲಿಮ್ಸ್ ಇನ್ ಇಂಡಿಯಾ,* ನ್ಯೂಡೆಲ್ಲಿ; ಐಸಿಎಸ್‌ಆರ್, ೧೯೮೨.

೩೪. ಗೋಪಾಲಸಿಂಗ್ *ರಿಪೋರ್ಟ್ ಆನ್ ಮೈನಾರಿಟೀಸ್, ಷೆಡ್ಯೂಲ್ಡ್ ಕಾಸ್ಟ್, ಷೆಡ್ಯೂಲ್ಡ್ ಟ್ರೈಬ್ ಆ್ಯಂಡ್ ಅದರ್ ವೀಕರ್ ಸೆಕ್ಷನ್ಸ್,* ನ್ಯೂಡೆಲ್ಲಿ: ಮಿನಿಸ್ಟ್ರಿ ಆಫ್ ಹೋಂ ಅಫೇರ್ಸ್, ಗವರ್ನಮೆಂಟ್ ಆಫ್ ಇಂಡಿಯಾ, ೧೯೮೩.

೩೫. ಗಾರವರ್ ಎಂ.ಎಸ್,*ಇಂಡಿಯನ್ ಎಜುಕೇಷನ್: ಸ್ಟ್ರಕ್ಚರ್ ಅಂಡ್ ಪ್ರೋಸೆಸ್,* ನ್ಯೂಡೆಲ್ಲಿ, ರಾವತ್ ಪಬ್ಲಿಕೇಷನ್ಸ್, ೧೯೯೪.

೩೬. ಗ್ರಾನ್‌ವಿಲ್ಲೆ ಆಸ್ಟಿನ್, *ದ ಇಂಡಿಯನ್ ಕಾನ್‌ಸ್ಟಿಟ್ಯೂಷನ್: ಕಾರ್ನರ್ ಸ್ಟೋನ್ ಆಫ್ ಎ ನೇಷನ್,* ಬಾಂಬೆ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೭೨.

೩೭. ಗ್ಲೆನ್ ಅಂಡ್ ಹೈಲೆಂಡ್ ಮತ್ತು ಮುಲ್ಲರ್ ಮತ್ತು ಸ್ಯಾಡರ್ಸ್ ಡಬ್ಲ್ಯೂ, "ದ ಎಫೆಕ್ಟ್ ಆಫ್ ಎಥ್ನಿಸಿಟಿ ಅಂಡ್ ರಿಲಿಜಿಯನ್ ಆನ್ ಎಜುಕೇಷನಲ್ ಅಟೇನ್‌ಮೆಂಟ್, ಎಕನಾಮಿಕ್ಸ್ ಆಫ್ ಎಜುಕೇಷನ್", *ಎಜುಕೇಷನಲ್ ರಿವ್ಯೂ,* ವಾ.ಸ.೧೧.

೩೮. ಜಾಗೃತಿ ರೇ, *ದ ಪ್ರಾಬ್ಲಂಸ್ ಆಫ್ ಗರ್ಲ್ಸ್ ಎಜ್ಯುಕೇಶನ್ ಇನ್ ಡೆಂಕನ್‌ನಾಲ್ ಡಿಸ್ಟ್ರಿಕ್ ಓರಿಸ್ಸಾ,* ನ್ಯೂಡೆಲ್ಲಿ , ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೨.

೩೯. ಜೆ.ಎಸ್. ಬಂದೂಕ್‌ವಾಲ, *ಎ ಗಾಂಧಿಯನ್ ಸ್ಟ್ರಗಲ್ ಬೈ ವಿಕ್ಟಿಮ್ಸ್ ಆಫ್ ಬರೋಡ ರೈಯಟ್ಸ್,* ರಿ ಪ್ರಿಂಟೆಡ್ ಇನ್ ಮುಸ್ಲಿಮ್ ಇಂಡಿಯಾ. ಸಂ.೧, ಸಂಖ್ಯೆ೪, ೧೯೮೯.

೪೦. ಜೆಹರಾ ಜಬೀನ್. ಇಸ್ಲಾಂ ಅಂಡ್ ವುಮೆನ್ಸ್ ಎಜುಕೇಷನ್ಸ್ ಇನ್ ಇಂಡಿಯಾ, ಇಸ್ಲಾಂ ಅಂಡ್ ಮಾಡರ್ನ್ ಎಜ್ ವಾ.ಸಂ ೩೪, ಸಂ.೦೨, ಮೇ.೨೦೦೩.

೪೧. ಜಿ.ಎಸ್. ಸಿಂಗ್. ಮುಸ್ಲಿಂ ಇನ್ ಇಂಡಿಯ ಅನ್ಮೊಯಲ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, ೨೦೦೩.

೪೨. ಜಾವೀದ್ ಅಪ್ತರ್, *ಮುಸ್ಲಿಂ ವಿಮೆನ್ಸ್ ಎಜುಕೇಷನ್ ಇನ್ ಇಂಡಿಯ, ಇನ್ ಮೋಹಿನಿ ಅಂಜುಮ್ (ಸಂ) ಮುಸ್ಲಿಂ ವಿಮೆನ್ ಇನ್ ಇಂಡಿಯ*, ರೇಡಿಯಂಟ್ ಪಬ್ಲಿಷರ್ಸ್, ನ್ಯೂಡೆಲ್ಲಿ, ೧೯೯೨.

೪೩. ಜೋಯಾ ಹಸನ್ ಅಂಡ್ ರಿತು ಮೆನನ್, ಅನ್ ಇಕ್ವಲ್ ಸಿಟಿಜನ್ಸ್: ಎ ಸ್ಟಡಿ ಆಫ್ ಮುಸ್ಲಿಂ ವಿಮೆನ್ ಇನ್ ಇಂಡಿಯ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೨೦೦೪.

೪೪. ಜೈನ್ ಎಸ್.ಪಿ. ರಿಲಿಜಿಯನ್, "ಕಾಸ್ಟ್ ಕ್ಲಾಸ್ ಅಂಡ್ ಪೇರೆಂಟಲ್ ಎಜುಕೇಷನ್ಲ್ ಆಸ್ಪರೇಷನ್ಸ್ ಇನ್ ನಾರ್ತ್ ಇಂಡಿಯನ್ ಕಮ್ಯುನಿಟಿ",*ಇಂಡಿಯನ್ ಎಜುಕೇಷನ್ಲ್ ರಿವ್ಯೂ*, ೧೯೬೯, ವಾ.ಸಂ.೪.

೪೫. ಟಿ.ಎ.ಪ್ರಶಾಂತ್‌ಬಾಬು,*ಮಳವಳ್ಳಿ ತಾಲೂಕಿನ ಉರ್ದು ಶಾಲೆಗಳ ಅಧ್ಯಯನ ವರದಿ* ೨೦೦೮-೦೯.

೪೬. ಡಾ. ಅನಸೂಯ ಕಾಂಬಳೆ, *ದಲಿತ ಮಹಿಳೆಯರ ಪ್ರಶ್ನೆಗಳು ಮತ್ತು ಸಾಂಸ್ಕೃತಿಕ ಆಯಾಮಗಳು*, ಸಂವಾದ, ಬೆಂಗಳೂರು, ಸ್ಪೂರ್ತಿಧಾಮ, ೨೦೦೪, ಸಂ-೧೨, ಮಾರ್ಚ್.

೪೭. ಡಾ.ಉಮಾ ದಿಕ್ಷಿತ್, *ಎ ಸ್ಟಡೀ ಆನ್ ದ ಹೆಲ್ತ್ ಪ್ರೊಫಲ್ ಆಫ್, ಸ್ಕೂಲ್ ಡ್ರಾಪ್‌ಔಟ್ ಚಿಲ್ಡರನ್ಸ್ ಆಫ್ ಅರ್ಬನ್ ಸ್ಲಂ ಇನ್ ದ ಫೀಲ್ಡ್ ಪ್ರಾಕ್ಟೀಸ್ ಏರಿಯಾ ಆಫ್ ಅರ್ಬನ್ ಹೇಲ್ತ್ ಟ್ರೈನಿಂಗ್ಸ್ ಸೆಂಟರ್*, ಕಿಮ್ಸ್ ಹುಬ್ಬಳ್ಳಿ, ರಾಜೀವ್‌ಗಾಂಧಿ ಯುನಿವರ್ಸಿಟಿ ಆಫ್ ಹೆಲ್ತ್ ಸೈನ್ಸ್, ಕರ್ನಾಟಕ, ಬೆಂಗಳೂರು, ೨೦೧೦.

೪೮. ಡಾ.ದುರ್ಗದಾಸ್ ಬಸು, *ಇಂಟ್ರೂಡಕ್ಷನ್ ಟು ದ ಕಾನ್‌ಸ್ಟಿಟ್ಯೂಷನ್ ಅಫ್ ಇಂಡಿಯಾ*, ನ್ಯೂಡೆಲ್ಲಿ, ವಾಡ್ವಾ ಅಂಡ್ ಕಂಪನಿ ಲಾ ಪಬ್ಲಿಷರ್ಸ್, ೨೦೦೭.

೪೯. ಡಾ.ಟಿ.ಆರ್ ಚಂದ್ರಶೇಖರ, *ವಿಜಾಪುರ ಜಿಲ್ಲೆ ಅಭಿವೃದ್ಧಿ ಮತ್ತು ದುಃಸ್ಥಿತಿ ಒಂದು ಅಧ್ಯಯನ*, ಹಂಪಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೧೨.

೫೦. ಡಾ.ಟಿ.ಆರ್ ಚಂದ್ರಶೇಖರ್. *ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು*.ಹಂಪಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೦೮.

೫೧. ಡಾ.ಎಂ. ಚಂದ್ರ ಪೂಜಾರಿ. *ರಾಜಕೀಯದ ಬಡತನ*. ಹೊಸಪೇಟೆ. ಸಿದ್ಧಾರ್ಥ ಪ್ರಕಾಶನ, ೨೦೦೮.

೫೨. ಡಾ.ಎಂ. ಚಂದ್ರ ಪೂಜಾರಿ, *ಅಭಿವೃದ್ಧಿ ಮತ್ತು ರಾಜಕೀಯ*, ಚೆನ್ನಪಟ್ಟಣ, ಪಲ್ಲವ ಪ್ರಕಾಶನ, ೨೦೧೪.

೫೩. ಡಾ. ನಜೀರುದ್ದೀನ್, "ಮುಸ್ಲಿಂ ಮೈನಾರಿಟಿ ಎಕ್ಸ್‌ಕ್ಲೂಜನ್ ಅಂಡ್ ಡೆವಲಪ್‌ಮೆಂಟ್ ಇಶ್ಯೂಸ್ : ನೀಡ್ ಫಾರ್ ಇನ್‌ಕ್ಲೂಜಿವ್ ಪಾಲಿಸಿ", *ಇಂಟರ್ ನ್ಯಾಷನಲ್ ಜರ್ನಲ್ ಆಫ್ ಮಲ್ಟಿಡಿಸಿಪ್ಲಿನರಿ ರೀಸರ್ಚ್*, ವಾ.ಸಂ ೨, ಸಂಚಿಕೆ ೧, ೨೦೧೨.

೫೪. ಡಾ. ಬದರಿನಾಥ್.ಕೆ. ರಾವ್, *ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು*, ಬೆಂಗಳೂರು: ನವಕರ್ನಾಟಕ ಪ್ರಕಾಶನ, ೨೦೦೨.

೫೫. ಡಾ. ಶಕೀಲ್ ಅಹಮದ್ ಮತ್ತು ಡಾ. ಮಲಿಕಾ ಮಿಸ್ತ್ರಿ, "ಮುಸ್ಲಿಂ ವುಮೆನ್ ಅಂಡ್ ಎಜುಕೇಷನ್", *ಜರ್ನಲ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾಮರ್ಸ್* ವಾ.ಸಂ.೧ ಸಂ.೧ ಅಕ್ಟೋಬರ್ ೨೦೧೦.

೫೬. ಡಾ. ಷೇಖ್ ರಹೀಂ ಮೊಂಡಲ್, *ಸೋಶಿಯಲ್ ಆರ್ಗನೈಜೇಷನ್ ಅಮಾಂಗ್ ರೂರಲ್ ವೆಸ್ಟ್ ಬೆಂಗಾಲ್*, ಡಿಪಾರ್ಟ್‌ಮೆಂಟ್ ಆಫ್ ಸೋಶಿಯಾಲಜಿ ಆ್ಯಂಡ್ ಸೋಶಿಯಲ್ ಆಂಥ್ರೋಪಾಲಜಿ, ನಾರ್ಥ್ ಬೆಂಗಾಲ್ ಯೂನಿವರ್ಸಿಟಿ, ೧೯೯೮.

೫೭. ಡಾ. ಷೇಖ್ ರಹೀಮ್ ಮೊಂಡಲ್, "ಇಕನಾಮಿಕ್ ಆ್ಯಂಡ್ ಸೋಶಿಯಲ್ ಸಿಚ್ಯೂಏಷನ್ ಅಮಾಂಗ್ ಮುಸ್ಲಿಮ್ಸ್ ಆಫ್ ವೆಸ್ಟ್ ಬೆಂಗಾಲ್; ಸಮ್ ಎಂಫಿರಿಕಲ್ ಅಬ್‌ಸರ್ವೇಷನ್", *ಜರ್ನಲ್ ಆಫ್ ಆಜ್ಜೆಕ್ಟೀವ್ ಸ್ಟಡೀಸ್*, ಸಂ.೨, ಸಂಖ್ಯೆ. ೧, ಜನವರಿ ೧೯೯೯.

೫೮. ಡಾ.ಕೆ. ಷರೀಫಾ, *ಲೋಹಿಯ, ಮಹಿಳೆ ಮತ್ತು ಸಮಾನತೆ*, ಸಂವಾದ, ಬೆಂಗಳೂರು, ಸ್ಫೂರ್ತಿಧಾಮ, ಮಾರ್ಚ್, ೨೦೦೪, ಸಂಪುಟ ೧೨.

೫೯. ಡಾ.ಎಂ.ಎಸ್.ಹತ್ತಿ, *ಮುಂಬಯಿ-ಕರ್ನಾಟಕದ ಗಡಿನಾಡ ಕನ್ನಡಿಗರ ಶೈಕ್ಷಣಿಕ ಸ್ಥಿತಿಗತಿ : ಒಂದು ಅಧ್ಯಯನ*, ಧಾರವಾಡ, ಶಶಿ ಕಿರಣ ಪ್ರಕಾಶನ, ೨೦೧೦.

೬೦. ಡಾ.ಹೆಚ್.ಎಂ ರಾಜಶೇಖರ, *ಭಾರತ ಸರ್ಕಾರ ಮತ್ತು ರಾಜಕೀಯ*, ಮೈಸೂರು, ಕಿರಣ ಪ್ರಕಾಶನ, ೨೦೧೩.

೬೧. ತಿಲಕ್ ಎ. ಜಿ.ಬಿ. "ಹೌ ಫ್ರೀ ಈಸ್ ಫ್ರೀ ಎಜುಕೇಷನ್ ಇನ್ ಇಂಡಿಯ? ಅಕೇಷನಲ್ ಪೇಪರ್ ೨೧", ನ್ಯೂಡೆಲ್ಲಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್‌ಲ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಷನ್, ೧೯೯೫.

೬೨. ನಸ್ರೀನ್ ಪರ್ವೀನ್, *ಸ್ಟಡಿ ಅಫ್ ಆ್ಯಟಿಟ್ಯೂಡ್ಸ್ ಟುವರ್ಡ್ಸ್ ಹೈಯರ್ ಎಜುಕೇಷನ್ ಆಫ್ ಮುಸ್ಲಿಂ ಗರ್ಲ್ಸ್ ಸ್ಟುಡೆಂಟ್ಸ್ ಅಂಡ್ ದೇರ್ ಪೇರೆಂಟ್ಸ್* ಎ.ಡಿಸರ್ಟೇಷನ್ ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ನ್ಯೂಡೆಲ್ಲಿ, ಜಾಮಿಯ ಮಿಲಿಯ ಇಸ್ಲಾಮಿಯ, ೧೯೯೯.

೬೩. ನಜಬುಗಿ‌ರ್ ಆರ್. ಅಂಡ್ ಪಿ.ಎಂ. ಕುಲಕರ್ಣಿ, *ಚೈಲ್ಡ್ ವರ್ಕ್ ಸ್ಕೂಲಿಂಗ್ ಅಂಡ್ ಫರ್ಟಿಲಿಟಿ ಇನ್ ರೂರಲ್ ಕರ್ನಾಟಕ ಇನ್ ಕನಬುರ್ಗಿ (ಸಂ) ಚೈಲ್ಡ್ ಲೇಬರ್ ಇನ್ ದ ಸಬ್‌ಕಂಟೆಂಟ್: ಡೈಮೆನ್ಷನ್ಸ್ ಅಂಡ್ ಇಂಪ್ಲಿಕೇಷನ್ಸ್,* ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ೧೯೯೧.

೬೪. ನಳಿನಿ ಜುನೆಜಾ, *ಅಕ್ಸೆಸ್ ಟು ವಾಟ್? ಡೈವರ್‌ಸಿಟಿ ಅಂಡ್ ಪಾರ್ಟಿಸಿಪೇಷನ್ ಇನ್ ಆರ್ ಗೋವಿಂದ(ಸಂ) ಹು ಗೋಸ್ ಟು ಸ್ಕೂಲ್: ಎಕ್ಸ್‌ಪ್ಲೋರಿಂಗ್ ಎಕ್ಸ್‌ಕ್ಲೂಷನ್ ಇನ್* ಇಂಡಿಯನ್ ಎಜುಕೇಷನ್, ನ್ಯೂಡೆಲ್ಲಿ ಅಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ೨೦೧೧.

೬೫. ನೀರಾ ಚಂದೋಕೆ, *ದಿ ಸಿವಿಲ್ ಅಂಡ್ ದ ಪೊಲಿಟಿಕಲ್ ಇನ್ ಸಿವಿಲ್ ಸೊಸೈಟಿ*, ಇನ್ ಸಿ. ಎಂ. ಎಲಿಯೇಟ(ಸಂ) ಸಿವಿಲ್ ಸೂಸೈಟಿ: ಎ ರೀಡರ್, ಆಕ್ಸ್ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

೬೬. ಪಾಲಾಕ್ಷ, *ಸಮಗ್ರ ಕರ್ನಾಟಕ* ಇತಿಹಾಸ ಮತ್ತು *ಸಂಸ್ಕೃತಿ*, ಶಶಿ ಪ್ರಕಾಶನ, ತಿಪಟೂರು ೨೦೦೬.

೬೭. ಪಾವಲವಲ್ಲಿ ಗೋವಿಂದಸ್ವಾಮಿ ಅಂಡ್ ಬಿ ಎಂ. ರಮೇಶ್, "ಮಟಿರಿಯಲ್ ಎಜುಕೇಷನ್ ಅಂಡ್ ಜೆಂಡರ್ ಚಾಯ್ಸ್ ಇನ್ ಚೈಲ್ಡ್‌ಕೇರ್ ಪ್ರಾಕ್ಟಿಸೆಸ್ ಇನ್ ಇಂಡಿಯಾ",ಅನಿವಲ್ *ಮೀಟಿಂಗ್ಸ್ ಅಫ್ ದ ಪಾಪುಲೇಷನ್ ಅಸೋಸಿಯೇಷನ್ ಅಫ್ ಅಮೇರಿಕ*, ನ್ಯೂ ಓರ್ಲಿನ್ಸ್, ೧೯೯೬.

೬೮. ಪ್ರಶಾಂತ್ ಕೆ. *ತ್ರಿವೇದಿ, ರೂರಲ್ ಪವರ್ ಸ್ಟ್ರಕ್ಚರ್, ಸ್ಟೇಟ್* ಇನಿಶಿಯೇಟಿವ್ *ಅಂಡ್ ದ ಮುಸ್ಲಿಂ ಡೈವರ್‌ಜೆಂಟ್ ಎಕ್ಸ್‌ಪಿರಿಯನ್ಸ್ ಇನ್ ಫೋರ್ ಸ್ಟೇಟ್ಸ್.*

೬೯. ಪ್ರೀತ್ ರುಸ್ತಗಿ, *ಸಿಗ್ನಿಫಿಕೆನ್ಸ್ ಆಫ್ ಜೆಂಡರ್ ರಿಲೇಟೆಡ್ ಡೆವಲಪ್‌ಮೆಂಟ್ ಇಂಡಿಕೇಟರ್ಸ್: ಎನ್ ಎನಾಲಿಸಿಸ್ ಆಫ್ ಇಂಡಿಯನ್ ಸ್ಟೇಟ್ಸ್. ಇಂಡಿಯನ್ ಜರ್ನಲ್ ಆಫ್ ಜೆಂಡರ್ ಸ್ಟಡಿಸ್*, ನ್ಯೂಡೆಲ್ಲಿ, ಸೇಜ್ ಪಬ್ಲಿಕೇಷನ್ಸ್, ೨೦೦೦.

೭೦. ಪ್ಲಾನಿಂಗ್ ಕಮಿಷನ್, ಟುವರ್ಡ್ಸ್ ಫಾಸ್ಟರ್ ಅಂಡ್ ಮೋರ್ ಇನ್‌ಕ್ಲೂಜಿವ್ ಗ್ರೋಥ್ ಎನ್ ಅಪ್ರೋಚ್ ಟು ದ ಇಲೆವೆಂತ್ ಫೈವ್ ಈಯರ್ ಪ್ಲಾನ್. ನ್ಯೂಡೆಲ್ಲಿ. ಗರ್ವನಮೆಂಟ್ ಅಫ್ ಇಂಡಿಯಾ, ೨೦೦೬.

೭೧. ಪ್ರೊ.ಜಾವೀದ್ ಆಲಂ, ಹೊಣೆಗಾರಿಕೆ ಇರುವ ನಾಯಕತ್ವ ಬೇಕು. ಮಂಗ್ಳೂರ ವಿಜಯ (ಸಂ), ಸಾಚಾರ್ ವರದಿ ಮತ್ತು ಮುಸ್ಲಿಮರ ಸ್ಥಿತಿಗತಿ, ಬೆಂಗಳೂರು: ಸಾಮಾಜಿಕ ಕ್ರಿಯಾ ಸಮಿತಿ, ೨೦೦೭.

೭೨. ಪ್ರಿಯದರ್ಶಿನಿ ಚಿಗರಿ, ಮುಬಾಷಿ ಅಂಗೋಲಕರ್ ಮೃಣಾಲ್ ಶರ್ಮ, ವೈತ್‌ಫೇತ್ ಅಂಡ್ ಬಿ.ಆರ್. ಅಶೋಕ್ ಕುಮಾರ್, "ಡಿಟರ್ಮಿನೆಂಟ್ಸ್ ಆಫ್ ರೀಜನ್ಸ್ ಫಾರ್ ಸ್ಕೂಲ್ ಡ್ರಾಪ್‌ಔಟ್ಸ್ ಇನ್ ಅರ್ಬನ್ ಏರಿಯಾಸ್ ಆಫ್ ಬೆಳಗಾವಿ", ಐಓಎಸ್‌ಆರ್ ಜರ್ನಲ್ ಆಫ್ ಹ್ಯುಮ್ಯಾನಿಟೀಸ್ ಅಂಡ್ ಸೋಶಿಯಲ್ ಸೈನ್ಸೆಸ್, ವಾ.ಸಂ.೨೦, ಸಂ.೫, ಮೇ ೨೦೧೫.

೭೩. ಪಿ.ಎಂ. ಕುಲಕರ್ಣಿ, *ಇಂಟರ್ ಸ್ಟೇಟ್ ವೇರಿಯೇಷನ್ ಇನ್ ಹ್ಯೂಮನ್ ಡೆವಲಪ್‌ಮೆಂಟ್, ಡಿಫರಡನ್‌ಶಿಯಲ್ಸ್ ಅಮಾಂಗ್ ಸೋಶಿಯಲ್ ಗ್ರೂಪ್ ಇನ್ ಇಂಡಿಯ*, ವರ್ಕಿಂಗ್ ಪೇಪರ್ ಸಿರೀಸ್ ನಂ,೫೦, ರೆಜಿಸ್ಟ್ರಾರ್ ಅಂಡ್ ಸೆಕ್ರೇಟರಿ, ನ್ಯಾಷನಲ್ ಕೌನ್ಸಿಲ್ ಫಾರ್ ಅಪ್ಲೈಡ್ ಇಕನಾಮಿಕ್ ರೀಸರ್ಚ್ ನ್ಯೂಡೆಲ್ಲಿ, ೨೦೦೨.

೭೪ *ಬೆಳಗಾವಿ ಸಿರಿ ಸ್ಮರಣ ಸಂಚಿಕೆ*, ಕನ್ನಡ ಸಾಹಿತ್ಯ ಪರಿಷತ್, ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ, ಬೆಂಗಳೂರು, ೨೦೦೪.

೭೫. *ಬೆಳಗಾವಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಅವಲೋಕನ ೨೦೧೨–೧೩*, ಬೆಳಗಾವಿ, ಜಿಲ್ಲಾ ಸಂಖ್ಯಾ ಸಂಗ್ರಹಣಾ ಅಧಿಕಾರಿಗಳ ಕಛೇರಿ, ೨೦೧೪.

೭೬. ಬಿ.ಎಸ್. ಗವಿಮಠ, *ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಇತಿಹಾಸ*, ಡಾ.ಎಸ್.ಎಂ. ಹರದಗಟ್ಟಿ(ಸಂ), ಬೆಳಗಾವಿ ಸಿರಿ, ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ ೨೦೦೩.

೭೭. ಬೈಜ್‌ನಾಥ್ ಸಿಂಗ್, ಎಕನಾಮಿಕ್ಸ್ ಆಫ್ ವಿಮೆನ್ ಎಜುಕೇಷನ್ ಅಂಡ್ ಎಂಪವರ್‌ಮೆಂಟ್. ನ್ಯೂಡೆಲ್ಲಿ, ಅಭಿಜೀತ್ ಪಬ್ಲಿಕೇಷನ್, ನ್ಯೂಡೆಲ್ಲಿ, ೨೦೧೧.

೭೮. ಫಯಾಜ್ ಅಹಮದ್ ಭಟ್ ಫೌಜಿಯಾ ಖುರ್ಶೀದ್, ನಜ್ಮುಲ್ ಹುಸೇನ್."ಇಸ್ಲಾಂ. ಜೆಂಡರ್ ಅಂಡ್ ಎಜುಕೇಷನ್ : ಎ ಕೇಸ್ ಸ್ಟಡಿ ಆಫ್ ಜಮ್ಮು–ಕಾಶ್ಮೀರ".ಏಷ್ಯಾ ಪೆಸಿಫಿಕ್ ಜರ್ನಲ್ ಆಫ್ ಸೋಶಿಯಲ್ ಸೈನ್ಸ್‌ಸ್. ವಾ.ಸಂ.೩ ಸಂ.೨, ಜುಲೈ–ಡಿಸೆಂಬರ್. ೨೦೧೧.

೭೯. ಮರಿದೇವರ. *ಶಿಕ್ಷಣ ತತ್ವಶಾಸ್ತ್ರ*. ತುಮಕೂರು. ಉದಯಭಾನು ಪ್ರಕಾಶನ. ೧೯೭೬.

೮೦. ಮೊಹಮದ್ ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು, "ಕಾಂಟೆಕ್ಸ್ಚುವಲ್ ಇಂಟರ್, ಇಂಟ್ರಾ ರಿಲೀಜಿಯಸ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ಮೇ ೫, ವಾ.ಸಂ ೪೮, ಸಂ.೮, ೨೦೦೭.

೮೧. ಮಹಮದ್ ಪೀರ್, ಮುಸ್ಲಿಮ್ ಎಜುಕೇಷನ್ ಇನ್ ಇಂಡಿಯಾ, ಮಂಗಳೂರು: ಮುಸ್ಲಿಂ ಪ್ರಗತಿ ಪ್ರಕಾಶನ, ೧೯೯೧.

೮೨. ಮಹಮ್ಮದ್ ಪೀರ್, *ರಿಲೀಜನ್ ಅಂಡ್ ಎಜ್ಯುಕೇಶನ್: ಎ ಕೇಸ್ ಸ್ಟಡೀ ಆಫ್ ಮುಸ್ಲಿಂ ಕಮ್ಯುನಿಟಿ ಇನ್ ಬೆಂಗಳೂರು ಸಿಟಿ*, ಡಿಪಾರ್ಟ್‌ಮೆಂಟ್ ಆಫ್ ಸೋಷಿಯಲಜಿ, ಬೆಂಗಳೂರು ೧೯೮೮.

೮೩. ಮಧುಸೂಧನ್ ಜೆ.ವಿ, ಜಿತೇಂದ್ರಕುಮಾರ್ ಸಿಂಗ್ ಮತ್ತು ಜಿತೇಂದ್ರ ಯಾದವ್ "ಟ್ರೆಂಡ್ಸ್ ಇನ್ ಸ್ಕೂಲಿಂಗ್ ಅಮಾಂಗ್ ಮುಸ್ಲಿಮ್ಸ್ ಅಂಡ್ ಹಿಂದೂಸ್ ಇನ್ ಇಂಡಿಯಾ", *ಏಷ್ಯಾ ಪೆಸಿಫಿಕ್ ಜರ್ನಲ್ ಆಫ್ ಸೋಶಿಯಲ್ ಸೈನ್ಸ್‌ಸ್*, ವಾ.ಸಂ.೨, ಸಂ.೨, ಜುಲೈ–ಡಿಸೆಂಬರ, ೨೦೧೦.

೮೪. ಮಂಗಳ ಡಿ. ಪಾಟೀಲ್, *ಎಜ್ಯುಕೇಶನಲ್ ಡೆವಲಪ್‌ಮೆಂಟ್ ಆಫ್ ಚೀಲ್ಡರನ್ ಇನ್ ಸ್ಲಂ ಏರಿಯಾಸ್: ಎ ಸ್ಟಡೀ ವಿಥ್ ಸ್ಪೆಷಲ್ ರೆಫರೆನ್ಸ್.೫ ಸ್ಲಂ ಏರಿಯಾಸ್ ಆಫ್ ಕೊಲ್ಲಾಪುರ ಸಿಟಿ*, ೧೯೯೫.

೮೫. ಮೊಹಮದ್ ಸಂಜೀರ್ ಆಲಂ ಅಂಡ್ ಸರಸ್ವತಿ ರಾಜು, "ಕಂಟೆಕ್ಸ್‌ವಲ್ ಇಂಟರ್–ಇಂಟ್ರಾ ರಿಲೀಜಿಯಸ್ ಅಂಡ್ ಜೆಂಡರ್ ಲಿಟ್ರಸಿ ಅಂಡ್ ಎಜುಕೇಷನಲ್ ಡಿಸ್‌ಪ್ಯಾರಿಟೀಸ್ ಇನ್ ರೂರಲ್ ಬಿಹಾರ್", *ಇಕನಾಮಿಕ ಅಂಡ್ ಪುಲಿಟಿಕಲ್ ವೀಕ್ಲಿ*, ವಾ.ಸಂ.೪೮, ಸಂ.೮, ಮೇ ೫, ೨೦೦೭.

೮೬. ಮಲ್ಲಿಕಾರ್ಜುನಾ ನಾಗಶೆಟ್ಟಿ, *ಜಂಡರ್ ಪ್ರೊಫೈಲ್ ಆಫ್ ಪ್ರೊಫೆಷನಲ್ ಎಜ್ಯುಕೇಶನ್ ಥೀಸಿಸ್ ಸಬ್ಮಿಟೆಡ್ ಟು ಡಿಪಾರ್ಟ್‌ಮೆಂಟ್ ಆಫ್ ಎಜ್ಯುಕೇಶನ್* ಗುಲ್ಬರ್ಗಾ ಯೂನಿವರ್ಸಿಟಿ, ಗುಲ್ಬರ್ಗಾ, ೨೦೧೦.

೮೭. ಮಲ್ಲಿಕಾರ್ಜುನ ಜಯಪ್ರಕಾಶ್, "ವಿಮೆನ್ ಅಂಡ್ ಡೆವೆಲಪ್‌ಮೆಂಟ್, ಎನ್ ಇಂಡಿಯನ್ ಪರ್ಸ್‌ಪೆಕ್ಟಿವ್", ವಿಮೆನ್ ಸ್ಟಡೀಸ್ ಗುಲ್ಬಗಾರ್ ವಿ.ವಿ. ಗುಲ್ಬರ್ಗಾ, ಮಹಾ ಪ್ರಬಂಧ, ೨೦೦೮.

೮೮. ಮಾನವಾಭಿವೃದ್ಧಿ ಇಲಾಖೆ, ೧೧ನೇ ಯೋಜನೆಯ ಕ್ರಿಯಾ ವರದಿ, ಪ್ಲಾನ್ ವರ್ಕಿಂಗ್ ಗ್ರೂಪ್, ನ್ಯೂಡೆಲ್ಲಿ, ಭಾರತ ಸರ್ಕಾರ, ೨೦೦೪.

೮೯. ಮೀನಾಚಾರ್ಯ ಅಂಡ್ ಪುಷ್ಪ ಫಿಮ್ಮೈರ್, "ಜೇಂಡರ್ ಇಂಡಿಕೇಟರ್ಸ್ ಆಫ್ ಇಕ್ವಾಲಿಟಿ, ಇಕ್ಲೂಷನ್ ಅಂಡ್ ಪವರ್ಟಿ ರಿಡಕ್ಷನ್", *ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ವಾ ಸಂ. ೪೦ ಸಂ.೪೪, ೨೦೦೫.

೯೦. ಮೊನಾಲಿಸ ಬಲ್, "ಇಕ್ವಿಟಿ ಅಂಡ್ ಎಕ್ಸಲೆನ್ಸ್ ಇನ್ ಹೈಯರ್ ಎಜುಕೇಷನ್, ಎ ಕೇಸ್ ಸ್ಟಡಿ ಅಫ್ ಕನ್ವರ್‌ಜೆನ್ಸ್ ಇನ್ ಕಿಷ್ ಒಡಿಸಾ",*ಐ.ಓ.ಎಸ್.ಅರ್. ಜರ್ನಲ್ ಅಫ್ ಎಕನಾಮಿಕ್ಸ್ ಅಂಡ್ ಫೈನಾನ್ಸ್*, ಐಎಸ್‌ಎಸ್‌ಎನ್ ೨೩೨೧-೫೯೩೩, ವಾ.ಸಂ.೫, ಸಂ.೨, ಸೆಪ್ಟಂಬರ್-ಅಕ್ಟೋಬರ್, ೨೦೧೪.

೯೧. ಮೊಹಮ್ಮದ್ ಅಖ್ತರ್ ಸಿದ್ದಿಖಿ, *ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್ ಇನ್ ಮುಸ್ಲಿಂ ಇನ್‌ಸ್ಟಿಟ್ಯೂಷನ್ಸ್*, ನ್ಯೂಡೆಲ್ಲಿ: ಆಶಿಶ್ ಪಬ್ಲಿಷಿಂಗ್ ಹೌಸ್, ೧೯೯೫.

೯೨. ಮುಷಿರುಲ್ ಹಸನ್, "ಇನ್ ಸರ್ಚ್ ಆಫ್ ಇಂಟಿಗ್ರೇಷನ್ ಆ್ಯಂಡ್ ಐಡೆಂಟಿಟಿ; ಇಂಡಿಯನ್ ಮುಸ್ಲಿಮ್ಸ್ ಸಿನ್ಸ್ ಇಂಡಿಪೆಂಡೆನ್ಸ್", *ಇಸ್ಲಾಂ ಆ್ಯಂಡ್ ಮಾಡರ್ನ್ ಏಜ್*, ಸಂ.೧೯, ಸಂಖ್ಯೆ೪.

೯೩. ಮುಷುರುಲ್ ಹಸನ್, *ಮುಸ್ಲಿಂ ಇನ್ ಸೆಕ್ಯುಲರ್ ಇಂಡಿಯಾ: ಪ್ರಾಬ್ಲಂಸ್ ಅಂಡ್ ಪರ್ಸ್‌ಪೆಕ್ಟೀವ್ಸ್ ಇನ್ ಎಜ್ಯುಕೇಶನ್*, ನ್ಯೂಡೆಲ್ಲಿ, ಅಕಾಡೆಮಿ ಆಫ್ ಥರ್ಡ್ ವರ್ಡ್ಡ್ ಸ್ಟಡೀಸ್, ಜಾಮೀಯಾ ಮಿಲಿಯಾ, ೨೦೦೩.

೯೪. ಮುಚುಕುಂದ್ ದುಬೆ, *ಫ್ರೀ ಅಂಡ್ ಕಂಪಲ್ಸರಿ ಎಜುಕೇಷನ್, ಸ್ಟಿಲ್ ಎ ಲಾಂಗ್ ಡಿಸ್ಟೆನ್ಸ್ ಫಾರ್ ಇಂಡಿಯನ್ ಚಿಲ್ಡ್ರನ್*, ಜೋಯಾ ಹಸನ್ ಅಂಡ್ ಮುಷಿರುಲ್ ಹಸನ್ (ಸಂ) *ಇಂಡಿಯಾ, ಸೋಶಿಯಲ್ ಡೆವಲಪ್‌ಮೆಂಟ್ ರಿಪೋರ್ಟ್ ೨೦೧೨, ಮೈನಾರಿಟಿ ಅಟ್ ಮಾರ್ಜಿನ್ಸ್*, ಕೌನ್ಸಿಲ್ ಫಾರ್ ಸೋಶಿಯಲ್ ಡೆವಲಪ್‌ಮೆಂಟ್, ನ್ಯೂಡೆಲ್ಲಿ, ಅಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೨೦೧೩.

೯೫. ಮೊಮ್ಮಿನ್ ಜಾನ್, *ವುಮನ್, ಎಜ್ಯುಕೇಶನ್ ಅಂಡ್ ಸೋಶಿಯಲ್ ಚೆಂಜ್ ಇನ್-ಕಶ್ಮೀರ್* ವಾ.ಸಂಖ್ಯೆ ೨.

೯೬. ಮುಹಸಿನ್ ವದೂದ್, "ಮುಸ್ಲಿಂ ವಿಮೆನ್ ಯಾಜ್ ಮೈನಾರಿಟೀಸ್",*ಇನ್ಸ್ಟಿಟ್ಯೂಟ್ ಆಫ್ ಮುಸ್ಲಿಂ ಮೈನಾರಿಟಿ ಅಫೇರ್ಸ್, ಜರ್ನಲ್* ೧೯೮೯, ವಾ.ಸಂ.೧೦, ಸಂ.೧.

೯೭. ಮೃದುಲಾ ಗೋಯಲ್, *ಜಂಡರ್ ಬಯಾಸ್ ಅಂಡ್ ಎಕಾನಾಮಿಕ್ ಡೆವಲಪ್‌ಮೆಂಟ್ ವಿತ್ ರೆಫರೆನ್ಸ್ ಟು ಫೀಮೆಲ್ ಎಜ್ಯುಕೇಶನ್*. ನ್ಯೂಡೆಲ್ಲಿ, ಮನೋಹರ್ ಪಬ್ಲಿಕೇಷನ್ಸ್, ೨೦೦೩.

೯೮. ಯಾದವ್ ಎಸ್, *ಎಜುಕೇಷನ್ ಫಾರ್ ವಿಮೆನ್*. ನ್ಯೂಡೆಲ್ಲಿ, ರಫರೆನ್ಸ್ ಪ್ರಸ್, ೨೦೦೩.

೯೯. ರಾಜೇಂದರ್ ಸಾಚಾರ್, *ಹೈ ಲೇವಲ್ ಕಮಿಟಿ ರಿಪೋರ್ಟ್ ಆನ್ ಸೋಶಿಯಲ್, ಎಕನಾಮಿಕ್ ಆಂಡ್ ಎಜುಕೇಷನಲ್ ಸ್ಟೇಟಸ್ ಅಫ್ ದ ಮುಸ್ಲಿಂ ಕಮ್ಯೂನಿಟಿ ಅಫ್ ಇಂಡಿಯ, ಡಲ್ಲಿ,* ಅಕಲಂಕ್ ಪಬ್ಲಿಕೆಷನ್ಸ್, ೨೦೦೭.

೧೦೦. ರಾಧಾಕೃಷ್ಣ.ಆರ್, *"ಎಂಪ್ಲಾಯಿಮೆಂಟ್ ಪ್ರೋಫಾಯಿಲ್ ಆಫ್ ಅರ್ಬನ್ ಡಿಪ್ರೈವ್ಡ್ ಕ್ಲಾಸೆಸ್; ಎ ಕೇಸ್ ಸ್ಟಡಿ ಆಫ್ ಅಹಮದಬಾದ್ ಸ್ಲಮ್"*, ಪೇಪರ್ ಪ್ರೆಸೆಂಟೆಡ್ ಆಟ್ ದ ಥರ್ಟಿನ್ತ್ ಇಂಟರ್ ಡಿಸಿಪ್ಲಿನರಿ ರಿಸರ್ಚ್ ಮಥಡಾಲಜಿ ವರ್ಕ್‌ಷಾಪ್ ಅಟ್ ವಾಲ್ಟೇರ್, ಜೂನ್ ೧ ರಿಂದ ೦೪.

೧೦೧. ರೋಖಿಯಾ ಬೇಗಂ, *ಎಜುಕೇಷನ್ ಅಂಡ್ ಮುಸ್ಲಿಂ ವುಮೆನ್ ಇನ್ ರೂರಲ್ ವೆಸ್ಟ ಬೆಂಗಾಲ್ ಇನ್ ಸಿದೀಖಿ.ಎಂ.ಕೆ.ಎ (ಸಂ) ಮುಸ್ಲಿಂ ಇನ್ ಫ್ರೀ ಇಂಡಿಯ: ದೇರ್ ಸೋಶಿಯಲ್ ಪ್ರೊಫೈಲ್ ಅಂಡ್ ಪ್ರಾಬ್ಲೆಮ್ಸ್*, ನ್ಯೂಡೆಲ್ಲಿ , ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೮.

೧೦೨. ರೆಹಮಾನ್‌ಖಾನ್, *ರಿಪೋರ್ಟ್ ಆಫ್ ಹೈಪವರ್ ಕಮಿಟಿ ಅನ್ ಸೋಶಿಯೊ–ಎಕನಾಮಿಕ್ ಆಂಡ್ ಎಜುಕೇಷನಲ್ ಸರ್ವೆ ಆಫ್ ರಿಲೀಜಿಯಸ್ ಮೈನಾರಿಟಿಸ್ ಇನ್ ಕರ್ನಾಟಕ,* ಬೆಂಗಳೂರು, ಕರ್ನಾಟಕ ಮೈನಾರಿಟಿ ಕಮಿಷನ್, ೧೯೯೪.

೧೦೩. ರಾಜೇಶ್ ಟಂಡನ್ ಅಂಡ್ ರಂಜಿತ ಮೊಹಂತಿ, ಸೂಸೈಟಿ ಫಾರ್ ಪಾರ್ಟಿಸಿಪೇಟರಿ ರೀಸರ್ಚ್ ಇನ್ ಏಷ್ಯ, *ಸಿವಿಲ್ ಸೂಸೈಟಿ ಅಂಡ್ ಗವರ್ನನ್ಸ್ ಎ ರೀಸರ್ಚ್ ಸ್ಟಡಿ ಇನ್ ಇಂಡಿಯ,* ಡ್ರಾಪ್ಟೆಡ್ ಸಿಂಥೆಸಿಸ್ ರಿಪೋರ್ಟ್, ಜೂನ್ ೨೦೦೦.

೧೦೪. ವಿ.ಎಲ್ ಲಾವಣ್ಯ ಅಮಡ್ ವಿ. ಮಲಾರ್ ವಿಜಿ, "ಎಂಪರ್‌ಮೆಂಟ್ ಆಫ್ ವಿಮೆನ್ ಥ್ರೂ ಎಜುಕೇಷನ್ ಇನ್ ಇಂಡಿಯ"*ಜರ್ನಲ್ ಆಫ್ ಎಜುಕೇಷನ್ ರಿಸರ್ಚ್ ಅಂಡ್ ಎಕ್ಸ್‌ಟೆನ್ಷನ್*, ವಾ.ಸಂ. ೪೮, ಸಂ.೩, ಜುಲೈ–ಸೆಪ್ಟೆಂಬರ್, ೨೦೧೧.

೧೦೫. ಲಾಲಿವಾಲ ಪಿ.ಜಿ. "ಸೋಶಿಯೋ-ಇಕನಾಮಿಕ್ ಸರ್ವೆ ಆಫ್ ಮುಸ್ಲಿಮ್ಸ್ ಇನ್ ಇಂಡಿಯನ್ ಸಿಟಿ", ಜರ್ನಲ್ ಆಫ್ ಮುಸ್ಲಿಮ್ ಮೈನಾರಿಟಿ ಅಫೇರ್ಸ್, ಕಂಬೈನ್ಡ್ ಇಶ್ಯೂ, ಸಂ.೧, ಸಂಖ್ಯೆ೨, ಮತ್ತು ಸಂ.೨, ಸಂಖ್ಯೆ೧, ಸಮ್ಮರ್, ೧೯೮೦.

೧೦೬. ವೆಂಕಟಸ್ವಾಮಿ.ಟಿ, *ರಿಪೋರ್ಟ್ ಆಫ್ ದ ಸೆಕೆಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಕಮಿಷನ್*, ಬೆಂಗಳೂರು: ಪಬ್ಲಿಷ್ಡ್ ಬೈ ಗವರ್ನಮೆಂಟ್ ಆಫ್ ಕರ್ನಾಟಕ, ೧೯೮೬.

೧೦೭. ಶರ್ಮಾ.ಕೆ.ಡಿ, *ಎಜುಕೇಷನ್ ಆಫ್ ನ್ಯಾಷನಲ್ ಮೈನಾರಿಟೀಸ್*, ನ್ಯೂಡೆಲ್ಲಿ: ಕಲಮ್‌ಕರ್ ಪ್ರಕಾಶನ್, ಪ್ರೈ.ಲಿ, ೧೯೭೮.

೧೦೮. ಶಮೀಮ್ ಎಸ್ ಅಹಮ್ಮದ್ ಅಂಡ್ ಎಂ.ಕೆ ಚಕ್ರವರ್ತಿ, *ಮುಸ್ಲಿಮ್ಸ್ ಇನ್ ಫ್ರೀ ಇಂಡಿಯಾ: ದೇರ್ ಸೋಶಿಯಲ್ ಪ್ರೋಫೈಲ್ ಅಂಡ್ ಪ್ರಾಬ್ಲಮ್ಸ್*, ನ್ಯೂಡೆಲ್ಲಿ, ಇನ್‌ಸ್ಟಿಟ್ಯೂಟ್ ಆಫ್ ಅಬ್ಜೆಕ್ಟಿವ್ ಸ್ಟಡೀಸ್, ೧೯೯೮.

೧೦೯. ಶ್ರೀಧರ ಬೋರಣ್ಣ, *ಡೆವಲಪ್‌ಮೆಂಟ್ ಆಫ್ ಎಜುಕೇಷನ್ ಇನ್ ಹೆಚ್.ಕೆ ರೀಜನ್: ಎ* ಸ್ಟಡಿ, ಥೀಸಿಸ್ ಸಬ್‌ಮಿಟೆಡ್ ಟು ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ಗುಲ್ಬರ್ಗ ಯುನಿವರ್ಸಿಟಿ, ಗುಲ್ಬರ್ಗ, ೨೦೧೫.

೧೧೦. ಷೇಕ್‌ರಹೀಂ ಮಂಡಲ್, *ಎಜ್ಯುಕೇಷನ್ ಸ್ಟೇಟ್ಸ್ ಆಫ್* ಮುಸ್ಲಿಂ: *ಪ್ರಾಬ್ಲಂಮ್ಸ್ ಪ್ರಾಸ್ಪೆಕ್ಟ್ಸ್, ಅಂಡ್ ಪ್ರಯಾರಿಟಿಸ*, ನ್ಯೂಡೆಲ್ಲಿ, ಎಂ ಸಿ ಮಿಥೆಲ್ ಇಂಟರ್ ಇಂಡಿಯಾ ಪಬ್ಲಿಕೇಷನ್ಸ್, ೧೯೯೭.

೧೧೧. ಷೇಖ್ ಹುಸೇನ್ . "ಇಂಟರ್ ರಿಲೇಷನ್ ಬಿಟ್ವೀನ್ ಚೈಲ್ಡ್ ಎಜುಕೇಷನ್, ಹೆಲ್ತ್ ಅಂಡ್ ಫ್ಯಾಮಿಲಿ ಸೈಜ್, ಎವಿಡೆನ್ಸ್ ಫ್ರಂ ಎ ಡೆವೆಲಪಿಂಗ್ ಕಂಟ್ರೀಸ್", *ಇಕನಾಮಿಕ್ ಡೆವಲಪ್‌ಮೆಂಟ್ ಅಂಡ್ ಕಲ್ಚುರಲ್ ಛೇಂಜ್*, ೧೯೯೦, ವಾ.ಸಂ.೩೫, ಸಂ.೪, ಪು.ಸಂ.

೧೧೨. ಸಕ್ಸೇನ.ಎನ್.ಪಿ. *ಪಬ್ಲಿಕ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಎಜುಕೇಷನಲ್ ಬ್ಯಾಕ್‌ವರ್ಡ್‌ನೆಸ್ ಅಮಾಂಗ್ ಮುಸ್ಲಿಮ್ಸ್ ಇನ್ ಇಂಡಿಯಾ.ಮ್ಯಾನ್ ಆ್ಯಂಡ್ ಡೆವಲಪ್‌ಮೆಂಟ್*, ಸಂ.೪, ಸಂಖ್ಯೆ೪, ೧೯೮೩.

೧೧೩. ಸಬಿಹಾ ಹುಸೇನ್. *ಮಾಡರ್ನೈಜೇಷನ್ ಅಮಾಂಗ್ ಮುಸ್ಲಿಂ ವಿಮೆನ್ ಇನ್ ಇಂಡಿಯಾ:ಎ ಕೇಸ್ ಸ್ಟಡಿ ಆಫ್ ದರ್ಬಾಂಗ್ ಟೌನ್ ಇನ್ ನಾರ್ಥ್ ಬಿಹಾರ್*, ಸೆಂಟರ್ ಫಾರ್ ಸ್ಟಡಿ ಆಫ್ ಸೋಶಿಯಲ್ ಸಿಸ್ಟಮ್. ನ್ಯೂಡೆಲ್ಲಿ. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ. ಪಿ.ಹೆಚ್.ಡಿ. ಮಹಾಪ್ರಬಂಧ, ೧೯೯೦.

೧೧೪. ಸಬೋತ್ ರಾಯ್. ಎಸ್., *ಸ್ಟೇಟಸ್ ಆಫ್ ಮುಸ್ಲಿಂ ವಿಮೆನ್ ಇನ್ ನಾರ್ತ್ ಇಂಡಿಯ : ಎ ಸ್ಟಡಿ ಇನ್ ಡೈನಾಮಿಕ್ ಛೇಂಜೆಸ್*, ನ್ಯೂಡೆಲ್ಲಿ, ಬಿ.ಆರ್. ಪಬ್ಲಿಷಿಂಗ್ ಕಾರ್ಪೋರೇಷನ್, ೧೯೭೯.

೧೧೫. ಸಾಹಿಬ್ ಸಿಂಗ್ ಭಯಾನ, *ಡೆವಲಪ್‌ಮೆಂಟ್ ಅಂಡ್ ಅಡ್‌ಮಿನಿಸ್ಟ್ರೇಷನ್*, ಜಲಂದರ್, ನ್ಯೂ ಅಕಾಡೆಮಿಕ್ ಪಬ್ಲಿಷಿಂಗ್ ಕಂಪನಿ, ೨೦೦೭.

೧೧೬. ಸುಶೀಲ್ ಜೈನ್, *ಮುಸ್ಲಿಮ್ಸ್ ಅಂಡ್ ಮಾಡರ್ನೈಜೇಷನ್*, ರಾವತ್ ಪಬ್ಲಿಕೇಷನ್, ಜೈಪುರ್, ೧೯೮೦.

೧೧೭. ಸುನೀತಾ ಕಿಷೋರ್ ಅಂಡ್ ಕಮಲಾ ಗುಪ್ತ, "ವಿಮನ್ ಎಂಪವರ್ಮೆಂಟ್ ಇನ್ ಇಂಡಿಯ ಅಂಡ್ ಇಟ್ಸ್ ಸ್ಟೇಟಸ್ ಎವಿಡೆನ್ಸ್ ಫ್ರಂ ಎನ್‌ಎಫ್‌ಹೆಚ್‌ಎಸ್", *ಇಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ*, ವಾ.ಸಂ, ೩೯ ಸಂ.೭, ೨೦೦೪.

೧೧೮. ಸೆನ್ಸ್ ಅಫ್ ಇಂಡಿಯಾ, ೨೦೧೧, ಕರ್ನಾಟಕ ಸೀರಿಸ್.೩೧, *ಪ್ರೈಮರಿ ಸೆನ್ಸ್ ಅಬ್‌ಸ್ಟ್ರಾಕ್ಟ್ ಡೈರೆಕ್ಟೋರೆಟ್ ಆಪ್ ಸೆನ್ಸ್ ಅಪರೇಷನ್*, ಕರ್ನಾಟಕ.

೧೧೯. ಸುಧಾ.ಟಿ, *ಎಜುಕೇಷನ್, ಎಂಪ್ಲಾಯ್‌ಮೆಂಟ್ ಅಂಡ್ ಎಂಪವರ್‌ಮೆಂಟ್ ಅಫ್ ರೂರಲ್ ವುಮೆನ್ ಇನ್ ಇಂಡಿಯಾ*, ನ್ಯೂಡೆಲ್ಲಿ, ರಿಸರ್ಚ್ ಪಬ್ಲಿಕೇಷನ್, ೨೦೧೧.

೧೨೦. ಸುನೀತಾ ಚೂಗಾ, *ಎಜ್ಯುಕೇಶನಲ್ ಸ್ಟೇಟಸ್ ಆಫ್ ಚಿಲ್ಡರನ್ ಇನ್ ಹರ್ಬನ್ ಸ್ಲಂಸ್, ವಿಥ್ ರೆಫರೆನ್ಸ್ ಟೂ ಅವೆಲಬಲ್ ಎಜ್ಯುಕೇಶನಲ್ ಫಸಲಿಟಿಸ್:ಎ ಕೇಸ್ ಸ್ಟಡೀ ಆಫ್ ಸಂಜಯ್‌ಕಾಲೋನಿ ಆಫ್ ಓಕ್ಲಾ ಫೇಸ್* II, ನ್ಯೂಡೆಲ್ಲಿ, ೨೦೦೦.

೧೨೧. ಸೆಹರಾತುನ್ ನಿಶಾ, "ಸೋಶಿಯೋ–ಇಕನಾಮಿಕ್ ಅಂಡ್ ಕಲ್ಚುರಲ್ ಬ್ಯಾರಿಯರ್ಸ್ ಇನ್ ದ ಎಜುಕೇಷನ್ ಆಫ್ ಮುಸ್ಲಿಂ ವಿಮೆನ್ ಇನ್ ದ ಸ್ಟೇಟ್ ಆಫ್ ಮಣಿಪೂರ್" ಪಿ.ಎಚ್.ಡಿ. ಮಹಾಪ್ರಬಂಧ, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಜಾಮಿಯಾ ಮಿಲಿಯಾ ಇಸ್ಲಾಮಿಯ, ನ್ಯೂಡೆಲ್ಲಿ, ೨೦೦೧.

೧೨೨. ಸೈಯದ್ ಮೆಹದಿ ಹಸನ್, *ಮುಸ್ಲಿಂ ವುಮನ್ ಅಂಡ್ ಹೈಯರ್ ಎಜ್ಯುಕೇಷನ್:ಎ ಕೇಸ್ ಸ್ಟಡಿ ಆಫ್ ಹೈದ್ರಾಬಾದ್ ಇನ್ ಅಸ್ಗರ್ ಅಲೀ ಇಂಜಿನೇಯರ್(ಎಡಿಟ್ಸ್)ಪ್ರಾಬ್ಲಂಮ್ಸ್ ಆಫ್ ಮುಸ್ಲಿಂ ವುಮನ್ ಇನ್ ಇಂಡಿಯಾ* ಹೈದ್ರಾಬಾದ್, ಓರಿಯಂಟ್ ಲಾಂಗ್ ಮ್ಯಾನ್, ೧೯೯೫.

೧೨೩. ಹಫೀಜ್ ಅಬ್ದುಲ್ ಮಹೂದ್, *ಎ ಸ್ಟಡಿ ಆಫ್ ಆ್ಯಟಿಟ್ಯೂಡ್ಸ್ ಆಫ್ ಟೀಚರ್ಸ್ ಅಂಡ್ ಪೇರೆಂಟ್ಸ್ ಆಫ್ ಆಜಮ್‌ಗಡ್ ಡಿಸ್ಟ್ರಿಕ್ ಟುವರ್ಡ್ಸ್ ಮುಸ್ಲಿಂ ಗರ್ಲ್ಸ್ ಎಜುಕೇಷನ್: ಎ.* ಡಿಸರ್ಟೇಷನ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ಜಾಮಿಯಾ ಮಿಲಿಯಾ ಇಸ್ಲಾಮಿಯ, ನ್ಯೂಡೆಲ್ಲಿ, ೧೯೯೩.

೧೨೪. ಹೆಚ್.ಇ.ಎಂ. ಜೋರ್‌ಕರ್, *ಕಂಟೆಸ್ಟಿಂಗ್ ಡೈಲಮಾಸ್: ಮುಸ್ಲಿಂ ಐಡೆಂಟಿಟಿ ಅಂಡ್ ಎಜ್ಯುಕೇಶನ್*, ನ್ಯಾಷನಲ್ ಕ್ರೈ ರಿಸರ್ಚ್ ಫಲೋಷಿಪ್, ಕ್ರೈ ೨೦೧೧

೧೨೫. ಹೆಚ್.ವೈ ಸಿದ್ದೀಕಿ, *ಮುಸ್ಲಿಂ ವುಮೆನ್ ಇನ್ ಟ್ರಾನ್ಸ್‌ಷಿಷನ್ ಎ ಸೋಷಿಯಲ್ ಪ್ರೋಫೈಲ್,* ಹರ್ಮನಾ ಪಬ್ಲಿಕೇಷನ್ಸ್ ನ್ಯೂಡೆಲ್ಲಿ. ೧೯೮೭.

೧೨೬. ಹುಸೇನ್ ಎಂ. "ಫರ್‌ಸ್ಪೆಕ್ಟಿವ್ ಆನ್ ಉರ್ದು ಲ್ಯಾಂಗ್ವೇಜ್ ಅಂಡ್ ಎಜ್ಯುಕೇಷನ್ ಇನ್ ಇಂಡಿಯಾ", *ಸೋಷಿಯಲ್ ಸೈನ್‌ಟಿಸ್ಟ್,* ವಾ.ನಂ.೩೧, ೫.೬, ೨೦೦೩.

೧೨೭. ಹೊನ್ನೂರಾಲಿ.ಐ, "ರಾಜಕೀಯ ಸಹಭಾಗಿತ್ವ ಮತ್ತು ಅಭಿವೃದ್ಧಿ", ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ, ೨೦೦೯.

# ಪೋಷಕರ ಪ್ರಶ್ನಾವಳಿ

1. ಹೆಸರು.________________

2. ವಯಸ್ಸು.________________

3. ಪೋಷಕರ ಶಿಕ್ಷಣ.

4. ತಂದೆಯ ಶಿಕ್ಷಣ. ______

5. ತಾಯಿಯ ಶಿಕ್ಷಣ. ______

4. ಉದ್ಯೋಗ.________________

5. ಮನೆಯಲ್ಲಿ ದುಡಿಮೆಗಾರರ ಸಂಖ್ಯೆ. ________

6. ನಿರುದ್ಯೋಗಿಗಳ ಸಂಖ್ಯೆ. ________

7. ಕುಟುಂಬದ ವಾರ್ಷಿಕ ಆದಾಯ.__________

8. ಮನೆಯ ಸ್ವರೂಪ

   1. ಸ್ವಂತ ಮನೆ

   2. ಬಾಡಿಗೆ ಮನೆ

9. ಕುಟುಂಬದ ಸ್ವರೂಪ.

   1. ಅವಿಭಕ್ತ ಕುಟುಂಬ

   2. ವಿಭಕ್ತ ಕುಟುಂಬ

10. ಮಕ್ಕಳ ಸಂಖ್ಯೆ ____________

11. ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿರುವ ತರಗತಿ ಮತ್ತು ಮಕ್ಕಳ ಸಂಖ್ಯೆ.________

   1. ಪ್ರಾಥಮಿಕ ಶಾಲೆ. ______

   2. ಪ್ರೌಢಶಾಲೆ. ______

   3. ಪಿ.ಯು.ಸಿ. ______

4. ಪದವಿ ಶಿಕ್ಷಣ. ______

5. ತಾಂತ್ರಿಕ ಶಿಕ್ಷಣ. ______

6. ವೈದ್ಯಕೀಯ ಶಿಕ್ಷಣ. ______

7. ಸ್ನಾತಕೋತ್ತರ ಶಿಕ್ಷಣ. ______

8. ವಿದ್ಯಾಭ್ಯಾಸವನ್ನು ಮುಕ್ತಾಯಗೊಳಿಸಿರುವ ಮಕ್ಕಳ ಸಂಖ್ಯೆ

1. ಅಕ್ಷರಸ್ಥರು.______

2. ಪ್ರಾಥಮಿಕ ಶಿಕ್ಷಣ ಪೂರೈಸಿದವರು. ______

3. ಪ್ರೌಢಶಾಲಾ ಶಿಕ್ಷಣವನ್ನು ಪೂರೈಸಿದವರು.______

4. ಪಿ.ಯು.ಸಿ ಹಂತವನ್ನು ಪೂರೈಸಿದವರು.______

5. ಪದವಿ ಶಿಕ್ಷಣವನ್ನು ಪೂರೈಸಿದವರು.______

6. ತಾಂತ್ರಿಕ ಶಿಕ್ಷಣವನ್ನು ಪೂರೈಸಿದವರು.______

7. ವೈದ್ಯಕೀಯ ಶಿಕ್ಷಣವನ್ನು ಪೂರೈಸಿದವರು.______

8. ಸ್ನಾತಕೋತ್ತರ ಶಿಕ್ಷಣವನ್ನು ಪೂರೈಸಿದವರು.______

9. ಗಂಡು ಮಕ್ಕಳು ಯಾವ ಮಾಧ್ಯಮ ಶಾಲೆಗಳಲ್ಲಿ ಓದುತ್ತಿದ್ದಾರೆ.?

1.

2.

3.

4.

5.

10. ಹೆಣ್ಣು ಮಕ್ಕಳು ಯಾವ ಮಾಧ್ಯಮ ಶಾಲೆಗಳಲ್ಲಿ ಓದುತ್ತಿದ್ದಾರೆ.?

1.

2.

3.

4.

5.

11. ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳು ಒಂದೇ ಮಾಧ್ಯಮದಲ್ಲಿ ಓದಬೇಕೆಂದು ಬಯಸುತ್ತೀರಾ.?

1. ಹೌದು

2. ಇಲ್ಲ

12. ಹೌದು ಎಂದಾದರೆ ಯಾಕೆ ಒಂದೇ ಮಾಧ್ಯಮದಲ್ಲಿ ಓದಬೇಕು.?

1.

2.

3.

4.

5.

13. ಇಲ್ಲ ಎನ್ನುವುದಾರೆ ಒಂದೇ ಮಾಧ್ಯಮದಲ್ಲಿ ಓದಬಾರದು ಏಕೆ.?

1.

2.

3.

4.

5.

14. ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳಿಗೆ ಶಿಕ್ಷಣ ಮುಖ್ಯವೆಂದು ಭಾವಿಸುತ್ತೀರಾ.?

1. ಹೌದು.______

2. ಇಲ್ಲ.________

15. ಹೌದು ಎಂದರೆ ಗಂಡು ಮಕ್ಕಳಿಗೆ ಎಷ್ಟರವರೆಗೆ ಶಿಕ್ಷಣ ನೀಡಲು ಬಯಸುತ್ತೀರಿ.?

1. ಪ್ರಾಥಮಿಕ ಶಿಕ್ಷಣ.

2. ಮಾಧ್ಯಮಿಕ ಶಿಕ್ಷಣ.

3. ಪ್ರೌಢ ಶಿಕ್ಷಣ.

4. ಕಾಲೇಜು ಶಿಕ್ಷಣ.

5. ತಾಂತ್ರಿಕ ಶಿಕ್ಷಣ.

6. ಸ್ನಾತಕೋತ್ತರ ಶಿಕ್ಷಣ.

7. ಮದುವೆಯ ವರೆಗೆ.

8. ಹೆಣ್ಣು ಮಕ್ಕಳು ಬಯಸುವಷ್ಟು.

9. ವೈದಕೀಯ

10. ಬುರ್ಖದೊಂದಿಗೆ ಪಡೆಯುವ ಮಟ್ಟದವರೆಗೆ.

16. ಯಾವ ಉದ್ದೇಶಕ್ಕಾಗಿ ಹೆಣ್ಣು ಮಕ್ಕಳಿಗ ಶಿಕ್ಷಣ ನೀಡಬೇಕಂದು ಭಾವಿಸುತ್ತೀರಿ.?

1. ಉತ್ತಮ ಗೃಹಿಣಿಯಾಗಲು
2. ತನ್ನ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡುವ ಸಾಮರ್ಥ್ಯ ಹೊಂದಲು.
3. ತಮ್ಮ ಜೀವನ ಸಮಸ್ಯೆಗಳನ್ನು ಎದುರಿಸಲು.
4. ಬೇರೆಯವರ ಸಹಾಯವಿಲ್ಲದೆ ತಮ್ಮ ಗೃಹ ಕೃತ್ಯಗಳನ್ನು ಸಮರ್ಥವಾಗಿ ನಿರ್ವಹಿಸಲು.
5. ತಮ್ಮ ಆರೋಗ್ಯದ ಸಮಸ್ಯೆಗಳನ್ನು ಕಂಡುಕೊಳ್ಳಲು
6. ಸ್ವಾವಲಂಬಿಯಾಗಿ ಬದುಕು ಸಾಗಿಸಲು
7. ಇತರೆ

17. ಶಿಕ್ಷಣದಿಂದ ಮಹಿಳೆಯರ ಸ್ಥಾನಮಾನ ವೃದ್ಧಿಯಾಗುತ್ತದೆಂದು ಭಾವಿಸುತ್ತೀರಾ.?

1. ಹೌದು.
2. ಇಲ್ಲ.
3. ಸ್ವಲ್ಪ ಮಟ್ಟಿಗೆ.
4. ಗೊತ್ತಿಲ್ಲ.

18. ನೀವು ನಿಮ್ಮ ಮಗಳಿಗೆ ಉನ್ನತ ಶಿಕ್ಷಣ ನೀಡುವ ಪರವಾಗಿದ್ದೀರಾ.?

1. ಹೌದು.
2. ಇಲ್ಲ.

19. ಹೌದಾದರೆ, ಕಾರಣಗಳನ್ನು ಕೊಡಿ

1. ಸ್ವಾವಲಂಬಿಯಾಗಿ ಬದುಕಲು.
2. ಓದುವ ಸಂತೋಷಕ್ಕಾಗಿ.
3. ಸಾಂಸ್ಕೃತಿಕ ಶ್ರೀಮಂತಿಕೆಗಾಗಿ
4. ಮದುವೆಗಾಗಿ.
5. ಉದ್ಯೋಗಕ್ಕಾಗಿ
6. ಉತ್ತಮ ಗಂಡು ಸಿಗುವ ಕಾರಣಕ್ಕಾಗಿ

20. ಇಲ್ಲ ಎನ್ನುವುದಾದರೆ, ಕಾರಣಗಳನ್ನು ಕೊಡಿ

1. ಶಾಲೆಗಳಲ್ಲಿ ಗೋಷಾ ಪದ್ಧತಿಗೆ ವಕಾಶವಿಲ್ಲ

2. ಹೆಣ್ಣು ಮಕ್ಕಳಿಗೆ ಪ್ರತ್ಯೇಕ ವಿದ್ಯಾಸಂಸ್ಥೆಗಳಿಲ್ಲ.

3. ಬಡತನದಿಂದಾಗಿ ಸಾಧ್ಯವಿಲ್ಲ

4. ಸಮುದಾಯದ ಸಹಕಾರವಿಲ್ಲ

5. ಉತ್ತಮ ಗಂಡು ಸಿಗುವುದು ಕಷ್ಟ

6. ಲೈಂಗಿಕ ದೌರ್ಜನ್ಯದ ಭಯ

7. ಶಾಲೆಗಳು ದೂರದಲ್ಲಿರುವುದು

8. ಸಂಪ್ರದಾಯಕ್ಕೆ ವಿರೋಧವಾದುದು.

9. ಹೆಣ್ಣು ಮಕ್ಕಳಿಗೆ ಧಾರ್ಮಿಕ ಶಿಕ್ಷಣ ಅಗತ್ಯ

10.ಕುಟುಂಬ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

11. ಮನೆಯ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

21. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಮುದಾಯ ವಿರೋಧ ಮಾಡುತ್ತದೆ ಎಂದು ಭಾವಿಸುತ್ತೀರಾ.?

1. ಹೌದು

2. ಇಲ್ಲ.

3. ಸ್ವಲ್ಪ ಮಟ್ಟಿಗೆ

22. ನೀವು ಸಹಶಿಕ್ಷಣದ ಬಗ್ಗೆ ಒಲವು ಹೊಂದಿದೀರಾ.?

1. ಹೌದು.

2. ಇಲ್ಲ.

3. ಎಸ್.ಎಸ್.ಎಲ್.ಸಿ ವರೆಗೆ ಮಾತ್ರ

23. ನಿಮ್ಮ ಮಗಳಿಗೆ ಧಾರ್ಮಿಕ ಶಿಕ್ಷಣ ಪಡೆಯಲು ಕಳುಹಿಸುತ್ತೀರಾ.?

1. ಹೌದು.

2. ಇಲ್ಲ.

24. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಧಾರ್ಮಿಕ ನಾಯಕರು/ ಮೌಲ್ವಿಗಳ ಮನೋಭಾವನೆ ಏನು.?

1. ಪರವಾಗಿದ್ದಾರೆ

2. ಅಸಹಕಾರ

3. ವಿರೋಧಿಸುತ್ತಾರೆ.

4. ಗೊತ್ತಿಲ್ಲ.

25. ಧಾರ್ಮಿಕ ನಾಯಕರು ಯಾವ ರೀತಿಯಲ್ಲಿ ಅಸಹಾಕಾರ ಪ್ರದರ್ಶಿಸುತ್ತಾರೆ.?

1. ಶಾಲೆಗಳನ್ನು ಆರಂಭಿಸಲು ಪ್ರೋತ್ಸಾಹಿಸುವುದಿಲ್ಲ.

2. ಹೆಣ್ಣು ಮಕ್ಕಳಿಗೆ ಆಧುನಿಕ ಶಿಕ್ಷಣ ಪಡೆಯಲು ಕಳುಹಿಸುವುದನ್ನು ಒಪ್ಪುವುದಿಲ್ಲ.

3. ಧಾರ್ಮಿಕ ಪ್ರವಚನದಲ್ಲಿ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಪ್ರಸ್ತಾಪಿಸುವುದಿಲ್ಲ.

4. ಹೆಣ್ಣು ಮಕ್ಕಳ ಶಿಕ್ಷಣವನ್ನು ಟೀಕಿಸುತ್ತಾರೆ.

5. ಇತರೆ

26. ಮಹಿಳೆಯರು ಉದ್ಯೋಗ ಮಾಡುವುದನ್ನು ಬೆಂಬಲಿಸುತ್ತೀರಾ.?

1. ಹೌದು.

2. ಇಲ್ಲಾ

27. ಹೌದು ಎನ್ನುವುದಾದರೆ ಕಾರಣಗಳನ್ನು ನೀಡಿ

1. ಆರ್ಥಿಕ ಸ್ವಾವಲಂಬಿಯಾಗಲು

2. ಜೀವನ ಮಟ್ಟವನ್ನು ಉತ್ತಮಪಡಿಸಲು

3. ಗಂಡು ಮತ್ತು ಹೆಣ್ಣಿನ ನಡುವೆ ಸಮಾನತೆ ತರಲು.

4. ಸಾಮಾಜಿಕ ಸ್ಥಾನವನ್ನು ಉತ್ತಮಪಡಿಸಿಕೊಳ್ಳಲು

5. ಇತರೆ.

28. ಇಲ್ಲವಾದರೆ ಕಾರಣಗಳನ್ನು ಕೊಡಿ

1. ಇಸ್ಲಾಂ ಧರ್ಮಕ್ಕೆ ವಿರುದ್ಧವಾದುದು.

2. ಹೆಣ್ಣು ಮಕ್ಕಳನ್ನು ನೋಡಿಕೊಳ್ಳವುದು ಗಂಡು ಮಕ್ಕಳ ಜವಾಬ್ದಾರಿ

3. ಬುರ್ಖಾ ತೆಗೆಯಬೇಕಾಗುತ್ತದೆ.

4. ಇತರೆ.

29. ಇಸ್ಲಾಂ ಧರ್ಮ ಶಿಕ್ಷಣವನ್ನು ನಿರ್ಭಂಧಿಸಿದೆ ಎಂದು ಭಾವಿಸುತ್ತೀರಾ.?

1. ಹೌದು

2. ಇಲ್ಲ

30. ಹೌದಾದರೆ ಯಾರ ಶಿಕ್ಷಣವನ್ನು ನಿರ್ಭಂಧಿಸಿದೆ ಎಂದು ಭಾವಿಸುತ್ತಿರಿ.?

1. ಹೆಣ್ಣು ಮಕ್ಕಳ ಶಿಕ್ಷಣ

2. ಗಂಡು ಮಕ್ಕಳ ಶಿಕ್ಷಣ

31. ಹೆಣ್ಣು ಮಕ್ಕಳ ಯಾವ ಶಿಕ್ಷಣವನ್ನು ನಿರ್ಭಂಧಿಸಿದೆ ಎಂದು ಭಾವಿಸುತ್ತೀರಿ.?

1. ಉನ್ನತ ಶಿಕ್ಷಣ

2. ಆಧುನಿಕ ಶಿಕ್ಷಣ

3. ಇತರೆ

32. ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಬಯಸುತ್ತೀರಾ.?

1. ಹೌದು

2. ಇಲ್ಲ

3. ಸಾಧ್ಯವಾಗುವುದಿಲ್ಲ

4. ಸಾಧ್ಯವೇ ಇಲ್ಲ

33. ನಿಮಗೆ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ಯಾಕೆ ಸಾಧ್ಯವಾಗುವುದಿಲ್ಲ.

1. ಲೈಂಗಿಕ ದೌರ್ಜನ್ಯದ ಭಯ

2. ಧಾರ್ಮಿಕ ಶಿಕ್ಷಣ ಅಗತ್ಯ

3. ಸಮುದಾಯ ಬೆಂಬಲಿಸುವುದಿಲ್ಲ.

4. ಉತ್ತಮ ಗಂಡು ಸಿಗುವುದಿಲ್ಲ.

5. ಮನೆಯ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

6. ಕುಟುಂಬದ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

7. ಬಡತನ

8. ಗಂಡು ಮಕ್ಕಳ ಶಿಕ್ಷಣಕ್ಕೆ ತೊಂದರೆ.

9. ಶೀಘ್ರ ವಿವಾಹ ಮಾಡುವುದು ಅಗತ್ಯ.

10. ಇತರೆ

34. ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ನೀಡದಿರಲು ಸಾಧ್ಯವಿಲ್ಲ ಎನ್ನಲು ಕಾರಣವೇನು.?

1. ಲೈಂಗಿಕ ದೌರ್ಜನ್ಯದ ಭಯ

2. ಧಾರ್ಮಿಕ ಶಿಕ್ಷಣ ಅಗತ್ಯ

3. ಸಮುದಾಯ ಬೆಂಬಲಿಸುವುದಿಲ್ಲ.

4. ಉತ್ತಮ ಗಂಡು ಸಿಗುವುದಿಲ್ಲ.

5. ಮನೆಯ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

6. ಕುಟುಂಬದ ನಿರ್ವಹಣೆಗೆ ಹೆಣ್ಣು ಮಕ್ಕಳು ಅಗತ್ಯ

7. ಬಡತನ

8. ಗಂಡು ಮಕ್ಕಳ ಶಿಕ್ಷಣಕ್ಕೆ ತೊಂದರೆ.

9. ಶೀಘ್ರ ವಿವಾಹ ಮಾಡುವುದು ಅಗತ್ಯ.

10. ಇತರೆ

35. ಸರ್ಕಾರ ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆಯೇ.?

1. ಹೌದು

2. ಇಲ್ಲ

36. ಹೌದಾದರೆ, ಯಾವ ಯಾವ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ ಹೆಸರಿಸಿ.

1. ಕನಿಷ್ಠ ಮಟ್ಟದ ಅರಿವು

2. ಮಧ್ಯಮ ಮಟ್ಟದ ಅರಿವು

3. ಗರಿಷ್ಠ ಮಟ್ಟದ ಅರಿವು

# ಮುಸ್ಲಿಂ ಹೆಣ್ಣು ಮಕ್ಕಳ ಪ್ರಶ್ನಾವಳಿ

1. ಹೆಸರು
2. ಓದುತ್ತಿರುವ ತರಗತಿ
3. ಶಾಲೆಯ ಹೆಸರು
4. ನೀವು ಶಾಲೆಗೆ ಹೋಗುವಾಗ ಬುರ್ಖಾ ಧರಿಸುತ್ತೀರಾ.?
   1. ಹೌದು.
   2. ಇಲ್ಲ
5. ಹೌದು ಎನ್ನುವುದಾದರೆ,

1. ನಿಮ್ಮ ಇತರೆ ಸಮುದಾಯದ ಸಹಪಾಠಿಗಳು ಬುರ್ಖಾಧರಿಸುವುದನ್ನು ಟೀಕಿಸುತ್ತಾರೆಯೆ.?

   1. ಹೌದು. 2. ಇಲ್ಲ.

6. ಇಲ್ಲವಾದರೆ, ನಿಮ್ಮ ಪೋಷಕರು ಅಥವಾ ಸಮುದಾಯದವರು ಬುರ್ಖಧರಿಸದಿದ್ದರೆ ನಿಮ್ಮನ್ನು ಟೀಕಿಸುತ್ತಾರೆ.?

   1. ಹೌದು 2. ಇಲ್ಲ. 3. ಅವರು ಇಷ್ಟಪಡುತ್ತಾರೆ. 4. ಗೊತ್ತಿಲ್ಲ

7. ನೀವು ಉನ್ನತ ವ್ಯಾಸಾಂಗಕ್ಕೆ ಹೋಗಲು ಇಚ್ಛಿಸುತ್ತೀರಾ
   1. ಹೌದು
   2. ಇಲ್ಲ
8. ಹೌದು ಎನ್ನುವುದಾದರೆ ಎಷ್ಟರ ವರೆಗೆ ಓದಲು ಇಚ್ಛಿಸುತ್ತೀರಿ.?
9. ಇಲ್ಲಾ ಎನ್ನುವುದಾದರೆ ಕಾರಣಗಳನ್ನು ಕೊಡಿ
   1. ತಂದೆ ತಾಯಿ ಒಪ್ಪುವುದಿಲ್ಲ.
   2. ತಂದೆ ಒಪ್ಪುವುದಿಲ್ಲ.
   3. ಸಮುದಾಯದವರು ಒಪ್ಪುವುದಿಲ್ಲ.

4. ಸಂಬಂಧಿಕರು ಒಪ್ಪುವುದಿಲ್ಲ.

5. ಮದುವೆಯ ಕಾರಣ.

6. ಮನೆಯ ಪರಿಸ್ಥಿತಿ ಉತ್ತಮವಾಗಿಲ್ಲ.

7. ದೌರ್ಜನಗಳ ಭಯ

8. ಮನೆಗೆಲಸದಿಂದ ಸಾಧ್ಯವಿಲ್ಲ.

9. ಇತರೆ.

10. ಶಿಕ್ಷಣದ ನಂತರ ಉದ್ಯೋಗ ನಿರ್ವಹಿಸಲು ಬಯಸುತ್ತೀರಾ.?

1. ಹೌದು

2. ಇಲ್ಲ

11. ಹೌದು ಎಂದಾದರೆ ಕಾರಣಗಳು

3. ಆರ್ಥಿಕ ಸ್ವಾತಂತ್ರ್ಯ

4. ಕುಟುಂಬಕ್ಕೆ ಹೆಚ್ಚು ಆದಾಯ

5. ಪರದಾ ಪದ್ಧತಿಯಲ್ಲಿ ಬದಲಾವಣೆ.

6. ಸುರಕ್ಷತೆ

7. ಇತರೆ.

12. ಇಲ್ಲ ಎನ್ನುವುದಾದರೆ ಕಾರಣಗಳನ್ನು ಕೊಡಿ

1.

2.

3.

4.

5.

13. ನೀವು ಬುರ್ಖ ಧರಿಸುತ್ತೀರಾ.?

1. ಹೌದು. 2. ಇಲ್ಲಾ

14. ಹೌದು, ಎನ್ನುವುದಾದರೆ ಮಹಿಳೆಯರು ಯಾಕೆ ಬುರ್ಖ ಧರಿಸಬೇಕು.?

1. ಇದು ಇಸ್ಲಾಂ ಧರ್ಮದ ಸಂಪ್ರದಾಯ

2. ಸ್ವರಕ್ಷಣೆಗಾಗಿ

3. ಗೊಂದಲಗಳನ್ನು ನಿವಾರಿಸಿಕೊಳ್ಳಲು

4. ಪಾವಿತ್ರ್ಯತೆಗಾಗಿ

5. ಇತರೆ

15. ಇಲ್ಲವಾದರೆ, ಕಾರಣಗಳನ್ನು ಕೊಡಿ

1.

2.

3.

4.

5.

16. ನಿಮ್ಮ ಉನ್ನತ ವಿದ್ಯಾಬ್ಯಾಸಕ್ಕೆ ಪ್ರೋತ್ಸಾಹ ನೀಡಬೇಕೆಂದು ಬಯಸುತ್ತೀರಾ.?

1. ಹೌದು

2. ಇಲ್ಲ

17. ಹೌದು ಎಂದಾದರೆ ಯಾರಿಂದ ಪ್ರೋತ್ಸಾಹ ಬಯಸುತ್ತೀರಿ.?

1. ತಂದೆಯಿಂದ

2. ತಾಯಿಯಿಂದ

3. ತಂದೆ-ತಾಯಿ ಇಬ್ಬರಿಂದ

4. ಶಿಕ್ಷಕರಿಂದ

5. ಸಮುದಾಯದವರಿಂದ

18. ನಿಮ್ಮ ತಂದೆಯ ಶಿಕ್ಷಣ ನಿಮ್ಮ ಶಿಕ್ಷಣವನ್ನು ಪ್ರಭಾವಿಸಿದೆಯೇ.?

1. ಹೌದು

2. ಇಲ್ಲ

19. ನಿಮ್ಮ ತಂದೆಯ ವೃತ್ತಿ ನಿಮ್ಮ ಶಿಕ್ಷಣವನ್ನು ಪ್ರಭಾವಿಸಿದೆಯೇ.?

1. ಹೌದು

2. ಇಲ್ಲ

20. ನಿಮ್ಮ ಕುಟುಂಬದಲ್ಲಿ ಹೆಣ್ಣು ಮಕ್ಕಳು ಉನ್ನತ ವ್ಯಾಸಾಂಗಕ್ಕೆ ಹೋಗಬಾರದೆಂದು ಚರ್ಚಿಸುತ್ತಾರೆಯೇ.?

1. ಹೌದು

2. ಇಲ್ಲ

21. ಹೌದಾದರೆ, ಯಾರು ಚರ್ಚಿಸುತ್ತಾರೆ.?

1. ತಂದೆ ತಾಯಿ

2. ಅಜ್ಜ ಅಜ್ಜಿ

3. ಸಂಬಂಧಿಕರು

4. ಸಮುದಾಯದವರು

5. ಇತರೆ

# ನಾಗರೀಕ ಸಮಾಜದ ಪ್ರಶ್ನಾವಳಿ

1. ಹೆಸರು.____________________
2. ವಯಸ್ಸು.____________________
3. ಶಿಕ್ಷಣ.____________________
4. ಸಂಘಟನೆಯ ಹೆಸರು
5. ಸಂಘಟನೆಯಲ್ಲಿ ನಿಮ್ಮ ಪದನಾಮ
6. ಎಷ್ಟು ವರ್ಷಗಳಿಂದ ಸಂಘಟನೆಯಲ್ಲಿದ್ದೀರಿ
7. ಮುಸ್ಲಿಂ ಸಮುದಾಯವು ಧಾರ್ಮಿಕ ಮತ್ತು ಸಾಂಸ್ಕೃತಿಕ ಅನನ್ಯತೆಗೆ ಹೆಚ್ಚು ಒತ್ತು ನೀಡುವವರೆಂದು ಭಾವಿಸುತ್ತೀರಾ.?

    1. ಹೌದು 2. ಇಲ್ಲ

8. ಹೌದು ಎಂದಾದರೆ ಯಾವ ಸಾಂಸ್ಕೃತಿಕ ಅನನ್ಯತೆಗೆ ಒತ್ತು ನೀಡುತ್ತಾರೆ.?

    1. ಇಸ್ಲಾಂ ಧರ್ಮದ ಕಟ್ಟುಪಾಡುಗಳಿಗೆ ಹೆಚ್ಚು ಒತ್ತು ನೀಡುತ್ತಾರೆ.
    2. ತಮ್ಮ ಮಕ್ಕಳನ್ನು ಹೆಚ್ಚಾಗಿ ಮದರಸಾಗಳಲ್ಲಿ ಓದಿಸುತ್ತಾರೆ.
    3. ಭಾವನಾತ್ಮಕ ಸಂಗತಿಗಳಿಗೆ ಹೆಚ್ಚು ಒತ್ತು ನೀಡುತ್ತಾರೆ.
    4. ಇತರೆ ಸಮುದಾಯದೊಂದಿಗೆ ಮುಕ್ತವಾಗಿ ಬೆರೆಯುವುದಿಲ್ಲ.

9. ಮುಸ್ಲಿಂ ಸಮುದಾಯದ ಮಕ್ಕಳು ಹೆಚ್ಚಾಗಿ ಮದರಸಾಗಳಲ್ಲೇ ವ್ಯಾಸಾಂಗ ಮಾಡುತ್ತಾರೆಂದು ಭಾವಿಸುತ್ತೀರಾ.?

    1. ಹೌದು 2. ಇಲ್ಲ

10. ಮುಸ್ಲಿಂ ಸಮುದಾಯದ ಇತರೆ ಸಮುದಾಯಗಳೊಂದಿಗೆ ಮುಕ್ತವಾಗಿ ಬೆರೆಯುವುದಿಲ್ಲವೆಂದು ಭಾವಿಸುತ್ತೀರಾ.?

    1. ಹೌದು 2. ಇಲ್ಲ

11. ಮುಸ್ಲಿಂ ಸಮುದಾಯದವರು ಶೈಕ್ಷಣಿಕವಾಗಿ ಆರ್ಥಿಕವಾಗಿ ಹಿಂದುಳಿದವರೆಂದು ಭಾವಿಸುತ್ತೀರಾ?

1. ಹೌದು

2. ಇಲ್ಲ

12. ಸರ್ಕಾರ ಮುಸ್ಲಿಂ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ಯೋಜನೆಗಳನ್ನು ಜಾರಿಗೊಳಿಸಿದೆ ಎಂದು ಭಾವಿಸುತ್ತೀರಾ.?

1. ಹೌದು 2. ಇಲ್ಲ

13. ಹೌದಾದರೆ, ಮುಸ್ಲಿಮರ ಶೈಕ್ಷಣಿಕ ಅಭಿವೃದ್ಧಿಗೆ ಎಷ್ಟು ಯೋಜನೆಗಳನ್ನು ಜಾರಿಗೊಳಿಸಿದೆ.?

1. 1–3

2. 4–6

3. 7 ಮತ್ತು ಅದಕ್ಕಿಂತ ಹೆಚ್ಚು

14. ಮುಸ್ಲಿಂ ಮಹಿಳೆಯರು ಶೈಕ್ಷಣಿಕವಾಗಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆಯೇ.?

1. ಹೌದು

2. ಇಲ್ಲ

15. ಹೌದಾದರೆ, ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.?

1. ಶಿಕ್ಷಕರ ಕೊರತೆ.

2. ಮಹಿಳಾ ಶಿಕ್ಷಕರ ಕೊರತೆ.

3. ಕನ್ನಡ ಶಿಕ್ಷಕರ ಕೊರತೆ.

4. ಶೌಚಾಲಯದ ಕೊರತೆ.

5. ಕುಡಿಯುವ ನೀರಿನ ಸಮಸ್ಯೆ

6. ಪಠ್ಯಪುಸ್ತಕಗಳ ಕೊರತೆ.

7. ಬಡತನದ ಸಮಸ್ಯೆ.

8. ಲೈಂಗಿಕ ದೌರ್ಜನ್ಯದ ಭಯ

9. ಪೋಷಕರ ಅಸಹಕಾರ

10. ಸಮುದಾಯದ ಅಸಹಕಾರ

11. ದೂರದಲ್ಲಿರುವ ಶಾಲೆ

